# ಶ್ರೀಮದ್ ಭಾಗವತಮ್

## ದಶಮಸ್ಕಂಧಃ

### ಪೂರ್ವಾರ್ಧಃ



ರಾಮಕೃಷ್ಣ ಭಟ್. ಕೂಟೇಲು
4/4/11

# ಶ್ರೀಮದ್ಭಾಗವತಮ್

## ದಶಮಸ್ಕಂಧಃ - ಪೂರ್ವಾರ್ಧಃ

**(ಕನ್ನಡ ಅನುವಾದ ಸಹಿತ)**


ಅನುವಾದಕರು :

ವಿದ್ವಾನ್ ಎನ್. ರಂಗನಾಥಶರ್ಮ



ಪ್ರಕಾಶಕರು :

ರಾಮಾಯಣ ಪ್ರಕಾಶನ ಸಮಿತಿ

ನರಸಿಂಹರಾಜಾ ಕಾಲೋನಿ, ಬೆಂಗಳೂರು - 19

# ಬಿನ್ನಹ

ನಮ್ಮ ರಾಮಾಯಣ ಪ್ರಕಾಶನ ಸಮಿತಿಯು ಕೈಗೊಂಡ ಶ್ರೀಮದ್ ರಾಮಾಯಣ ಪ್ರಕಾಶನ ಕಾರ್ಯವು ಶ್ರೀರಾಮಚಂದ್ರನ ಅನುಗ್ರಹದಿಂದ ಪೂರ್ಣವಾಗಿದೆ. ಎಲ್ಲ ಕಾಂಡಗಳೂ ಪ್ರಕಟವಾಗಿವೆ. ಈ ಗ್ರಂಥಗಳು ಕನ್ನಡನಾಡಿನ ಭಕ್ತಜನರ ಮೆಚ್ಚಿಗೆಯನ್ನು ಗಳಿಸಿಕೊಂಡಿವೆ. ಅವು ಪುನರ್ಮುದ್ರಣಗೊಳ್ಳುತ್ತ ಬಂದಿರುವುದು ಅವುಗಳ ಜನಪ್ರಿಯತೆಗೆ ಸಾಕ್ಷಿ.

ವಾಲ್ಮೀಕಿರಾಮಾಯಣದಂತೆ ಶ್ರೀಮದ್ಭಾಗವತವೂ ಜನರ ಪ್ರೀತಿಗೌರವಗಳಿಗೆ ಪಾತ್ರವಾದ ಗ್ರಂಥ. ಇದನ್ನು ಅನುವಾದಸಹಿತವಾಗಿ ಪ್ರಕಟಿಸಬೇಕೆಂದು ವಾಚಕರು ನಮ್ಮನ್ನು ಪ್ರೋತ್ಸಾಹಿಸಿದರು. ರಾಮಾಯಣ ಪ್ರಕಾಶನ ಸಮಿತಿಯು ಈ ವಿಷಯವನ್ನು ಪರಿಶೀಲಿಸಿ ಅನುಮೋದಿಸಿತಲ್ಲದೆ, ಮೊದಲು ದಶಮಸ್ಕಂಧವನ್ನು ಪ್ರಕಟಿಸಬೇಕೆಂದು ನಿರ್ಧರಿಸಿತು. ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ವಿದ್ವಾನ್ ಎನ್. ರಂಗನಾಥಶರ್ಮಾ ಅವರು, ಶ್ರೀಮದ್ರಾಮಾಯಣಕ್ಕೆ ಅನುವಾದ ಮಾಡಿದಂತೆ ಈ ದಶಮಸ್ಕಂಧಕ್ಕೆ ಸರಸವೂ ಸರಳವೂ ಆದ ಶೈಲಿಯಲ್ಲಿ ಅನುವಾದ ಮಾಡಿಕೊಟ್ಟಿದ್ದಾರೆ. ಅವರಿಗೆ ಸಮಿತಿ ತನ್ನ ವಂದನೆಗಳನ್ನರ್ಪಿಸುತ್ತದೆ.

ನಾವು ಪ್ರಕಟಿಸಿದ ರಾಮಾಯಣದ ಎಲ್ಲ ಕಾಂಡಗಳಿಗೂ ಕೀರ್ತಿಶೇಷರಾದ ಡಾ|| ಡಿ. ವಿ. ಗುಂಡಪ್ಪನವರು ವಿಚಾರಪರಿಪ್ಲುತವಾದ ಮುನ್ನುಡಿಗಳನ್ನು ಬರೆದುಕೊಟ್ಟು ಹರಸಿದ್ದರು. ಈ ಸಲ ನಮಗೆ ಆ ಭಾಗ್ಯ ಲಭ್ಯವಿರಲಿಲ್ಲ.

ಪ್ರಭಾ ಮುದ್ರಣಾಲಯದ ಮಾಲಿಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ಎಂದಿನಂತೆ ತುಂಬ ಆಸಕ್ತಿಯನ್ನು ವಹಿಸಿ ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಿಗೆ ಸಮಿತಿಯು ಧನ್ಯವಾದಗಳನ್ನರ್ಪಿಸುತ್ತದೆ. ನಮ್ಮ ಪುಸ್ತಕಗಳ ಮಾರಾಟದಲ್ಲಿ ಅನೇಕ ಮಹನೀಯರು ಸಹಕರಿಸುತ್ತ ಬಂದಿದ್ದಾರೆ. ಅವರೆಲ್ಲರನ್ನೂ ಸಮಿತಿಯು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತದೆ.

ಇದು ದಶಮಸ್ಕಂಧದ ಪೂರ್ವಾರ್ಧ. ಸದ್ಯದಲ್ಲಿಯೇ ಇದರ ಉತ್ತರಾರ್ಧವನ್ನು ಪ್ರಕಟಿಸಲು ಉದ್ದೇಶಿಸಿದ್ದೇವೆ. ಮಹಾಜನರ ಬೆಂಬಲವು ಇಮ್ಮಡಿಯಾಗಿ

ದೊರೆತರೆ, ಶ್ರೀಕೃಷ್ಣಪರಮಾತ್ಮನ ಅನುಗ್ರಹದಿಂದ ಭಾಗವತದ ಇತರ ಸ್ಕಂಧ ಗಳನ್ನೂ ಬೇಗನೆ ಪ್ರಕಟಿಸಲು ಸಾಧ್ಯವಾಗುವುದೆಂದು ಆಶಿಸುತ್ತೇವೆ.

ಬೆಂಗಳೂರು
10-4-1978

**ಡಿ. ಸಿ. ಅನಂತರಾಮಯ್ಯ**
ಕಾರ್ಯದರ್ಶಿ
ರಾಮಾಯಣ ಪ್ರಕಾಶನ ಸಮಿತಿ

---

# ರಾಮಾಯಣ ಪ್ರಕಾಶನ ಸಮಿತಿ

## ಸದಸ್ಯರು

೧. ಶ್ರೀ ಹೆಚ್. ಎಸ್. ಕೃಷ್ಣಸ್ವಾಮಿ
೨. ಶ್ರೀ ಎಸ್. ಎನ್. ಮೂರ್ತಿ
೩. ಶ್ರೀ ಹೆಚ್. ಸಿ. ನಂಜುಂಡಭಟ್ಟ
೪. ಶ್ರೀ ಬಿ. ಕೆ. ಅನಂತರಾಮಯ್ಯ
೫. ಶ್ರೀ ಟಿ. ಆರ್. ಶಾಮಣ್ಣ
೬. ಶ್ರೀ ಹೆಚ್. ವಿ. ಅಪ್ರಮೇಯ
೭. ಶ್ರೀ ಕೆ. ಸಿ. ಎಸ್. ರಾಮನ್
೮. ಶ್ರೀ ಎನ್. ರಂಗನಾಥಶರ್ಮಾ
೯. ಶ್ರೀ ಡಿ. ಸಿ. ಅನಂತರಾಮಯ್ಯ (ಕಾರ್ಯದರ್ಶಿ)

# ನಿವೇದನೆ

ಯಶೋದಾಯಾ ಭಾಗ್ಯಂ ಸಮುಪಚಿತಪುಣ್ಯಂ ವ್ರಜಸದಾಂ
ವಿಧಿಃ ಕಂಸಾದೀನಾಂ ನಿಧಿರನವಧಿರ್ವೇದವಚಸಾಮ್ ।
ಮತಿಃ ಕೌಂತೇಯಾನಾಂ ಗತಿರಮೃತದಾತ್ರೀ ಜನಿಭೃತಾಂ
ಮಹೋ ಮೇ ಹೃದ್ಯಾಸ್ತಾಂ ಕಿಮಪಿ ತಿರಯನ್ಮೋಹತಿಮಿರಮ್ ॥

ಯಾರ ಅನುಗ್ರಹದಿಂದ ಶ್ರೀಮದ್ವಾಲ್ಮೀಕಿ ರಾಮಾಯಣದ ಅನುವಾದವು ಸಾಧ್ಯವಾಯಿತೋ ಆತನು ತನ್ನ ಇನ್ನೊಂದು ಲೀಲಾಚರಿತೆಯನ್ನು ಅನುವಾದಿಸುವಂತೆ ಅನುಗ್ರಹಿಸಿದನು. ರಾಮಾಯಣ ಪ್ರಕಾಶನ ಸಮಿತಿಯವರು ಶ್ರೀಮದ್ ಭಾಗವತದ ದಶಮಸ್ಕಂಧವನ್ನು ಅನುವಾದಿಸಿಕೊಡಬೇಕೆಂದು ವಿಶ್ವಾಸದಿಂದ ನನ್ನನ್ನು ಕೇಳಿದರು. ಸಮಿತಿಯ ಗೌ|| ಕಾರ್ಯದರ್ಶಿಗಳೂ ನನ್ನ ಮಾನ್ಯಮಿತ್ರರೂ ಆದ ಶ್ರೀ ಡಿ. ಸಿ. ಅನಂತರಾಮಯ್ಯನವರು ಈ ಕಾರ್ಯದಲ್ಲಿ ತುಂಬ ಆಸಕ್ತಿ ವಹಿಸಿ ಪ್ರೋತ್ಸಾಹವನ್ನಿತ್ತರು. ಫಲಿತವಾಗಿ ದಶಮಸ್ಕಂಧದ ಪೂರ್ವಾರ್ಧದ ಪ್ರಕಟನೆ ಈಗ ಆಗುತ್ತಿದೆ.

ರಾಮಾಯಣದ ಮತ್ತು ಭಾಗವತದ ಅನುವಾದ ಕಾರ್ಯಗಳಲ್ಲಿ ಅಂತರ ಉಂಟು. ರಾಮಾಯಣದ ಭಾಷೆ ಲಲಿತವಾದದ್ದು. ಶೈಲಿ ಸರಳ. ಕಠಿಣ ಶಬ್ದಗಳ ನಿವೇಶವಿಲ್ಲ. ಓದುವಾಗಲೇ ಅರ್ಥವಾಗುತ್ತದೆ. ಆದರೆ ರಸಭಾವ ನಿರ್ಭರವಾದುದು. ಆದ್ದರಿಂದಲೇ ಅನುವಾದಕನಿಗೆ ಒಂದು ತೊಡರು ಸಂಭವಿಸುತ್ತದೆ. ಮೂಲದ ರಸ ಭಾವ ಪುಷ್ಟಿಯನ್ನು ಅನುವಾದದಲ್ಲಿ ತರುವುದೆಂತು? ಕನ್ನಡಿಸುವಾಗ ಯಾವ ಶಬ್ದವನ್ನು ಬಳಸಬೇಕು, ಅದನ್ನು ಎಲ್ಲಿಡಬೇಕು, ವಾಕ್ಯರಚನೆ ಹೇಗೆ ಬಂದರೆ ಉತ್ತಮ – ಎಂಬ ಪ್ರಶ್ನೆಗಳನ್ನು ಅನುವಾದಕನು ಹೆಜ್ಜೆಹೆಜ್ಜೆಗೂ ಎದುರಿಸಬೇಕಾಗುತ್ತದೆ. ಅನುವಾದದಿಂದ ಮೂಲಕ್ಕೆ ಅಪಚಾರವಾದೀತೋ ಎಂದು ಮನಸ್ಸು ತಳಮಳಗೊಳ್ಳುತ್ತದೆ. ಭಾಗವತದಲ್ಲಾದರೋ ಭಾಷೆಯೇ ಪೆಡಸು. ಬಿಗಿಯಾದ ಶೈಲಿ. ಅಪ್ರಸಿದ್ಧ ಪದಗಳ ಬಳಕೆ. ವೇದದಲ್ಲಿ ಮಾತ್ರ ಕಂಡುಬರುವ ವೈದಿಕಶಬ್ದಗಳು ಭಾಗವತದಲ್ಲಿ ವಿಪುಲವಾಗಿವೆ. ಅಲ್ಲದೆ ಸ್ತುತಿಗಳಲ್ಲಿಯೂ ಮತ್ತಿತರ ವರ್ಣನಾಸಂದರ್ಭಗಳಲ್ಲಿಯೂ ಗಹನವಾದ ದಾರ್ಶನಿಕ

*

ತತ್ತ್ವಗಳು ತುಂಬಿಕೊಂಡಿವೆ. ಆಗ ಶ್ಲೋಕಗಳಲ್ಲಿ ಪದಗಳ ಅನ್ವಯವೇ ಕ್ಲಿಷ್ಟ ವಾಗುತ್ತದೆ. ತಾತ್ಪರ್ಯವು ದುರೂಹವಾಗುತ್ತದೆ. ಕಾವ್ಯಮಯವಾದ ವರ್ಣನೆ ಗಳಲ್ಲಿಯೂ ಇದು ಒಂದು ಪ್ರೌಢವಾದ ಮಹಾಕಾವ್ಯಕ್ಕೆ ಸಮವಾಗಿದೆ. ಆದ್ದರಿಂದ ಭಾಗವತವನ್ನು ಅನುವಾದಿಸುವಾಗ ಮೊದಲು ಅರ್ಥಗ್ರಹಣಕ್ಲೇಶವನ್ನು ಎದುರಿಸ ಬೇಕಾಗುತ್ತದೆ.

ಭಾಗವತಕ್ಕೆ ಸಂಸ್ಕೃತದಲ್ಲಿ ಅನೇಕ ವ್ಯಾಖ್ಯಾನಗಳುಂಟು. ಶ್ರೀಧರಸ್ವಾಮಿಗಳ ಅದ್ವೈತಮತಾನುಸಾರಿಯಾದ ಭಾವಾರ್ಥ ದೀಪಿಕೆ, ವೀರರಾಘವಾಚಾರ್ಯರ ವಿಶಿಷ್ಟಾದ್ವೈತಪರವಾದ ಭಾಗವತ ಚಂದ್ರಿಕಾ, ವಿಜಯಧ್ವಜತೀರ್ಥರ ದ್ವೈತ ಮತಾನುಗುಣವಾದ ಪದರತ್ನಾವಲಿ – ಇವು ಮತತ್ರಯದ ವ್ಯಾಖ್ಯಾನಗಳು. ಅಲ್ಲದೆ ಶುಕದೇವ ಎಂಬವರು ಸಿದ್ಧಾಂತ ದೀಪಿಕೆಯನ್ನೂ, ವಲ್ಲಭಾಚಾರ್ಯರು ಸುಬೋಧಿನಿಯನ್ನೂ ಸ್ವೀಯಮತಾನುಸಾರವಾಗಿ ರಚಿಸಿದ್ದಾರೆ. ಇನ್ನೂ ಕೆಲವು ವಿದ್ವಾಂಸರು ರಚಿಸಿದ ವ್ಯಾಖ್ಯಾನಗಳೂ ದೊರಕುತ್ತವೆ. ಇವುಗಳಲ್ಲಿ ಶ್ರೀಧರ ಸ್ವಾಮಿಗಳ ವ್ಯಾಖ್ಯಾನವೇ ಪ್ರಾಚೀನವೆಂದು ತಿಳಿದುಬರುತ್ತದೆ. ಉಳಿದ ವ್ಯಾಖ್ಯಾನಗಳು ಶ್ರೀಧರೀಯವನ್ನು ಅವಲಂಬಿಸಿದ್ದು ತಾತ್ತ್ವಿಕ ವಿಷಯದಲ್ಲಿ ಭಿನ್ನಾಭಿಪ್ರಾಯವನ್ನು ತಳೆದಿವೆ.

ಶ್ರೀಧರಸ್ವಾಮಿಗಳ ದೇಶಕಾಲಾದಿಗಳು ಸರಿಯಾಗಿ ತಿಳಿದುಬರುವುದಿಲ್ಲ. ಕ್ರಿ. ಶ. 14 ನೆಯ ಶತಕದವರಿರಬಹುದೆಂಬ ಅಭಿಪ್ರಾಯ ಉಂಟು. ಅವರು ಭಗವದ್ಗೀತೆಯ ಮೇಲೆ ಬರೆದ ವ್ಯಾಖ್ಯಾನ ಸುಪ್ರಸಿದ್ಧ. ಶ್ರೀಧರಸ್ವಾಮಿಗಳು ಅದ್ವೈತಿಗಳಾಗಿದ್ದು ಭಕ್ತಿಮಾರ್ಗಕ್ಕೆ ವಿಶೇಷವಾದ ಪ್ರಾಶಸ್ತ್ಯವನ್ನು ನೀಡುತ್ತಾರೆ. ಅವರು ಪರಮಭಕ್ತರು.

ಶ್ರೀಧರಸ್ವಾಮಿಗಳ ಘನವಾದ ಪಾಂಡಿತ್ಯಕ್ಕೆ ಭಾವಾರ್ಥದೀಪಿಕೆಯೇ ನಿದರ್ಶನ. ಇದರಲ್ಲಿ ಭಾಗವತದ ಕಗ್ಗಂಟುಗಳನ್ನು ಬಿಡಿಸಿ ಮಹೋಪಕಾರ ಮಾಡಿದ್ದಾರೆ. ವಿನಯಪೂರ್ಣವಾದ ಅವರ ಈ ಮಾತು ಗಮನಾರ್ಹ ವಾದದ್ದು :

ಕ್ವಾಹಂ ಮಂದಮತಿಃ ಕ್ವೇದಂ ಮಂಥನಂ ಕ್ಷೀರವಾರಿಧೇಃ |
ಕಿಂ ತತ್ರ ಪರಮಾಣುರ್ವೈ ಯತ್ರ ಮಜ್ಜತಿ ಮಂಥರಃ ||

(ಪ್ರಥಮಸ್ಕಂಧ ವ್ಯಾಖ್ಯಾನದ ಆರಂಭದಲ್ಲಿ)

" ಮಂದಬುದ್ಧಿಯಾದ ನಾನೆಲ್ಲಿ? ಕ್ಷೀರಸಮುದ್ರದ (ಭಾಗವತದ) ಈ ಮಂಥನವೆಲ್ಲಿ? ಯಾವ ಸಮುದ್ರದಲ್ಲಿ ಮಂದರಪರ್ವತವೇ ಮುಳುಗಿಹೋಗುವುದೋ ಅಲ್ಲಿ ಪರಮಾಣು ಯಾವ ಲೆಕ್ಕಕ್ಕೆ ಸೇರಿದ್ದು?".

ಇಂಥ ಗಭೀರಾರ್ಥವುಳ್ಳ ಭಾಗವತದ ಅನುವಾದವು ವ್ಯಾಖ್ಯಾನದ ನೆರವಿಲ್ಲದೆ ಸಾಧ್ಯವಲ್ಲ. ನಾನು ಶ್ರೀಧರೀಯ ವ್ಯಾಖ್ಯಾನವನ್ನು ಅನುಸರಿಸಿದ್ದೇನೆ. ತಾತ್ತ್ವಿಕ ವಿಷಯಗಳಲ್ಲಿ ಅನ್ಯ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನೂ ತಿಳಿಸಬೇಕೆಂಬ ಉದ್ದೇಶವಿತ್ತು. ಆ ಸಂದರ್ಭದಲ್ಲಿ ಮೂಲಶ್ಲೋಕಗಳ ಪದವಿಭಾಗ ಕ್ರಮವೂ ಅನ್ವಯವಿಧಾನವೂ ಬಹಳ ಕಡೆ ಭಿನ್ನವಾಗುತ್ತದೆ. ಅದೆಲ್ಲವನ್ನೂ ಕಾಣಿಸಿ ಆ ಮತಗಳ ಪ್ರಕ್ರಿಯೆಯನ್ನೂ ವಿವರಿಸುವುದರಿಂದ ಗ್ರಂಥ ವಿಸ್ತಾರವಾಗುವುದೆಂದೂ ಲಲಿತವಾದ ಕಥೆಯ ಓಟಕ್ಕೆ ತಡೆಯಾಗುವುದೆಂದೂ ಆ ಉದ್ದೇಶವನ್ನು ಕೈಬಿಡಲಾಯಿತು.

ಅನುವಾದದ ವಿಷಯವಾಗಿ ಇನ್ನು ಒಂದು ಮಾತು. ಇದು ಮೂಲದ ಭಾಷಾಂತರವಲ್ಲ. ಮೂಲದ ವಾಕ್ಯರಚನೆಯನ್ನನುಸರಿಸಿ ಯಥಾಶ್ರುತವಾಗಿ ಕನ್ನಡಿಸಿಲ್ಲ. ಸಂಸ್ಕೃತದಲ್ಲಿ ವಾಕ್ಯರಚನಾವಿಧಾನವೇ ಬೇರೆಯದು. ಅದು ಕನ್ನಡದ ಶೈಲಿಗೆ ಅಷ್ಟು ಒಗ್ಗದು. ಆದ್ದರಿಂದ ಶ್ಲೋಕದ ಅಭಿಪ್ರಾಯವನ್ನು ಸ್ವತಂತ್ರವಾಕ್ಯಗಳಿಂದ ಪ್ರತಿಬಿಂಬಿಸಲು ಯಥಾಶಕ್ತಿ ಪ್ರಯತ್ನಿಸಿದ್ದೇನೆ. ಆದರೆ ಮೂಲದ ಅಭಿಪ್ರಾಯವನ್ನು ಬಿಡಬಾರದೆಂದೂ ಹೊಸದಾಗಿ ಕೈಯಿಂದ ಏನನ್ನೂ ಸೇರಿಸಬಾರದೆಂದೂ ನನ್ನ ಸಂಕಲ್ಪ. ಈ ಸಂಕಲ್ಪವು ಎಷ್ಟರಮಟ್ಟಿಗೆ ನೆರವೇರಿದೆಯೆಂಬುದು ವಿದ್ವಾಂಸರಾದ ವಾಚಕರ ಅವಗಾಹನೆಗೆ ಸೇರಿದ್ದು. ಅರ್ಥಗ್ರಹಣದಲ್ಲಿಯೇ ತಪ್ಪಾಗಿರುವುದೂ ಸಾಧ್ಯ. 'ಕಿಂ ತತ್ರ ಪರಮಾಣುರ್ವೈ ಯತ್ರ ಮಜ್ಜತಿ ಮಂಥರಃ'!

## ಭಾಗವತದ ವೈಶಿಷ್ಟ್ಯ

ಭಾಗವತವು ಅಷ್ಟಾದಶಮಹಾಪುರಾಣಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ. 'ಭಗವಂತಮಧಿಕೃತ್ಯ ಕೃತೋ ಗ್ರಂಥಃ ಭಾಗವತಂ—ಭಗವಂತನಾದ ವಿಷ್ಣುವನ್ನು ಕುರಿತು ರಚಿತವಾದ ಗ್ರಂಥ ಭಾಗವತ' ಎಂದು ಭಾಗವತ ಶಬ್ದದ ವ್ಯುತ್ಪತ್ತಿ. ಇದನ್ನು ವಿಷ್ಣುಭಾಗವತ ಎಂದೂ ಕೆಲವರು ಹೇಳುತ್ತಾರೆ. ಏಕೆಂದರೆ,

ದೇವೀಭಾಗವತ ಎಂಬ ಇನ್ನೊಂದು ಪುರಾಣ ಉಂಟು. ಅದು ಭಗವತಿಯಾದ ದೇವಿಯನ್ನು ಕುರಿತು ರಚಿಸಿದ ಗ್ರಂಥ. ಇವೆರಡರಲ್ಲಿಯೂ ಹನ್ನೆರಡು ಸ್ಕಂಧಗಳಿದ್ದು ಎರಡರಲ್ಲಿಯೂ ಹದಿನೆಂಟುಸಾವಿರ ಶ್ಲೋಕಗಳಿವೆ. ಪುರಾಣಾಂತರಗಳಲ್ಲಿ ಹೇಳಿದ ಭಾಗವತದ ಲಕ್ಷಣ ಎರಡರಲ್ಲಿಯೂ ಇದೆ. ಭಾಷಾಶೈಲಿಯನ್ನು ಗಮನಿಸಿದರೆ ದೇವೀಭಾಗವತವೇ ಇತರ ಹದಿನೇಳು ಪುರಾಣಗಳಿಗೆ ಸಂವಾದಿಯಾಗಿದೆ. ಆದರೆ ಪದ್ಮಪುರಾಣ ಮತ್ತು ಸ್ಕಾಂದಪುರಾಣಗಳಲ್ಲಿ ಲಕ್ಷಿಸಿರುವ ಭಾಗವತವು ವಿಷ್ಣು ಭಾಗವತವೇ.

ಈ ವಿವಾದ ಹೇಗಾದರೂ ಇರಲಿ. ಪ್ರಕೃತವಾದ ಈ ಭಾಗವತವು ವಿದ್ವನ್ಮಾನ್ಯವೂ ವಿದ್ವತ್‌ಪ್ರಿಯವೂ ಆಗಿದೆ. ವೈದಿಕಧರ್ಮದವರೆಲ್ಲರೂ ಇದನ್ನು ಆದರಿಸಿ ಪುರಸ್ಕರಿಸಿದ್ದಾರೆ. ಲೋಕಕಲ್ಯಾಣಕ್ಕಾಗಿ ಭಗವಂತನು ಎತ್ತಿದ ವಿವಿಧ ಅವತಾರದ ಕಥೆಗಳಿಂದಲೂ, ಆನುಷಂಗಿಕವಾದ ಇತರ ಕಥೆಗಳಿಂದಲೂ ರಸವತ್ತಾಗಿದೆ. ಇಲ್ಲಿ ಪ್ರತಿಪಾದಿತವಾದ ವೇದಾಂತತತ್ತ್ವಗಳು ಇಷ್ಟು ವ್ಯವಸ್ಥಿತವಾಗಿ ಉಳಿದ ಹದಿನೇಳು ಪುರಾಣಗಳಲ್ಲಿಯೂ ಒಂದಿಲ್ಲವೆನ್ನಬಹುದು. ಈ ಭಾಗವತವು ಪುರಾಣಗಳ ಶಿರೋಮಣಿ. ಇತಿಹಾಸಗಳೆನಿಸಿದ ರಾಮಾಯಣ, ಮಹಾಭಾರತಗಳೊಡನೆ ಭಾಗವತವನ್ನು ಪ್ರವಚನಕ್ಕಾಗಿ ನಮ್ಮವರು ಆರಿಸಿಕೊಂಡಿದ್ದಾರೆ. ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆಗಳು ಪ್ರಸ್ಥಾನತ್ರಯವಾಗಿರುವಂತೆ, ರಾಮಾಯಣ ಮಹಾಭಾರತ ಭಾಗವತಗಳು 'ಪ್ರವಚನತ್ರಯ'ವಾಗಿವೆ.

## ಭಾಗವತದ ರಚನೆ

ವ್ಯಾಸಮುನಿಗಳು ವೇದಾರ್ಥೋಪಬೃಂಹಿತವಾದ ಮಹಾಭಾರತವನ್ನು 'ಸ್ತ್ರೀಶೂದ್ರದ್ವಿಜಬಂಧು'ಗಳಿಗಾಗಿ ರಚಿಸಿದರು. ಭಗವದ್ಗೀತೆಯೇ ಮೊದಲಾದ ವಿಭಾಗಗಳಲ್ಲಿ ದಾರ್ಶನಿಕತತ್ತ್ವವನ್ನು ಸ್ಫುಟವಾಗಿ ಅಳವಡಿಸಿದರು. ಲೋಕಹಿತಕ್ಕಾಗಿ ಆ ಮಹಾಕಾರ್ಯವನ್ನು ಸಾಂಗವಾಗಿ ನೆರವೇರಿಸಿದರೂ ಅವರ ಮನಸ್ಸಿಗೆ ಶಾಂತಿಯು ದೊರಕದೆ ಸರಸ್ವತೀ ನದೀತೀರದಲ್ಲಿ ಪರಿತಪಿಸುತ್ತ ಕುಳಿತಿದ್ದರಂತೆ. ಅಲ್ಲಿಗೆ ನಾರದರು ಬರಲಾಗಿ ತಮ್ಮ ಮನಸ್ಸಿನ ಪರಿತಾಪವನ್ನು ಅವರಿಗೆ ಹೇಳಿದರೆಂದೂ ಆಗ ನಾರದರು "ಭಗವಂತನ ಮಹಿಮೆಯನ್ನು ನೀನು ಸಾಕಷ್ಟು ವರ್ಣಿಸಿಲ್ಲ. ಭಕ್ತಿಮಾರ್ಗದ ಶ್ರೇಷ್ಠತೆಯನ್ನು ವಿಶೇಷವಾಗಿ ನಿರೂಪಿಸಿಲ್ಲ. ಈ ಕೊರತೆಯನ್ನು

ನೀಗಿಕೊಳ್ಳಲು ಇನ್ನೊಂದು ಗ್ರಂಥವನ್ನು ರಚಿಸಿದರೆ ನಿನಗೆ ಈ ಬವಣೆ ತಪ್ಪಿ ಶಾಂತಿ ದೊರಕುವುದು" ಎಂದು ಹೇಳಿದರಂತೆ. ಆಗ ವ್ಯಾಸಮುನಿಗಳು ಈ ಭಾಗವತವನ್ನು ರಚಿಸಿದರು—ಎಂದು ತಿಳಿದುಬರುತ್ತದೆ (ಭಾಗವತ ಸ್ಕಂಧ ೧–ಅಧ್ಯಾಯ ೪–೫). ಅನಂತರ ವ್ಯಾಸರು ಇದನ್ನು ಶುಕಮುನಿಗಳಿಗೆ ಬೋಧಿಸಿದರು. ಶಾಪಗ್ರಸ್ತನಾದ ಪರೀಕ್ಷಿತರಾಜನು ವ್ರತಚರ್ಯೆಯಲ್ಲಿದ್ದಾಗ, ಶುಕಮುನಿಗಳು ಏಳು ದಿನಗಳವರೆಗೆ ಈ ಭಾಗವತವನ್ನು ಆತನಿಗೆ ಶ್ರವಣಮಾಡಿಸಿದರು. (ಭಾಗವತ ೧–೧೯).

ಪದ್ಮಪುರಾಣದಲ್ಲಿ ಇದರ ಮುಂದಿನ ಕಥೆ ಹೀಗಿದೆ: "ಪರೀಕ್ಷಿತನು ಭಾಗವತವನ್ನು ಶ್ರವಣಮಾಡಿದಮೇಲೆ, ಕಲಿಯುಗದಲ್ಲಿ ಇನ್ನೂರು ವರ್ಷಗಳು ಕಳೆಯಲಾಗಿ, ಗೋಕರ್ಣ ಎಂಬವನು ತನ್ನ ಸೋದರನಾಗಿದ್ದ ಧುಂಧುಕಾರಿಗೆ ಇದನ್ನು ಹೇಳಿ, ಆತನಿಗೆ ಬಂದಿದ್ದ ಪ್ರೇತಜನ್ಮವನ್ನು ಹೋಗಲಾಡಿಸಿದನು. ಅನಂತರ ಮೂವತ್ತು ವರ್ಷಗಳು ಕಳೆದಮೇಲೆ ಬ್ರಹ್ಮನ ಮಾನಸಪುತ್ರರಾದ ಸನತ್ಕುಮಾರಾದಿಗಳು ನಾರದರಿಗೆ ಭಾಗವತಕಥೆಯನ್ನು ಹೇಳಿದರು"(ಪದ್ಮಪುರಾಣ, ಉತ್ತರಖಂಡ).

ಪದ್ಮಪುರಾಣದಲ್ಲಿ ಈ ವಿಷಯವಾಗಿ ಹೇಳಿರುವ ಕಥೆ ಗಮನಾರ್ಹವಾದುದು. "ಭಕ್ತಿಯೆಂಬ ಸ್ತ್ರೀ ದ್ರಾವಿಡದೇಶದಲ್ಲಿ ಹುಟ್ಟಿ, ಕರ್ಣಾಟಕ ದೇಶದಲ್ಲಿ ಬೆಳೆದು, ಮಹಾರಾಷ್ಟ್ರದಲ್ಲಿ ಕೆಲವೆಡೆ ಇದ್ದು, ಗುರ್ಜರದಲ್ಲಿ (ಗುಜರಾತ್) ಮುದುಕಿಯಾದಳಂತೆ! ಅವಳಿಗೆ ಜ್ಞಾನ, ವೈರಾಗ್ಯ ಎಂಬ ಇಬ್ಬರು ಮಕ್ಕಳಿದ್ದರು. ಅವರನ್ನು ಕರೆದುಕೊಂಡು ವೃಂದಾವನಕ್ಕೆ ಹೋಗಲು ಅವಳಿಗೆ ಮತ್ತೆ ತಾರುಣ್ಯ ಬಂದಿತು. ಜ್ಞಾನ, ವೈರಾಗ್ಯ–ಎಂಬ ಮಕ್ಕಳು ಮಾತ್ರ ಮುದುಕರೂ ಬಲಹೀನರೂ ಆಗಿದ್ದುದರಿಂದ ಭಕ್ತಿಯು ಶೋಕಿಸುತ್ತ ಯಮುನಾ ತಟದಲ್ಲಿದ್ದಳು. ನಾರದರು ಅವಳ ಕಷ್ಟವನ್ನರಿತು ಅದರ ಪರಿಹಾರಕ್ಕಾಗಿ ಸನತ್ಕುಮಾರರನ್ನು ಕಂಡು ಭಕ್ತಿಯ ಪರಿಸ್ಥಿತಿಯನ್ನು ತಿಳಿಸಿದರು. ಆಗ ಸನತ್ಕುಮಾರರು ಗಂಗಾತೀರದಲ್ಲಿ ಭಾಗವತದ ಪ್ರವಚನಮಾಡಿದರು. ಭಕ್ತಿಯು ಪ್ರೇಮರೂಪಳಾಗಿ ಉಲ್ಲಾಸಗೊಂಡಳು. ಜ್ಞಾನ, ವೈರಾಗ್ಯ ಎಂಬ ಅವಳ ಮಕ್ಕಳು ಮತ್ತೆ ತಾರುಣ್ಯವನ್ನು ಪಡೆದರು".

ಈ ಕಥೆ ಚಮತ್ಕಾರಿಯಾದರೂ ಅರ್ಥವತ್ತಾಗಿದೆ. ಭಕ್ತಿಮಾರ್ಗದಿಂದಲೇ ಜ್ಞಾನ ವೈರಾಗ್ಯಗಳ ಉದ್ಗಮ. ಭಕ್ತಿಯಿಂದಲೇ ಅವು ಪೋಷಿತವಾಗಿ ದೃಢವಾಗಿ

ನಿಲ್ಲಬಲ್ಲವು. ಭಾಗವತವು ಭಕ್ತಿರಸಪ್ರಧಾನವಾಗಿದ್ದು ಜ್ಞಾನವೈರಾಗ್ಯಗಳ ಕಡೆಗೆ ಕರೆದೊಯ್ಯುತ್ತದೆ–ಎಂಬುದು ಇಲ್ಲಿ ಸೂಚ್ಯ.

ಪದ್ಮಪುರಾಣದಲ್ಲಿ ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಸ್ಮರಿಸಿಕೊಳ್ಳುವುದು ಉಚಿತವಾದೀತು.

ವೇದೋಪನಿಷದಾಂ ಸಾರಾಜ್ಜಾತಾ ಭಾಗವತೀ ಕಥಾ |
ಅತ್ಯುತ್ತಮಾ ತತೋ ಭಾತಿ ಪೃಥಗ್ಭೂತಾ ಫಲಾಕೃತಿಃ ||

"ವೇದೋಪನಿಷತ್ತುಗಳ ಸಾರದಿಂದ ಭಾಗವತ ಕಥೆ ಹುಟ್ಟಿದೆ. ಅವುಗಳಿಂದ ಬೇರೆಯಾಗಿ ತೋರಿದರೂ ಅವುಗಳ ಶ್ರೇಷ್ಠವಾದ ಹಣ್ಣಿನಂತೆ ಶೋಭಿಸುತ್ತಿದೆ"

ನಿಗಮಕಲ್ಪತರೋರ್ಗಲಿತಂ ಫಲಂ
ಶುಕಮುಖಾದಮೃತದ್ರವಸಂಯುತಮ್ |
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ ||

"ವೇದವೆಂಬ ಕಲ್ಪವೃಕ್ಷದಿಂದ ಭಾಗವತವೆಂಬ ಹಣ್ಣು ಕೆಳಗೆ ಉದುರಿದೆ. ಈ ಭಾಗವತವು ಶುಕಮಹರ್ಷಿಗಳ ಮುಖದಿಂದ ಬಂದುದು–ಗಿಳಿಯು ಕುಕ್ಕಿದುದರಿಂದ ಈ ಹಣ್ಣು ಕೆಳಗೆ ಬಿದ್ದಿದೆ. ಇದು ಅಮೃತದ್ರವದಿಂದ (ಮೋಕ್ಷವನ್ನೀಯುವ ಭಕ್ತಿರಸದಿಂದ) ತುಂಬಿದೆ–ಸಿಹಿಯಾದ ರಸದಿಂದ ತುಂಬಿದೆ. ಓ ರಸಿಕರಾದ ಭಾವುಕರೆ, ತೃಪ್ತಿಯಾಗುವವರೆಗೆ ಭೂಲೋಕದಲ್ಲಿಯೇ ಈ ಅಮೃತರಸವನ್ನು ಕುಡಿಯಿರಿ!"

ಸ್ವರ್ಗೇ ಸತ್ಯೇ ಚ ಕೈಲಾಸೇ ವೈಕುಂಠೇ ನಾಸ್ತ್ಯಯಂ ರಸಃ |
ಅತಃ ಪಿಬಂತು ಸದ್ಭಾಗ್ಯಾ ಮಾ ಮಾ ಮುಂಚತ ಕರ್ಹಿಚಿತ್ ||

"ಈ ರಸವು ಸ್ವರ್ಗ, ಸತ್ಯಲೋಕ, ಕೈಲಾಸ, ವೈಕುಂಠಗಳಲ್ಲಿಯೂ ಇಲ್ಲ. ಆದ್ದರಿಂದ, ಭಾಗ್ಯಶಾಲಿಗಳೆ, ಇದನ್ನು ಕುಡಿಯಿರಿ. ಎಂದೆಂದಿಗೂ ಬಿಡಬೇಡಿರಿ!"

### ದಶಮಸ್ಕಂಧ

ಭಾಗವತದ ಕೇಂದ್ರಸ್ಥಾನ ದಶಮಸ್ಕಂಧ. ಶ್ರೀಕೃಷ್ಣಚರಿತೆಗೆ ವಿಸ್ತೃತವಾದ ಈ ಒಂದು ಸ್ಕಂಧವೇ ಮೀಸಲಾಗಿದೆ. ಇದರಲ್ಲಿ ಪೂರ್ವಾರ್ಧ, ಉತ್ತರಾರ್ಧ–

ಎಂದು ಎರಡು ವಿಭಾಗಗಳಿದ್ದು ಪೂರ್ವಾರ್ಧದಲ್ಲಿ ಶ್ರೀಕೃಷ್ಣಾವತಾರ, ಬಾಲಲೀಲೆ, ಗೋಪಾಲನೆ, ಗೋಪಿಕಾಪ್ರಸಂಗ, ಕಂಸವಧೆ ಪ್ರಕರಣಗಳೂ ಅನಂತರ ಶ್ರೀಕೃಷ್ಣ ಬಲರಾಮರ ಉಪನಯನ, ವಿದ್ಯಾಭ್ಯಾಸಗಳ ವರ್ಣನೆಯೂ ಬರುತ್ತವೆ. ಆಮೇಲೆ ಶ್ರೀಕೃಷ್ಣನು ಅಕ್ರೂರನನ್ನು ಹಸ್ತಿನಾಪುರಕ್ಕೆ ಕಳಿಸಿ ಪಾಂಡವರ ಯೋಗಕ್ಷೇಮ ಗಳನ್ನು ತಿಳಿದುಕೊಳ್ಳುತ್ತಾನೆ. ಇಲ್ಲಿಗೆ ಪೂರ್ವಾರ್ಧದ ಕಥೆ ಸಮಾಪ್ತವಾಗುತ್ತದೆ.

ಉತ್ತರಾರ್ಧದಲ್ಲಿ ಕಾಲಯವನಾದಿಗಳಿಗೆ ಸಂಬಂಧಿಸಿದಂತೆ ಶ್ರೀಕೃಷ್ಣನ ಚರಿತೆ ವಿಸ್ತೃತವಾಗಿದೆ. ಮಹಾಭಾರತದಲ್ಲಿ ಬರುವ ಆತನ ಪಾತ್ರದ ವರ್ಣನೆ ಇಲ್ಲಿ ಪರಿಮಿತವಾಗಿದೆ.

ಭಾಗವತವು ಭಕ್ತಿರಸಪ್ರಧಾನವಾದ ಗ್ರಂಥ. ಆದ್ದರಿಂದಲೇ ಏನಾದರೊಂದು ನಿಮಿತ್ತದಿಂದ ಭಗವಂತನ ಸ್ತುತಿಗಳು ಬರುತ್ತಲೇ ಇರುತ್ತವೆ. ದೇವಕೀ ಗರ್ಭ ದಲ್ಲಿರುವಾಗಲೇ ಬ್ರಹ್ಮನಿಂದ, ಅವತರಿಸಿದೊಡನೆ ವಸುದೇವದೇವಕಿಯರಿಂದ, ಗೋಪಾಲನಾಸಂದರ್ಭದಲ್ಲಿ ಮತ್ತೆ ಬ್ರಹ್ಮನಿಂದ, ನಾಗಪತ್ನಿಯರಿಂದ, ಕಾಳಿಯ ಸರ್ಪನಿಂದ, ಇಂದ್ರನಿಂದ, ಗೋಪಿಕೆಯರಿಂದ–ಹೀಗೆ ಭಗವಂತನ ಸ್ತುತಿಗಳು ವಿಪುಲವಾಗಿವೆ. ಏನಾದರೊಂದು ಸಂದರ್ಭವನ್ನು ದೊರಕಿಸಿಕೊಂಡು ಶುಕಮುನಿ ಗಳು ಭಗವಂತನ ಸ್ತೋತ್ರದಲ್ಲಿ ತಲ್ಲೀನರಾಗುತ್ತಾರೆ. ಭಗವನ್ಮಹಿಮೆಯನ್ನು ಸ್ಮರಿಸಿಕೊಂಡು ಅವರು ರೋಮಾಂಚಿತರಾಗುತ್ತಾರೆ; ಮೈಮರೆಯುತ್ತಾರೆ. ಈ ಸ್ತೋತ್ರಗಳು ಬರಿಯ ಕೊಂಡಾಟವಲ್ಲ, ವೇದಾಂತತತ್ತ್ವ ಗರ್ಭಿತವಾದವು.

## ಭಾಗವತ ಒಂದು ಮಹಾಕಾವ್ಯ

ಭಾಗವತವು ಬರಿಯ ಸ್ತೋತ್ರಸಾಹಿತ್ಯವೆಂದಾಗಲಿ, ಕೇವಲ ತತ್ತ್ವಶಾಸ್ತ್ರ ವೆಂದಾಗಲಿ ಹೇಳಲಾಗದು. ಇದೊಂದು ಮಹಾಕಾವ್ಯವೂ ಆಗಿದೆ. ಮಹಾ ಕಾವ್ಯವೊಂದರಲ್ಲಿ ರಸಿಕರಾದ ಕಾವ್ಯಪ್ರಿಯರು ಯಾವ ರಸೋನ್ಮೇಷವನ್ನೂ ಭಾವಪೋಷಣೆಯನ್ನೂ ನಿರೀಕ್ಷಿಸುವರೋ ಅವುಗಳಿಗೆ ಇದರಲ್ಲಿ ಕೊರತೆಯಿಲ್ಲ. ದಶಮಸ್ಕಂಧವು–ವಿಶೇಷವಾಗಿ ಪೂರ್ವಾರ್ಧವು ಶೃಂಗಾರರಸಭೂಯಿಷ್ಠವಾಗಿದೆ. ವೀರ, ಕರುಣಾದಿರಸಗಳೂ ವಿವಿಧ ಭಾವಗಳೂ ಪುಷ್ಟಿಗೊಂಡಿವೆ. ಪ್ರಕೃತಿವರ್ಣನೆ ರಮಣೀಯವಾಗಿದೆ. ಕುತೂಹಲಿಗಳು ನಿದರ್ಶನಕ್ಕಾಗಿ ಈ ಭಾಗಗಳನ್ನು ನೋಡಬಹುದು :

ಶ್ರೀಕೃಷ್ಣ–ಬಲರಾಮರ ಬಾಲಲೀಲೆ (ಅಧ್ಯಾ. ೮), ಯಶೋದೆಯು ಮೊಸರು ಕಡೆಯುವುದು (ಅಧ್ಯಾ. ೯–೩), ಮಳೆಗಾಲ ಶರತ್ಕಾಲಗಳ ವರ್ಣನೆ (ಅಧ್ಯಾ. ೨೦), ರಾಸಕ್ರೀಡೆ (ಅಧ್ಯಾ. ೨೯), ಗೋಪೀಗೀತ (ಅಧ್ಯಾ. ೩೧), ಗೋಪಿಕಾಯುಗಲಗೀತ (ಅಧ್ಯಾ. ೩೫), ಮಧುರಾಪ್ರವೇಶ ಸಂದರ್ಭ (ಅಧ್ಯಾ. ೪೧–೪೨), ಭ್ರಮರಗೀತ (ಅಧ್ಯಾ. ೪೭)–ಇತ್ಯಾದಿ. ಇವು ಯಾವ ಮಹಾ ಕಾವ್ಯವನ್ನೂ ಮೀರಿಸಬಲ್ಲ ಮನೋಹರವಾದ ರಸಖಂಡಗಳು.

## ಕೃಷ್ಣಶಬ್ದದ ಪ್ರಾಚೀನತೆ

ದಶಮಸ್ಕಂಧದ ಕಥಾನಾಯಕನು ಶ್ರೀಕೃಷ್ಣ. ಕೃಷ್ಣನೆಂಬ ಹೆಸರು ಬಹಳ ಪ್ರಾಚೀನವಾದುದು. ಋಗ್ವೇದಸಂಹಿತೆಯ ಅಷ್ಟಮಮಂಡಲದ ೮೫, ೮೬, ೮೭ ನೆಯ ಸೂಕ್ತಗಳಿಗೂ ದಶಮಮಂಡಲದ ೪೨, ೪೩, ೪೪ ನೆಯ ಸೂಕ್ತಗಳಿಗೂ ಕೃಷ್ಣನೆಂಬ ಋಷಿ ದ್ರಷ್ಟಾರನೆಂದು ಉಕ್ತವಾಗಿದೆ. ಈ ಕೃಷ್ಣಋಷಿ ಭಾಗವತದ ಶ್ರೀಕೃಷ್ಣನಾಗಿರಲಾರ. ಛಾಂದೋಗ್ಯೋಪನಿಷತ್ತಿನಲ್ಲಿ "ಏತದ್ ಘೋರ ಆಂಗಿರಸಃ ಕೃಷ್ಣಾಯ ದೇವಕೀಪುತ್ರಾಯ ಉಕ್ತ್ವಾ ಉವಾಚ, ಅಪಿಪಾಸ ಏವ ಸ ಬಭೂವ" (೩–೧೭–೬) ಎಂದಿದೆ. ಆಂಗಿರಸಗೋತ್ರದವನಾದ ಘೋರನೆಂಬ ಆಚಾರ್ಯನು ತನ್ನ ಶಿಷ್ಯನಾದ ದೇವಕೀಪುತ್ರ ಕೃಷ್ಣನಿಗೆ ಯಜ್ಞದರ್ಶನವನ್ನು ಬೋಧಿಸಿದನೆಂದು ಇದರಿಂದ ಗೊತ್ತಾಗುತ್ತದೆ. ಆದರೆ ಘೋರ ಆಂಗಿರಸನು ಶ್ರೀಕೃಷ್ಣನ ಗುರುವೆಂದು ಇನ್ನೆಲ್ಲಿಯೂ ಹೇಳಿಲ್ಲ. ಭಾಗವತ, ವಿಷ್ಣುಪುರಾಣಗಳ ಪ್ರಕಾರ ಸಾಂದೀಪನಿ ಶ್ರೀಕೃಷ್ಣನ ಗುರು. ಇನ್ನು ಗೋಪಾಲತಾಪನೀ–ಮೊದಲಾದ ಕೆಲವು ಉಪನಿಷತ್ತುಗಳಲ್ಲಿ ಕೃಷ್ಣನ ಹೆಸರಿದೆ. ಗೋಪಿಯರ ವರ್ಣನೆಯೂ ಇದೆ. ಈ ಉಪನಿಷತ್ತುಗಳು ಪ್ರಾಚೀನವಲ್ಲವೆಂದು ಪರಿಶೋಧಕರ ಅಭಿಪ್ರಾಯವಿದೆ.

ಪ್ರಸಿದ್ಧ ಸಂಸ್ಕೃತ ವೈಯಾಕರಣನಾದ ಪಾಣಿನಿಗಿಂತ (ಕ್ರಿ. ಪೂ. 700) ಮೊದಲೇ ಕೃಷ್ಣಭಕ್ತಿ ಪ್ರಚುರವಾಗಿತ್ತು.- ಶ್ರೀಕೃಷ್ಣನ–ವಾಸುದೇವನ–ಭಕ್ತರು ವಾಸುದೇವಕರೆಂದು ಹೇಳಲ್ಪಡುತ್ತಿದ್ದರು. 'ವಾಸುದೇವಾರ್ಜುನಾಭ್ಯಾಂ ವುನ್' (ಅಷ್ಟಾ. ೪–೩–೯೮) ಎಂಬ ಪಾಣಿನಿಸೂತ್ರದಿಂದ ಇದು ನಿಃಸಂದೇಹವಾಗಿ ಗೊತ್ತಾಗುತ್ತದೆ.

ಈಗ ಸ್ವರ್ಗಸ್ಥರಾಗಿರುವ, ಆದರೆ ನಮ್ಮ ಹೃದಯದಲ್ಲಿ ಸ್ಥಿರವಾಗಿ ನೆಲೆಸಿರುವ, ಡಾ|| ಡಿ. ವಿ. ಗುಂಡಪ್ಪನವರು ಶ್ರೀಕೃಷ್ಣನ ವಿಷಯವಾಗಿ ಗಾಢವಾದ ಚಿಂತನೆಯನ್ನು ನಡೆಸಿದ್ದರು. ತಮ್ಮ ಗ್ರಂಥವಾದ ಶ್ರೀಕೃಷ್ಣಪರೀಕ್ಷಣದಲ್ಲಿ ಅವರ ವಿಷಯಮಂಥನ ಸ್ಫುಟವಾಗಿದೆ. ಆ ಗ್ರಂಥದಿಂದ ಕೆಲವು ಮಾತುಗಳನ್ನು ಇಲ್ಲಿ ಉದ್ಧರಿಸಿದೆ :

" ಶ್ರೀಕೃಷ್ಣಚರಿತ್ರೆ"ಯನ್ನು ನಾಲ್ಕು ಖಂಡಗಳಾಗಿ ನೋಡಬಹುದು : (೧) ಬಾಲ್ಯ, (೨) ಗೋಪೀವಿಲಾಸ, (೩) ರಾಜಕೀಯ, (೪) ಪರತತ್ತ್ವಬೋಧೆ.

ಮೊದಲನೆಯದು ಬಾಲ್ಯ. ಲೋಕದಲ್ಲಿ ನಾವು ಕಾಣುವ ಎಲ್ಲ ಬಾಲರ ದಿನದಿನದ ಜೀವನದಲ್ಲಿ ಕಾಣುವಂತೆ ಕೃಷ್ಣಬಾಲಕನ ಜೀವಿತದಲ್ಲಿಯೂ ಅನೇಕ ಲೀಲಾವಿನೋದಗಳನ್ನು ಕಾಣುತ್ತೇವೆ. ಬೆಣ್ಣೆ ಕದಿಯೋಣ, ಹಾಲು ಕದಿಯೋಣ, ಮಡಕೆ ಒಡೆಯೋಣ—ಇಂಥ ತುಂಟಾಟಗಳು ಬಾಲ್ಯಕ್ಕೆ ಸಹಜವಾದವು. ಶ್ರೀಕೃಷ್ಣ ಪ್ರಸಂಗದಲ್ಲಿ ಅವು ಉತ್ಪ್ರೇಕ್ಷೆಯ ರೂಪದಲ್ಲಿ ಕಾಣುತ್ತವೆ. ಕವಿ ತನ್ನ ವಾಚಕರ ಮನಸ್ಸಿನಲ್ಲಿ ಒಂದು ವಿಶದವೂ ಪರಿಪುಷ್ಟವೂ ಆದ ಚಿತ್ರವನ್ನು ನಿರ್ಮಿಸುವುದಕ್ಕಾಗಿ ವಸ್ತುವನ್ನು ದೊಡ್ಡ ಆಕಾರದಲ್ಲಿ ಚಿತ್ರಿಸುತ್ತಾನೆ. ಸಣ್ಣದನ್ನು ದೊಡ್ಡದಾಗಿ ಮಾಡಿ ತೋರಿಸುವುದು ಕಾವ್ಯಪ್ರವೃತ್ತಿಯಲ್ಲಿ ಒಂದು ನೈಜವಾಗಿ ನಡೆಯುವ ವ್ಯಾಪಾರ. ಚರಿತ್ರೆಯಲ್ಲಿ, ನ್ಯಾಯಸ್ಥಾನದಲ್ಲಿ, ಬ್ಯಾಂಕುಗಳಲ್ಲಿ ಹೇಳುವ ಸಂಗತಿಗಳನ್ನು ಅಳತೆಮಾಡಿ ಹೆಚ್ಚುಕಡಮೆಗಳಿಲ್ಲದಂತೆ ಹೇಳಬೇಕು. ಕಾವ್ಯದಲ್ಲಿ ಮುಖ್ಯವಾದದ್ದು ಅಂಕಿ-ಅಳತೆಗಳಲ್ಲ. ವಸ್ತುವಿನ ಸ್ವರೂಪವು ವಾಚಕನ ಮನಸ್ಸಿನಲ್ಲಿ ಸ್ಫುಟವಾಗಬೇಕು. ಈ ಉದ್ದೇಶದಿಂದ ಕವಿಯ ಮಾತು ಭೂತಗನ್ನಡಿಯಾಗುತ್ತದೆ. ಸಾಸಿವೆಯ ಕಾಳು ಕುಂಬಳಕಾಯಾಗುತ್ತದೆ. ಕಾವ್ಯವನ್ನು ಅದು ಕಾವ್ಯವೆಂದು ನೆನಪಿಟ್ಟುಕೊಂಡು ಓದುವವರು ಕವಿಯ ಉತ್ಪ್ರೇಕ್ಷೆಗಳನ್ನು ತಪ್ಪೆಣಿಸರು. ವಾಚಕನ ಮನಸ್ಸಿನಲ್ಲಿ ಒಂದು ಮಹದದ್ಭುತದ ಭಾವನೆ ಉಂಟಾಗಬೇಕಾದದ್ದು ಕಾವ್ಯಕರ್ಮದ ಸಾರ್ಥಕ್ಯಕ್ಕೆ ಅವಶ್ಯ. ಆದದ್ದರಿಂದ ಕೃಷ್ಣನ ಬಾಲ್ಯದ ವರ್ಣನೆಗಳನ್ನು ನಾವು ಹೆಚ್ಚಾಗಿ ಪರೀಕ್ಷಿಸಬೇಕಾಗಿಲ್ಲ" (ಪುಟ. ೩೨-೩೩).

ಇನ್ನು ಗೋಪೀವಿಲಾಸದ ವಿಷಯವಾಗಿ ಶ್ರೀ ಡಿ. ವಿ. ಜಿ. ಯವರ ತೀರ್ಮಾನ ಇದು :

೧. ಶ್ರೀಕೃಷ್ಣನು ಕಾಮುಕನಲ್ಲ, ಜಾರನಲ್ಲ.

೨. ಕಾಮಾರ್ತರಾಗಿ ಬಂದವರಿಗೆ ಆತ ಆಶ್ರಯಕೊಟ್ಟ.

೩. ಅವರ ರೋಗಕ್ಕೆ ಆತ ಚಿಕಿತ್ಸೆ ನಡೆಸಿದ.

೪. ಅದು ಸಾಮೋಪಾಯದ ಚಿಕಿತ್ಸೆ, ದಂಡೋಪಾಯದ್ದಲ್ಲ. ಅದು ಮಕ್ಕಳಲ್ಲಿ ವಾತ್ಸಲ್ಯವುಳ್ಳ ಉಪಾಧ್ಯಾಯನ ಶಿಕ್ಷಣನೀತಿ.

೫. ಆತನ ಉಪಾಯ ಫಲಿಸಿತು. ಆತನನ್ನು ಮರೆಹೊಕ್ಕವರು ವಿಹಿತ ಮಾರ್ಗಕ್ಕೆ ಹಿಂದಿರುಗಿದರು.

೬. ಗೋಪಿಯರು ವ್ಯಭಿಚಾರಿಣಿಯರಲ್ಲ; ವೇಶ್ಯೆಯರಲ್ಲ.

೭. ಅವರು ತಮ್ಮ ತಮ್ಮ ಪತಿಗಳ ಹೊರತು ಬೇರೆ ಅನುರಕ್ತರಾಗಿದ್ದದ್ದು ಕೃಷ್ಣನೊಬ್ಬನಲ್ಲಿ ಮಾತ್ರ.

೮. ಅದು ಆತನು ಪರಮಾತ್ಮಸ್ವರೂಪನೆಂದು; ಪರಮೇಶ್ವರ ಪ್ರತೀಕವೆಂದು.

೯. ದ್ರೌಪದಿಗೆ ಪತಿಪಂಚಕದಂತೆ ಗೋಪಿಯರಿಗೆ ಪತಿದ್ವಯ. ಕೃಷ್ಣನು ದೈವಾಂಶಪತಿ; ಗೋಪಾಲಕನು ಮಾನುಷಪತಿ.

೧೦. ಗೋಪರಿಗೆ ತಮ್ಮ ಹೆಂಡಂದಿರು ತಮ್ಮಿಂದ ಅಗಲಿದ್ದರೆಂದೆನಿಸಲಿಲ್ಲ.

೧೧. ಲೈಂಗಿಕಚಾಪಲ್ಯವು ಮನುಷ್ಯ ಸಾಮಾನ್ಯಲಕ್ಷಣ. ಅದಕ್ಕೆ ಸ್ತ್ರೀ ಪುರುಷ ಭೇದವಿಲ್ಲ. ಕೆಲವರಲ್ಲಿ ಅದು ಗೂಢವಾಗಿರುತ್ತದೆ; ಇನ್ನು ಕೆಲವರಲ್ಲಿ ಪ್ರಕಟಗೊಳ್ಳುತ್ತದೆ. ಯಾರು ಅದನ್ನು ಪ್ರಕಟಿಸರೋ ಅವರಿಂದ ಇತರರು ಕೆರಳುವುದಾಗದು. ಯಾರು ಆ ಚಪಲವನ್ನು ತಡೆಯಲಶಕ್ತರೋ ಅವರಲ್ಲಿ ಅದು ವ್ಯಾಧಿ; ಚಿಕಿತ್ಸೆಯನ್ನು ಬೇಡುತ್ತದೆ.

೧೨. ಆದದ್ದರಿಂದ ಕೃಷ್ಣನಿಗೆ ಬಂದಿರುವ "ಜಾರಚೋರಶಿಖಾಮಣಿ" ಎಂಬ ಬಿರುದು ಕವಿಗಳೂ ಹರಿಕಥಾಕಾರರೂ ಹೊರಿಸಿರುವ ಅಪವಾದ. ಅದು ಹಾಸ್ಯಗರ್ಭಿತವಾದ ಉತ್ಪ್ರೇಕ್ಷೆ; ಅದು ಸತ್ಯವನ್ನು ಮುಚ್ಚಿಟ್ಟು ಅಸತ್ಯವನ್ನು ತೋರಿಸುವಷ್ಟು ವಿಪರೀತವಾಗಿದೆ" (ಪುಟ. ೩೫–೩೭).

ಮುಂದೆ ಇವೆಲ್ಲವನ್ನೂ ಶ್ರೀ ಡಿ. ವಿ. ಜಿ. ಯವರು ಆಧಾರಗಳನ್ನಿತ್ತು ವಿಶದವಾಗಿ ವಿಶ್ಲೇಷಿಸಿದ್ದಾರೆ. "ಗೋಪಿಯರಿಗೆ ಕಾಮವ್ಯಾಧಿ ಇತ್ತು. ಬೇರೆ ಚಿಕಿತ್ಸೆಗೆ ಅದು ಜಗ್ಗುತ್ತಿರಲಿಲ್ಲ. ಆದ್ದರಿಂದ ತಕ್ಕ ಚಿಕಿತ್ಸೆಯನ್ನು ನೀಡಿ ಅವರನ್ನು ಸನ್ಮಾರ್ಗಕ್ಕೆ ಹತ್ತಿಸಿದ ಮಹಾವೈದ್ಯ ಶ್ರೀಕೃಷ್ಣ" ಎಂಬುದು ಅವರ ನಿಲುವು. ಜೊತೆಗೆ ಒಂದು ಎಚ್ಚರಿಕೆಯನ್ನೂ ನೀಡಿದ್ದಾರೆ. ಈ ಮಾರ್ಗವು ವಿಶೇಷ ಪುರುಷರ ವಿಶೇಷ ಧರ್ಮವೆಂದೂ, ಜಿತೇಂದ್ರಿಯರೂ ಸರ್ವಕಾಮನಾವರ್ಜಿತರೂ ಲೋಕ ಕಲ್ಯಾಣೈಕ ದೃಷ್ಟಿಯುಳ್ಳವರೂ ಆದ ಶ್ರೀಕೃಷ್ಣನಂಥ 'ಈಶ್ವರರು' ಕೈಗೊಳ್ಳಬಹುದಾದ್ದೇ ಹೊರತು ಸಾಮಾನ್ಯರು ಈ ದಾರಿ ಹಿಡಿದರೆ ಅವರ ಸರ್ವನಾಶವಾಗುವುದೆಂದು ಎಚ್ಚರಿಸಿದ್ದಾರೆ.

ಭಾಗವತ, ವಿಷ್ಣುಪುರಾಣ–ಮೊದಲಾದ ಗ್ರಂಥಗಳನ್ನು ಪರಿಶೀಲಿಸಿದರೆ ಮೇಲ್ಕಂಡ ಅಭಿಪ್ರಾಯಕ್ಕೆ ಸಾಕಷ್ಟು ಪುರಸ್ಕಾರ ದೊರೆಯುತ್ತದೆ.

ಶ್ರೀಕೃಷ್ಣನ ರಾಜಕೀಯಸಿದ್ಧಾಂತ ಮತ್ತು ಪರತತ್ತ್ವಬೋಧೆಗಳ ಪರಿಶೀಲನೆಗೆ ಮಹಾಭಾರತವೂ ಭಾಗವತದ ಏಕಾದಶಸ್ಕಂಧವೂ ಸರಿಯಾದ ಸ್ಥಳ.

ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಡಿ. ಸಿ. ಅನಂತರಾಮಯ್ಯನವರು ಹಲವಾರು ಕಾರ್ಯಕಲಾಪಗಳ ನಡುವೆಯೂ ಬಿಡುವುಮಾಡಿಕೊಂಡು, ಸಂಸ್ಕೃತ ಮೂಲವನ್ನು ಕನ್ನಡಲಿಪಿಯಲ್ಲಿ ಮುದ್ರಣಕ್ಕೆ ಅನುಕೂಲಿಸುವಂತೆ ಬರೆದುಕೊಟ್ಟು ಉಪಕರಿಸಿದ್ದಾರೆ.

ಈ ಪುಸ್ತಕವನ್ನು ಪ್ರಕಟಿಸಿರುವ ರಾಮಾಯಣ ಪ್ರಕಾಶನ ಸಮಿತಿಯವರಿಗೆ ನಾನು ಚಿರಋಣಿ.

ಕಾಮಜ್ವರಂ ವ್ರಜಸ್ತ್ರೀಣಾಂ ಕಂಸಾದೀನಾಂ ಮದಜ್ವರಮ್ |
ಭವಜ್ವರಂ ಚ ಭಕ್ತಾನಾಂ ಹಂತಾ ವೈದ್ಯೋ ಭಿಷಗ್ ಹರಿಃ ||

ಬೆಂಗಳೂರು
10-4-1978

**ಎನ್. ರಂಗನಾಥಶರ್ಮಾ**
ಅನುವಾದಕ

# ಶ್ರೀಮದ್ಭಾಗವತ ಪಾರಾಯಣ ವಿಧಿ

ಸ್ನಾನಮಾಡಿ ಶುಚಿಯಾಗಿ ವ್ಯಾಸರು, ಶುಕಮುನಿಗಳು, ವಾಸುದೇವ ಮತ್ತು ಭಾಗವತ ಗ್ರಂಥಗಳನ್ನು ಭಕ್ತಿಯಿಂದ ಧ್ಯಾನಿಸಿ ಪೂಜಿಸಬೇಕು. ಅನಂತರ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರಮಂತ್ರವನ್ನು ನೂರೆಂಟು ಸಲ ಜಪಿಸಬೇಕು. ಆಮೇಲೆ ಈ ರೀತಿ ಕರನ್ಯಾಸ–ಅಂಗನ್ಯಾಸಗಳನ್ನು ಮಾಡಬೇಕು.

ಓಂ ಕ್ಲಾಂ ಅಂಗುಷ್ಠಾಭ್ಯಾಂ ನಮಃ ಓಂ ಕ್ಲಾಂ ಹೃದಯಾಯ ನಮಃ
ಓಂ ಕ್ಲೀಂ ತರ್ಜನೀಭ್ಯಾಂ ನಮಃ ಓಂ ಕ್ಲೀಂ ಶಿರಸೇ ಸ್ವಾಹಾ
ಓಂ ಕ್ಲೂಂ ಮಧ್ಯಮಾಭ್ಯಾಂ ನಮಃ ಓಂ ಕ್ಲೂಂ ಶಿಖಾಯೈ ವಷಟ್
ಓಂ ಕ್ಲೈಂ ಅನಾಮಿಕಾಭ್ಯಾಂ ನಮಃ ಓಂ ಕ್ಲೈಂ ಕವಚಾಯ ಹುಮ್
ಓಂ ಕ್ಲೌಂ ಕನಿಷ್ಠಿಕಾಭ್ಯಾಂ ನಮಃ ಓಂ ಕ್ಲೌಂ ನೇತ್ರತ್ರಯಾಯ ವಷಟ್
ಓಂ ಕ್ಲಃ ಕರತಲ ಕರಪೃಷ್ಠಾಭ್ಯಾಂ ನಮಃ ಓಂ ಕ್ಲಃ ಅಸ್ತ್ರಾಯ ಫಟ್

ಅಥ ಧ್ಯಾನಮ್

ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ವರಮೌಕ್ತಿಕಂ ಕರತಲೇ ವೇಣುಃ ಕರೇ ಕಂಕಣಮ್ ।
ಸರ್ವಾಂಗೇ ಹರಿಚಂದನಂ ಸುಲಲಿತಂ ಕಂಠೇ ಚ ಮುಕ್ತಾವಲೀ
ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ ಗೋಪಾಲಚೂಡಾಮಣಿಃ ॥

ಎಂದು ಧ್ಯಾನಿಸಿ ಪಾರಾಯಣವನ್ನಾರಂಭಿಸಬೇಕು. ಸಮಾಪ್ತಿಯಲ್ಲಿ ಮತ್ತೆ ಗ್ರಂಥವನ್ನರ್ಚಿಸಿ ಈ ಶ್ಲೋಕವನ್ನು ಹೇಳಬೇಕು.

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ

# ಅನುಕ್ರಮಣಿಕೆ



|| ಓಂ ನಮೋ ಭಗವತೇ ವಾಸುದೇವಾಯ ||

# ಶ್ರೀಮದ್ಭಾಗವತಮ್

## ದಶಮಸ್ಕಂಧಃ

## (ಪೂರ್ವಾರ್ಧಃ)

ಸಚ್ಚಿದಾನಂದರೂಪಾಯ ವಿಶ್ವೋತ್ಪತ್ತ್ಯಾದಿಹೇತವೇ |
ತಾಪತ್ರಯವಿನಾಶಾಯ ಶ್ರೀಕೃಷ್ಣಾಯ ವಯಂ ನುಮಃ ||

## ಪ್ರಥಮೋಧ್ಯಾಯಃ

**ರಾಜೋವಾಚ—**

**ಕಥಿತೋ ವಂಶವಿಸ್ತಾರೋ ಭವತಾ ಸೋಮಸೂರ್ಯಯೋಃ |**
**ರಾಜ್ಞಾಂ ಚೋಭಯವಂಶ್ಯಾನಾಂ ಚರಿತಂ ಪರಮಾದ್ಭುತಂ || ೧**

**ಯದೋಶ್ಚ ಧರ್ಮಶೀಲಸ್ಯ ನಿತರಾಂ ಮುನಿಸತ್ತಮ |**
**ತತ್ರಾಂಶೇನಾವತೀರ್ಣಸ್ಯ ವಿಷ್ಣೋರ್ವೀರ್ಯಾಣಿ ಶಂಸ ನಃ || ೨**

## ದಶಮಸ್ಕಂಧ

## ಅಧ್ಯಾಯ ೧

ಬ್ರಹ್ಮನು ಭೂದೇವಿಗೆ ಆಶ್ವಾಸನೆಯನ್ನೀಯುವುದು. ದೇವಕಿಯನ್ನು ಸಂಹರಿಸಲು
ಕಂಸನ ಪ್ರಯತ್ನ. ವಸುದೇವನ ಪ್ರಾರ್ಥನೆ.
ಕಂಸನಿಂದ ದೇವಕಿಯ ಆರು ಮಕ್ಕಳ ವಧೆ

ನೈಮಿಷಕ್ಷೇತ್ರದಲ್ಲಿ ಸೂತರು ಶೌನಕಾದಿಮುನಿಗಳಿಗೆ ಹೇಳುತ್ತಾರೆ :— ಆಮೇಲೆ ಪರೀಕ್ಷಿತರಾಜನು ಶುಕಮುನಿಗಳನ್ನು ಕುರಿತು "ಮಹರ್ಷಿಗಳೆ, ಚಂದ್ರ ಸೂರ್ಯರ ವಂಶವಿಚಾರವನ್ನು ವಿಸ್ತಾರವಾಗಿ ತಿಳಿಸಿದಿರಿ. ಆ ಎರಡು ವಂಶ ಗಳಲ್ಲಿಯೂ ಜನಿಸಿದ ರಾಜರ ಅತ್ಯಾಶ್ಚರ್ಯಕರವಾದ ಚರಿತೆಯನ್ನೂ ಧರ್ಮಶೀಲ

ಅವತೀರ್ಯ ಯದೋರ್ವಂಶೇ ಭಗವಾನ್ ಭೂತಭಾವನಃ ।
ಕೃತವಾನ್ ಯಾನಿ ವಿಶ್ವಾತ್ಮಾ ತಾನಿ ನೋ ವದ ವಿಸ್ತರಾತ್ ॥ ೩

ನಿವೃತ್ತತರ್ಷೈರುಪಗೀಯಮಾನಾತ್
ಭವೌಷಧಾಚ್ಛ್ರೋತ್ರಮನೋಽಭಿರಾಮಾತ್ ।
ಕ ಉತ್ತಮಶ್ಲೋಕಗುಣಾನುವಾದಾತ್
ಪುಮಾನ್ ವಿರಜ್ಯೇತ ವಿನಾ ಪಶುಘ್ನಾತ್ ॥ ೪

ಪಿತಾಮಹಾ ಮೇ ಸಮರೇಽಮರಂಜಯೈ-
ರ್ದೇವವ್ರತಾದ್ಯಾತಿರಥೈಸ್ತಿಮಿಂಗಿಲೈಃ ।
ದುರತ್ಯಯಂ ಕೌರವಸೈನ್ಯಸಾಗರಂ
ಕೃತ್ವಾತರನ್ ವತ್ಸಪದಂ ಸ್ಮ ಯತ್ಪ್ಲವಾಃ ॥ ೫

---

ನಾದ ಯದುವಿನ ವೃತ್ತಾಂತವನ್ನೂ ಹೇಳಿದಿರಿ. ಆ ಯದುವಂಶದಲ್ಲಿ ಅವತರಿಸಿದ ವಿಷ್ಣುವಿನ ಮಹಿಮಾನ್ವಿತಚರಿತೆಗಳನ್ನು ನಮಗೆ ಹೇಳಿರಿ (೧–೨). ಭೂತಭಾವನನೂ ವಿಶ್ವಾತ್ಮನೂ ಆದ ಭಗವಂತನು ಯದುವಂಶದಲ್ಲಿ ಅವತರಿಸಿ ಯಾವ ಯಾವ ಕಾರ್ಯಗಳನ್ನು ಮಾಡಿದನೋ ಅವೆಲ್ಲವನ್ನೂ ವಿಸ್ತಾರವಾಗಿ ಹೇಳೋಣವಾಗಲಿ (೩). ಉತ್ತಮಶ್ಲೋಕನಾದ ಭಗವಂತನ ಗುಣಕಥನವು ಆಸೆಗಳೆಲ್ಲವನ್ನೂ ತೊರೆದ ಮುಕ್ತರಿಂದಲೂ ಹೊಗಳಲ್ಪಡುತ್ತಿದೆ. ಸಂಸಾರಕ್ಕೆ ಔಷಧವೆನಿಸಿದೆ. ಕಿವಿಗಳಿಗೂ ಮನಸ್ಸಿಗೂ ಆನಂದದಾಯಕವಾಗಿವೆ. ಇಂತಹ ಗುಣಕಥನದಿಂದ, ಕಟುಕನೊಬ್ಬನನ್ನು* ಬಿಟ್ಟರೆ ಇನ್ನು ಯಾವ ಮನುಷ್ಯನಿಗೆ ಬೇಸರವಾದೀತು ! (೪). ಕೌರವರ ಸೇನಾಸಾಗರವು ದೇವತೆಗಳನ್ನು ಜಯಿಸಬಲ್ಲ ಅತಿರಥರಾದ ಭೀಷ್ಮಾದಿಗಳೆಂಬ ತಿಮಿಂಗಿಲಗಳಿಂದ ಅಲಂಘ್ಯವಾಗಿತ್ತು. ಶ್ರೀಕೃಷ್ಣನೆಂಬ ದೋಣಿಯ ನೆರವಿನಿಂದಲೇ ನನ್ನ ಪಿತಾಮಹರಾದ ಅರ್ಜುನಾದಿಗಳು ಆ ಮಹಾಸಾಗರವನ್ನು, ಕರುವಿನ ಹೆಜ್ಜೆಯಗಲದ ಸ್ಥಳವನ್ನು ದಾಟುವಂತೆ ದಾಟಿಬಿಟ್ಟರಲ್ಲವೆ ? (೫).

---

* 'ವಿನಾ ಪಶುಘ್ನಾತ್' ಎಂದು ಮೂಲ. ಪಶುಘ್ನ = ಪಶುಗಳನ್ನು ಕೊಲ್ಲುವವನು, ಕಟುಕ. ಅಪಶುಗ್ಘ್ನಾತ್ ಎಂದು ಪದಚ್ಛೇದಮಾಡಲೂ ಸಾಧ್ಯವಿದೆ. ಅಪಶುಕ್ = ಶೋಕರಹಿತನಾದ ಆತ್ಮ. ಅಪಶುಗ್ಘ್ನ = ಆತ್ಮಘ್ನ = ತನ್ನ ಆತ್ಮಕ್ಕೆ ಹಾನಿಯನ್ನು ತಂದುಕೊಳ್ಳತಕ್ಕವನು.

ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ
ಸಂತಾನಬೀಜಂ ಕುರುಪಾಂಡವಾನಾಮ್ ।
ಜುಗೋಪ ಕುಕ್ಷಿಂ ಗತ ಆತ್ತಚಕ್ರೋ
ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥ ೬

ವೀರ್ಯಾಣಿ ತಸ್ಯಾಖಿಲದೇಹಭಾಜಾ-
ಮಂತರ್ಬಹಿಃ ಪೂರುಷಕಾಲರೂಪೈಃ ।
ಪ್ರಯಚ್ಛತೋ ಮೃತ್ಯುಮುತಾಮೃತಂ ಚ
ಮಾಯಾಮನುಷ್ಯಸ್ಯ ವದಸ್ವ ವಿದ್ವನ್ ॥ ೭

ರೋಹಿಣ್ಯಾಸ್ತನಯಃ ಪ್ರೋಕ್ತೋ ರಾಮಃ ಸಂಕರ್ಷಣಸ್ತ್ವಯಾ ।
ದೇವಕ್ಯಾ ಗರ್ಭಸಂಬಂಧಃ ಕುತೋ ದೇಹಾಂತರಂ ವಿನಾ ॥ ೮

ಕಸ್ಮಾನ್ಮುಕುಂದೋ ಭಗವಾನ್ ಪಿತುರ್ಗೇಹಾದ್ ವ್ರಜಂ ಗತಃ ।
ಕ್ವ ವಾಸಂ ಜ್ಞಾತಿಭಿಃ ಸಾರ್ಧಂ ಕೃತವಾನ್ ಸಾತ್ವತಾಂಪತಿಃ ॥ ೯

---

ಶರಣಾಗತಳಾದ ನನ್ನ ತಾಯಿಯ ಗರ್ಭವನ್ನು ಪ್ರವೇಶಿಸಿ ಚಕ್ರಧಾರಿಯಾಗಿ ನನ್ನನ್ನು ಸಂರಕ್ಷಿಸಿದವನು ಆ ಮಹಾತ್ಮನೇ ಅಲ್ಲವೆ ? ಅಶ್ವತ್ಥಾಮನ ಅಸ್ತ್ರದಿಂದ ಬೆಂದುಹೋಗುತ್ತಿದ್ದ ನನ್ನ ಈ ದೇಹವು ಕುರುಪಾಂಡವರ ವಂಶವನ್ನುಳಿಸುವ ಬೀಜವೆಂದು ಬಗೆದು ನನ್ನನ್ನು ಆತನು ಪಾಲಿಸಿದ್ದಾನೆ (೬). ಸಕಲಜಂತುಗಳಿಗೂ ನಿಯಾಮಕನಾದ ಆ ಮಹಾತ್ಮನು ಅಂತರ್ದೃಷ್ಟಿಯುಳ್ಳವರಿಗೆ ಮಹಾಪುರುಷರೂಪ ದಿಂದ, ಅಮೃತವೆಂಬ ಮೋಕ್ಷವನ್ನು ಅನುಗ್ರಹಿಸುತ್ತಾನೆ. ಬಹಿರ್ದೃಷ್ಟಿಯುಳ್ಳವ ರನ್ನು ಕಾಲರೂಪದಿಂದ ಮೃತ್ಯುವೆಂಬ ಸಂಸಾರದಲ್ಲಿ ತಳ್ಳುತ್ತಾನೆ. ಓ ಸರ್ವಜ್ಞರೆ, ಮಾಯಾಮನುಷ್ಯನಾಗಿ ಅವತರಿಸಿದ ಶ್ರೀಕೃಷ್ಣನ ಮಹಿಮಾನ್ವಿತ ಚರಿತೆಗಳನ್ನು ವಿವರಿಸಿ ಹೇಳಿರಿ (೭). ಸಂಕರ್ಷಣನೆನಿಸಿದ ಬಲರಾಮನು ರೋಹಿಣಿಯ ಮಗ ನೆಂದು ನೀವು ಹೇಳಿದಿರಿ. ದೇಹಾಂತರವಿಲ್ಲದೆ ಅದೇ ದೇಹದಲ್ಲಿ ಆತನಿಗೆ ದೇವಕಿಯ ಗರ್ಭಸಂಬಂಧವು ಹೇಗಾಯಿತು ? (೮). ಭಗವಾನ್ ಮುಕುಂದನು ತಂದೆಯ ಮನೆಯಿಂದ ವ್ರಜಕ್ಕೆ ಹೋದುದೇಕೆ ? ಆ ಯದುನಾಥನು ಬಂಧುಗಳೊಡನೆ ಎಲ್ಲಿ ವಾಸವಾಗಿದ್ದನು ? ವ್ರಜದಲ್ಲಿ ಆತನು ಏನು ಮಾಡಿದನು ? ತನ್ನ ತಾಯಿಯ

ವ್ರಜೇ ವಸನ್ ಕಿಮಕರೋನ್ಮಧುಪುರ್ಯಾಂ ಚ ಕೇಶವಃ ।
ಭ್ರಾತರಂ ಚಾವಧೀತ್ ಕಂಸಂ ಮಾತುರದ್ಧಾತದರ್ಹಣಮ್ ॥ ೧೦

ದೇಹಂ ಮಾನುಷಮಾಶ್ರಿತ್ಯ ಕತಿ ವರ್ಷಾಣಿ ವೃಷ್ಣಿಭಿಃ ।
ಯದುಪುರ್ಯಾಂ ಸಹಾವಾತ್ಸೀತ್ ಪತ್ನ್ಯಃ ಕತ್ಯಭವನ್ ಪ್ರಭೋಃ॥

ಏತದನ್ಯಚ್ಚ ಸರ್ವಂ ಮೇ ಮುನೇ ಕೃಷ್ಣವಿಚೇಷ್ಟಿತಮ್ ।
ವಕ್ತುಮರ್ಹಸಿ ಸರ್ವಜ್ಞ ಶ್ರದ್ದಧಾನಾಯ ವಿಸ್ತೃತಮ್ ॥ ೧೨

ನೈಷಾತಿದುಃಸಹಾ ಕ್ಷುನ್ಮಾಂ ತ್ಯಕ್ತೋದಮಪಿ ಬಾಧತೇ ।
ಪಿಬಂತಂ ತ್ವನ್ಮುಖಾಂಭೋಜಚ್ಯುತಂ ಹರಿಕಥಾಮೃತಮ್ ॥ ೧೩

ಸೂತ ಉವಾಚ—

ಏವಂ ನಿಶಮ್ಯ ಭೃಗುನಂದನ ಸಾಧುವಾದಂ
ವೈಯಾಸಕಿಃ ಸ ಭಗವಾನಥ ವಿಷ್ಣುರಾತಮ್ ।
ಪ್ರತ್ಯರ್ಚ್ಯ ಕೃಷ್ಣಚರಿತಂ ಕಲಿಕಲ್ಮಷಘ್ನಂ
ವ್ಯಾಹರ್ತುಮಾರಭತ ಭಾಗವತಪ್ರಧಾನಃ ॥ ೧೪

---

ಸೋದರನಾದ ಕಂಸನನ್ನು ಮಧುರೆಯಲ್ಲಿ ವಧಿಸಿದನಷ್ಟೆ. ಅನುಚಿತವಾದ ಸೋದರಮಾವನ ವಧೆಯನ್ನು ಏಕೆ ಮಾಡಬೇಕಾಯಿತು ? (೯–೧೦). ಮನುಷ್ಯ ದೇಹವನ್ನು ಧರಿಸಿ ಮಧುರೆಯಲ್ಲಿ ವೃಷ್ಣಿಗಳೊಡನೆ ಅವನು ಎಷ್ಟು ವರ್ಷಗಳವರೆಗೆ ಇದ್ದನು ? ಆ ಪ್ರಭುವಿಗೆ ಎಷ್ಟುಮಂದಿ ಪತ್ನಿಯರಿದ್ದರು ? ಇವೇ ಮೊದಲಾದ ಶ್ರೀಕೃಷ್ಣನ ಸಕಲಚರಿತೆಗಳನ್ನೂ, ಮುನಿಗಳೆ, ಕೃಪೆಯಿಟ್ಟು ನನಗೆ ಹೇಳಬೇಕು. ಓ ಸರ್ವಜ್ಞರೆ, ನಾನು ಶ್ರದ್ಧೆಯಿಂದ ಕೇಳುತ್ತಿದ್ದೇನೆ. ವಿಸ್ತಾರವಾಗಿ ಹೇಳೋಣ ವಾಗಲಿ (೧೧–೧೨). ನಾನು ನೀರನ್ನು ಸಹ ಕುಡಿಯದೆ ಕುಳಿತಿದ್ದರೂ, ತಡೆಯ ಲಾರದಷ್ಟು ಹಸಿವಾಗಿದ್ದರೂ, ಅದರಿಂದ ನನಗೆ ಬಾಧೆಯೇನೂ ಇಲ್ಲ ! ನಿಮ್ಮ ಮುಖಕಮಲದಿಂದ ಹರಿಯುವ ಹರಿಕಥಾಮೃತವನ್ನು ಕುಡಿದು ತೃಪ್ತನಾಗುತ್ತೇನೆ" ಎಂದು ಹೇಳಿದನು (೧೩). ಶೌನಕರೆ, ಪ್ರಶಂಸಾರ್ಹವಾದ ಈ ನುಡಿಯನ್ನು ಕೇಳಿ ಭಗವಾನ್ ಶುಕಮುನಿಗಳು ಪರೀಕ್ಷಿತನನ್ನು ಶ್ಲಾಘಿಸಿದರು. ಅನಂತರ ಆ ಭಾಗವತೋತ್ತಮರು ಕಲಿಕಲ್ಮಷಹಾರಿಯಾದ ಶ್ರೀಕೃಷ್ಣಚರಿತೆಯನ್ನು ಈ ಪ್ರಕಾರ

ಶ್ರೀ ಶುಕ ಉವಾಚ—

**ಸಮ್ಯಗ್ವ್ಯವಸಿತಾ ಬುದ್ಧಿಸ್ತವ ರಾಜರ್ಷಿಸತ್ತಮ ।**
**ವಾಸುದೇವಕಥಾಯಾಂ ತೇ ಯಜ್ಜಾತಾ ನೈಷ್ಠಿಕೀ ರತಿಃ ॥ ೧೫**

**ವಾಸುದೇವಕಥಾಪ್ರಶ್ನಃ ಪುರುಷಾಂಸ್ತ್ರೀನ್ ಪುನಾತಿ ಹಿ ।**
**ವಕ್ತಾರಂ ಪೃಚ್ಛಕಂ ಶ್ರೋತೄಂಸ್ತತ್ಪಾದಸಲಿಲಂ ಯಥಾ ॥ ೧೬**

**ಭೂಮಿರ್ದೃಪ್ತನೃಪವ್ಯಾಜದೈತ್ಯಾನೀಕಶತಾಯುತೈಃ ।**
**ಆಕ್ರಾಂತಾ ಭೂರಿಭಾರೇಣ ಬ್ರಹ್ಮಾಣಂ ಶರಣಂ ಯಯೌ ॥ ೧೭**

**ಗೌರ್ಭೂತ್ವಾಶ್ರುಮುಖೀ ಖಿನ್ನಾ ಕ್ರಂದಂತೀ ಕರುಣಂ ವಿಭೋಃ ।**
**ಉಪಸ್ಥಿತಾಂತಿಕೇ ತಸ್ಮೈ ವ್ಯಸನಂ ಸ್ವಮವೋಚತ ॥ ೧೮**

**ಬ್ರಹ್ಮಾ ತದುಪಧಾರ್ಯಾಥ ಸಹ ದೇವೈಸ್ತಯಾ ಸಹ ।**
**ಜಗಾಮ ಸತ್ರಿನಯನಸ್ತೀರಂ ಕ್ಷೀರಪಯೋನಿಧೇಃ ॥ ೧೯**

**ತತ್ರ ಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಮ್ ।**
**ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ ॥ ೨೦**

---

ವಾಗಿ ಹೇಳಲಾರಂಭಿಸಿದರು (೧೪) : ಪರೀಕ್ಷಿತ–ರಾಜರ್ಷಿಸತ್ತಮ, ನಿನ್ನ ಬುದ್ಧಿ ಸರಿಯಾದ ಮಾರ್ಗದಲ್ಲಿ ಪ್ರವೃತ್ತವಾಗಿದೆ. ಏಕೆಂದರೆ, ವಾಸುದೇವನ ಕಥೆಯಲ್ಲಿ ನಿನಗೆ ಶ್ರದ್ಧಾಪೂರ್ವಕವಾದ ಆಸಕ್ತಿಯುಂಟಾಗಿದೆ (೧೫). ವಾಸುದೇವನ ಕಥಾ ವಿಷಯಕವಾದ ಪ್ರಶ್ನೆಯು ಆತನ ಪಾದೋದಕದಂತೆ ಪಾವನವಾದದ್ದು. ಅದು ಪ್ರಶ್ನೆಮಾಡುವವನನ್ನು ಹೇಳುವವನನ್ನು ಶ್ರೋತೃವನ್ನು – ಹೀಗೆ ಮೂವರನ್ನೂ ಪವಿತ್ರಗೊಳಿಸುತ್ತದೆ (೧೬). ಸಾವಿರಾರು ಮಂದಿ ದೈತ್ಯರು ಉದ್ಧತರಾದ ರಾಜರ ವೇಷದಿಂದ ಭೂಮಿಯಲ್ಲಿ ತುಂಬಿದ್ದರು. ಭೂದೇವಿಯು ಅವರ ಭಾರದಿಂದ ಬಳಲಿ ಬ್ರಹ್ಮನ ಮರೆಹೊಕ್ಕಳು (೧೭). ಅವಳು ಖಿನ್ನಳಾಗಿ ಗೋರೂಪವನ್ನು ಧರಿಸಿ ಬ್ರಹ್ಮನ ಬಳಿಗೆ ಹೋಗಿ ಕಣ್ಣೀರು ಹರಿಸಿ ಗೋಳಿಡುತ್ತ ತನ್ನ ಕಷ್ಟವನ್ನು ತೋಡಿಕೊಂಡಳು. ಬ್ರಹ್ಮನು ಅವಳ ದೂರನ್ನು ಅವಧರಿಸಿ ಅವಳನ್ನೂ ದೇವತೆಗಳನ್ನೂ ಕರೆದುಕೊಂಡು ಶಿವಸಹಿತನಾಗಿ ಕ್ಷೀರಸಮುದ್ರದ ಬಳಿಗೆ ಹೋದನು (೧೮–೧೯). ಅಲ್ಲಿಗೆ ಹೋಗಿ ಜಗನ್ನಾಥನೂ ದೇವದೇವನೂ ವೃಷಾಕಪಿಯೂ ಆದ ಪರಮ

ಗಿರಂ ಸಮಾಧೌ ಗಗನೇ ಸಮೀರಿತಾಂ
ನಿಶಮ್ಯ ವೇಧಾಸ್ತ್ರಿದಶಾನುವಾಚ ಹ ।
ಗಾಂ ಪೌರುಷೀಂ ಮೇ ಶ್ರುಣುತಾಮರಾಃ ಪುನ-
ರ್ವಿಧೀಯತಾಮಾಶು ತಥೈವ ಮಾ ಚಿರಮ್ ॥ ೨೧

ಪುರೈವ ಪುಂಸಾವಧೃತೋ ಧರಾಜ್ವರೋ
ಭವದ್ಭಿರಂಶೈರ್ಯದುಷೂಪಜನ್ಯತಾಮ್ ।
ಸ ಯಾವದುರ್ವ್ಯಾ ಭರಮೀಶ್ವರೇಶ್ವರಃ
ಸ್ವಕಾಲಶಕ್ತ್ಯಾ ಕ್ಷಪಯಂಶ್ಚರೇದ್ ಭುವಿ ॥ ೨೨

ವಸುದೇವಗೃಹೇ ಸಾಕ್ಷಾದ್ ಭಗವಾನ್ ಪುರುಷಃ ಪರಃ ।
ಜನಿಷ್ಯತೇ ತತ್ಪ್ರಿಯಾರ್ಥಂ ಸಂಭವಂತು ಸುರಸ್ತ್ರಿಯಃ ॥ ೨೩

ವಾಸುದೇವಕಲಾನಂತಃ ಸಹಸ್ರವದನಃ ಸ್ವರಾಟ್ ।
ಅಗ್ರತೋ ಭವಿತಾ ದೇವೋ ಹರೇಃ ಪ್ರಿಯಚಿಕೀರ್ಷಯಾ ॥ ೨೪

---

ಪುರುಷನನ್ನು ಏಕಾಗ್ರಚಿತ್ತನಾಗಿ ಪುರುಷಸೂಕ್ತದಿಂದ ಸ್ತುತಿಸಿದನು (೨೦). ಆಗ ಸಮಾಧಿಸ್ಥಿತಿಯಲ್ಲಿದ್ದ ಬ್ರಹ್ಮನಿಗೆ ಶ್ರೀಮನ್ನಾರಾಯಣನು ಹೇಳಿದ ವಾಣಿಯು ಕೇಳಿಸಿತು. ಅದನ್ನಾಲಿಸಿದ ಬ್ರಹ್ಮನು ದೇವತೆಗಳನ್ನು ಕುರಿತು “ಎಲೈ ದೇವತೆಗಳೆ, ಪರಮಪುರುಷನ ವಾಣಿಯನ್ನು ಕೇಳಿರಿ. ಅವನ ಆಜ್ಞೆಯಂತೆ ನೀವು ಶೀಘ್ರವಾಗಿ ಕಾರ್ಯೋನ್ಮುಖರಾಗಿರಿ. ತಡಮಾಡಬೇಡಿರಿ (೨೧). ಏನೆಂದರೆ, ಭಗವಂತನಿಗೆ ಭೂಮಿಯ ಸಂಕಷ್ಟವು ಮೊದಲೇ ತಿಳಿದಿದೆ. ದೇವದೇವನು ತನ್ನ ಕಾಲಶಕ್ತಿಯಿಂದ ಭೂಭಾರವನ್ನಿಳುಹುತ್ತ ಭೂಲೋಕದಲ್ಲಿ ಸಂಚರಿಸತಕ್ಕವನಾಗಿದ್ದಾನೆ. ಆದ್ದರಿಂದ ನೀವು ಅಲ್ಲಿಯವರೆಗೆ ನಿಮ್ಮ ಅಂಶಗಳಿಂದ ಯದುಕುಲದಲ್ಲಿ ಅವತರಿಸಬೇಕು (೨೨). ಪರಮಾತ್ಮನು ವಸುದೇವಗೃಹದಲ್ಲಿ ಸ್ವಯಂ ಜನಿಸುವನು. ಆತನ ಸಂತೋಷಕ್ಕಾಗಿ ಅಪ್ಸರೆಯರೂ ಗೋಕುಲದಲ್ಲಿ ಜನಿಸಲಿ. ವಾಸುದೇವನ ಒಂದು ಅಂಶವೂ ಸ್ವಯಂಪ್ರಕಾಶನೂ ಸಹಸ್ರಮುಖನೂ ಅನಂತನೂ ಆದ ಆದಿಶೇಷನು ಶ್ರೀಹರಿಯ ಇಚ್ಛೆಯಂತೆ ಆತನಿಗೂ ಮೊದಲೇ ಅಲ್ಲಿ ಅವತರಿಸು

ವಿಷ್ಣೋರ್ಮಾಯಾ ಭಗವತೀ ಯಯಾ ಸಂಮೋಹಿತಂ ಜಗತ್ ।
ಆದಿಷ್ಟಾ ಪ್ರಭುಣಾಂಶೇನ ಕಾರ್ಯಾರ್ಥೇ ಸಂಭವಿಷ್ಯತಿ ॥ ೨೫

ಶ್ರೀಶುಕ ಉವಾಚ—

ಇತ್ಯಾದಿಶ್ಯಾಮರಗಣಾನ್ ಪ್ರಜಾಪತಿಪತಿರ್ವಿಭುಃ ।
ಆಶ್ವಾಸ್ಯ ಚ ಮಹೀಂ ಗೀರ್ಭಿಃ ಸ್ವಧಾಮ ಪರಮಂ ಯಯೌ ॥ ೨೬

ಶೂರಸೇನೋ ಯದುಪತಿರ್ಮಥುರಾಮಾವಸನ್ ಪುರೀಮ್ ।
ಮಾಥುರಾನ್ ಶೂರಸೇನಾಂಶ್ಚ ವಿಷಯಾನ್ ಬುಭುಜೇ ಪುರಾ ॥ ೨೭

ರಾಜಧಾನೀ ತತಃ ಸಾಭೂತ್ ಸರ್ವಯಾದವಭೂಭುಜಾಮ್ ।
ಮಥುರಾ ಭಗವಾನ್ ಯತ್ರ ನಿತ್ಯಂ ಸಂನಿಹಿತೋ ಹರಿಃ ॥ ೨೮

ತಸ್ಯಾಂ ತು ಕರ್ಹಿಚಿಚ್ಛೌರಿರ್ವಸುದೇವಃ ಕೃತೋದ್ವಹಃ ।
ದೇವಕ್ಯಾ ಸೂರ್ಯಯಾ ಸಾರ್ಧಂ ಪ್ರಯಾಣೇ ರಥಮಾರುಹತ್ ॥

ಉಗ್ರಸೇನಸುತಃ ಕಂಸಃ ಸ್ವಸುಃ ಪ್ರಿಯಚಿಕೀರ್ಷಯಾ ।
ರಶ್ಮೀನ್ ಹಯಾನಾಂ ಜಗ್ರಾಹ ರೌಕ್ಮೈ ರಥಶತೈರ್ವೃತಃ ॥ ೩೦

---

ವನು (೨೩–೨೪). ಯಾವಳಿಂದ ವಿಶ್ವವೇ ಮೋಹಿತವಾಗಿದೆಯೋ ಅಂತಹ ಭಗವತಿಯಾದ ವಿಷ್ಣುಮಾಯೆಯೂ ಸಹ ಪ್ರಭುವಿನ ಆಜ್ಞೆಯಂತೆ ಆತನ ಕಾರ್ಯಾರ್ಥವಾಗಿ ಒಂದು ಅಂಶದಿಂದ ಭೂಲೋಕದಲ್ಲಿ ಜನಿಸುವಳು " ಎಂದು ಹೇಳಿದನು (೨೫). ಪರೀಕ್ಷಿತ, ಈ ರೀತಿಯಲ್ಲಿ ಪ್ರಜಾಪತಿಗಳಿಗೂ ಪತಿಯಾದ ಆ ಬ್ರಹ್ಮನು ದೇವತೆಗಳಿಗೆ ಆದೇಶವನ್ನಿತ್ತು ಭೂದೇವಿಯನ್ನು ಸಂತೈಸಿ ತನ್ನ ಪರಮಧಾಮವನ್ನು ಸೇರಿದನು (೨೬). ಹಿಂದೆ ಶೂರಸೇನನೆಂಬ ಯದುರಾಜನು ಮಧುರಾನಗರದಲ್ಲಿ ವಾಸವಾಗಿದ್ದು ಮಾಥುರ ಮತ್ತು ಶೂರಸೇನರಾಜ್ಯಗಳನ್ನು ಆಳುತ್ತಿದ್ದನು. ಅಲ್ಲಿಂದ ಮೊದಲ್ಗೊಂಡು ಮಧುರೆಯು ಸಕಲ ಯದುರಾಜರಿಗೂ ರಾಜಧಾನಿಯಾಯಿತು. ಆ ನಗರದಲ್ಲಿ ಭಗವಾನ್ ಶ್ರೀಹರಿಯು ನಿತ್ಯವೂ ಸಂನಿಹಿತನಾಗಿರುತ್ತಾನೆ (೨೭–೨೮). ಒಂದು ಸಲ ಶೂರನ ಪುತ್ರನಾದ ವಸುದೇವನು ದೇವಕಿಯನ್ನು ಮದುವೆಯಾಗಿ ತನ್ನ ನವವಧುವಿನೊಡನೆ ಪ್ರಯಾಣ ಮಾಡಲು ರಥವನ್ನೇರಿದನು. ಆಗ ಉಗ್ರಸೇನನ ಮಗನಾದ ಕಂಸನು

**ಚತುಃಶತಂ ಪಾರಿಬರ್ಹಂ ಗಜಾನಾಂ ಹೇಮಮಾಲಿನಾಮ್ ।**
**ಅಶ್ವಾನಾಮಯುತಂ ಸಾರ್ಧಂ ರಥಾನಾಂ ಚ ತ್ರಿಷಟ್ಶತಮ್ ॥ ೩೧**

**ದಾಸೀನಾಂ ಸುಕುಮಾರೀಣಾಂ ದ್ವೇ ಶತೇ ಸಮಲಂಕೃತೇ ।**
**ದುಹಿತ್ರೇ ದೇವಕಃ ಪ್ರಾದಾದ್ ಯಾನೇ ದುಹಿತೃವತ್ಸಲಃ ॥ ೩೨**

**ಶಂಖತೂರ್ಯಮೃದಂಗಾಶ್ಚ ನೇದುರ್ದುಂದುಭಯಃ ಸಮಮ್ ।**
**ಪ್ರಯಾಣಪ್ರಕ್ರಮೇ ತಾವದ್ ವರವಧ್ವೋಃ ಸುಮಂಗಲಮ್ ॥ ೩೩**

**ಪಥಿ ಪ್ರಗ್ರಹಿಣಂ ಕಂಸಮಾಭಾಷ್ಯಾಹಾಶರೀರವಾಕ್ ।**
**ಅಸ್ಯಾಸ್ತ್ವಾಮಷ್ಟಮೋ ಗರ್ಭೋ ಹಂತಾ ಯಾಂ ವಹಸೇಽಬುಧ ॥**

**ಇತ್ಯುಕ್ತಃ ಸ ಖಲಃ ಪಾಪೋ ಭೋಜಾನಾಂ ಕುಲಪಾಂಸನಃ ।**
**ಭಗಿನೀಂ ಹಂತುಮಾರಬ್ಧಃ ಖಡ್ಗಪಾಣಿಃ ಕಚೇಽಗ್ರಹೀತ್ ॥ ೩೪**

---

ತಂಗಿಯಾದ ದೇವಕಿಗೆ ಹರ್ಷವಾಗಲೆಂದು ಕುದುರೆಗಳ ಕಡಿವಾಣವನ್ನು ಹಿಡಿದು ರಥವನ್ನು ನಡೆಸಿದನು. ಅವನೊಡನೆ ನೂರಾರು ಸುವರ್ಣಮಯ ರಥಗಳು ಮೆರವಣಿಗೆಯಲ್ಲಿ ಹೊರಟಿದ್ದವು (೨೯–೩೦). ಮದುವೆಯ ಸಮಯದಲ್ಲಿ ಮಗಳಮೇಲಿನ ವಾತ್ಸಲ್ಯದಿಂದ ದೇವಕನು ಹೇಮಾಲಂಕೃತವಾದ ನಾನೂರು ಆನೆಗಳನ್ನೂ ಹತ್ತುಸಾವಿರ ಕುದುರೆಗಳನ್ನೂ ಒಂದುಸಾವಿರದ ಎಂಟುನೂರು ರಥಗಳನ್ನೂ ಸುಕುಮಾರಿಯರೂ ಅಲಂಕೃತರೂ ಆದ ಇನ್ನೂರು ದಾಸಿಯರನ್ನೂ ದೇವಕಿಗೆ ಬಳುವಳಿಯಾಗಿ ಕೊಟ್ಟಿದ್ದನು (೩೧-೩೨). ವಧೂವರರ ಪ್ರಯಾಣ ಕಾಲದಲ್ಲಿ ಶಂಖತೂರ್ಯಮೃದಂಗಗಳೂ ದುಂದುಭಿಗಳೂ ಮಂಗಳಧ್ವನಿಗೈಯುತ್ತಿದ್ದವು. ಆ ಸಮಯದಲ್ಲಿ ಕಡಿವಾಣವನ್ನು ಹಿಡಿದು ರಥವನ್ನು ನಡೆಸುತ್ತಿದ್ದ ಕಂಸನನ್ನು ಸಂಬೋಧಿಸಿ "ಎಲವೊ ಮೂರ್ಖ, ಯಾವ ಸೋದರಿಯನ್ನು ರಥದಲ್ಲಿ ಕುಳ್ಳಿರಿಸಿ ನಡೆಸುತ್ತಿರುವೆಯೋ, ಅವಳ ಎಂಟನೆಯ ಗರ್ಭದಲ್ಲಿ ಜನಿಸುವವನು ನಿನ್ನನ್ನು ಸಂಹರಿಸುವನು !" ಎಂದು ಅಶರೀರವಾಣಿಯಾಯಿತು (೩೩–೩೪). ಅದನ್ನು ಕೇಳಿದೊಡನೆ ಖಳನೂ ಪಾಪಿಯೂ ಭೋಜವಂಶಕ್ಕೆ ಕಳಂಕ ಪ್ರಾಯನೂ ಆದ ಕಂಸನು ಕತ್ತಿಯನ್ನು ಹಿರಿದು ತಂಗಿಯನ್ನು ಕೊಲ್ಲುವುದಕ್ಕಾಗಿ

**ತಂ ಜಗುಪ್ಸಿತಕರ್ಮಾಣಂ ನೃಶಂಸಂ ನಿರಪತ್ರಪಮ್ ।**
**ವಸುದೇವೋ ಮಹಾಭಾಗ ಉವಾಚ ಪರಿಸಾಂತ್ವಯನ್ ॥ ೩೬**

**ವಸುದೇವ ಉವಾಚ—**

**ಶ್ಲಾಘನೀಯಗುಣಃ ಶೂರೈರ್ಭವಾನ್ ಭೋಜಯಶಸ್ಕರಃ ।**
**ಸ ಕಥಂ ಭಗಿನೀಂ ಹನ್ಯಾತ್ ಸ್ತ್ರಿಯಮುದ್ವಾಹಪರ್ವಣಿ ॥ ೩೭**

**ಮೃತ್ಯುರ್ಜನ್ಮವತಾಂ ವೀರ ದೇಹೇನ ಸಹ ಜಾಯತೇ ।**
**ಅದ್ಯ ವಾಬ್ದಶತಾಂತೇ ವಾ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ ॥ ೩೮**

**ದೇಹೇ ಪಂಚತ್ವಮಾಪನ್ನೇ ದೇಹೀ ಕರ್ಮಾನುಗೋಽವಶಃ ।**
**ದೇಹಾಂತರಮನುಪ್ರಾಪ್ಯ ಪ್ರಾಕ್ತನಂ ತ್ಯಜತೇ ವಪುಃ ॥ ೩೯**

**ವ್ರಜಂಸ್ತಿಷ್ಠನ್ ಪದೈಕೇನ ಯಥೈವೈಕೇನ ಗಚ್ಛತಿ ।**
**ಯಥಾ ತೃಣಜಲೂಕೈವಂ ದೇಹೀ ಕರ್ಮಗತಿಂ ಗತಃ ॥ ೪೦**

---

ಅವಳ ಮುಡಿಯನ್ನು ಹಿಡಿದನು (೩೫). ಆಗ ಹೇಯಕೃತ್ಯದಲ್ಲಿ ತೊಡಗಿದ ನಿರ್ಲಜ್ಜನಾದ ಆ ಕ್ರೂರಿಯನ್ನು ಸಂತೈಸುತ್ತ ವಸುದೇವನು ಹೀಗೆಂದನು : "ಅಯ್ಯಾ ಕಂಸ, ಶೂರರಾದವರು ನಿನ್ನ ಗುಣವನ್ನು ಶ್ಲಾಘಿಸುತ್ತಿದ್ದಾರೆ. ಭೋಜ ವಂಶಕ್ಕೆ ಕೀರ್ತಿಯನ್ನು ತರತಕ್ಕವನು ನೀನು. ಒಬ್ಬ ಹೆಂಗಸನ್ನು — ಸೋದರಿಯನ್ನು ಅದರಲ್ಲಿಯೂ ಅವಳ ವಿವಾಹೋತ್ಸವದ ಸಮಯದಲ್ಲಿ ಕೊಲ್ಲುವುದಕ್ಕೆ ಹೊರಡಬಹುದೆ ? (೩೬—೩೭). ಎಲೈ ವೀರನೆ, ಹುಟ್ಟಿದವರೆಲ್ಲರಿಗೂ ಮರಣವು ದೇಹದ ಜೊತೆಗೇ ಬಂದಿರುತ್ತದೆ. ಇಂದಲ್ಲದಿದ್ದರೆ ನೂರುವರ್ಷಗಳಮೇಲಾದರೂ ಪ್ರಾಣಿಗಳಿಗೆ ಮರಣವು ನಿಶ್ಚಿತ (೩೮). ದೇಹವು ಪಂಚತ್ವವನ್ನು ಹೊಂದುತ್ತಿರುವಾಗ ಜೀವಾತ್ಮನು ತನ್ನ ಸ್ವಾಧೀನವಿಲ್ಲದೆ ಕರ್ಮವಶನಾಗಿ ದೇಹಾಂತರವನ್ನು ಕಟ್ಟಿಕೊಂಡೇ ಹಿಂದಿನ ದೇಹವನ್ನು ಬಿಡುತ್ತಾನೆ (೩೯). ಮನುಷ್ಯನು ನಡೆಯುವಾಗ ಒಂದು ಹೆಜ್ಜೆಯನ್ನು ನೆಲದಮೇಲೆ ಊರಿರುವಾಗಲೇ ಇನ್ನೊಂದು ಹೆಜ್ಜೆಯನ್ನು ಎತ್ತಿ ಮುಂದಕ್ಕೆ ಇಡುತ್ತಾನಲ್ಲವೆ ? ಹುಲ್ಲಿನಲ್ಲಿ ಹರಿದಾಡುವ ಹುಳು ಹೀಗೆಯೇ ಒಂದು ಹುಲ್ಲುಕಡ್ಡಿಯಿಂದ ಇನ್ನೊಂದಕ್ಕೆ ದಾಟುತ್ತದೆ. ಹೀಗೆಯೇ

ಸ್ವಪ್ನೇ ಯಥಾ ಪಶ್ಯತಿ ದೇಹಮೀದೃಶಂ
ಮನೋರಥೇನಾಭಿನಿವಿಷ್ಟಚೇತನಃ ।
ದೃಷ್ಟಶ್ರುತಾಭ್ಯಾಂ ಮನಸಾನುಚಿಂತಯನ್
ಪ್ರಪದ್ಯತೇ ತತ್ ಕಿಮಪಿ ಹ್ಯಪಸ್ಮೃತಿಃ ॥ ೪೧

ಯತೋ ಯತೋ ಧಾವತಿ ದೈವಚೋದಿತಂ
ಮನೋ ವಿಕಾರಾತ್ಮಕಮಾಪ ಪಂಚಸು ।
ಗುಣೇಷು ಮಾಯಾರಚಿತೇಷು ದೇಹ್ಯಸೌ
ಪ್ರಪದ್ಯಮಾನಃ ಸಹ ತೇನ ಜಾಯತೇ ॥ ೪೨

ಜ್ಯೋತಿರ್ಯಥೈವೋದಕಪಾರ್ಥಿವೇಷ್ವದಃ
ಸಮೀರವೇಗಾನುಗತಂ ವಿಭಾವ್ಯತೇ ।
ಏವಂ ಸ್ವಮಾಯಾರಚಿತೇಷ್ವಸೌ ಪುಮಾನ್
ಗುಣೇಷು ರಾಗಾನುಗತೋ ವಿಮುಹ್ಯತಿ ॥ ೪೩

---

ಜೀವನು ಕರ್ಮಗತಿಯನ್ನನುಸರಿಸಿ ದೇಹದಿಂದ ದೇಹಾಂತರವನ್ನು ಪಡೆಯುತ್ತಾನೆ (೪೦). ಜಾಗ್ರದವಸ್ಥೆಯಲ್ಲಿ ಮನುಷ್ಯನು ಕೆಲವನ್ನು ಕಂಡಿರುತ್ತಾನೆ. ಕೆಲವನ್ನು ಕೇಳಿರುತ್ತಾನೆ. ಅದರಿಂದುಂಟಾದ ಮಾನಸಸಂಸ್ಕಾರದಿಂದ ಸ್ವಪ್ನದಲ್ಲಿ ದೇಹಾಂತರವನ್ನು ಕಂಡು ಅದೇ ತಾನೆಂದು ತಿಳಿಯುವುದುಂಟು. ಹಾಗೆಯೇ ಜಾಗ್ರದವಸ್ಥೆಯಲ್ಲಿಯೂ ತಾನು ಬೇರೊಬ್ಬನೆಂದು ಮನೋರಥದಿಂದ ಕಲ್ಪಿಸಿಕೊಳ್ಳುತ್ತಾನೆ. ಆಗ ಹಿಂದಿನ ಸ್ಮೃತಿಯೆಲ್ಲವೂ ನಷ್ಟವಾಗಿರುತ್ತದೆ. ಹಾಗೆಯೇ ಮರಣಾನಂತರದಲ್ಲಿ ಹಿಂದಿನ ಸ್ಮೃತಿಯು ಸಂಪೂರ್ಣ ನಷ್ಟವಾಗಿ, ತಾನು ಬೇರೊಂದು ದೇಹವನ್ನು ಪಡೆದಿದ್ದೇನೆಂದು ತಿಳಿಯುತ್ತಾನೆ (೪೧). ವಿಕಾರಾತ್ಮಕವಾದ ಮನಸ್ಸು ಫಲಾಭಿಮುಖವಾದ ಕರ್ಮದಿಂದ ಪ್ರೇರಿತವಾಗಿ ಸಾಯುವಾಗ ನಾನಾ ವಿಷಯಗಳ ಕಡೆಗೆ ಧಾವಿಸುತ್ತದೆ. ಮಾಯಾರಚಿತವಾದ ಪಂಚಭೂತಗಳಲ್ಲಿ ಯಾವ ಬಗೆಯ ದೇಹದ ಕಡೆಗೆ ಮನಸ್ಸು ಓಡುವುದೋ ಆ ದೇಹವನ್ನು ಜೀವನು ಪಡೆಯುತ್ತಾನೆ. ಆ ಮನಸ್ಸೇ ನಾನೆಂದು ತಿಳಿದಿರುವುದರಿಂದ ಜೀವನಿಗೆ ಆ ಮನಸ್ಸಿನೊಡನೆ ದೇಹಾಂತರವು ಪ್ರಾಪ್ತವಾಗುತ್ತದೆ (೪೨). ಸೂರ್ಯನೇ ಮೊದಲಾದ ಜ್ಯೋತಿಯು ಗಡಿಗೆಯಲ್ಲಿರುವ ನೀರು ಮೊದಲಾದ್ದರಲ್ಲಿ ಪ್ರತಿಬಿಂಬಿಸುವುದಷ್ಟೆ. ಆಗ ಗಾಳಿ

**ತಸ್ಮಾನ್ನ ಕಸ್ಯಚಿದ್ ದ್ರೋಹಮಾಚರೇತ್ ಸ ತಥಾವಿಧಃ ।**
**ಆತ್ಮನಃ ಕ್ಷೇಮಮನ್ವಿಚ್ಛನ್ ದ್ರೋಗ್ಧುರ್ವೈ ಪರತೋ ಭಯಮ್ ॥**

**ಏಷಾ ತವಾನುಜಾ ಬಾಲಾ ಕೃಪಣಾ ಪುತ್ರಿಕೋಪಮಾ ।**
**ಹಂತುಂ ನಾರ್ಹಸಿ ಕಲ್ಯಾಣೀಮಿಮಾಂ ತ್ವಂ ದೀನವತ್ಸಲಃ ॥ ೪೫**

**ಶ್ರೀಶುಕ ಉವಾಚ—**

**ಏವಂ ಸ ಸಾಮಭಿರ್ಭೇದೈರ್ಬೋಧ್ಯಮಾನೋಽಪಿ ದಾರುಣಃ ।**
**ನ ನ್ಯವರ್ತತ ಕೌರವ್ಯ ಪುರುಷಾದಾನನುವ್ರತಃ ॥ ೪೬**

**ನಿರ್ಬಂಧಂ ತಸ್ಯ ತಂ ಜ್ಞಾತ್ವಾ ವಿಚಿಂತ್ಯಾನಕದುಂದುಭಿಃ ।**
**ಪ್ರಾಪ್ತಂ ಕಾಲಂ ಪ್ರತಿವ್ಯೋಢುಮಿದಂ ತತ್ರಾನ್ವಪದ್ಯತ ॥ ೪೭**

**ಮೃತ್ಯುರ್ಬುದ್ಧಿಮತಾಪೋಹ್ಯೋ ಯಾವದ್ಬುದ್ಧಿಬಲೋದಯಮ್ ।**
**ಯದ್ಯಸೌ ನ ನಿವರ್ತೇತ ನಾಪರಾಧೋಽಸ್ತಿ ದೇಹಿನಃ ॥ ೪೮**

---

ಯಿಂದ ನೀರು ಚಲಿಸಿದಾಗ ಜ್ಯೋತಿಯೇ ಚಲಿಸಿದಂತೆ ಭಾಸವಾಗುವುದು. ಅದೇ ರೀತಿಯಲ್ಲಿ ಆತ್ಮನು ತನ್ನ ಅವಿದ್ಯೆಯಿಂದ ನಿರ್ಮಿತವಾದ ದೇಹಗಳಲ್ಲಿ ಪ್ರವೇಶಿಸುವನು. ರಾಗವಶದಿಂದ ದೇಹವು ಕಾರ್ಯೋನ್ಮುಖವಾದಾಗ ದೇಹವೇ ತಾನೆಂದು ತಿಳಿದ ಜೀವನು ತಾನು ಕಾರ್ಯೋನ್ಮುಖನಾಗಿದ್ದೇನೆಂದು ಭ್ರಮಿಸುತ್ತಾನೆ (೪೩). ಆದ್ದರಿಂದ ಆತ್ಮನಿಗೆ ಕ್ಷೇಮವನ್ನು ಬಯಸತಕ್ಕವನು ಯಾರಿಗೂ ದ್ರೋಹವನ್ನೆಣಿಸಬಾರದು. ದ್ರೋಹಿಗೆ ಪರರಿಂದ ಭಯವಿದ್ದೇ ಇದೆ (೪೪). ಈ ದೇವಕಿಯಾದರೋ ನಿನ್ನ ತಂಗಿ ; ಬಾಲಿಕೆ ; ದೀನೆ ; ನಿನ್ನ ಮಗಳಂತೆ—ಬೊಂಬೆಯಂತೆ ಇದ್ದಾಳೆ. ದೀನವತ್ಸಲನಾದ ನೀನು ಶೋಭನಾಂಗಿಯಾದ ಇವಳನ್ನು ಕೊಲ್ಲುವುದು ಯುಕ್ತವಲ್ಲ" ಎಂದನು (೪೫). ಪರೀಕ್ಷಿತ, ಹೀಗೆ ಸಾಮೋಪಾಯ ಭೇದೋಪಾಯಗಳಿಂದ ವಸುದೇವನು ತಿಳಿಯಹೇಳಿದರೂ ರಾಕ್ಷಸಸ್ವಭಾವದ ಆ ದಾರುಣನು ಜಗ್ಗಲಿಲ್ಲ. ಕೊಲ್ಲಬೇಕೆಂಬ ಕಂಸನ ಹಠವನ್ನು ಕಂಡು ವಸುದೇವನು ಸಮಯೋಚಿತವಾದ ಇನ್ನೊಂದು ಮಾರ್ಗವನ್ನು ಕೈಗೊಂಡನು (೪೬—೪೭). ಅವನು ತನ್ನ ಮನಸ್ಸಿನಲ್ಲಿ "ಬುದ್ಧಿಶಾಲಿಯು ತನ್ನ ಬುದ್ಧಿಸಾಮರ್ಥ್ಯವಿದ್ದಷ್ಟು ಯತ್ನಿಸಿ ಮರಣ

**ಪ್ರದಾಯ ಮೃತ್ಯವೇ ಪುತ್ರಾನ್ ಮೋಚಯೇ ಕೃಪಣಾಮಿಮಾಮ್।**
**ಸುತಾ ಮೇ ಯದಿ ಜಾಯೇರನ್ ಮೃತ್ಯುರ್ವಾ ನ ಮ್ರಿಯೇತ ಚೇತ್॥**

**ವಿಪರ್ಯಯೋ ವಾ ಕಿಂ ನ ಸ್ಯಾದ್ ಗತಿರ್ಧಾತುರ್ದುರತ್ಯಯಾ ।**
**ಉಪಸ್ಥಿತೋ ನಿವರ್ತೇತ ನಿವೃತ್ತಃ ಪುನರಾಪತೇತ್ ॥ ೫೦**

**ಅಗ್ನೇರ್ಯಥಾ ದಾರುವಿಯೋಗಯೋಗಯೋ-**
**ರದೃಷ್ಟತೋಽನ್ಯತ್ರ ನಿಮಿತ್ತಮಸ್ತಿ ।**
**ಏವಂ ಹಿ ಜಂತೋರಪಿ ದುರ್ವಿಭಾವ್ಯಃ**
**ಶರೀರಸಂಯೋಗವಿಯೋಗಹೇತುಃ ॥ ೫೧**

**ಏವಂ ವಿಮೃಶ್ಯ ತಂ ಪಾಪಂ ಯಾವದಾತ್ಮನಿದರ್ಶನಮ್ ।**
**ಪೂಜಯಾಮಾಸ ವೈ ಶೌರಿರ್ಬಹುಮಾನಪುರಃಸರಮ್ ॥ ೫೨**

---

ವನ್ನು ತಪ್ಪಿಸಿಕೊಳ್ಳಬೇಕು. ಯತ್ನಿಸಿದರೂ ಸಾವು ತಪ್ಪದಾದರೆ ಆಗ ಮನುಷ್ಯನ ಅಪರಾಧವೇನೂ ಇರದು (೪೮). ಮೃತ್ಯುಸ್ವರೂಪನಾದ ಕಂಸನಿಗೆ ನನ್ನ ಮಕ್ಕಳನ್ನು ಒಪ್ಪಿಸಿ ಈ ಅನಾಥೆಯನ್ನು ಉಳಿಸುವೆನು. ಈ ದೇವಕಿಯಲ್ಲಿ ನನಗೆ ಮಕ್ಕಳು ಜನಿಸಿದರೆ, ಆಗ ಏನಾಗುವುದೋ ಆಗಲಿ. ಅಲ್ಲಿಯವರೆಗಂತೂ ಇವಳು ಜೀವಿಸಿರಬಹುದು. ಅಷ್ಟರಲ್ಲಿ ಈ ಕಂಸನೇ ಮೃತನಾದರೆ ಎಲ್ಲರಿಗೂ ಈ ಮೃತ್ಯು ತಪ್ಪುವುದು ! (೪೯). ಅಥವಾ ಇದೆಲ್ಲವೂ ತಲೆಕೆಳಗಾಗಿ ನನ್ನ ಪುತ್ರನಿಂದಲೇ ಈತನಿಗೆ ಮರಣವು ಸಂಭವಿಸಬಹುದು. ಆಕಾಶವಾಣಿಯಾದಂತೆ ದೈವವನ್ನು ಮೀರಲು ಸಾಧ್ಯವೆ ? ಈಗ ಒದಗಿರುವ ವಿಪತ್ತನ್ನು ತಪ್ಪಿಸಿಕೊಳ್ಳೋಣ. ಅದು ಮತ್ತೆ ಬರುವುದಾದರೆ ನಾನೇನು ಮಾಡಲಾದೀತು ? (೫೦). ವನದಲ್ಲಿ ಕಾಳ್ಗಿಚ್ಚು ಕೆಲವು ಮರಗಳನ್ನು ಬಿಡುತ್ತದೆ, ಕೆಲವನ್ನು ಸುಡುತ್ತದೆ. ಹಾಗಾಗಲು ಅದೃಷ್ಟ ವಲ್ಲದೆ ಬೇರೆ ನಿಮಿತ್ತವಿಲ್ಲ. ಹಾಗೆಯೇ ಪ್ರಾಣಿಗಳಿಗೆ ಜನನಮರಣಗಳು ಯಾವಾಗ ಹೇಗೆ ಸಂಭವಿಸುತ್ತವೆ ಎಂಬುದಕ್ಕೆ ನಿಮಿತ್ತವು ಅದೃಷ್ಟವಾಗಿ ಅಚಿಂತ್ಯ ವಾಗಿಯೇ ಇರುತ್ತದೆ " ಎಂದು ಆಲೋಚಿಸಿದನು (೫೧). ಈ ಪ್ರಕಾರದಲ್ಲಿ ತನ್ನ ಪ್ರಜ್ಞೆಗೆ ನಿಲುಕುವಷ್ಟು ವಿಮರ್ಶಿಸಿ, ವಸುದೇವನು ಆ ಪಾತಕಿಯನ್ನು ವಿಶೇಷವಾಗಿ ಶ್ಲಾಘಿಸಿದನು. ಮನಸ್ಸು ವಿಷಣ್ಣವಾಗಿದ್ದರೂ ಪ್ರಸನ್ನವದನನಾಗಿ

**ಪ್ರಸನ್ನವದನಾಂಭೋಜೋ ನೃಶಂಸಂ ನಿರಪತ್ರಪಮ್ ।**
**ಮನಸಾ ದೂಯಮಾನೇನ ವಿಹಸನ್ನಿದಮಬ್ರವೀತ್ ॥ ೫೩**

ವಸುದೇವ ಉವಾಚ—

**ನ ಹ್ಯಸ್ಯಾಸ್ತೇ ಭಯಂ ಸೌಮ್ಯ ಯದ್ ವಾಗಾಹಾಶರೀರಿಣೀ ।**
**ಪುತ್ರಾನ್ ಸಮರ್ಪಯಿಷ್ಯೇಽಸ್ಯಾ ಯತಸ್ತೇ ಭಯಮುತ್ಥಿತಮ್ ॥**

ಶ್ರೀಶುಕ ಉವಾಚ—

**ಸ್ವಸುರ್ವಧಾನ್ನಿವವೃತೇ ಕಂಸಸ್ತದ್ವಾಕ್ಯಸಾರವಿತ್ ।**
**ವಸುದೇವೋಽಪಿ ತಂ ಪ್ರೀತಃ ಪ್ರಶಸ್ಯ ಪ್ರಾವಿಶದ್ ಗೃಹಮ್ ॥ ೫೫**

**ಅಥ ಕಾಲ ಉಪಾವೃತ್ತೇ ದೇವಕೀ ಸರ್ವದೇವತಾ ।**
**ಪುತ್ರಾನ್ ಪ್ರಸುಷುವೇ ಚಾಷ್ಟೌ ಕನ್ಯಾಂ ಚೈವಾನುವತ್ಸರಮ್ ॥**

**ಕೀರ್ತಿಮಂತಂ ಪ್ರಥಮಜಂ ಕಂಸಾಯಾನಕದುಂದುಭಿಃ ।**
**ಅರ್ಪಯಾಮಾಸ ಕೃಚ್ಛ್ರೇಣ ಸೋಽನೃತಾದತಿವಿಹ್ವಲಃ ॥ ೫೭ ॥**

---

ಮುಗುಳ್ನಗೆ ಬೀರುತ್ತ ನಿರ್ಲಜ್ಜನಾದ ಆ ನೃಶಂಸನನ್ನು ಕುರಿತು " ಸೌಮ್ಯ, ಅಶರೀರವಾಣಿಯು ತಿಳಿಸಿದಂತೆ ಈ ದೇವಕಿಯಿಂದ ನಿನಗೆ ಯಾವ ಭಯವೂ ಇಲ್ಲ. ಇವಳಲ್ಲಿ ಜನಿಸುವ ಪುತ್ರರಿಂದಲ್ಲವೆ ನಿನಗೆ ಭಯವಾಗಿರುವುದು ? ಜನಿಸಿದ ಪುತ್ರ ರೆಲ್ಲರನ್ನೂ ನಿನ್ನ ವಶಕ್ಕೆ ಒಪ್ಪಿಸುವೆನು " ಎಂದನು (೫೨–೫೪). ವಸುದೇವನ ನುಡಿಯು ಅರ್ಥವತ್ತಾದುದೆಂದರಿತು ಕಂಸನು ಸೋದರಿಯನ್ನು ಕೊಲ್ಲದೆ ಉಳಿಸಿ ದನು. ವಸುದೇವನು ಸಂಪ್ರೀತನಾಗಿ ಆತನನ್ನು ಹೊಗಳಿ ತನ್ನ ಮನೆಗೆ ಹೋದನು (೫೫). ಹೀಗೆಯೇ ಕಾಲವು ಕಳೆಯುತ್ತಿರಲು ಸರ್ವಾತ್ಮನಾದ ವಿಷ್ಣುವನ್ನು ತನ್ನ ದೇವತೆಯೆಂದು ಭಜಿಸುತ್ತಿದ್ದ ದೇವಕಿಯು ಕ್ರಮವಾಗಿ ಎಂಟು ಜನ ಪುತ್ರರನ್ನೂ ತರುವಾಯ ಒಂದು ವರ್ಷವಾದಮೇಲೆ ಒಬ್ಬ ಮಗಳನ್ನೂ ಪ್ರಸವಿಸಿದಳು (೫೬). ಮೊದಲು ಹುಟ್ಟಿದ ಹಿರಿಯ ಮಗನ ಹೆಸರು ಕೀರ್ತಿಮಂತ ಎಂದು. ಸುಳ್ಳಿಗೆ ಅಂಜುತ್ತಿದ್ದ ವಸುದೇವನು ಆ ಶಿಶುವನ್ನು ಬಹು ಸಂಕಟದಿಂದ ಕಂಸನಿಗೆ ಒಪ್ಪಿಸಿ

**ಕಿಂ ದುಃಸಹಂ ನು ಸಾಧೂನಾಂ ವಿದುಷಾಂ ಕಿಮಪೇಕ್ಷಿತಮ್ ।**
**ಕಿಮಕಾರ್ಯಂ ಕದರ್ಯಾಣಾಂ ದುಸ್ತ್ಯಜಂ ಕಿಂ ಧೃತಾತ್ಮನಾಮ್ ॥**

**ದೃಷ್ಟ್ವಾ ಸಮತ್ವಂ ತಚ್ಛೌರೇಃ ಸತ್ಯೇ ಚೈವ ವ್ಯವಸ್ಥಿತಿಮ್ ।**
**ಕಂಸಸ್ತುಷ್ಟಮನಾ ರಾಜನ್ ಪ್ರಹಸನ್ನಿದಮಬ್ರವೀತ್ ॥ ೫೯**

**ಪ್ರತಿಯಾತು ಕುಮಾರೋಽಯಂ ನ ಹ್ಯಸ್ಮಾದಸ್ತಿ ಮೇ ಭಯಮ್ ।**
**ಅಷ್ಟಮಾದ್ ಯುವಯೋರ್ಗರ್ಭಾನ್ಮೃತ್ಯುರ್ಮೇ ವಿಹಿತಃ ಕಿಲ ॥**

**ತಥೇತಿ ಸುತಮಾದಾಯ ಯಯಾವಾನಕದುಂದುಭಿಃ ।**
**ನಾಭ್ಯನಂದತ ತದ್ವಾಕ್ಯಮಸತೋಽವಿಜಿತಾತ್ಮನಃ ॥ ೬೧**

**ನಂದಾದ್ಯಾ ಯೇ ವ್ರಜೇ ಗೋಪಾ ಯಾಶ್ಚಾಮೀಷಾಂ ಚ ಯೋಷಿತಃ**
**ವೃಷ್ಣಯೋ ವಸುದೇವಾದ್ಯಾ ದೇವಕ್ಯಾದ್ಯಾ ಯದುಸ್ತ್ರಿಯಃ ॥ ೬೨**

**ಸರ್ವೇ ವೈ ದೇವತಾಪ್ರಾಯಾ ಉಭಯೋರಪಿ ಭಾರತ ।**
**ಜ್ಞಾತಯೋ ಬಂಧುಸುಹೃದೋ ಯೇ ಚ ಕಂಸಮನುವ್ರತಾಃ ॥ ೬೩**

---

ದನು (೫೭). ಸತ್ಯಸಂಧರಿಗೆ ಸಹಿಸಲು ಸಾಧ್ಯವಿಲ್ಲದ್ದು ಯಾವುದು ? ಭಗವಂತನೇ ಸತ್ಯವೆಂದು ತಿಳಿದವರಿಗೆ ಇನ್ನು ಯಾವುದರಲ್ಲಿ ಅಪೇಕ್ಷೆ ಇದ್ದೀತು ? ಕಂಸನಂತಹ ನೀಚರಿಗೆ ಅಕಾರ್ಯವಾದರೂ ಯಾವುದು ? ದೇವಕಿಯಂತೆ ಸದಾ ಚಿತ್ತದಲ್ಲಿ ಹರಿಯನ್ನು ಧ್ಯಾನಿಸತಕ್ಕವರಿಗೆ ತ್ಯಜಿಸಲಾಗದ್ದು ಯಾವುದು ? (೫೮). ಪರೀಕ್ಷಿತ, ವಸುದೇವನ ಋಜುಬುದ್ಧಿಯನ್ನೂ ಸತ್ಯನಿಷ್ಠೆಯನ್ನೂ ಕಂಡು ಕಂಸನು ಸಂಪ್ರೀತನಾಗಿ ನಗುತ್ತ "ವಸುದೇವ, ಈ ಬಾಲಕನನ್ನು ನೀನು ಕರೆದೊಯ್ಯಬಹುದು. ಈ ಮಗುವಿನಿಂದ ನನಗೆ ಯಾವ ಭಯವೂ ಇಲ್ಲ. ನಿಮಗೆ ಜನಿಸುವ ಎಂಟನೆಯ ಗರ್ಭದಿಂದ ನನಗೆ ಮರಣಭಯವೆಂದು ನಿಶ್ಚಿತವಾಗಿದೆಯಲ್ಲವೆ ?" ಎಂದನು (೫೯–೬೦). ಆಗಲೆಂದು ಹೇಳಿ ವಸುದೇವನು ತನ್ನ ಮಗುವನ್ನು ಎತ್ತಿಕೊಂಡು ಹೋದನು. ಆದರೆ ದುಷ್ಟನೂ ಅಜಿತೇಂದ್ರಿಯನೂ ಆದ ಕಂಸನ ಮಾತಿನಿಂದ ಅವನಿಗೆ ಸಂತೃಪ್ತಿಯಾಗಲಿಲ್ಲ (೬೧). ವ್ರಜಸ್ಥಳದಲ್ಲಿದ್ದ ನಂದನೇ ಮೊದಲಾದ ಗೋಪಾಲರೂ ಅವರ ಪತ್ನಿಯರೂ ವಸುದೇವ ದೇವಕಿ ಮುಂತಾದ ಯಾದವರೂ ಇವರೆಲ್ಲರ ಜ್ಞಾತಿಗಳೂ ಬಂಧುಗಳೂ ಮಿತ್ರರೂ ಕಂಸನನ್ನು ಆಶ್ರಯಿಸಿಕೊಂಡಿದ್ದ

ಏತತ್ ಕಂಸಾಯ ಭಗವಾನ್ ಶಶಂಸಾಭ್ಯೇತ್ಯ ನಾರದಃ ।
ಭೂಮೇರ್ಭಾರಾಯಮಾಣಾನಾಂ ದೈತ್ಯಾನಾಂ ಚ ವಧೋದ್ಯಮಮ್

ಋಷೇರ್ವಿನಿರ್ಗಮೇ ಕಂಸೋ ಯದೂನ್ ಮತ್ವಾ ಸುರಾನಿತಿ ।
ದೇವಕ್ಯಾ ಗರ್ಭಸಂಭೂತಂ ವಿಷ್ಣುಂ ಚ ಸ್ವವಧಂ ಪ್ರತಿ ॥ ೬೫

ದೇವಕೀಂ ವಸುದೇವಂ ಚ ನಿಗೃಹ್ಯ ನಿಗಡೈರ್ಗೃಹೇ ।
ಜಾತಂ ಜಾತಮಹನ್ ಪುತ್ರಂ ತಯೋರಜನಶಂಕಯಾ ॥ ೬೬ ॥

ಮಾತರಂ ಪಿತರಂ ಭ್ರಾತೄನ್ ಸರ್ವಾಂಶ್ಚ ಸುಹೃದಸ್ತಥಾ ।
ಘ್ನಂತಿ ಹ್ಯಸುತೃಪೋ ಲುಬ್ಧಾ ರಾಜಾನಃ ಪ್ರಾಯಶೋ ಭುವಿ ॥ ೬೭

ಆತ್ಮಾನಮಿಹ ಸಂಜಾತಂ ಜಾನನ್ ಪ್ರಾಗ್ವಿಷ್ಣುನಾ ಹತಮ್ ।
ಮಹಾಸುರಂ ಕಾಲನೇಮಿಂ ಯದುಭಿಃ ಸ ವ್ಯರುಧ್ಯತ ॥ ೬೮

---

ರಷ್ಟೆ. ಅವರೆಲ್ಲರೂ ದೇವಾಂಶಸಂಭೂತರಾಗಿದ್ದರು (೬೨–೬೩). ಈ ವಿಷಯ ವನ್ನು ನಾರದಮುನಿಗಳು ಬಂದು ಕಂಸನಿಗೆ ಹೇಳಿಬಿಟ್ಟರು ! ಕಂಸನೇ ಮೊದ ಲಾದವರು ದೈತ್ಯರೆಂದೂ ಭೂಮಿಗೆ ಭಾರವಾಗಿರುವುದರಿಂದ ಅವರನ್ನು ಸಂಹರಿ ಸಲು ದೇವತೆಗಳು ಸಂಚುಮಾಡಿದ್ದಾರೆಂದೂ ತಿಳಿಸಿದರು (೬೪). ಆಮೇಲೆ ನಾರದರು ಹೊರಟುಹೋಗಲು, ಇತ್ತ ಕಂಸನು ಯಾದವರನ್ನು ದೇವತೆಗಳೆಂದೂ ತನ್ನನ್ನು ಸಂಹರಿಸುವುದಕ್ಕಾಗಿ ವಿಷ್ಣುವು ದೇವಕಿಯ ಗರ್ಭದಲ್ಲಿ ಜನಿಸುತ್ತಾನೆಂದೂ ತಿಳಿದು ವಸುದೇವ ದೇವಕಿಯರನ್ನು ಸಂಕೋಲೆಗಳಿಂದ ಬಂಧಿಸಿ ಸೆರೆಮನೆಯಲ್ಲಿ ಟ್ಟನು. ಅವರಿಬ್ಬರಿಗೆ ಜನಿಸಿದ ಪ್ರತಿಯೊಂದು ಶಿಶುವನ್ನೂ ವಿಷ್ಣುವಿರಬಹುದೆಂಬ ಸಂದೇಹದಿಂದ ಕೊಂದುಹಾಕಿದನು (೬೫–೬೬). ಪರೀಕ್ಷಿತರಾಜ, ಈ ಲೋಕದಲ್ಲಿ ಸಾಮಾನ್ಯವಾಗಿ ರಾಕ್ಷಸಾಂಶದಿಂದ ಹುಟ್ಟಿದ ಸ್ವಾರ್ಥಿಗಳಾದ ರಾಜರು ತಾಯಿತಂದೆ ಗಳನ್ನಾದರೂ ಸಕಲಮಿತ್ರರನ್ನಾದರೂ ಕೊಂದುಬಿಡುತ್ತಾರೆ (೬೭). ತಾನು ಪೂರ್ವಜನ್ಮದಲ್ಲಿ ಕಾಲನೇಮಿಯೆಂಬ ಮಹಾಸುರನಾಗಿದ್ದೆನೆಂದೂ ವಿಷ್ಣುವು ತನ್ನನ್ನು ವಧಿಸಿದ್ದನೆಂಬುದನ್ನೂ ತಿಳಿದುಕೊಂಡು, ಕಂಸನು ಯಾದವರೊಡನೆ

**ಉಗ್ರಸೇನಂ ಚ ಪಿತರಂ ಯದುಭೋಜಾಂಧಕಾಧಿಪಮ್ ।**
**ಸ್ವಯಂ ನಿಗೃಹ್ಯ ಬುಭುಜೇ ಶೂರಸೇನಾನ್ ಮಹಾಬಲಃ ॥ ೬೯**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮಸ್ಕಂಧೇ ಪೂರ್ವಾರ್ಧೇ ಪ್ರಥಮಾಧ್ಯಾಯಃ**

---

## ದ್ವಿತೀಯಾಧ್ಯಾಯಃ

**ಶ್ರೀಶುಕ ಉವಾಚ—**

**ಪ್ರಲಂಬಬಕಚಾಣೂರತೃಣಾವರ್ತಮಹಾಶನೈಃ[1] ।**
**ಮುಷ್ಟಿಕಾರಿಷ್ಟದ್ವಿವಿದಪೂತನಾಕೇಶಿಧೇನುಕೈಃ ॥ ೧**

**ಅನ್ಯೈಶ್ಚಾಸುರಭೂಪಾಲೈರ್ಬಾಣಭೌಮಾದಿಭಿರ್ಯುತಃ ।**
**ಯದೂನಾಂ ಕದನಂ ಚಕ್ರೇ ಬಲೀ ಮಾಗಧಸಂಶ್ರಯಃ ॥ ೨**

---

ವೈರವನ್ನು ಬೆಳೆಸಿದನು (೬೮). ಯಾದವ ಭೋಜಾಂಧಕರಿಗೆ ಅಧಿಪತಿಯೂ ತನ್ನ ತಂದೆಯೂ ಆದ ಉಗ್ರಸೇನನನ್ನು ಸೆರೆಯಲ್ಲಿ ಬಂಧಿಸಿಟ್ಟು, ಬಲಾಢ್ಯನಾದ ಕಂಸನು ತಾನೇತಾನಾಗಿ ಶೂರಸೇನರಾಜ್ಯವನ್ನು ಆಳತೊಡಗಿದನು (೬೯).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೊದಲನೆಯ ಅಧ್ಯಾಯ

---

## ಅಧ್ಯಾಯ ೨

ದೇವಕೀಗರ್ಭದಲ್ಲಿ ಭಗವಂತನ ಪ್ರವೇಶ. ಬ್ರಹ್ಮಾದಿಗಳ ಸ್ತುತಿ.
ದೇವಕಿಯನ್ನು ಸಂತೈಸುವುದು

ಪರೀಕ್ಷಿತರಾಜ, ಬಲಾಢ್ಯನಾದ ಕಂಸನು ಪ್ರಲಂಬ, ಬಕ, ಚಾಣೂರ, ತೃಣಾವರ್ತ, ಅಘ, ಮುಷ್ಟಿಕ, ಅರಿಷ್ಟ, ದ್ವಿವಿದ, ಪೂತನೆ, ಕೇಶಿ, ಧೇನುಕ ಮುಂತಾದ ಅಸುರರಿಂದಲೂ ಬಾಣಾಸುರ, ನರಕಾಸುರ ಮುಂತಾದ ಅಸುರಾಧಿಪತಿಗಳಿಂದಲೂ ಯುಕ್ತನಾಗಿ ಮಗಧೇಶ್ವರನಾದ ಜರಾಸಂಧನ ನೆರವನ್ನು ಪಡೆದು

---

1 ಮಹಾಶನ = ಅಘಾಸುರ.

ತೇ ಪೀಡಿತಾ ನಿವಿವಿಶುಃ ಕುರುಪಾಂಚಾಲಕೇಕಯಾನ್ ।
ಶಾಲ್ವಾನ್ ವಿದರ್ಭಾನ್ ನಿಷಧಾನ್ ವಿದೇಹಾನ್ ಕೋಸಲಾನಪಿ ॥

ಏಕೇ ತಮನುರುಂಧಾನಾ ಜ್ಞಾತಯಃ ಪರ್ಯುಪಾಸತೇ ।
ಹತೇಷು ಷಟ್ಸು ಬಾಲೇಷು ದೇವಕ್ಯಾ ಔಗ್ರಸೇನಿನಾ ॥ ೪

ಸಪ್ತಮೋ ವೈಷ್ಣವಂ ಧಾಮ ಯಮನಂತಂ ಪ್ರಚಕ್ಷತೇ ।
ಗರ್ಭೋ ಬಭೂವ ದೇವಕ್ಯಾ ಹರ್ಷಶೋಕವಿವರ್ಧನಃ ॥ ೫

ಭಗವಾನಪಿ ವಿಶ್ವಾತ್ಮಾ ವಿದಿತ್ವಾ ಕಂಸಜಂ ಭಯಮ್ ।
ಯದೂನಾಂ ನಿಜನಾಥಾನಾಂ ಯೋಗಮಾಯಾಂ ಸಮಾದಿಶತ್॥ ೬

ಗಚ್ಛ ದೇವಿ ವ್ರಜಂ ಭದ್ರೇ ಗೋಪಗೋಭಿರಲಂಕೃತಮ್ ।
ರೋಹಿಣೀ ವಸುದೇವಸ್ಯ ಭಾರ್ಯಾಽಽಸ್ತೇ ನಂದಗೋಕುಲೇ ।
ಅನ್ಯಾಶ್ಚ ಕಂಸಸಂವಿಗ್ನಾ ವಿವರೇಷು ವಸಂತಿ ಹಿ ॥ ೭

---

ಯಾದವರೊಡನೆ ಹೋರಾಟವನ್ನಾರಂಭಿಸಿದನು (೧–೨). ಅವರ ಪೀಡೆಯನ್ನು ಸಹಿಸಲಾರದೆ ಯಾದವರು ಕುರು, ಪಾಂಚಾಲ, ಕೇಕಯ, ಶಾಲ್ವ, ವಿದರ್ಭ, ನಿಷಧ, ವಿದೇಹ, ಕೋಸಲ ಮೊದಲಾದ ದೇಶಗಳಿಗೆ ಹೋಗಿ ನೆಲೆಸಿದರು (೩). ಬಂಧುಗಳಾದ ಕೆಲವು ಯಾದವರು ಮಾತ್ರ ಕಂಸನನ್ನು ಸೇವಿಸಿಕೊಂಡು ಹೇಗೋ ಜೀವಿಸುತ್ತಿದ್ದರು. ದೇವಕಿಯಲ್ಲಿ ಜನಿಸಿದ ಆರು ಮಂದಿ ಪುತ್ರರನ್ನೂ ಕಂಸನು ಕೊಂದುಹಾಕಿದನು. ಅನಂತರ ವಿಷ್ಣುವಿನ ಅಂಶಭೂತನೂ, ಅನಂತನೆಂದು ವಿಖ್ಯಾತನೂ ಆದ ಆದಿಶೇಷನು ದೇವಕಿಯ ಏಳನೆಯ ಗರ್ಭವನ್ನು ಪ್ರವೇಶಿಸಿದನು. ಭಗವತ್ಸಂಬಂಧದಿಂದ ದೇವಕಿಗೆ ಏನೋ ಒಂದು ಬಗೆಯ ಆನಂದವೂ ಉಳಿದ ಗರ್ಭಗಳ ಗತಿಯೇ ಆದೀತೆಂದು ಶೋಕವೂ ಉಂಟಾದವು (೪–೫). ವಿಶ್ವಾತ್ಮನಾದ ಭಗವಂತನು ತನ್ನನ್ನೇ ನಂಬಿದ ಯಾದವರಿಗೆ ಕಂಸನಿಂದಾದ ಭಯವನ್ನರಿತವನಾಗಿ ಯೋಗಮಾಯೆಯನ್ನು ಕುರಿತು "ದೇವಿ, ಗೋಪರಿಂದಲೂ ಗೋವುಗಳಿಂದಲೂ ಅಲಂಕೃತವಾದ ವ್ರಜಸ್ಥಳಕ್ಕೆ ನೀನು ಹೋಗು. ವಸುದೇವನ ಪತ್ನಿಯಾದ ರೋಹಿಣಿಯು ಆ ನಂದಗೋಕುಲದಲ್ಲಿ ಇದ್ದಾಳೆ. ಕಂಸನಿಗೆ ಅಂಜಿರುವ ಇತರ ಸ್ತ್ರೀಯರೂ ಸಹ ಅಲ್ಲಿ ಗುಪ್ತಸ್ಥಳಗಳಲ್ಲಿ ನೆಲೆಸಿದ್ದಾರೆ (೬–೭).

ದೇವಕ್ಯಾ ಜಠರೇ ಗರ್ಭಂ ಶೇಷಾಖ್ಯಂ ಧಾಮ ಮಾಮಕಮ್ ।
ತತ್ ಸಂನಿಕೃಷ್ಯ ರೋಹಿಣ್ಯಾ ಉದರೇ ಸಂನಿವೇಶಯ ॥ ೮

ಅಥಾಹಮಂಶಭಾಗೇನ ದೇವಕ್ಯಾಃ ಪುತ್ರತಾಂ ಶುಭೇ ।
ಪ್ರಾಪ್ಸ್ಯಾಮಿ ತ್ವಂ ಯಶೋದಾಯಾಂ ನಂದಪತ್ನ್ಯಾಂ ಭವಿಷ್ಯಸಿ ॥

ಅರ್ಚಿಷ್ಯಂತಿ ಮನುಷ್ಯಾಸ್ತ್ವಾಂ ಸರ್ವಕಾಮವರೇಶ್ವರೀಮ್ ।
ಧೂಪೋಪಹಾರಬಲಿಭಿಃ ಸರ್ವಕಾಮವರಪ್ರದಾಮ್ ॥ ೧೦

ನಾಮಧೇಯಾನಿ ಕುರ್ವಂತಿ ಸ್ಥಾನಾನಿ ಚ ನರಾ ಭುವಿ ।
ದುರ್ಗೇತಿ ಭದ್ರಕಾಲೀತಿ ವಿಜಯಾ ವೈಷ್ಣವೀತಿ ಚ ॥ ೧೧

ಕುಮುದಾ ಚಂಡಿಕಾ ಕೃಷ್ಣಾ ಮಾಧವೀ ಕನ್ಯಕೇತಿ ಚ ।
ಮಾಯಾ ನಾರಾಯಣೀಶಾನೀ ಶಾರದೇತ್ಯಂಬಿಕೇತಿ ಚ ॥ ೧೨

---

ನನ್ನ ತೇಜೋಂಶನಾದ ಶೇಷನು ದೇವಕಿಯ ಉದರದಲ್ಲಿದ್ದಾನೆ. ಆ ಗರ್ಭವನ್ನುಸೆಳೆದು ರೋಹಿಣಿಯ ಉದರದಲ್ಲಿರಿಸು (೮). ಎಲೌ ಭದ್ರೆ, ಅನಂತರ ನಾನು ನನ್ನ ಅಂಶದಿಂದ[1] ದೇವಕಿಯ ಪುತ್ರನಾಗಿ ಅವತರಿಸುವೆನು. ನೀನು ನಂದಪತ್ನಿಯಾದ ಯಶೋದೆಯಲ್ಲಿ ಜನಿಸು (೯). ವಿವಿಧಕಾಮನೆಗಳಿಗೆ ನಿಯಂತ್ರಿಯಾದ ನಿನ್ನನ್ನು ಮನುಷ್ಯರು ಧೂಪ, ಕಾಣಿಕೆ, ನೈವೇದ್ಯಾದಿಗಳಿಂದ ಅರ್ಚಿಸುವರು. ನೀನು ಭಕ್ತರ ಸಕಲೇಷ್ಟಗಳನ್ನೂ ಅನುಗ್ರಹಿಸತಕ್ಕವಳಾಗು (೧೦). ಭೂಲೋಕದಲ್ಲಿ ಜನರು ನಿನಗೆ ದೇವಸ್ಥಾನಗಳನ್ನು ನಿರ್ಮಿಸಿ ವಿವಿಧ ನಾಮಗಳಿಂದ ಅರ್ಚಿಸುವರು. ದುರ್ಗಾ, ಭದ್ರಕಾಳೀ, ವಿಜಯಾ, ವೈಷ್ಣವೀ, ಕುಮುದಾ, ಚಂಡಿಕಾ, ಕೃಷ್ಣಾ, ಮಾಧವೀ, ಕನ್ಯಕಾ, ಮಾಯಾ, ನಾರಾಯಣೀ, ಈಶಾನೀ, ಶಾರದಾ,

1 ಮೂಲದಲ್ಲಿ 'ಅಂಶಭಾಗೇನ' ಎಂದಿದೆ. 'ಕೃಷ್ಣಸ್ತು ಭಗವಾನ್ ಸ್ವಯಂ' ಎಂಬ ಉಕ್ತಿಯಂತೆ ಶ್ರೀಕೃಷ್ಣನು ಪೂರ್ಣಾವತಾರವಾಗುತ್ತಾನೆ, ಅಂಶಾವತಾರನಲ್ಲ. ಆದ್ದರಿಂದ 'ಅಂಶೈಃ ಜ್ಞಾನಬಲಾದಿಭಿಃ ಭಾಗಃ ಭಜನಮನುವರ್ತನಂ ಭಕ್ತೇಷು ಯಸ್ಯ ತೇನ ಸರ್ವಥಾ ಪರಿಪೂರ್ಣೇನ ರೂಪೇಣ' ಇತ್ಯಾದಿಯಾಗಿ ವಿವಿಧಾರ್ಥಗಳನ್ನು ವ್ಯಾಖ್ಯಾನಕಾರರು ಹೇಳಿದ್ದಾರೆ.

ಗರ್ಭಸಂಕರ್ಷಣಾತ್ ತಂ ವೈ ಪ್ರಾಹುಃ ಸಂಕರ್ಷಣಂ ಭುವಿ ।
ರಾಮೇತಿ ಲೋಕರಮಣಾದ್ ಬಲಂ ಬಲವದುಚ್ಛ್ರಯಾತ್ ॥ ೧೩

ಸಂದಿಷ್ಟೈವಂ ಭಗವತಾ ತಥೇತ್ಯೋಮಿತಿ ತದ್ವಚಃ ।
ಪ್ರತಿಗೃಹ್ಯ ಪರಿಕ್ರಮ್ಯ ಗಾಂ ಗತಾ ತತ್ ತಥಾಕರೋತ್ ॥ ೧೪

ಗರ್ಭೇ ಪ್ರಣೀತೇ ದೇವಕ್ಯಾ ರೋಹಿಣೀಂ ಯೋಗನಿದ್ರಯಾ ।
ಅಹೋ ವಿಸ್ರಂಸಿತೋ ಗರ್ಭ ಇತಿ ಪೌರಾ ವಿಚುಕ್ರುಶುಃ ॥ ೧೫

ಭಗವಾನಪಿ ವಿಶ್ವಾತ್ಮಾ ಭಕ್ತಾನಾಮಭಯಂಕರಃ ।
ಆವಿವೇಶಾಂಶಭಾಗೇನ ಮನ ಆನಕದುಂದುಭೇಃ ॥ ೧೬

ಸ ಬಿಭ್ರತ್ ಪೌರುಷಂ ಧಾಮ ಭ್ರಾಜಮಾನೋ ಯಥಾ ರವಿಃ ।
ದುರಾಸದೋಽತಿದುರ್ಧರ್ಷೋ ಭೂತಾನಾಂ ಸಂಬಭೂವ ಹ ॥ ೧೭

ತತೋ ಜಗನ್ಮಂಗಲಮಚ್ಯುತಾಂಶಂ
ಸಮಾಹಿತಂ ಶೂರಸುತೇನ ದೇವೀ ।

---

ಅಂಬಿಕಾ ಇತ್ಯಾದಿ ನಾಮಗಳಿಂದ ನಿನ್ನನ್ನು ಪೂಜಿಸುವರು (೧೧–೧೨). ಗರ್ಭದಲ್ಲಿರುವ ಶೇಷನನ್ನು ನೀನು ಸಂಕರ್ಷಿಸುವುದರಿಂದ (ಸೆಳೆದು ರೋಹಿಣಿಯ ಗರ್ಭದಲ್ಲಿ ಇಡುವುದರಿಂದ) ಆತನು ಸಂಕರ್ಷಣನೆಂದೂ, ಜನರಿಗೆ ಆನಂದದಾಯಕನಾಗುವುದರಿಂದ ರಾಮನೆಂದೂ ವಿಖ್ಯಾತನಾಗುವನು " ಎಂದು ತಿಳಿಸಿದನು (೧೩). ಈ ಪ್ರಕಾರವಾಗಿ ಮಹಾವಿಷ್ಣುವಿನಿಂದ ಆಜ್ಞಪ್ತಳಾದ ಯೋಗಮಾಯೆಯು 'ಓಂ' ಎಂದು ಹೇಳಿ ಆತನ ಆದೇಶದಂತೆ ಭೂಮಿಗೆ ಬಂದು ಅದೇ ರೀತಿಯಲ್ಲಿ ಮಾಡಿದಳು (೧೪). ಹೀಗೆ ಯೋಗನಿದ್ರೆಯು ದೇವಕಿಯ ಗರ್ಭವನ್ನು ರೋಹಿಣಿಯ ಉದರದಲ್ಲಿ ಸೇರಿಸಲು, ' ಅಯ್ಯೋ ! ಗರ್ಭಸ್ರಾವವಾಯಿತು ' ಎಂದು ಪುರಜನರು ಗೋಳಾಡಿದರು (೧೫). ಅನಂತರ ಭಕ್ತರಿಗೆ ಅಭಯಹಸ್ತವನ್ನು ನೀಡಿದ ವಿಶ್ವಾತ್ಮನಾದ ಭಗವಂತನು ತನ್ನ ಅಂಶಭಾಗದಿಂದ ವಸುದೇವನ ಮನಸ್ಸನ್ನು ಪ್ರವೇಶಿಸಿದನು (೧೬). ಆ ಮಹಾಪುರುಷನ ದಿವ್ಯತೇಜಸ್ಸನ್ನು ಧರಿಸಿದ ವಸುದೇವನು ಸೂರ್ಯನಂತೆ ಬೆಳಗುತ್ತ, ಸಕಲಜನರಿಗೂ ದುರಾಸದನಾಗಿಯೂ ದುರ್ಧರ್ಷನಾಗಿಯೂ ಗೋಚರಿಸಿದನು (೧೭). ಆಮೇಲೆ ವಸುದೇವನಿಂದ ಅರ್ಪಿತವಾದ

ದಧಾರ ಸರ್ವಾತ್ಮಕಮಾತ್ಮಭೂತಂ
ಕಾಷ್ಠಾ ಯಥಾಽಽನಂದಕರಂ ಮನಸ್ತಃ ‖ ೧೮

ಸಾ ದೇವಕೀ ಸರ್ವಜಗನ್ನಿವಾಸ-
ನಿವಾಸಭೂತಾ ನಿತರಾಂ ನ ರೇಜೇ ।
ಭೋಜೇಂದ್ರಗೇಹೇಽಗ್ನಿಶಿಖೇವ ರುದ್ಧಾ
ಸರಸ್ವತೀ ಜ್ಞಾನಖಲೇ ಯಥಾ ಸತೀ ‖ ೧೯

ತಾಂ ವೀಕ್ಷ್ಯ ಕಂಸಃ ಪ್ರಭಯಾಜಿತಾಂತರಾಂ
ವಿರೋಚಯಂತೀಂ ಭವನಂ ಶುಚಿಸ್ಮಿತಾಮ್ ।
ಆಹೈಷ ಮೇ ಪ್ರಾಣಹರೋ ಹರಿರ್ಗುಹಾಂ
ಧ್ರುವಂ ಶ್ರಿತೋ ಯನ್ನ ಪುರೇಯಮೀದೃಶೀ ‖ ೨೦

ಕಿಮದ್ಯ ತಸ್ಮಿನ್ ಕರಣೀಯಮಾಶು ಮೇ
ಯದರ್ಥತಂತ್ರೋ ನ ವಿಹಂತಿ ವಿಕ್ರಮಮ್ ।
ಸ್ತ್ರಿಯಾಃ ಸ್ವಸುರ್ಗುರುಮತ್ಯಾ ವಧೋಽಯಂ
ಯಶಃ ಶ್ರಿಯಂ ಹಂತ್ಯಸುಕಾಲಮಾಯುಃ ‖ ೨೧

---

ಜಗನ್ಮಂಗಲಕರವೂ ಸರ್ವಾತ್ಮಕವೂ ಆತ್ಮಸ್ವರೂಪವೂ ಆದ ಆ ವೈಷ್ಣವತೇಜಸ್ಸನ್ನು ದೇವಕೀದೇವಿಯು ತನ್ನ ಮನಸ್ಸಿನಿಂದ[1], ಪೂರ್ವದಿಕ್ಕೆಯು ಆನಂದಕರನಾದ ಚಂದ್ರನನ್ನು ಧರಿಸುವಂತೆ ಧರಿಸಿದಳು (೧೮). ಸರ್ವಜಗನ್ನಿವಾಸನಾದ ಶ್ರೀಹರಿಗೆ ನಿವಾಸಭೂತಳಾದ ದೇವಕಿಯು ಕಂಸಗೃಹದಲ್ಲಿ ಸೆರೆಯಾಗಿದ್ದಳಷ್ಟೆ. ಆದ್ದರಿಂದ ಅವಳು ಗಡಿಗೆಯಲ್ಲಿ ಮರೆಯಾದ ಅಗ್ನಿಜ್ವಾಲೆಯಂತೆಯೂ, ಜ್ಞಾನವಂಚಕನಾದ ಖಳಪಂಡಿತನಲ್ಲಿ ನೆಲೆಸಿದ ಸರಸ್ವತಿಯಂತೆಯೂ ಹೊರಗೆ ಜನರೆದುರಿಗೆ ಪ್ರಕಾಶಿಸಲಿಲ್ಲ (೧೯). ಶ್ರೀಹರಿಯನ್ನು ಗರ್ಭದಲ್ಲಿ ಧಾರಣೆಮಾಡಿ ಗೃಹವನ್ನೇ ಬೆಳಗುತ್ತಿದ್ದ ಆ ಶುಚಿಸ್ಮಿತೆಯನ್ನು ನೋಡಿ ಕಂಸನು ಹೀಗೆಂದುಕೊಂಡನು : "ಆಹಾ! ನನ್ನ ಪ್ರಾಣಾಪಹಾರಿಯಾದ ಹರಿಯು ಇವಳ ಗರ್ಭವನ್ನೀಗ ಪ್ರವೇಶಿಸಿರುವುದು ನಿಶ್ಚಯ ! ಏಕೆಂದರೆ, ಇವಳು ಹಿಂದೆಂದೂ ಈ ಪರಿಯಲ್ಲಿರಲಿಲ್ಲ ! (೨೦). ಈ

---

[1] ವಸುದೇವನೂ ದೇವಕಿಯೂ ಮನಸ್ಸಿನಿಂದ ವೈಷ್ಣವತೇಜಸ್ಸನ್ನು ಧರಿಸಿದರು – ಎಂದು ಹೇಳಿರುವುದು ಭಗವಂತನಿಗೆ ಜೀವರಂತೆ ಧಾತುಸಂಬಂಧವಿಲ್ಲವೆಂದು ತಿಳಿಸುವುದಕ್ಕಾಗಿ.

**ಸ ಏಷ ಜೀವನ್ ಖಲು ಸಂಪರೇತೋ**
**ವರ್ತೇತ ಯೋಽತ್ಯಂತನೃಶಂಸಿತೇನ ।**
**ದೇಹೇ ಮೃತೇ ತಂ ಮನುಜಾಃ ಶಪಂತಿ**
**ಗಂತಾ ತಮೋಽಂಧಂ ತನುಮಾನಿನೋ ಧ್ರುವಮ್ ॥**

**ಇತಿ ಘೋರತಮಾದ್ ಭಾವಾತ್ ಸಂನಿವೃತ್ತಃ ಸ್ವಯಂ ಪ್ರಭುಃ ।**
**ಆಸ್ತೇ ಪ್ರತೀಕ್ಷಂಸ್ತಜ್ಜನ್ಮ ಹರೇರ್ವೈರಾನುಬಂಧಕೃತ್ ॥ ೨೩**

**ಆಸೀನಃ ಸಂವಿಶಂಸ್ತಿಷ್ಠನ್ ಭುಂಜಾನಃ ಪರ್ಯಟನ್ ಮಹೀಮ್ ।**
**ಚಿಂತಯಾನೋ ಹೃಷೀಕೇಶಮಪಶ್ಯತ್ ತನ್ಮಯಂ ಜಗತ್ ॥ ೨೪**

**ಬ್ರಹ್ಮಾ ಭವಶ್ಚ ತತ್ರೈತ್ಯ ಮುನಿಭಿರ್ನಾರದಾದಿಭಿಃ ।**
**ದೇವೈಃ ಸಾನುಚರೈಃ ಸಾಕಂ ಗೀರ್ಭಿರ್ವೃಷಣಮೈಡಯನ್ ॥ ೨೫**

---

ಕೂಡಲೇ ನಾನು ಮಾಡತಕ್ಕದ್ದಾದರೂ ಏನು ? ಪುರುಷನು ಕಾರ್ಯಾರ್ಥಿಯಾಗಿದ್ದರೂ ತನ್ನ ಪರಾಕ್ರಮವನ್ನು ಕೆಡಿಸಿಕೊಳ್ಳುವುದಿಲ್ಲ. ಹೆಂಗಸು, ಸಹೋದರಿ, ಅದರಲ್ಲಿಯೂ ಗರ್ಭಿಣಿಯಾಗಿರುವ ಇವಳನ್ನು ವಧಿಸಿದರೆ, ನನ್ನ ಕೀರ್ತಿಯೂ ಐಶ್ವರ್ಯವೂ ಕ್ಷೀಣಿಸುತ್ತವೆ. ನನ್ನ ಆಯುಸ್ಸಿಗೂ ಅದರಿಂದ ಹಾನಿಯುಂಟು (೨೧). ಈ ಬಗೆಯ ಕ್ರೂರಕೃತ್ಯವನ್ನಾಚರಿಸಿದರೆ ಮನುಷ್ಯನು ಬದುಕಿದ್ದರೂ ಸತ್ತಂತೆಯೇ. ' ಈ ಪಾಪಿಯ ದೇಹವು ಸತ್ತಮೇಲೆ, ಈತನು ನಿಶ್ಚಯವಾಗಿಯೂ ಘೋರನರಕವನ್ನೈದುವನು ' ಎಂದು ಜನರು ಆಡಿಕೊಳ್ಳುತ್ತಾರೆ " (೨೨). ಹೀಗೆ ಆಲೋಚಿಸಿ ಕಂಸನು ಘೋರತಮವಾದ ವಧೆಯನ್ನು ಮಾಡದೆ ತಾನೇ ಸುಮ್ಮನಾದನು. ಶ್ರೀಹರಿಯೊಡನೆ ವೈರವನ್ನು ಬೆಳೆಸಿದ್ದ ಆತನು, ಜನನಕಾಲವನ್ನು ನಿರೀಕ್ಷಿಸುತ್ತಿದ್ದನು (೨೩). ಕುಳಿತಾಗ, ಮಲಗಿದಾಗ, ನಿಂತಾಗ, ಊಟ ಮಾಡುವಾಗ, ತಿರುಗಾಡುವಾಗ – ಸದಾ ಕಂಸನಿಗೆ ವಿಷ್ಣುವಿನ ಚಿಂತೆಯೇ ಆಗತೊಡಗಿತು. ಅವನಿಗೆ ಜಗತ್ತೆಲ್ಲವೂ ವಿಷ್ಣುಮಯವಾಗಿ ಕಾಣಿಸಿತು ! (೨೪). ಪರೀಕ್ಷಿತರಾಜ, ಹೀಗಿರಲಾಗಿ, ಬ್ರಹ್ಮನೂ ರುದ್ರನೂ ನಾರದಾದಿಮುನಿಗಳಿಂದಲೂ ದೇವತೆಗಳಿಂದಲೂ ಅನುಚರರಿಂದಲೂ ಸಮೇತರಾಗಿ ದೇವಕಿಯಿದ್ದಲ್ಲಿಗೆ ಬಂದು ಇಷ್ಟದಾಯಕನಾದ ಮಹಾವಿಷ್ಣುವನ್ನು ಈ ರೀತಿಯಲ್ಲಿ ಸ್ತುತಿಸಿದರು (೨೫) :

**ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ**
**ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ ।**
**ಸತ್ಯಸ್ಯ ಸತ್ಯಮೃತಸತ್ಯನೇತ್ರಂ**
**ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ ॥** ೨೬

**ಏಕಾಯನೋಽಸೌ ದ್ವಿಫಲಸ್ತ್ರಿಮೂಲ–**
**ಶ್ಚತುರಸಃ ಪಂಚವಿಧಃ ಷಡಾತ್ಮಾ ।**
**ಸಪ್ತತ್ವಗಷ್ಟವಿಟಪೋ ನವಾಕ್ಷೋ**
**ದಶಚ್ಛದೀ ದ್ವಿಖಗೋ ಹ್ಯಾದಿವೃಕ್ಷಃ ॥** ೨೭

---

"ಹೇ ಸ್ವಾಮಿ, ನೀನು ಸತ್ಯಸಂಕಲ್ಪನು. ನಿನ್ನ ಪ್ರಾಪ್ತಿಗೆ ಸತ್ಯವೇ ಸಾಧನ. ಮೂರು ಕಾಲಗಳಲ್ಲಿಯೂ ಅಬಾಧಿತನಾಗಿ ಇರತಕ್ಕವನು ನೀನು. ಪಂಚಭೂತಗಳೆಂಬ ಸತ್ಯಕ್ಕೆ ಕಾರಣನು. ಅದೇ ಸತ್ಯದಲ್ಲಿ ಅಂತರ್ಯಾಮಿಯಾಗಿದ್ದೀಯೆ. (ಪಂಚಭೂತಗಳು ನಾಶವಾದರೂ ನೀನು ಸ್ಥಿರನಾಗಿರುವುದರಿಂದ) ಸತ್ಯದ ಸತ್ಯ ನೀನು. ಸೂನೃತವಾಣಿ[1]ಯೆಂಬ ಋತಕ್ಕೂ ಸಮದರ್ಶನವೆಂಬ ಸತ್ಯಕ್ಕೂ ನೀನೇ ಪ್ರವರ್ತಕ. ಸತ್ಯಾತ್ಮಕನಾದ ನಿನಗೆ ನಾವು ಶರಣಾಗತರಾಗಿದ್ದೇವೆ (೨೬). ಈ ಪ್ರಪಂಚವೇ ಆದಿವೃಕ್ಷ. ಒಂದು ಪ್ರಕೃತಿಯು ಈ ವೃಕ್ಷಕ್ಕೆ ಆಶ್ರಯವಾದ ಪಾತಿ. ಸುಖದುಃಖಗಳು ಎರಡು ಹಣ್ಣುಗಳು. ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳು ಬೇರುಗಳು. ಧರ್ಮಾರ್ಥಕಾಮಮೋಕ್ಷಗಳು ನಾಲ್ಕು ರಸಗಳು. ಪಂಚೇಂದ್ರಿಯಗಳಿಂದಾಗುವ ಐದು ಬಗೆಯ ಜ್ಞಾನಗಳು ಇದರ ಪ್ರಕಾರಗಳು. ಮುಪ್ಪು, ಮರಣ, ಶೋಕ, ಮೋಹ, ಹಸಿವು, ಬಾಯಾರಿಕೆ – ಈ ಷಡೂರ್ಮಿಗಳು ಈ ವೃಕ್ಷದ ಸ್ವಭಾವಗಳು. ಸಪ್ತಧಾತುಗಳು (ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ವೀರ್ಯ) ತೊಗಟೆಗಳು. ಪಂಚಭೂತಗಳು, ಮನೋಬುದ್ಧ್ಯಹಂಕಾರಗಳು – ಇವು ಎಂಟು ಕೊಂಬೆಗಳು. ನವದ್ವಾರಗಳು ಪೊಟರೆಗಳು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ – ಎಂಬ ಪಂಚಪ್ರಾಣಗಳೂ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂಬ ಉಪಪ್ರಾಣಗಳೂ, ಸೇರಿ ಹತ್ತು ಎಲೆಗಳು. ಈ ವೃಕ್ಷದಲ್ಲಿ ಜೀವೇಶ್ವರರೆಂಬ

---

1 ಸೂನೃತವಾಣಿ = ಸತ್ಯವೂ ಪ್ರಿಯವೂ ಆದ ನುಡಿ.

ತ್ವಮೇಕ ಏವಾಸ್ಯ ಸತಃ ಪ್ರಸೂತಿ-
ಸ್ತ್ವಂ ಸಂನಿಧಾನಂ ತ್ವಮನುಗ್ರಹಶ್ಚ ।
ತ್ವನ್ಮಾಯಯಾ ಸಂವೃತಚೇತಸಸ್ತ್ವಾಂ
ಪಶ್ಯಂತಿ ನಾನಾ ನ ವಿಪಶ್ಚಿತೋ ಯೇ ॥ ೨೮

ಬಿಭರ್ಷಿ ರೂಪಾಣ್ಯವಬೋಧ ಆತ್ಮಾ
ಕ್ಷೇಮಾಯ ಲೋಕಸ್ಯ ಚರಾಚರಸ್ಯ ।
ಸತ್ತ್ವೋಪಪನ್ನಾನಿ ಸುಖಾವಹಾನಿ
ಸತಾಮಭದ್ರಾಣಿ ಮುಹುಃ ಖಲಾನಾಮ್ ॥ ೨೯

ತ್ವಯ್ಯಂಬುಜಾಕ್ಷಾಖಿಲಸತ್ತ್ವಧಾಮ್ನಿ
ಸಮಾಧಿನಾಽಽವೇಶಿತಚೇತಸೈಕೇ ।
ತ್ವತ್ಪಾದಪೋತೇನ ಮಹತ್ಕೃತೇನ
ಕುರ್ವಂತಿ ಗೋವತ್ಸಪದಂ ಭವಾಬ್ಧಿಮ್ ॥ ೩೦

ಸ್ವಯಂ ಸಮುತ್ತೀರ್ಯ ಸುದುಸ್ತರಂ ದ್ಯುಮನ್
ಭವಾರ್ಣವಂ ಭೀಮಮದಭ್ರಸೌಹೃದಾಃ ।

---

ಎರಡು ಹಕ್ಕಿಗಳಿವೆ (೨೭). ಹೇ ಭಗವನ್, ಸಂಸಾರವೆಂಬ ಈ ಆದಿವೃಕ್ಷಕ್ಕೆ ನೀನೇ ಕಾರಣ. ನೀನೇ ಲಯಸ್ಥಾನ. ನೀನೇ ಪಾಲಕ. ನಿನ್ನ ಮಾಯೆಯಿಂದ ಮೋಹಿತರಾದ ಜನರು ಇದನ್ನು 'ನಾನಾ' ಎಂದು ತಿಳಿದಿದ್ದಾರೆ. ಜ್ಞಾನಿಗಳು ಮಾತ್ರ ಹಾಗೆ ತಿಳಿದಿಲ್ಲ (೨೮). ಜ್ಞಾನಸ್ವರೂಪನಾದ ನೀನು ಚರಾಚರಾತ್ಮಕವಾದ ಈ ಲೋಕದ ಕ್ಷೇಮಕ್ಕಾಗಿ ವಿವಿಧ ರೂಪಗಳನ್ನು ಧರಿಸುತ್ತೀಯೆ. ಈ ರೂಪಗಳು ಸಜ್ಜನರಿಗೆ ಸತ್ತ್ವಗುಣಯುಕ್ತವಾಗಿ ಸುಖಕರವಾಗಿರುತ್ತವೆ. ದುರ್ಜನರಿಗೆ ದುಃಖಕರವಾಗಿ ನಾಶಕವಾಗಿರುತ್ತವೆ (೨೯). ಹೇ ಪುಂಡರೀಕಾಕ್ಷ, ಸಕಲ ವೀರ್ಯಗಳಿಗೂ ಆಶ್ರಯನಾದ ನಿನ್ನಲ್ಲಿ ವಿವೇಕಿಗಳು ಸಮಾಹಿತವಾದ ಮನಸ್ಸನ್ನಿಟ್ಟು, ನಿನ್ನ ಪಾದವೆಂಬ ದೋಣಿಯೇ ಮಹತ್ತಮವೆಂದು ತಿಳಿದು, ಅದರ ನೆರವಿನಿಂದ ಸಂಸಾರಸಾಗರವನ್ನು, ಹಸುವಿನ ಕರುವಿನ ಹೆಜ್ಜೆಯಷ್ಟು ಸ್ಥಳವನ್ನು ದಾಟುವಂತೆ ಸುಲಭವಾಗಿ ದಾಟಿಬಿಡುತ್ತಾರೆ (೩೦). ಹೇ ಸ್ವಯಂಪ್ರಕಾಶ,

ಭವತ್ಪದಾಂಭೋರುಹನಾವಮತ್ರ ತೇ
ನಿಧಾಯ ಯಾತಾಃ ಸದನುಗ್ರಹೋ ಭವಾನ್ ॥ ೩೧

ಯೇಽನ್ಯೇಽರವಿಂದಾಕ್ಷ ವಿಮುಕ್ತಮಾನಿನ-
ಸ್ತ್ವಯ್ಯಸ್ತಭಾವಾದವಿಶುದ್ಧಬುದ್ಧಯಃ ।
ಆರುಹ್ಯ ಕೃಚ್ಛ್ರೇಣ ಪರಂ ಪದಂ ತತಃ
ಪತಂತ್ಯಧೋಽನಾದೃತಯುಷ್ಮದಂಘ್ರಯಃ ॥ ೩೨

ತಥಾ ನ ತೇ ಮಾಧವ ತಾವಕಾಃ ಕ್ವಚಿದ್
ಭ್ರಶ್ಯಂತಿ ಮಾರ್ಗಾತ್ತ್ವಯಿ ಬದ್ಧಸೌಹೃದಾಃ ।
ತ್ವಯಾಭಿಗುಪ್ತಾ ವಿಚರಂತಿ ನಿರ್ಭಯಾ
ವಿನಾಯಕಾನೀಕಪಮೂರ್ಧಸು ಪ್ರಭೋ ॥ ೩೩

ಸತ್ತ್ವಂ ವಿಶುದ್ಧಂ ಶ್ರಯತೇ ಭವಾನ್ ಸ್ಥಿತೌ
ಶರೀರಿಣಾಂ ಶ್ರೇಯಉಪಾಯನಂ ವಪುಃ ।

---

ದುಸ್ತರವೂ ಘೋರವೂ ಆದ ಸಂಸಾರಸಾಗರವನ್ನು ದಾಟಿದವರು ಇತರ ಜನರಲ್ಲಿ ಅತಿಶಯವಾದ ಪ್ರೀತಿಯುಳ್ಳವರು. ಆದ್ದರಿಂದಲೇ ಅವರು ಇತರರಿಗಾಗಿ ನಿನ್ನ ಪಾದಕಮಲವೆಂಬ ದೋಣಿಯನ್ನು (ಭಕ್ತಿಮಾರ್ಗವನ್ನು) ಇಲ್ಲಿ ಇರಿಸಿಹೋಗಿದ್ದಾರೆ. ಹೇ ಸ್ವಾಮಿ, ನೀನು ಭಕ್ತರಾದ ಸಜ್ಜನರನ್ನು ಅನುಗ್ರಹಿಸತಕ್ಕವನು (೩೧). ಹೇ ಕಮಲನೇತ್ರ, ತಾವು ಮುಕ್ತರೆಂದು ಇನ್ನು ಕೆಲವರು ತಿಳಿದುಕೊಂಡಿದ್ದಾರೆ. ನಿನ್ನಲ್ಲಿ ಭಕ್ತಿಭಾವವನ್ನು ಇರಿಸದ್ದರಿಂದ ಅವರ ಬುದ್ಧಿಯು ಪರಿಶುದ್ಧವಾಗಿಲ್ಲ. ಅವರು ಬಹು ಶ್ರಮದಿಂದ, (ಸತ್ಕುಲತಪೋವಿದ್ಯೆಗಳುಳ್ಳ) ಉತ್ತಮಸ್ಥಾನವನ್ನು ಪಡೆದರೂ ನಿನ್ನ ಪಾದವನ್ನು ಆದರಿಸದೆ ಇರುವುದರಿಂದ ಕೆಳಗೆ ಬೀಳುತ್ತಾರೆ–ವಿವಿಧ ವಿಘ್ನಗಳನ್ನು ಅನುಭವಿಸುತ್ತಾರೆ (೩೨). ಹೇ ಮಾಧವ, ನಿನ್ನಲ್ಲಿ ಭಕ್ತಿಯನ್ನಿಟ್ಟಿರುವ ನಿನ್ನ ಭಕ್ತರು ಎಂದಿಗೂ ಆ ರೀತಿಯಲ್ಲಿ ಕೆಳಗೆ ಬೀಳುವುದಿಲ್ಲ. ಹೇ ಪ್ರಭು, ನಿನ್ನಿಂದ ಸುರಕ್ಷಿತರಾದ ಭಕ್ತರು, ವಿಘ್ನಗಣಗಳ ತಲೆಯಮೇಲೆ ನಿರ್ಭಯರಾಗಿ ಸಂಚರಿಸುತ್ತಾರೆ (೩೩). ಹೇ ಪ್ರಭು, ಜೀವಿಗಳ ಹಿತಕ್ಕಾಗಿ ನೀನು ಕರ್ಮಫಲದಾತೃವೂ ವಿಶುದ್ಧವೂ ಆದ ಸಾತ್ತ್ವಿಕಶರೀರವನ್ನು

ವೇದಕ್ರಿಯಾಯೋಗತಪಃಸಮಾಧಿಭಿ-
ಸ್ತವಾರ್ಹಣಂ ಯೇನ ಜನಃ ಸಮೀಹತೇ ॥ ೩೪

ಸತ್ತ್ವಂ ನ ಚೇದ್ಧಾತರಿದಂ ನಿಜಂ ಭವೇದ್
ವಿಜ್ಞಾನಮಜ್ಞಾನಭಿದಾಪಮಾರ್ಜನಮ್ ।
ಗುಣಪ್ರಕಾಶೈರನುಮೀಯತೇ ಭವಾನ್
ಪ್ರಕಾಶತೇ ಯಸ್ಯ ಚ ಯೇನ ವಾ ಗುಣಃ ॥ ೩೫

ನ ನಾಮರೂಪೇ ಗುಣಜನ್ಮಕರ್ಮಭಿ-
ರ್ನಿರೂಪಿತವ್ಯೇ ತವ ತಸ್ಯ ಸಾಕ್ಷಿಣಃ ।
ಮನೋವಚೋಭ್ಯಾಮನುಮೇಯವರ್ತ್ಮನೋ
ದೇವ ಕ್ರಿಯಾಯಾಂ ಪ್ರತಿಯಂತ್ಯಥಾಪಿ ಹಿ ॥ ೩೬

---

ತಳೆಯುತ್ತೀಯೆ. ಆದರಿಂದ ಜನರು ವೇದಾಧ್ಯಯನ, ಕರ್ಮಕಾಂಡ, ತಪಸ್ಸು, ಸಮಾಧಿಗಳೆಂಬ ನಾಲ್ಕು ಆಶ್ರಮಧರ್ಮಗಳಿಂದ ಕ್ರಮವಾಗಿ ನಿನ್ನನ್ನು ಸೇವಿಸಲು ಯತ್ನಿಸುತ್ತಾರೆ (೩೪). ಹೇ ಧಾತನೆ, ಶುದ್ಧಸತ್ತ್ವರೂಪವಾದ ಈ ದೇಹವನ್ನು ನೀನು ಧರಿಸದೆ ಇದ್ದರೆ ಅಜ್ಞಾನವನ್ನು ಹೋಗಲಾಡಿಸುವ ವಿಜ್ಞಾನವು ಮಾರ್ಜನವನ್ನು ಪಡೆದಂತೆಯೇ ! (ವಿಜ್ಞಾನವು ಲಭಿಸುತ್ತಿರಲಿಲ್ಲ). ಏಕೆಂದರೆ, ಜಡವಾದ ಬುದ್ಧಿ ಮುಂತಾದ ಗುಣಗಳನ್ನು ಪ್ರಕಾಶಗೊಳಿಸುವುದರಿಂದ ಪ್ರಕಾಶಕ್ಕೆ ಕಾರಣನಾದ ನಿನ್ನನ್ನು ಅನುಮಾನದಿಂದ ತಿಳಿಯಬೇಕಾಗುತ್ತದೆ (ಪ್ರತ್ಯಕ್ಷವಾಗಿ ಕಾಣಲಾಗುವುದಿಲ್ಲ). 'ಬುದ್ಧಿ ಮುಂತಾದ ಗುಣಗಳು ಯಾರವು ? ಇವುಗಳನ್ನರಿಯುವ ಸಾಕ್ಷಿ ಯಾರು ?' ಎಂದು ವಿಚಾರಿಸಿ, ನೀನೇ ಸಾಕ್ಷಿಯಾದವನು ಎಂದು ಅನುಮಾನಿಸಬೇಕಾಗುತ್ತದೆ. (ನೀನು ದೇಹಧಾರಿಯಾದಾಗಲೇ ನಿನ್ನನ್ನು ಪ್ರತ್ಯಕ್ಷವಾಗಿ ಕಾಣಲು ಸಾಧ್ಯವಾಗುತ್ತದೆ) (೩೫). ಆದರೂ ಸಹ ಮನಸ್ಸಿಗೂ ಸಾಕ್ಷಿಯಾಗಿರುವ ನಿನ್ನ ನಾಮರೂಪಗಳೆಲ್ಲವನ್ನೂ ನಿನ್ನ ಗುಣ, ಜನ್ಮ, ಕರ್ಮಗಳಿಂದ 'ಇವು ಇಷ್ಟು, ಇವು ಹೀಗೆ' ಎಂದು ತಿಳಿಯಲು ಶಕ್ಯವಿಲ್ಲ. ಮನಸ್ಸಿಗಾಗಲಿ, ಮಾತಿಗಾಗಲಿ ಅವು ನಿಲುಕತಕ್ಕವುಗಳಲ್ಲ. ಏಕೆಂದರೆ, ನಿನ್ನ ದಾರಿ ಹೀಗಿರಬಹುದೆಂದು ಸಾಮಾನ್ಯವಾಗಿ ಊಹಿಸಬಹುದೇ ಹೊರತು ಸರಿಯಾಗಿ ತಿಳಿಯಲಾಗುವು

ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್
ನಾಮಾನಿ ರೂಪಾಣಿ ಚ ಮಂಗಲಾನಿ ತೇ ।
ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋ-
ರಾವಿಷ್ಟಚೇತಾ ನ ಭವಾಯ ಕಲ್ಪತೇ ॥ ೩೭

ದಿಷ್ಟ್ಯಾ ಹರೇಽಸ್ಯಾ ಭವತಃ ಪದೋ ಭುವೋ
ಭಾರೋಽಪನೀತಸ್ತವ ಜನ್ಮನೇಶಿತುಃ ।
ದಿಷ್ಟ್ಯಾಂಕಿತಾಂ ತ್ವತ್ಪದಕೈಃ ಸುಶೋಭನೈ-
ರ್ದ್ರಕ್ಷ್ಯಾಮ ಗಾಂ ದ್ಯಾಂ ಚ ತವಾನುಕಂಪಿತಾಮ್ ॥

ನ ತೇಽಭವಸ್ಯೇಶ ಭವಸ್ಯ ಕಾರಣಂ
ವಿನಾ ವಿನೋದಂ ಬತ ತರ್ಕಯಾಮಹೇ ।
ಭವೋ ನಿರೋಧಃ ಸ್ಥಿತಿರಪ್ಯವಿದ್ಯಯಾ
ಕೃತಾ ಯತಸ್ತ್ವಯ್ಯಭಯಾಶ್ರಯಾತ್ಮನಿ ॥ ೩೯

---

ದಿಲ್ಲ. ಆದರೂ ಉಪಾಸನಾದಿಗಳಲ್ಲಿ ತೊಡಗಿದಾಗ ಭಕ್ತರು ನಿನ್ನ ರೂಪವನ್ನು ನೋಡಬಹುದು (೩೬). ಪೂಜಾದಿಕ್ರಿಯಾಸಂದರ್ಭಗಳಲ್ಲಿ ಮಂಗಳಕರವಾದ ನಿನ್ನ ನಾಮರೂಪಗಳನ್ನು ಕೇಳುತ್ತ, ಹೊಗಳುತ್ತ, ನೆನೆಯುತ್ತ, ಇತರರಿಗೆ ನೆನಪು ಮಾಡಿಕೊಡುತ್ತ ನಿನ್ನ ಪಾದಾರವಿಂದಗಳಲ್ಲಿ ಯಾವನು ನೆಟ್ಟಮನಸ್ಸುಳ್ಳವನಾಗಿರುವನೋ ಅವನಿಗೆ ಪುನರ್ಜನ್ಮವಿಲ್ಲ (೩೭). ಹೇ ಶ್ರೀಹರಿ, ಈಶ್ವರನಾದ ನಿನ್ನ ಈ ಅವತಾರದಿಂದ ನಿನ್ನ ಪಾದಭೂತಳಾದ ಭೂಮಿಯ ಭಾರವು ಪರಿಹೃತವಾಯಿತು. ಇದೊಂದು ಭಾಗ್ಯ. ಶುಭಲಕ್ಷಣಯುಕ್ತವಾದ ನಿನ್ನ ಕೋಮಲಪಾದಗಳ ಅರ್ಪಣೆಯಿಂದ ಭೂಮಿಯೂ ಸ್ವರ್ಗವೂ ಅನುಗೃಹೀತವಾಗುವುದನ್ನು ನಾವು ನೋಡುವೆವು. ಇದೊಂದು ಭಾಗ್ಯ (೩೮). ಹೇ ಈಶ್ವರ, ಜನ್ಮರಹಿತನಾದ ನಿನಗೆ ಈ ಜನ್ಮದ ನಿಮಿತ್ತವು ನಿನ್ನ ಲೀಲೆಯಲ್ಲದೆ ಬೇರೊಂದಿಲ್ಲ. ಬೇರೊಂದು ನಿಮಿತ್ತವನ್ನು ನಾವು ಊಹಿಸಲೂ ಆರೆವು ! ಹೇ ನಿರ್ಭಯನಾದ ನಿತ್ಯಮುಕ್ತನೆ, ಜೀವಾತ್ಮನಲ್ಲಿಯೂ ಸಹ ಜನನಮರಣಸ್ಥಿತಿಗಳು ನಿನ್ನನ್ನು ಅರಿಯದೆ, ಅವಿದ್ಯೆ

ಮತ್ಸ್ಯಾಶ್ವಕಚ್ಛಪನೃಸಿಂಹವರಾಹಹಂಸ-
ರಾಜನ್ಯವಿಪ್ರವಿಬುಧೇಷು ಕೃತಾವತಾರಃ ।
ತ್ವಂ ಪಾಸಿ ನಸ್ತ್ರಿಭುವನಂ ಚ ಯಥಾಧುನೇಶ
ಭಾರಂ ಭುವೋ ಹರ ಯದೂತ್ತಮ ವಂದನಂ ತೇ ॥ ೪೦

ದಿಷ್ಟ್ಯಾಂಬ ತೇ ಕುಕ್ಷಿಗತಃ ಪರಃ ಪುಮಾ-
ನಂಶೇನ ಸಾಕ್ಷಾದ್ ಭಗವಾನ್ ಭವಾಯ ನಃ ।
ಮಾ ಭೂದ್ ಭಯಂ ಭೋಜಪತೇರ್ಮುಮೂರ್ಷೋ-
ರ್ಗೋಪ್ತಾ ಯದೂನಾಂ ಭವಿತಾ ತವಾತ್ಮಜಃ ॥ ೪೧

ಶ್ರೀಶುಕ ಉವಾಚ—
ಇತ್ಯಭಿಷ್ಟೂಯ ಪುರುಷಂ ಯದ್ರೂಪಮನಿದಂ ಯಥಾ ।
ಬ್ರಹ್ಮೇಶಾನೌ ಪುರೋಧಾಯ ದೇವಾಃ ಪ್ರತಿಯಯುರ್ದಿವಮ್ ॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಿತೀಯೋಧ್ಯಾಯಃ

---

ಯಿಂದ ಕಲ್ಪಿತವಾಗಿವೆಯಲ್ಲವೆ ? (೩೯). ಹೇ ಈಶ, ಮತ್ಸ್ಯ ಅಶ್ವ (ಹಯವದನ) ಕೂರ್ಮ ನೃಸಿಂಹ ವರಾಹ ಹಂಸ ಕ್ಷತ್ರಿಯ ಬ್ರಾಹ್ಮಣ ದೇವತೆಗಳ ರೂಪದಲ್ಲಿ ಅವತರಿಸಿ, ನಮ್ಮನ್ನೂ ಮೂರು ಲೋಕಗಳನ್ನೂ ಕಾಪಾಡಿದ್ದೀಯೆ. ಹಾಗೆಯೇ ಈಗ, ಯದುಕುಲೋತ್ತಮ, ಭೂಮಿಯ ಭಾರವನ್ನು ಹೋಗಲಾಡಿಸು. ನಿನಗೆ ನಮಸ್ಕಾರ" (೪೦). ಅನಂತರ ಬ್ರಹ್ಮಾದಿ ದೇವತೆಗಳು ದೇವಕಿಯನ್ನು ಕುರಿತು "ಅಮ್ಮ, ನಮ್ಮೆಲ್ಲರ ಭಾಗ್ಯವಶದಿಂದ ಭಗವಂತನಾದ ಸಾಕ್ಷಾತ್ ಪರಮ ಪುರುಷನು ತನ್ನ ಅಂಶದಿಂದ ನಿನ್ನ ಗರ್ಭವನ್ನು ಸೇರಿದ್ದಾನೆ. ಭೋಜಪತಿಯಾದ ಕಂಸನಿಗೆ ನೀನು ಅಂಜಬೇಕಾಗಿಲ್ಲ. ಅವನ ಮರಣ ಸಂನಿಹಿತವಾಗಿದೆ. ನಿನ್ನ ಪುತ್ರನು ಯಾದವರನ್ನು ರಕ್ಷಿಸುವನು" ಎಂದರು (೪೧). ಈ ಪ್ರಕಾರ ದೇವತೆಗಳು ಬ್ರಹ್ಮನನ್ನೂ ಈಶ್ವರನನ್ನೂ ಮುಂದಿಟ್ಟುಕೊಂಡು ಸ್ತುತಿಗೆ ಅಗೋಚರನಾದ ಪರಮಪುರುಷನನ್ನು ಈ ಪ್ರಕಾರವಾಗಿ ಸ್ತುತಿಸಿ, ಸ್ವರ್ಗಕ್ಕೆ ಹಿಂದಿರುಗಿದರು (೪೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಎರಡನೆಯ ಅಧ್ಯಾಯ

## ತೃತೀಯಾಧ್ಯಾಯಃ

ಶ್ರೀಶುಕ ಉವಾಚ—

**ಅಥ ಸರ್ವಗುಣೋಪೇತಃ ಕಾಲಃ ಪರಮಶೋಭನಃ ।**
**ಯರ್ಹ್ಯೇವಾಜನಜನ್ಮರ್ಕ್ಷಂ ಶಾಂತರ್ಕ್ಷಗ್ರಹತಾರಕಮ್ ॥ ೧**

**ದಿಶಃ ಪ್ರಸೇದುರ್ಗಗನಂ ನಿರ್ಮಲೋಡುಗಣೋದಯಮ್ ।**
**ಮಹೀ ಮಂಗಲಭೂಯಿಷ್ಠಪುರಗ್ರಾಮವ್ರಜಾಕರಾ ॥ ೨**

**ನದ್ಯಃ ಪ್ರಸನ್ನಸಲಿಲಾ ಹ್ರದಾ ಜಲರುಹಶ್ರಿಯಃ ।**
**ದ್ವಿಜಾಲಿಕುಲಸಂನಾದಸ್ತಬಕಾ ವನರಾಜಯಃ ॥ ೩**

**ವವೌ ವಾಯುಃ ಸುಖಸ್ಪರ್ಶಃ ಪುಣ್ಯಗಂಧವಹಃ ಶುಚಿಃ ।**
**ಅಗ್ನಯಶ್ಚ ದ್ವಿಜಾತೀನಾಂ ಶಾಂತಾಸ್ತತ್ರ ಸಮಿಂಧತ ॥ ೪**

### ಅಧ್ಯಾಯ ೩

ಶ್ರೀಕೃಷ್ಣಾವತಾರ. ವಸುದೇವನು ಶಿಶುವನ್ನು ಗೋಕುಲಕ್ಕೆ ಒಯ್ದು
ಅಲ್ಲಿಂದ ಯಶೋದೆಯ ಮಗಳನ್ನು ತರುವುದು

ಶುಕಮಹರ್ಷಿಗಳು ಹೇಳಿದರು : ಪರೀಕ್ಷಿತರಾಜ, ಸರ್ವಗುಣೋಪೇತವೂ ಪರಮಕಲ್ಯಾಣದಾಯಕವೂ ಆದ ಸಮಯವು ಸನ್ನಿಹಿತವಾಯಿತು. ಶ್ರೀಕೃಷ್ಣನು ಅವತರಿಸಲಿರುವ ರೋಹಿಣೀನಕ್ಷತ್ರವು ಪ್ರಾಪ್ತವಾಯಿತು. ಅಶ್ವಿನ್ಯಾದಿ ನಕ್ಷತ್ರಗಳೂ ಗ್ರಹಗಳೂ ಇತರ ತಾರೆಗಳೂ ಸೌಮ್ಯವಾಗಿದ್ದವು (೧). ದಿಕ್ಕುಗಳು ಪ್ರಸನ್ನವಾದವು. ತಾರೆಗಳು ನಿರ್ಮಲವಾಗಿ ಹೊಳೆಯುತ್ತ ಗಗನದಲ್ಲಿ ಉದಿಸಿದವು. ಶುಭಯುಕ್ತವಾದ ನಗರ, ಗ್ರಾಮ, ವ್ರಜಾದಿಗಳಿಂದ ಭೂಮಿಯು ವಿರಾಜಿಸಿತು (೨). ಹೊಳೆಗಳಲ್ಲಿ ನೀರು ತಿಳಿಯಾಯಿತು. ಸರಸ್ಸುಗಳು ಜಲಪುಷ್ಪಗಳಿಂದ ಶೋಭಿಸಿದವು. ವನರಾಜಿಗಳು ಹಕ್ಕಿಗಳ ಕಲಕಲರವದಿಂದಲೂ ಹೂಗೊಂಚಲುಗಳಿಗೆರಗುವ ದುಂಬಿಗಳ ಝೇಂಕಾರದಿಂದಲೂ ಚೆಲುವಾದವು (೩). ನಿರ್ಮಲವಾದ ಗಾಳಿಯು ಸುಗಂಧವನ್ನು ಹೊತ್ತು ಸುಖಸ್ಪರ್ಶವಾಗಿ ಬೀಸಿತು.

ಮನಾಂಸ್ಯಾಸನ್ ಪ್ರಸನ್ನಾನಿ ಸಾಧೂನಾಮಸುರದ್ರುಹಾಮ್ ।
ಜಾಯಮಾನೇಽಜನೇ ತಸ್ಮಿನ್ ನೇದುರ್ದುಂದುಭಯೋ ದಿವಿ ॥ ೫

ಜಗುಃ ಕಿನ್ನರಗಂಧರ್ವಾಸ್ತುಷ್ಟುವುಃ ಸಿದ್ಧಚಾರಣಾಃ ।
ವಿದ್ಯಾಧರ್ಯಶ್ಚ ನನೃತುರಪ್ಸರೋಭಿಃ ಸಮಂ ತದಾ ॥ ೬

ಮುಮುಚುರ್ಮುನಯೋ ದೇವಾಃ ಸುಮನಾಂಸಿ ಮುದಾನ್ವಿತಾಃ ।
ಮಂದಂ ಮಂದಂ ಜಲಧರಾ ಜಗರ್ಜುರನುಸಾಗರಮ್ ॥ ೭

ನಿಶೀಥೇ ತಮಉದ್ಭೂತೇ ಜಾಯಮಾನೇ ಜನಾರ್ದನೇ ।
ದೇವಕ್ಯಾಂ ದೇವರೂಪಿಣ್ಯಾಂ ವಿಷ್ಣುಃ ಸರ್ವಗುಹಾಶಯಃ ।
ಆವಿರಾಸೀದ್ ಯಥಾ ಪ್ರಾಚ್ಯಾಂ ದಿಶೀಂದುರಿವ ಪುಷ್ಕಲಃ ॥ ೮

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖಗದಾದ್ಯುದಾಯುಧಮ್ ।
ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದಸೌಭಗಮ್ ॥ ೯

---

ಬ್ರಾಹ್ಮಣರ ಹೋಮಾಗ್ನಿಗಳು ಶಾಂತರೂಪದಲ್ಲಿ ಜ್ವಲಿಸಿದವು (೪). ಕಂಸಾದಿ ರಾಕ್ಷಸರನ್ನುಳಿದು ಇತರ ಸಜ್ಜನರೆಲ್ಲರ ಮನಸ್ಸು ಆಹ್ಲಾದಗೊಂಡಿತು. ಭಗವಂತನು ಅವತರಿಸುವ ಸಮಯದಲ್ಲಿ ದೇವದುಂದುಭಿಗಳು ಸ್ವರ್ಗದಲ್ಲಿ ಮೊಳಗಿದವು (೫). ಕಿನ್ನರರೂ ಗಂಧರ್ವರೂ ಹಾಡಿದರು. ಸಿದ್ಧಚಾರಣರು ಸ್ತುತಿಸಿದರು. ವಿದ್ಯಾಧರಿಯರು ಅಪ್ಸರೆಯರೊಡನೆ ನರ್ತಿಸಿದರು (೬). ಮುನಿಗಳೂ ದೇವತೆಗಳೂ ಹರ್ಷದಿಂದ ಹೂಗಳನ್ನು ವರ್ಷಿಸಿದರು. ಸಮುದ್ರದ ಬಳಿಯಲ್ಲಿ ಮೋಡಗಳು ಮೆಲ್ಲ ಮೆಲ್ಲನೆ ಗುಡುಗಿದವು (೭). ಈ ರೀತಿಯಲ್ಲಿ ಶುಭಲಕ್ಷಣಗಳು ಜನಾರ್ದನನ ಜನನಕಾಲದಲ್ಲಾದವು. ಪರೀಕ್ಷಿತರಾಜ, ಕತ್ತಲೆಯು ದಟ್ಟವಾಗಿ ಆವರಿಸಿದ ರಾತ್ರಿಯಾಗಿತ್ತು. ಸರ್ವರ ಹೃದಯದಲ್ಲಿಯೂ ನೆಲೆಸಿದ ವಿಷ್ಣುವು ದೇವರೂಪಿಣಿಯಾದ ದೇವಕಿಯಲ್ಲಿ, ಪೂರ್ವದಿಕ್ಕಿನಲ್ಲಿ ಪೂರ್ಣಚಂದ್ರನು ಉದಯಿಸುವಂತೆ ಆವಿರ್ಭವಿಸಿದನು (೮). ಆಶ್ಚರ್ಯಕರನಾದ ಆ ಬಾಲಕನನ್ನು ವಸುದೇವನು ವೀಕ್ಷಿಸಿದನು. ಬಾಲಕನು ಪದ್ಮನೇತ್ರನಾಗಿ ಚತುರ್ಭುಜನಾಗಿದ್ದನು. ಶಂಖ

ಮಹಾರ್ಹವೈದೂರ್ಯಕಿರೀಟಕುಂಡಲ-
ತ್ವಿಷಾ ಪರಿಷ್ವಕ್ತಸಹಸ್ರಕುಂತಲಮ್ ।
ಉದ್ದಾಮಕಾಂಚ್ಯಂಗದಕಂಕಣಾದಿಭಿ-
ರ್ವಿರೋಚಮಾನಂ ವಸುದೇವ ಐಕ್ಷತ ॥ ೧೦

ಸ ವಿಸ್ಮಯೋತ್ಫುಲ್ಲವಿಲೋಚನೋ ಹರಿಂ
ಸುತಂ ವಿಲೋಕ್ಯಾನಕದುಂದುಭಿಸ್ತದಾ ।
ಕೃಷ್ಣಾವತಾರೋತ್ಸವಸಂಭ್ರಮೋಽಸ್ಪೃಶನ್
ಮುದಾ ದ್ವಿಜೇಭ್ಯೋಽಯುತಮಾಪ್ಲುತೋ ಗವಾಮ್॥

ಅಥೈನಮಸ್ತೌದವಧಾರ್ಯ ಪೂರುಷಂ
ಪರಂ ನತಾಂಗಃ ಕೃತಧೀಃ ಕೃತಾಂಜಲಿಃ ।
ಸ್ವರೋಚಿಷಾ ಭಾರತ ಸೂತಿಕಾಗೃಹಂ
ವಿರೋಚಯಂತಂ ಗತಭೀಃ ಪ್ರಭಾವವಿತ್ ॥ ೧೨

---

ವನ್ನೂ ಗದೆ ಚಕ್ರಗಳೆಂಬ ಆಯುಧಗಳನ್ನೂ ಹಿಡಿದಿದ್ದನು. ಎದೆಯಲ್ಲಿ ಶ್ರೀವತ್ಸ ಚಿಹ್ನೆ ಇತ್ತು. ಕೊರಳಲ್ಲಿ ಕೌಸ್ತುಭಮಣಿಯು ಶೋಭಿಸುತ್ತಿತ್ತು. ಬಾಲಕನು ಪೀತಾಂಬರವನ್ನುಟ್ಟು ಸಾಂದ್ರಮೇಘದಂತೆ ಶ್ಯಾಮಲವರ್ಣನಾಗಿದ್ದನು (೯). ಶ್ರೇಷ್ಠವಾದ ವೈಡೂರ್ಯಮಣಿಗಳಿಂದ ಶೋಭಿತವಾದ ಕಿರೀಟಕುಂಡಲಗಳ ಪ್ರಭೆಯು ಅವನ ವಿಪುಲ ಕೇಶಗಳ ಮೇಲೆ ಹರಡಿತ್ತು. ಉತ್ತಮವಾದ ಉಡಿದಾರ ಕೇಯೂರ ಕಂಕಣಾದಿ ಭೂಷಣಗಳಿಂದ ವಿರಾಜಮಾನನಾದ ಆ ಬಾಲಕನನ್ನು ವಸುದೇವನು ಕಂಡನು (೧೦). ಸುತನಾಗಿ ಜನಿಸಿದ ಶ್ರೀಹರಿಯನ್ನು ಕಂಡು ವಸುದೇವನ ಕಣ್ಣುಗಳು ವಿಸ್ಮಯದಿಂದ ಅರಳಿದವು. ಶ್ರೀಕೃಷ್ಣಾವತಾರೋತ್ಸವದ ಸಂಭ್ರಮದಲ್ಲಿ ಆತನು ಆನಂದದಲ್ಲಿ ಮಿಂದು ಹತ್ತುಸಾವಿರ ಗೋವುಗಳನ್ನು ಬ್ರಾಹ್ಮಣರಿಗೆ, ಸ್ಪರ್ಶಿಸದೆಯೇ ಮನಸ್ಸಿನಲ್ಲಿ ದಾನಮಾಡಿದನು ! (೧೧). ಪರೀಕ್ಷಿತರಾಜ, ಸೂತಿಕಾಗೃಹವನ್ನು ತನ್ನ ಕಾಂತಿಯಿಂದ ಬೆಳಗುತ್ತಿದ್ದ ಆ ಬಾಲಕನು ಪರಮಪುರುಷನೆಂಬುದನ್ನರಿತು ಶುದ್ಧಚಿತ್ತನಾದ ವಸುದೇವನು ಕೈಮುಗಿದುಕೊಂಡು ವಿನಯದಿಂದ ಬಾಗಿ ಸ್ತುತಿಸಲಾರಂಭಿಸಿದನು. ಭಗವನ್ಮಹಿಮೆ

ವಸುದೇವ ಉವಾಚ—

ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।
ಕೇವಲಾನುಭವಾನಂದಸ್ವರೂಪಃ ಸರ್ವಬುದ್ಧಿದೃಕ್ ॥ ೧೩

ಸ ಏವ ಸ್ವಪ್ರಕೃತ್ಯೇದಂ ಸೃಷ್ಟ್ವಾಗ್ರೇ ತ್ರಿಗುಣಾತ್ಮಕಮ್ ।
ತದನು ತ್ವಂ ಹ್ಯಪ್ರವಿಷ್ಟಃ ಪ್ರವಿಷ್ಟ ಇವ ಭಾವ್ಯಸೇ ॥ ೧೪

ಯಥೇಮೇಽವಿಕೃತಾ ಭಾವಾಸ್ತಥಾ ತೇ ವಿಕೃತೈಃ ಸಹ ।
ನಾನಾವೀರ್ಯಾಃ ಪೃಥಗ್ಭೂತಾ ವಿರಾಜಂ ಜನಯಂತಿ ಹಿ ॥ ೧೫

ಸನ್ನಿಪತ್ಯ ಸಮುತ್ಪಾದ್ಯ ದೃಶ್ಯಂತೇಽನುಗತಾ ಇವ ।
ಪ್ರಾಗೇವ ವಿದ್ಯಮಾನತ್ವಾನ್ನ ತೇಷಾಮಿಹ ಸಂಭವಃ ॥ ೧೬

---

ಯನ್ನರಿತಿದ್ದ ಆತನಿಗೆ ಕಂಸನಿಂದ ಭಯವಾಗಲಿಲ್ಲ (೧೨). ವಸುದೇವನು ಹೀಗೆಂದನು : "ಹೇ ಸ್ವಾಮಿ, ನೀನು ಪ್ರಕೃತಿಗೂ ಪರನಾದ ಪುರುಷನೆಂದೂ ಈಗ ಪ್ರತ್ಯಕ್ಷನಾಗಿರುವೆಯೆಂದೂ ನಾನು ತಿಳಿದೆನು ! ನೀನು ಕೇವಲಾನುಭವ ರೂಪನೂ ಆನಂದಸ್ವರೂಪನೂ ಆಗಿರುವೆ. ಸರ್ವರ ಬುದ್ಧಿಗಳಿಗೂ ಸಾಕ್ಷಿಯಾಗಿರುವೆ (೧೩). ಹಾಗೆ ಜ್ಞಾನಾನಂದಸ್ವರೂಪನಾಗಿಯೇ ಇರುವ ನೀನು ಮಾಯೆಯಿಂದ ತ್ರಿಗುಣಾತ್ಮಕವಾದ ಈ ಜಗತ್ತನ್ನು ಸೃಜಿಸಿದ್ದೀಯೆ. ಅದನ್ನು ಪ್ರವೇಶಿಸದಿದ್ದರೂ ಸದ್ರೂಪದಿಂದ ಪ್ರವೇಶಿಸಿರುವಂತೆ[1] ತೋರುತ್ತೀಯೆ (೧೪). ಹೇಗೆಂದರೆ, ಅವಿಕೃತಗಳಾದ ಮಹದಾದಿ ಸಪ್ತಪದಾರ್ಥಗಳು ಬೇರೆಬೇರೆಯಾಗಿದ್ದಾಗ ನಾನಾ ವೀರ್ಯವುಳ್ಳವುಗಳಾಗಿರುತ್ತವೆ. (ಆದರೆ ಅವು ವಿಶಿಷ್ಟಕಾರ್ಯವನ್ನು ಉತ್ಪತ್ತಿಮಾಡಲಾರವು. ಆದ್ದರಿಂದ) ಅವು ವಿಕೃತಗಳಾದ ಷೋಡಶಪದಾರ್ಥಗಳೊಡನೆ ಸೇರಿ ಬ್ರಹ್ಮಾಂಡವನ್ನು ಉತ್ಪತ್ತಿಮಾಡುತ್ತವೆ (೧೫). ಬ್ರಹ್ಮಾಂಡವನ್ನು ಉತ್ಪಾದಿಸಿ ಮಹದಾದಿಗಳು ಅದರಲ್ಲಿ ಪ್ರವಿಷ್ಟವಾಗಿರುವಂತೆ ಗೋಚರಿಸು

---

1 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಎಂದು ಶ್ರುತಿವಾಕ್ಯವಿದೆ. ಆದರೆ ಪ್ರವೇಶಿಸುವಾಗ ಎರಡು ವಸ್ತುಗಳಿರಬೇಕು. ಅಲ್ಲದೆ ಪ್ರವೇಶಿಸತಕ್ಕದ್ದು ಪರಿಚ್ಛಿನ್ನಾಕೃತಿಯದಾಗಬೇಕು. ಬ್ರಹ್ಮವಸ್ತುವಾದರೋ ಅದ್ವಿತೀಯ ಮತ್ತು ಅಪರಿಚ್ಛಿನ್ನ.

ಏವಂ ಭವಾನ್ ಬುದ್ಧ್ಯನುಮೇಯಲಕ್ಷಣೈ-
ರ್ಗ್ರಾಹ್ಯೈರ್ಗುಣೈಃ ಸನ್ನಪಿ ತದ್ಗುಣಾಗ್ರಹಃ ।
ಅನಾವೃತತ್ವಾದ್ ಬಹಿರಂತರಂ ನ ತೇ
ಸರ್ವಸ್ಯ ಸರ್ವಾತ್ಮನ ಆತ್ಮವಸ್ತುನಃ ॥ ೧೭

ಯ ಆತ್ಮನೋ ದೃಶ್ಯಗುಣೇಷು ಸನ್ನಿತಿ
ವ್ಯವಸ್ಯತೇ ಸ್ವವ್ಯತಿರೇಕತೋಽಬುಧಃ ।
ವಿನಾನುವಾದಂ ನ ಚ ತನ್ಮನೀಷಿತಂ
ಸಮ್ಯಗ್ ಯತಸ್ತ್ಯಕ್ತಮುಪಾದದತ್ ಪುಮಾನ್ ॥ ೧೮

ತ್ವತ್ತೋಽಸ್ಯ ಜನ್ಮಸ್ಥಿತಿಸಂಯಮಾನ್ ವಿಭೋ
ವದಂತ್ಯನೀಹಾದಗುಣಾದವಿಕ್ರಿಯಾತ್ ।

---

ತ್ತವೆ. ಆದರೆ, ಅವು ಕಾರಣರೂಪದಿಂದ ಬ್ರಹ್ಮಾಂಡಕ್ಕೂ ಮೊದಲೇ ಇದ್ದುದರಿಂದ, ಈ ಸೃಷ್ಟಿಕಾರ್ಯದಲ್ಲಿ ಅವುಗಳ ಪುನಃಪ್ರವೇಶವು ಆಗಲಾರದು (೧೬). ಹಾಗೆಯೇ ನೀನು, ಬುದ್ಧಿಯಿಂದ ಅನುಮೇಯವಾದ ಇಂದ್ರಿಯಾದಿಗಳಲ್ಲಿಯೂ ಮತ್ತು ಇಂದ್ರಿಯಗೋಚರವಾಗಿ ಪ್ರತ್ಯಕ್ಷವಾದ ದೇಹಾದಿ ವಿಷಯಗಳಲ್ಲಿಯೂ ಇದ್ದರೂ ಅವು ಗೃಹೀತವಾಗುವಂತೆ ಅವುಗಳೊಡನೆ ನೀನು ಗೃಹೀತನಾಗುವುದಿಲ್ಲ[1]. ಮತ್ತು ನೀನು ಅಪರಿಚ್ಛಿನ್ನನಾದ್ದರಿಂದ ನಿನಗೆ ಬಾಹ್ಯವೆಂಬುದೂ ಇಲ್ಲ, ಅಂತರವೆಂಬುದೂ ಇಲ್ಲ. (ಹೀಗಿರುವಾಗ ಪ್ರವೇಶವೆಂಬುದು ಹೇಗಾದೀತು ?) ಅಲ್ಲದೆ ಸರ್ವನೂ ಸರ್ವರ ಆತ್ಮನೂ ಆದ ನಿನಗೆ ಆವರಣವಿಲ್ಲ. ಸರ್ವವ್ಯಾಪಿಯಾದ ಆತ್ಮವಸ್ತುವಿಗೆ ಆವರಣವಿರದು (೧೭). ತನಗೆ ಗೋಚರವಾಗುವ ದೇಹಾದಿವಿಷಯದಲ್ಲಿ 'ಇದು ಆತ್ಮಾತಿರಿಕ್ತವಾದ ಸತ್ಯವಸ್ತು' ಎಂದು ಯಾವನಿಗೆ ಬುದ್ಧಿ ಇರುವುದೋ ಅವನು ಪಂಡಿತನಲ್ಲ. ವಿಚಾರಮಾಡಿದರೆ ದೇಹಾದಿವಿಷಯವೂ ವಾಚಾರಂಭಣವೇ ಹೊರತು ಬೇರೆಯಲ್ಲ. ಆದ್ದರಿಂದ ಬಾಧಿತವಾದ ದೇಹಾದಿವಿಷಯವನ್ನು ಸತ್ಯವೆಂದು ಗ್ರಹಿಸತಕ್ಕ ಮನುಷ್ಯನು ಪಂಡಿತನಲ್ಲ (೧೮). ಎಲೈ ವಿಭುವೇ, ನಿನ್ನಿಂದ

---

[1] ಕಣ್ಣು ಸಕ್ಕರೆಯ ರೂಪವನ್ನು ತಿಳಿಯಬಲ್ಲದಾದರೂ ಆದರ ಸಿಹಿಯನ್ನು ತಿಳಿಯಲಾರದು. ಏಕೆಂದರೆ ಕಣ್ಣಿಗೆ ಆ ಶಕ್ತಿಯಿಲ್ಲ. ಹಾಗೆಯೇ ಪೃಥಿವ್ಯಾದಿವಸ್ತುಗಳಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಶಕ್ತಿಯಿಲ್ಲದ್ದರಿಂದ ಇಂದ್ರಿಯಗಳು ತಿಳಿಯಲಾರವು.

ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ
ತ್ವದಾಶ್ರಯತ್ವಾದುಪಚರ್ಯತೇ ಗುಣೈಃ ॥ ೧೯

ಸ ತ್ವಂ ತ್ರಿಲೋಕಸ್ಥಿತಯೇ ಸ್ವಮಾಯಯಾ
ಬಿಭರ್ಷಿ ಶುಕ್ಲಂ ಖಲು ವರ್ಣಮಾತ್ಮನಃ ।
ಸರ್ಗಾಯ ರಕ್ತಂ ರಜಸೋಪಬೃಂಹಿತಂ
ಕೃಷ್ಣಂ ಚ ವರ್ಣಂ ತಮಸಾ ಜನಾತ್ಯಯೇ ॥ ೨೦

ತ್ವಮಸ್ಯ ಲೋಕಸ್ಯ ವಿಭೋ ರಿರಕ್ಷಿಷು-
ರ್ಗೃಹೇಽವತೀರ್ಣೋಽಸಿ ಮಮಾಖಿಲೇಶ್ವರ ।
ರಾಜನ್ಯಸಂಜ್ಞಾಸುರಕೋಟಿಯೂಥಪೈ-
ರ್ನಿರ್ವ್ಯೂಹ್ಯಮಾನಾ ನಿಹನಿಷ್ಯಸೇ ಚಮೂಃ ॥ ೨೧

ಅಯಂ ತ್ವಸಭ್ಯಸ್ತವ ಜನ್ಮ ನೌ ಗೃಹೇ
ಶ್ರುತ್ವಾಗ್ರಜಾಂಸ್ತೇ ನ್ಯವಧೀತ್ ಸುರೇಶ್ವರ ।
ಸ ತೇಽವತಾರಂ ಪುರುಷೈಃ ಸಮರ್ಪಿತಂ
ಶ್ರುತ್ವಾಧುನೈವಾಭಿಸರತ್ಯುದಾಯುಧಃ ॥ ೨೨

---

ಈ ಜಗತ್ತಿನ ಜನ್ಮಸ್ಥಿತಿಲಯಗಳು ಸಂಭವಿಸುತ್ತವೆಯೆಂದು ಜ್ಞಾನಿಗಳು ಹೇಳುತ್ತಾರೆ. ಆದರೂ ನೀನು ನಿರ್ಗುಣನೇ. ಆದ್ದರಿಂದಲೇ ನಿಷ್ಕ್ರಿಯನು. ನಿಷ್ಕ್ರಿಯನಾದ್ದರಿಂದ ನಿರ್ವಿಕಾರನಾಗಿರುವೆ. (ನೀನು ಬ್ರಹ್ಮವಾದ್ದರಿಂದ ನಿರ್ವಿಕಾರ. ಈಶ್ವರನಾದ್ದರಿಂದ ಕರ್ತೃವೆನಿಸುವೆ). ನಿನ್ನಲ್ಲಿ ಅವಿಕಾರಿತ್ವವೂ ಕರ್ತೃತ್ವವೂ ವಿರುದ್ಧವಲ್ಲ. ಏಕೆಂದರೆ, ಸತ್ತ್ವಾದಿಗುಣಗಳಲ್ಲಿರುವ ಕರ್ತೃತ್ವವು ನಿನ್ನಲ್ಲಿ ಆರೋಪಿತವಾಗಿದೆ[1] (೧೯). ನೀನು ಮೂರು ಲೋಕಗಳ ಪಾಲನೆಗಾಗಿ ಸತ್ತ್ವಗುಣದ ಶುಕ್ಲವರ್ಣವನ್ನೂ ಸೃಷ್ಟಿಗಾಗಿ ರಜೋಗುಣದ ರಕ್ತವರ್ಣವನ್ನೂ ಲಯಕ್ಕಾಗಿ ತಮೋಗುಣದ ಕೃಷ್ಣವರ್ಣವನ್ನೂ ಧರಿಸುತ್ತೀಯೆ (೨೦). ಹೇ ನಿಖಿಲೇಶ್ವರ, ಈ ಲೋಕವನ್ನು ರಕ್ಷಿಸುವುದಕ್ಕಾಗಿ ನನ್ನ ಮನೆಯಲ್ಲಿ ಅವತರಿಸಿದ್ದೀಯೆ. ಕ್ಷತ್ರಿಯರೆಂಬ ಹೆಸರಿನಲ್ಲಿರುವ ಕೋಟ್ಯಂತರ ಅಸುರರು ಸಂಘಟಿಸಿರುವ ಸೇನೆಗಳನ್ನು ಸಂಹರಿಸುವೆ (೨೧). ಹೇ ಸುರೇಶ್ವರ, ನಮ್ಮ ಗೃಹದಲ್ಲಿ ನೀನು

1 ಯೋಧರು ಗಳಿಸಿದ ಜಯವು ರಾಜನಲ್ಲಿ ಆರೋಪಿತವಾಗುವಂತೆ.

ಶ್ರೀಶುಕ ಉವಾಚ—

**ಅಥೈನಮಾತ್ಮಜಂ ವೀಕ್ಷ್ಯ ಮಹಾಪುರುಷಲಕ್ಷಣಮ್ ।**
**ದೇವಕೀ ತಮುಪಾಧಾವತ್ ಕಂಸಾದ್ ಭೀತಾ ಶುಚಿಸ್ಮಿತಾ ॥ ೨೩**

ದೇವಕ್ಯುವಾಚ—

**ರೂಪಂ ಯತ್ ತತ್ ಪ್ರಾಹುರವ್ಯಕ್ತಮಾದ್ಯಂ**
**ಬ್ರಹ್ಮ ಜ್ಯೋತಿರ್ನಿರ್ಗುಣಂ ನಿರ್ವಿಕಾರಮ್ ।**
**ಸತ್ತಾಮಾತ್ರಂ ನಿರ್ವಿಶೇಷಂ ನಿರೀಹಂ**
**ಸ ತ್ವಂ ಸಾಕ್ಷಾದ್ ವಿಷ್ಣುರಧ್ಯಾತ್ಮದೀಪಃ ॥ ೨೪**

**ನಷ್ಟೇ ಲೋಕೇ ದ್ವಿಪರಾರ್ಧಾವಸಾನೇ**
**ಮಹಾಭೂತೇಷ್ವಾದಿಭೂತಂ ಗತೇಷು ।**
**ವ್ಯಕ್ತೇಽವ್ಯಕ್ತಂ ಕಾಲವೇಗೇನ ಯಾತೇ**
**ಭವಾನೇಕಃ ಶಿಷ್ಯತೇ ಶೇಷಸಂಜ್ಞಃ ॥ ೨೫**

---

ಜನಿಸುವೆಯೆಂಬುದನ್ನು ಕೇಳಿ ಖಳನಾದ ಕಂಸನು ನಿನ್ನ ಅಗ್ರಜರನ್ನು ವಧಿಸಿದ್ದಾನೆ. ನೀನು ಅವತರಿಸಿರುವುದನ್ನು ದೂತರಿಂದ ತಿಳಿದು, ಈಗಲೇ ಅವನು ಆಯುಧಪಾಣಿಯಾಗಿ ಇಲ್ಲಿಗೆ ಧಾವಿಸುತ್ತ ಬರುವನು" (೨೨). ಅನಂತರ ಕಂಸನಿಂದ ಭೀತಳಾಗಿದ್ದ ದೇವಕಿಯು ಪರಮಾತ್ಮನೇ ಪುತ್ರನಾಗಿ ಜನಿಸಿರುವುದನ್ನು ನೋಡಿ ಹಸನ್ಮುಖಿಯಾಗಿ ಈ ರೀತಿಯಲ್ಲಿ ಸ್ತೋತ್ರಮಾಡಿದಳು (೨೩): "ಹೇ ಸ್ವಾಮಿ, ಅವ್ಯಕ್ತವೂ ಆದಿಕಾರಣವೂ ಜ್ಯೋತಿಃಸ್ವರೂಪವೂ ನಿರ್ಗುಣವೂ ನಿರ್ವಿಕಾರವೂ ಸತ್ತಾಮಾತ್ರವೂ ನಿರ್ವಿಶೇಷವೂ ನಿರೀಹವೂ ಆದ ಯಾವ ಬ್ರಹ್ಮವಸ್ತುವನ್ನು ವೇದಗಳು ಹೇಳುತ್ತವೆಯೋ ಆ ಬ್ರಹ್ಮವಸ್ತುವಾದ ನೀನು ಪ್ರತ್ಯಕ್ಷನಾಗಿ ವಿಷ್ಣುರೂಪದಿಂದ ಕಾಣಿಸಿಕೊಂಡಿದ್ದೀಯೆ. ಬುದ್ಧ್ಯಾದಿಕರಣಸಂಘಾತಗಳ ಪ್ರಕಾಶಕನಾಗಿ ಅಧ್ಯಾತ್ಮದೀಪವೆನ್ನಿಸಿಕೊಂಡಿದ್ದೀಯೆ (೨೪). ಮಹಾಪ್ರಳಯದಲ್ಲಿ ಲೋಕವೆಲ್ಲವೂ ನಾಶವಾಗಿರಲು, ಪಂಚಮಹಾಭೂತಗಳು ಸೂಕ್ಷ್ಮಭೂತವನ್ನು ಪ್ರವೇಶಿಸಲು, ಕಾಲವಶದಿಂದ ವ್ಯಕ್ತವು ಅವ್ಯಕ್ತದಲ್ಲಿ ಲೀನವಾಗಲು, ಹೇ ಸ್ವಾಮಿ, ನೀನೊಬ್ಬನೇ ಉಳಿದಿರುತ್ತೀಯೆ. ಆದ್ದರಿಂದ ಶೇಷನೆಂಬ (ಶಿಷ್ಯತೇ ಇತಿ

ಯೋಽಯಂ ಕಾಲಸ್ತಸ್ಯ ತೇಽವ್ಯಕ್ತಬಂಧೋ
ಚೇಷ್ಟಾಮಾಹುಶ್ಚೇಷ್ಟತೇ ಯೇನ ವಿಶ್ವಮ್ ।
ನಿಮೇಷಾದಿರ್ವತ್ಸರಾಂತೋ ಮಹೀಯಾಂ-
ಸ್ತಂ ತ್ವೇಶಾನಂ ಕ್ಷೇಮಧಾಮ ಪ್ರಪದ್ಯೇ ॥ ೨೬

ಮರ್ತ್ಯೋ ಮೃತ್ಯುವ್ಯಾಲಭೀತಃ ಪಲಾಯನ್
ಲೋಕಾನ್ ಸರ್ವಾನ್ನಿರ್ಭಯಂ ನಾಧ್ಯಗಚ್ಛತ್ ।
ತ್ವತ್ಪಾದಾಬ್ಜಂ ಪ್ರಾಪ್ಯ ಯದೃಚ್ಛಯಾದ್ಯ
ಸ್ವಸ್ಥಃ ಶೇತೇ ಮೃತ್ಯುರಸ್ಮಾದಪೈತಿ ॥ ೨೭

ಸ ತ್ವಂ ಘೋರಾದುಗ್ರಸೇನಾತ್ಮಜಾನ್ನ-
ಸ್ತ್ರಾಹಿ ತ್ರಸ್ತಾನ್ ಭೃತ್ಯವಿತ್ರಾಸಹಾಸಿ ।
ರೂಪಂ ಚೇದಂ ಪೌರುಷಂ ಧ್ಯಾನಧಿಷ್ಣ್ಯಂ
ಮಾ ಪ್ರತ್ಯಕ್ಷಂ ಮಾಂಸದೃಶಾಂ ಕೃಷೀಷ್ಠಾಃ ॥ ೨೮

---

ಶೇಷಃ) ಹೆಸರನ್ನು ಪಡೆದಿದ್ದೀಯೆ (೨೫). ನಿಮಿಷದಿಂದ ಹಿಡಿದು ಸಂವತ್ಸರ ಪರ್ಯಂತವಾಗಿ ಗಣನೆಯನ್ನು ಪಡೆಯತಕ್ಕದ್ದೂ, ಪ್ರಳಯಹೇತುವೂ ಆದ ಯಾವ ಮಹಾಕಾಲ ಉಂಟೋ ಅದು ನಿನ್ನ ಒಂದು ಲೀಲೆಯೆಂದು ಹೇಳುತ್ತಾರೆ. ಕಾಲವೆಂಬ ಈ ನಿನ್ನ ಲೀಲೆಯಿಂದ ವಿಶ್ವವು ಪರಿವರ್ತನಗೊಳ್ಳುತ್ತದೆ. ಹೇ ಅವ್ಯಕ್ತಬಂಧು–ಪ್ರಕೃತಿಪ್ರವರ್ತಕ, ಸರ್ವೇಶ್ವರನೂ ಅಭಯಸ್ಥಾನನೂ ಆದ ನಿನಗೆ ಶರಣಾಗತಳಾಗಿದ್ದೇನೆ (೨೬). ಮನುಷ್ಯನು ಮೃತ್ಯುವೆಂಬ ಹುಲಿಗೆ ಹೆದರಿ ಓಡುತ್ತಾನೆ. ಯಾವ ಲೋಕಕ್ಕೆ ಹೋದರೂ ನಿರ್ಭಯವಾದ ಸ್ಥಳವು ದೊರಕುವುದಿಲ್ಲ. ಹೇ ಆದ್ಯ, ಭಾಗ್ಯವಶದಿಂದ ನಿನ್ನ ಪಾದಾಬ್ಜವನ್ನು ಆಶ್ರಯಿಸಿದವನು ನಿರ್ಭಯನಾಗಿ ವಿಶ್ರಮಿಸುವನು. ಆಗ ಅವನಿಗೆ ಮೃತ್ಯುಭಯವು ತೊಲಗುತ್ತದೆ (೨೭). ಅಂತಹ ಮಹಾಮಹಿಮನಾದ ನೀನು ಕರಾಳನಾದ ಕಂಸನಿಂದ ಭೀತರಾದ ನಮ್ಮನ್ನು ರಕ್ಷಿಸು. ಭೃತ್ಯರ ಬವಣೆಗಳನ್ನು ಹೋಗಲಾಡಿಸತಕ್ಕವನು ನೀನು. ಈ ಧ್ಯಾನಗಮ್ಯವಾದ ಈಶ್ವರರೂಪವನ್ನು ಪ್ರಾಕೃತನೇತ್ರರಾದ ಜನರಿಗೆ

ಜನ್ಮ ತೇ ಮಯ್ಯಸೌ ಪಾಪೋ ಮಾ ವಿದ್ಯಾನ್ಮಧುಸೂದನ ।
ಸಮುದ್ವಿಜೇ ಭವದ್ಧೇತೋಃ ಕಂಸಾದಹಮಧೀರಧೀಃ ॥ ೨೯

ಉಪಸಂಹರ ವಿಶ್ವಾತ್ಮನ್ನದೋ ರೂಪಮಲೌಕಿಕಮ್ ।
ಶಂಖಚಕ್ರಗದಾಪದ್ಮಶ್ರಿಯಾ ಜುಷ್ಟಂ ಚತುರ್ಭುಜಮ್ ॥ ೩೦

ವಿಶ್ವಂ ಯದೇತತ್ ಸ್ವತನೌ ನಿಶಾಂತೇ
ಯಥಾವಕಾಶಂ ಪುರುಷಃ ಪರೋ ಭವಾನ್ ।
ಬಿಭರ್ತಿ ಸೋಽಯಂ ಮಮ ಗರ್ಭಗೋಽಭೂ
ದಹೋ ನೃಲೋಕಸ್ಯ ವಿಡಂಬನಂ ಹಿ ತತ್ ॥ ೩೧

ಶ್ರೀಭಗವಾನುವಾಚ –
ತ್ವಮೇವ ಪೂರ್ವಸರ್ಗೇಽಭೂಃ ಪೃಶ್ನಿಃ ಸ್ವಾಯಂಭುವೇ ಸತಿ ।
ತದಾಯಂ ಸುತಪಾ ನಾಮ ಪ್ರಜಾಪತಿರಕಲ್ಮಷಃ ॥ ೩೨

ಯುವಾಂ ವೈ ಬ್ರಹ್ಮಣಾಽಽದಿಷ್ಟೌ ಪ್ರಜಾಸರ್ಗೇ ಯದಾ ತತಃ ।
ಸನ್ನಿಯಮ್ಯೇಂದ್ರಿಯಗ್ರಾಮಂ ತೇಪಾಥೇ ಪರಮಂ ತಪಃ ॥ ೩೩

---

ತೋರಿಸಬೇಡ (೨೮). ಏಕೆಂದರೆ, ಮಧುಸೂದನ, ನೀನು ನನ್ನಲ್ಲಿ ಅವತರಿಸಿರುವುದು ಆ ಪಾಪಿಗೆ ತಿಳಿಯದಿರಲಿ. ಅಧೀರಳಾದ ನಾನು ನಿನಗೋಸ್ಕರವೇ ಕಂಸನಿಗೆ ಅಂಜುತ್ತಿದ್ದೇನೆ (೨೯). ಹೇ ವಿಶ್ವಾತ್ಮ, ಶಂಖಚಕ್ರಗದಾಪದ್ಮಗಳಿಂದ ಶೋಭಿಸುತ್ತ ಚತುರ್ಭುಜವಾಗಿರುವ ಈ ದಿವ್ಯರೂಪವನ್ನು ಉಪಸಂಹರಿಸು (೩೦). ಪ್ರಳಯಕಾಲದಲ್ಲಿ ನಿಖಿಲಬ್ರಹ್ಮಾಂಡವನ್ನೂ ಯಾವನು ತನ್ನ ಉದರದಲ್ಲಿ ಲೀಲೆಯಿಂದ ಧರಿಸುವನೋ ಆ ಪರಮಪುರುಷನು ನನ್ನ ಗರ್ಭದಲ್ಲಿ ಜನಿಸಿದನು! ಅಬ್ಬಾ! ಜನರೆದುರಿಗೆ ಎಂತಹ ವಿಡಂಬನೆ ಇದು!" (೩೧). ಆಗ ಭಗವಂತನು ಹೀಗೆಂದನು: "ಹೇ ಸಾಧ್ವಿ, ಸ್ವಾಯಂಭುವ ಮನ್ವಂತರದಲ್ಲಿ ನೀನು ಪೂರ್ವಜನ್ಮದಲ್ಲಿ ಪೃಶ್ನಿ ಎಂಬ ಹೆಸರಿನವಳಾಗಿದ್ದೆ. ಆಗ ಪುಣ್ಯಾತ್ಮನಾದ ಈ ವಸುದೇವನು ಸುತಪ ಎಂಬ ಹೆಸರಿನ ಪ್ರಜಾಪತಿಯಾಗಿದ್ದನು (೩೨). ಪ್ರಜೆಗಳನ್ನು ಸೃಜಿಸಬೇಕೆಂದು ಬ್ರಹ್ಮನು ನಿಮ್ಮಿಬ್ಬರಿಗೆ ಆದೇಶವನ್ನೀಯಲು, ನೀವು ಇಂದ್ರಿಯಗಳನ್ನು

ವರ್ಷವಾತಾತಪಹಿಮಘರ್ಮಕಾಲಗುಣಾನನು ।
ಸಹಮಾನೌ ಶ್ವಾಸರೋಧವಿನಿರ್ಧೂತಮನೋಮಲೌ ॥ ೩೪

ಶೀರ್ಣಪರ್ಣಾನಿಲಾಹಾರಾವುಪಶಾಂತೇನ ಚೇತಸಾ ।
ಮತ್ತಃ ಕಾಮಾನಭೀಪ್ಸಂತೌ ಮದಾರಾಧನಮೀಹತುಃ ॥ ೩೫

ಏವಂ ವಾಂ ತಪ್ಯತೋಸ್ತೀವ್ರಂ ತಪಃ ಪರಮದುಷ್ಕರಮ್ ।
ದಿವ್ಯವರ್ಷಸಹಸ್ರಾಣಿ ದ್ವಾದಶೇಯುರ್ಮದಾತ್ಮನೋಃ ॥ ೩೬

ತದಾ ವಾಂ ಪರಿತುಷ್ಟೋಽಹಮಮುನಾ ವಪುಷಾನಘೇ ।
ತಪಸಾ ಶ್ರದ್ಧಯಾ ನಿತ್ಯಂ ಭಕ್ತ್ಯಾ ಚ ಹೃದಿ ಭಾವಿತಃ ॥ ೩೭

ಪ್ರಾದುರಾಸಂ ವರದರಾಡ್ ಯುವಯೋಃ ಕಾಮದಿತ್ಸಯಾ ।
ವ್ರಿಯತಾಂ ವರ ಇತ್ಯುಕ್ತೇ ಮಾದೃಶೋ ವಾಂ ವೃತಃ ಸುತಃ ॥ ೩೮

ಅಜುಷ್ಟಗ್ರಾಮ್ಯವಿಷಯಾವನಪತ್ಯೌ ಚ ದಂಪತೀ ।
ನ ವವ್ರಾಥೇಽಪವರ್ಗಂ ಮೇ ಮೋಹಿತೌ ಮಮ ಮಾಯಯಾ॥ ೩೯

---

ನಿಗ್ರಹಿಸಿ ಕಠೋರವಾದ ತಪಸ್ಸನ್ನಾಚರಿಸಿದಿರಿ (೩೩). ಮಳೆ ಗಾಳಿ ಬಿಸಿಲು ಚಳಿ ಸೆಕೆ ಮುಂತಾದ ಕಾಲ ಧರ್ಮಗಳನ್ನು ಸಹಿಸಿಕೊಂಡು ತಪಸ್ಸುಮಾಡುತ್ತ ಶ್ವಾಸವನ್ನು ನಿರೋಧಿಸಿ ಮನಃಕಷಾಯಗಳನ್ನು ಹೋಗಲಾಡಿಸಿಕೊಡಿರಿ (೩೪). ಒಣಗಿದ ಎಲೆ, ಗಾಳಿ–ಇವನ್ನು ಆಹಾರವಾಗಿ ಸೇವಿಸುತ್ತ ಶಾಂತಚಿತ್ತರಾಗಿದ್ದಿರಿ. ನನ್ನಿಂದ ವರಗಳನ್ನು ಬಯಸುತ್ತ ನನ್ನನ್ನು ಆರಾಧಿಸಿದಿರಿ (೩೫). ಹೀಗೆ ನೀವು ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಅತಿದುಷ್ಕರವೂ ತೀವ್ರವೂ ಆದ ತಪಸ್ಸನ್ನಾಚರಿಸುತ್ತಿರುವಾಗ, ದಿವ್ಯಮಾನದಿಂದ ಹನ್ನೆರಡುಸಾವಿರ ವರ್ಷಗಳು ಕಳೆದವು (೩೬). ಆಗ, ಎಲೌ ಪುಣ್ಯಾತ್ಮಳೆ, ಅನವರತವೂ ಹೃದಯದಲ್ಲಿ ನನ್ನನ್ನು ಭಕ್ತಿಪೂರ್ವಕವಾಗಿ ಧ್ಯಾನಿಸಿದ್ದರಿಂದ, ನಿಮ್ಮಿರ್ವರ ಶ್ರದ್ಧಾಯುಕ್ತವಾದ ತಪಸ್ಸಿಗೆ ಮೆಚ್ಚಿ ನಾನು ಈ ದೇಹದಿಂದ ನಿಮಗೆ ಪ್ರತ್ಯಕ್ಷನಾದೆನು (೩೭). ವರವನ್ನೀಯತಕ್ಕವರಲ್ಲಿ ಶ್ರೇಷ್ಠನಾದ ನಾನು ನಿಮ್ಮ ಇಷ್ಟವನ್ನು ಸಲ್ಲಿಸುವುದಕ್ಕೋಸ್ಕರ ಪ್ರತ್ಯಕ್ಷನಾಗಿ 'ವರವನ್ನು ಕೇಳಿಕೊಳ್ಳಿರಿ' ಎಂದು ನುಡಿದೆನು. ನನಗೆ ಸದೃಶನಾದ ಪುತ್ರನು ಬೇಕೆಂದು ನೀವು ಕೇಳಿಕೊಂಡಿರಿ (೩೮). ನೀವು ಗ್ರಾಮ್ಯವಾದ ವಿಷಯ

**ಗತೇ ಮಯಿ ಯುವಾಂ ಲಬ್ಧ್ವಾ ವರಂ ಮತ್ಸದೃಶಂ ಸುತಮ್ ।**
**ಗ್ರಾಮ್ಯಾನ್ ಭೋಗಾನಭುಂಜಾಥಾಂ**
**ಯುವಾಂ ಪ್ರಾಪ್ತಮನೋರಥೌ ॥ ೪೦**

**ಅದೃಷ್ಟ್ವಾನ್ಯತಮಂ ಲೋಕೇ ಶೀಲೌದಾರ್ಯಗುಣೈಃ ಸಮಮ್ ।**
**ಅಹಂ ಸುತೋ ವಾಮಭವಂ ಪೃಶ್ನಿಗರ್ಭ ಇತಿ ಶ್ರುತಃ ॥ ೪೧**

**ತಯೋರ್ವಾಂ ಪುನರೇವಾಹಮದಿತ್ಯಾಮಾಸ ಕಶ್ಯಪಾತ್ ।**
**ಉಪೇಂದ್ರ ಇತಿ ವಿಖ್ಯಾತೋ ವಾಮನತ್ವಾಚ್ಚ ವಾಮನಃ ॥ ೪೨**

**ತೃತೀಯೇಽಸ್ಮಿನ್ ಭವೇಽಹಂ ವೈ ತೇನೈವ ವಪುಷಾಥ ವಾಮ್ ।**
**ಜಾತೋ ಭೂಯಸ್ತಯೋರೇವ ಸತ್ಯಂ ಮೇ ವ್ಯಾಹೃತಂ ಸತಿ ॥ ೪೩**

**ಏತದ್ ವಾಂ ದರ್ಶಿತಂ ರೂಪಂ ಪ್ರಾಗ್ಜನ್ಮಸ್ಮರಣಾಯ ಮೇ ।**
**ನಾನ್ಯಥಾ ಮದ್ಭವಂ ಜ್ಞಾನಂ ಮರ್ತ್ಯಲಿಂಗೇನ ಜಾಯತೇ ॥ ೪೪**

---

ಸುಖವನ್ನು ಅನುಭವಿಸದವರೂ ಪುತ್ರರಹಿತರೂ ಆದ ದಂಪತಿಗಳಾಗಿದ್ದಿರಿ. ಆದ್ದರಿಂದ ನನ್ನ ಮಾಯೆಯಿಂದ ಮೋಹಿತರಾಗಿ, ನನ್ನಿಂದ ಮೋಕ್ಷವನ್ನು ಕೇಳಿಕೊಳ್ಳದೆ ಹೋದಿರಿ! (೩೯). ವರವನ್ನಿತ್ತು ನಾನು ಹೊರಟು ಹೋಗಲು, ನನಗೆ ಸಮಾನನಾದ ಪುತ್ರನು ಲಭಿಸುವನೆಂಬ ವರವನ್ನು ಪಡೆದ ನೀವು, ಇಷ್ಟಾರ್ಥವು ಸಿದ್ಧಿಸಿತೆಂದು ಗ್ರಾಮ್ಯಭೋಗಗಳನ್ನು ಅನುಭವಿಸತೊಡಗಿದಿರಿ (೪೦). ಅನಂತರ ಶೀಲ ಔದಾರ್ಯಾದಿ ಗುಣಗಳಲ್ಲಿ ನನಗೆ ಸಮಾನನಾದವನು ಲೋಕದಲ್ಲಿ ಇನ್ನೊಬ್ಬನಿಲ್ಲವೆಂದರಿತು, ನಾನೇ ನಿಮಗೆ ಪುತ್ರನಾಗಿ ಜನಿಸಿದೆನು! ಆಗ ಪೃಶ್ನಿಗರ್ಭನೆಂಬ ಹೆಸರಿನಿಂದ ನಾನು ವಿಖ್ಯಾತನಾಗಿದ್ದೆನು (೪೧). ತರುವಾಯ ಮತ್ತೊಂದು ಜನ್ಮದಲ್ಲಿ ನೀನು ಅದಿತಿಯಾಗಿದ್ದೆ. ವಸುದೇವನು ಕಶ್ಯಪನಾಗಿದ್ದನು. ಮತ್ತೆ ನಾನು ನಿಮ್ಮಿರ್ವರ ಮಗನಾಗಿ ಹುಟ್ಟಿ ಉಪೇಂದ್ರನೆಂದು ವಿಖ್ಯಾತನಾದೆನು. ವಾಮನಾಕಾರನಾದ್ದರಿಂದ ವಾಮನನೆಂದೂ ನನಗೆ ಹೆಸರಾಯಿತು (೪೨). ನಿಮ್ಮ ಈ ಮೂರನೆಯ ಜನ್ಮದಲ್ಲಿ ಮತ್ತೆ ನಾನು ಈ ರೂಪದಿಂದ ನಿಮಗೆ ಪುತ್ರನಾಗಿ ಅವತರಿಸಿನೆನು. ಎಲೌ ಪತಿವ್ರತೆ, ನನ್ನ ನುಡಿ ಯಾವಾಗಲೂ ಸತ್ಯವೇ (೪೩). ನಾನು ಅವತರಿಸಿದ್ದೇನೆಂಬುದನ್ನು ನಿಮ್ಮ ಸ್ಮರಣೆಗೆ ತರುವುದ

ಯುವಾಂ ಮಾಂ ಪುತ್ರಭಾವೇನ ಬ್ರಹ್ಮಭಾವೇನ ಚಾಸಕೃತ್ ।
ಚಿಂತಯಂತೌ ಕೃತಸ್ನೇಹೌ ಯಾಸ್ಯೇಥೇ ಮದ್ಗತಿಂ ಪರಾಮ್॥ ೪೫
ಯದಿ ಕಂಸಾದ್ ಬಿಭೇಷಿತ್ವಂ ತರ್ಹಿ ಮಾಂ ಗೋಕುಲಂ ನಯ ।
ಮನ್ಮಾಯಾಮಾನಯಾಶು ತ್ವಂ ಯಶೋದಾಗರ್ಭಸಂಭವಾಮ್ ॥
ಶ್ರೀಶುಕ ಉವಾಚ—
ಇತ್ಯುಕ್ತ್ವಾಽಽಸೀದ್ಧರಿಸ್ತೂಷ್ಣೀಂ ಭಗವಾನಾತ್ಮಮಾಯಯಾ ।
ಪಿತ್ರೋಃ ಸಂಪಶ್ಯತೋಃ ಸದ್ಯೋ ಬಭೂವ ಪ್ರಾಕೃತಃ ಶಿಶುಃ ॥ ೪೭

ತತಶ್ಚ ಶೌರಿರ್ಭಗವತ್ಪ್ರಚೋದಿತಃ
ಸುತಂ ಸಮಾದಾಯ ಸ ಸೂತಿಕಾಗೃಹಾತ್ ।
ಯದಾ ಬಹಿರ್ಗಂತುಮಿಯೇಷ ತರ್ಹ್ಯಜಾ
ಯಾ ಯೋಗಮಾಯಾಜನಿ ನಂದಜಾಯಯಾ ॥ ೪೮

ತಯಾ ಹೃತಪ್ರತ್ಯಯಸರ್ವವೃತ್ತಿಷು
ದ್ವಾಃಸ್ಥೇಷು ಪೌರೇಷ್ವಪಿ ಶಾಯಿತೇಷ್ವಥ ।
ದ್ವಾರಸ್ತು ಸರ್ವಾಃ ಪಿಹಿತಾ ದುರತ್ಯಯಾ
ಬೃಹತ್ಕಪಾಟಾಯಸಕೀಲಶೃಂಖಲೈಃ ॥ ೪೯

---

ಕ್ಕಾಗಿ ಮೊದಲು ಈ ದಿವ್ಯರೂಪವನ್ನು ತೋರಿಸಿದ್ದೇನೆ. ಹಾಗಲ್ಲವೆ ಮನುಷ್ಯಾಕೃತಿಯಿಂದಲೇ ನಾನು ಕಾಣಿಸಿಕೊಡರೆ, ನಾನು ಜನಿಸಿದ್ದೇನೆಂಬ ಜ್ಞಾನವು ನಿಮಗೆ ಆಗಲಾರದು (೪೪). ನನ್ನನ್ನು ಪುತ್ರಭಾವದಿಂದಲೂ ಬ್ರಹ್ಮಭಾವದಿಂದಲೂ ಪ್ರೀತಿಯನ್ನಿಟ್ಟು ಪದೇ ಪದೇ ಧ್ಯಾನಿಸುತ್ತಿರುವುದರಿಂದ, ಇನ್ನು ಮುಂದೆ ನೀವಿಬ್ಬರೂ ನನ್ನನ್ನು ಸೇರಿ ಶ್ರೇಷ್ಠವಾದ ಸದ್ಗತಿಯನ್ನು ಪಡೆಯುವಿರಿ (೪೫). ವಸುದೇವ, ನೀನು ಕಂಸನಿಗೆ ಅಂಜುವೆಯಾದರೆ ನನ್ನನ್ನು ಗೋಕುಲಕ್ಕೆ ತೆಗೆದುಕೊಂಡು ಹೋಗು. ನನ್ನ ಮಾಯಾಶಕ್ತಿಯು ಯಶೋದೆಯ ಗರ್ಭದಲ್ಲಿ ಜನಿಸಿರುವಳು. ಅವಳನ್ನು ಬೇಗನೆ ಇಲ್ಲಿಗೆ ತೆಗೆದುಕೊಂಡು ಬಾ" (೪೬). ಪರೀಕ್ಷಿತರಾಜ, ಭಗವಾನ್ ಶ್ರೀ ಹರಿಯು ಈ ಪ್ರಕಾರವಾಗಿ ನುಡಿದು, ತಂದೆ ತಾಯಿಗಳು ನೋಡುತ್ತಿರುವಾಗಲೇ ತನ್ನ ಮಾಯಾಬಲದಿಂದ ಪ್ರಾಕೃತವಾದ ಶಿಶುವಾಗಿಬಿಟ್ಟನು ! (೪೭). ಭಗವಂತನಿಂದ ಪ್ರೇರಿತನಾದ ವಸುದೇವನು ಆ ಮಗುವನ್ನೆತ್ತಿಕೊಂಡು ಸೂತಿಕಾಗೃಹದಿಂದ ಹೊರಡಲು ಅನುವಾದನು.

**ತಾಃ ಕೃಷ್ಣವಾಹೇ ವಸುದೇವ ಆಗತೇ**
**ಸ್ವಯಂ ವ್ಯವರ್ಯಂತ ಯಥಾ ತಮೋ ರವೇಃ ।**
**ವವರ್ಷ ಪರ್ಜನ್ಯ ಉಪಾಂಶುಗರ್ಜಿತಃ**
**ಶೇಷೋಽನ್ವಗಾದ್ ವಾರಿ ನಿವಾರಯನ್ ಫಣೈಃ ॥ ೫೦**

**ಮಘೋನಿ ವರ್ಷತ್ಯಸಕೃದ್ ಯಮಾನುಜಾ**
**ಗಂಭೀರತೋಯೌಘಜವೋರ್ಮಿಫೇನಿಲಾ ।**
**ಭಯಾನಕಾವರ್ತಶತಾಕುಲಾ ನದೀ**
**ಮಾರ್ಗಂ ದದೌ ಸಿಂಧುರಿವ ಶ್ರಿಯಃ ಪತೇಃ ॥ ೫೧**

**ನಂದವ್ರಜಂ ಶೌರಿರುಪೇತ್ಯ ತತ್ರ ತಾನ್**
**ಗೋಪಾನ್ ಪ್ರಸುಪ್ತಾನುಪಲಭ್ಯ ನಿದ್ರಯಾ ।**
**ಸುತಂ ಯಶೋದಾಶಯನೇ ನಿಧಾಯ ತ-**
**ತ್ಸುತಾಮುಪಾದಾಯ ಪುನರ್ಗೃಹಾನಗಾತ್ ॥ ೫೨**

---

ಆ ಸಮಯಕ್ಕೆ ಸರಿಯಾಗಿ ಜನ್ಮರಹಿತಳಾದ ಯೋಗಮಾಯೆಯು ನಂದಪತ್ನಿಯಾದ ಯಶೋದೆಯಲ್ಲಿ ಜನಿಸಿದ್ದಳು ! (೪೮). ಆ ಸಮಯದಲ್ಲಿ ಯೋಗಮಾಯೆಯ ಪ್ರಭಾವದಿಂದ ಸೆರೆಮನೆಯ ದ್ವಾರಪಾಲಕರಿಗೆ ಬಾಹ್ಯಪ್ರಜ್ಞೆ ಇರಲಿಲ್ಲ. ಅವರ ಸಕಲೇಂದ್ರಿಯಗಳೂ ಉಡುಗಿದ್ದವು. ಪೌರರು ಗಾಢನಿದ್ರೆಯಲ್ಲಿದ್ದರು. ದುರ್ಗಮವಾದ ಸೆರೆಮನೆಯ ಸಕಲದ್ವಾರಗಳೂ ಬೃಹತ್ತರವಾದ ಕವಾಟಗಳಿಂದಲೂ ಕಬ್ಬಿಣದ ಅಗಳಿಸರಪಳಿಗಳಿಂದಲೂ ಮುಚ್ಚಿದ್ದವು (೪೯). ಶ್ರೀಕೃಷ್ಣನನ್ನೆತ್ತಿಕೊಂಡು ವಸುದೇವನು ಬರಲಾಗಿ, ಸೂರ್ಯೋದಯವಾದೊಡನೆ ಕತ್ತಲೆಯು ಸರಿಯುವಂತೆ, ಆ ಬಾಗಿಲುಗಳು ತಾವಾಗಿಯೇ ತೆರೆದವು. ಮೋಡವು ಮೆಲ್ಲಗೆ ಗುಡುಗುತ್ತ ಮಳೆಯನ್ನು ಸುರಿಸಿತು. ಆಗ ಆದಿಶೇಷನು ಹೆಡೆಗಳನ್ನೆತ್ತಿ ಹಿಡಿದು ಮಳೆಯನ್ನು ನಿವಾರಿಸುತ್ತ ವಸುದೇವನನ್ನು ಅನುಸರಿಸಿ ಹೋದನು (೫೦). ಇಂದ್ರನು ಅನೇಕಬಾರಿ ಮಳೆಯನ್ನು ಸುರಿಸಿದ್ದರಿಂದ ಯಮುನಾ ನದಿಯಲ್ಲಿ ನೀರು ತುಂಬಿ ಹರಿಯುತ್ತಿತ್ತು. ಅಲೆಗಳಿಂದಲೂ ನೊರೆಗಳಿಂದಲೂ ನದಿಯು ವ್ಯಾಪ್ತವಾಗಿತ್ತು. ಭಯಾನಕವಾದ ಸುಳಿಗಳಿಂದ ವ್ಯಾಕುಲವಾಗಿತ್ತು. ಸೀತಾಪತಿಯಾದ ಶ್ರೀ ರಾಮಚಂದ್ರನಿಗೆ ಸಮುದ್ರವು ದಾರಿಯನ್ನು ಬಿಟ್ಟಂತೆ, ಶ್ರೀ ಕೃಷ್ಣನನ್ನೆತ್ತಿ

**ದೇವಕ್ಯಾಃ ಶಯನೇ ನ್ಯಸ್ಯ ವಸುದೇವೋಽಥ ದಾರಿಕಾಮ್ ।**
**ಪ್ರತಿಮುಚ್ಯ ಪದೋರ್ಲೋಹಮಾಸ್ತೇ ಪೂರ್ವವದಾವೃತಃ ॥ ೫೩**

**ಯಶೋದಾ ನಂದಪತ್ನೀ ಚ ಜಾತಂ ಪರಮಬುಧ್ಯತ ।**
**ನ ತಲ್ಲಿಂಗಂ ಪರಿಶ್ರಾಂತಾ ನಿದ್ರಯಾಪಗತಸ್ಮೃತಿಃ ॥ ೫೪**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತೃತೀಯಾಧ್ಯಾಯಃ**



ಕೊಂಡಿದ್ದ ವಸುದೇವನಿಗೆ ಯಮುನೆಯು ಇಬ್ಭಾಗವಾಗಿ ದಾರಿಯನ್ನು ಬಿಟ್ಟಳು (೫೧). ವಸುದೇವನು ನಂದವ್ರಜಕ್ಕೆ ಆಗಮಿಸಿದನು. ಅಲ್ಲಿ ಸಕಲಗೋಪರೂ ಯೋಗಮಾಯೆಯಿಂದ ನಿದ್ರಾವಶರಾಗಿ ಮಲಗಿದ್ದರು. ವಸುದೇವನು ತನ್ನ ಮಗನನ್ನು ಯಶೋದೆಯ ಹಾಸಿಗೆಯಲ್ಲಿ ಮಲಗಿಸಿ, ಅವಳ ಮಗಳನ್ನೆತ್ತಿಕೊಂಡು ಪುನಃ ತನ್ನ ಸೆರೆಮನೆಗೆ ಹಿಂದಿರುಗಿದನು (೫೨). ಆತನು ಆ ಬಾಲಿಕೆಯನ್ನು ದೇವಕಿಯ ಹಾಸಿಗೆಯಲ್ಲಿ ಮಲಗಿಸಿ, ತನ್ನ ಕಾಲುಗಳಿಗೆ ಸಂಕೋಲೆಯನ್ನು ತೊಡಿಸಿಕೊಂಡು ಮೊದಲಿನಂತೆ ಇದ್ದುಬಿಟ್ಟನು! (೫೩). ಬಳಲಿದ್ದ ನಂದಪತ್ನಿಯಾದ ಯಶೋದೆಗೆ ಯೋಗಮಾಯೆಯ ಬಲದಿಂದ ಸ್ಮರಣಶಕ್ತಿಯು ಮಾಸಿಹೋಗಿತ್ತು. ತನಗೆ ಹೆರಿಗೆಯಾಗಿದೆ ಎಂಬುದು ಮಾತ್ರ ತಿಳಿದಿತ್ತು. ಮಗು ಹೆಣ್ಣೋ ಗಂಡೋ ಎಂಬುದು ತಿಳಿದಿರಲಿಲ್ಲ (೫೪).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂರನೆಯ ಅಧ್ಯಾಯ



## ಚತುರ್ಥೋಽಧ್ಯಾಯಃ

ಶ್ರೀಶುಕ ಉವಾಚ—

ಬಹಿರಂತಃಪುರದ್ವಾರಃ ಸರ್ವಾಃ ಪೂರ್ವವದಾವೃತಾಃ ।
ತತೋ ಬಾಲಧ್ವನಿಂ ಶ್ರುತ್ವಾ ಗೃಹಪಾಲಾಃ ಸಮುತ್ಥಿತಾಃ ॥ ೧

ತೇ ತು ತೂರ್ಣಮುಪವ್ರಜ್ಯ ದೇವಕ್ಯಾ ಗರ್ಭಜನ್ಮ ತತ್ ।
ಆಚಖ್ಯುರ್ಭೋಜರಾಜಾಯ ಯದುದ್ವಿಗ್ನಃ ಪ್ರತೀಕ್ಷತೇ ॥ ೨

ಸ ತಲ್ಪಾತ್ ತೂರ್ಣಮುತ್ಥಾಯ ಕಾಲೋಽಯಮಿತಿ ವಿಹ್ವಲಃ ।
ಸೂತೀಗೃಹಮಗಾತ್ ತೂರ್ಣಂ ಪ್ರಸ್ಖಲನ್ ಮುಕ್ತಮೂರ್ಧಜಃ ॥

ತಮಾಹ ಭ್ರಾತರಂ ದೇವೀ ಕೃಪಣಾ ಕರುಣಂ ಸತೀ ।
ಸ್ನುಷೇಯಂ ತವ ಕಲ್ಯಾಣ ಸ್ತ್ರಿಯಂ ಮಾ ಹಂತುಮರ್ಹಸಿ ॥ ೪

## ಅಧ್ಯಾಯ ೪

ದೇವಕಿಯ ಬಳಿಯಲ್ಲಿದ್ದ ಶಿಶುವನ್ನು ಕೊಲ್ಲಲು ಕಂಸನ ಪ್ರಯತ್ನ. ಶಿಶುವು ದೇವಿಯ ರೂಪವನ್ನು ಧರಿಸಿ ಕಂಸನಿಗೆ ಎಚ್ಚರಿಕೆ ನೀಡುವುದು. ಕಂಸನ ಪಶ್ಚಾತ್ತಾಪ. ಅವನ ದುರಾಲೋಚನೆ

ಶುಕಮುನಿಗಳು ಹೇಳಿದರು: ಪರೀಕ್ಷಿತರಾಜ, ಅನಂತರ ಸೆರೆಮನೆಯ ಹೊರಗಿನ ಮತ್ತು ಒಳಗಿನ ಬಾಗಿಲುಗಳೆಲ್ಲವೂ ಮೊದಲಿನಂತೆಯೇ ಮುಚ್ಚಿಕೊಂಡವು. ಆಗ ಮಗುವಿನ ರೋದನ ಧ್ವನಿಯನ್ನು ಕೇಳಿ ಕಾವಲುಗಾರರು ಎಚ್ಚೆತ್ತರು (೧). ಒಡನೆಯೇ ಅವರು ಕಂಸನ ಬಳಿಗೆ ಹೋಗಿ ದೇವಕಿಯ ಆ ಎಂಟನೆಯ ಹೆರಿಗೆಯ ವಿಷಯವನ್ನು ತಿಳಿಸಿದರು. ಅದಕ್ಕಾಗಿಯೇ ಕಂಸನು ಕಳವಳಿಸುತ್ತ ಕಾದಿದ್ದನು (೨). 'ಇದು ನನ್ನ ಮೃತ್ಯು' ಎನ್ನುತ್ತ ಕೂಡಲೇ ಹಾಸಿಗೆಯಿಂದ ಮೇಲೆದ್ದು ವಿಹ್ವಲನಾಗಿ ಬಾಣಂತಿಯಿದ್ದೆಡೆಗೆ ಧಾವಿಸಿದನು. ನಡೆಯುವಾಗ ಎಡವುತ್ತಿದ್ದನು. ತಲೆಯು ಕೆದರಿತ್ತು (೩). ಹಾಗೆ ಬಂದ ಸೋದರನನು ನೋಡಿ ದೀನಳೂ ಸಾಧ್ವಿಯೂ ಆದ ದೇವಕಿಯು ಶೋಕಿಸುತ್ತ "ಸೌಮ್ಯ,

**ಬಹವೋ ಹಿಂಸಿತಾ ಭ್ರಾತಃ ಶಿಶವಃ ಪಾವಕೋಪಮಾಃ ।**
**ತ್ವಯಾ ದೈವನಿಸೃಷ್ಟೇನ ಪುತ್ರಿಕೈಕಾ ಪ್ರದೀಯತಾಮ್ ॥ ೫**

**ನನ್ವಹಂ ತೇ ಹ್ಯವರಜಾ ದೀನಾ ಹತಸುತಾ ಪ್ರಭೋ ।**
**ದಾತುಮರ್ಹಸಿ ಮಂದಾಯಾ ಅಂಗೇಮಾಂ ಚರಮಾಂ ಪ್ರಜಾಮ್ ॥ ೬**

ಶ್ರೀಶುಕ ಉವಾಚ—

**ಉಪಗುಹ್ಯಾತ್ಮಜಾಮೇವಂ ರುದತ್ಯಾ ದೀನದೀನವತ್ ।**
**ಯಾಚಿತಸ್ತಾಂ ವಿನಿರ್ಭರ್ತ್ಸ್ಯ ಹಸ್ತಾದಾಚಿಚ್ಛಿದೇ ಖಲಃ ॥ ೭**

**ತಾಂ ಗೃಹೀತ್ವಾ ಚರಣಯೋರ್ಜಾತಮಾತ್ರಾಂ ಸ್ವಸುಃ ಸುತಾಮ್ ।**
**ಅಪೋಥಯಚ್ಛಿಲಾಪೃಷ್ಠೇ ಸ್ವಾರ್ಥೋನ್ಮೂಲಿತಸೌಹೃದಃ ॥ ೮**

**ಸಾ ತದ್ಧಸ್ತಾತ್ ಸಮುತ್ಪತ್ಯ ಸದ್ಯೋ ದೇವ್ಯಂಬರಂ ಗತಾ ।**
**ಅದೃಶ್ಯತಾನುಜಾ ವಿಷ್ಣೋಃ ಸಾಯುಧಾಷ್ಟಮಹಾಭುಜಾ ॥ ೯**

---

ಇವಳು ನಿನ್ನ ಸೊಸೆ. ಹೆಣ್ಣನ್ನು ಕೊಲ್ಲುವುದು ತರವಲ್ಲ (೪). ಸೋದರ, ಅಗ್ನಿಯಂತೆ ಬೆಳಗುತ್ತಿದ್ದ ಅನೇಕ ಶಿಶುಗಳನ್ನು ಇದುವರೆಗೆ ಕೊಂದುಹಾಕಿದ್ದೀಯೆ. ದೈವವು ಹಾಗೆ ನಿನ್ನನ್ನು ಪ್ರೇರಿಸಿತು. ಈ ಹೆಣ್ಣುಮಗಳೊಬ್ಬಳನ್ನಾದರೂ ಉಳಿಸು (೫). ಓ ಮಹಾರಾಜ, ನಾನು ನಿನ್ನ ತಂಗಿಯಲ್ಲವೆ? ಮಕ್ಕಳೆಲ್ಲರನ್ನೂ ಕಳೆದುಕೊಂಡು ದೀನಳಾಗಿದ್ದೇನೆ. ದುರ್ಭಾಗ್ಯಳಾದ ನನಗೆ, ಅಣ್ಣ, ಕಡೆಯ ಈ ಮಗುವನ್ನಾದರೂ ಉಳಿಸಿಕೊಡು" ಎಂದಳು (೬). ಮಗುವನ್ನು ಅಪ್ಪಿಕೊಂಡು ಅಳುತ್ತ ಅತ್ಯಂತ ದೈನ್ಯದಿಂದ ಈ ರೀತಿಯಲ್ಲಿ ಬೇಡಿಕೊಂಡಳು. ಆದರೆ ಆ ದುಷ್ಟನು ದೇವಕಿಯನ್ನು ಗದರಿಸಿ ಅವಳ ಕೈಯಿಂದ ಶಿಶುವನ್ನು ಕಿತ್ತುಕೊಂಡನು (೭). ಸ್ವಾರ್ಥಿಯಾದ ಆತನಲ್ಲಿ ಸೌಹಾರ್ದವೆಂಬುದೇ ಇರಲಿಲ್ಲ. ಕಂಸನು ಆಗತಾನೇ ಜನಿಸಿದ ಆ ಹೆಣ್ಣು ಶಿಶುವಿನ ಕಾಲುಗಳನ್ನು ಹಿಡಿದೆತ್ತಿ ಕಲ್ಲಿನಮೇಲೆ ಅಪ್ಪಳಿಸಿದನು (೮). ಅಷ್ಟರಲ್ಲಿ ಆ ಶಿಶುವು ಕಂಸನ ಕೈಯಿಂದ ನುಣುಚಿಕೊಂಡು ಗಗನವನ್ನಡರಿ ದಿವ್ಯರೂಪವನ್ನು ಧರಿಸಿತು. ಶ್ರೀ ಕೃಷ್ಣನ ಅನುಜೆಯಾಗಿ ಜನಿಸಿದ ಯೋಗಮಾಯೆಯು ಎಂಟು ಮಹಾಭುಜಗಳಿಂದ ಶೋಭಿಸುತ್ತ ಆಯುಧಧಾರಿಣಿ

ದಿವ್ಯಸ್ರಗಂಬರಾಲೇಪರತ್ನಾಭರಣಭೂಷಿತಾ ।
ಧನುಃಶೂಲೇಷುಚರ್ಮಾಸಿಶಂಖಚಕ್ರಗದಾಧರಾ ॥ ೧೦

ಸಿದ್ಧಚಾರಣಗಂಧರ್ವೈರಪ್ಸರಃಕಿನ್ನರೋರಗೈಃ ।
ಉಪಾಹೃತೋರುಬಲಿಭಿಃ ಸ್ತೂಯಮಾನೇದಮಬ್ರವೀತ್ ॥ ೧೧

ಕಿಂ ಮಯಾ ಹತಯಾ ಮಂದ ಜಾತಃ ಖಲು ತವಾಂತಕೃತ್ ।
ಯತ್ರ ಕ್ವ ವಾ ಪೂರ್ವಶತ್ರುರ್ಮಾ ಹಿಂಸೀಃ ಕೃಪಣಾನ್ ವೃಥಾ ॥

ಇತಿ ಪ್ರಭಾಷ್ಯ ತಂ ದೇವೀ ಮಾಯಾ ಭಗವತೀ ಭುವಿ ।
ಬಹುನಾಮನಿಕೇತೇಷು ಬಹುನಾಮಾ ಬಭೂವ ಹ ॥ ೧೩

ತಯಾಭಿಹಿತಮಾಕರ್ಣ್ಯ ಕಂಸಃ ಪರಮವಿಸ್ಮಿತಃ ।
ದೇವಕೀಂ ವಸುದೇವಂ ಚ ವಿಮುಚ್ಯ ಪ್ರಶ್ರಿತೋಽಬ್ರವೀತ್ ॥ ೧೪

ಅಹೋ ಭಗಿನ್ಯಹೋ ಭಾಮ ಮಯಾ ವಾಂ ಬತ ಪಾಪ್ಮನಾ ।
ಪುರುಷಾದ ಇವಾಪತ್ಯಂ ಬಹವೋ ಹಿಂಸಿತಾಃ ಸುತಾಃ ॥ ೧೫

---

ಯಾಗಿದ್ದಳು (೯). ದಿವ್ಯಾಂಬರವನ್ನುಟ್ಟು ದಿವ್ಯಮಾಲೆಗಳನ್ನು ಧರಿಸಿ ದಿವ್ಯ ಚಂದನದಿಂದ ಲಿಪ್ತಳಾಗಿ ರತ್ನಾಭರಣಗಳಿಂದ ಭೂಷಿತಳಾಗಿದ್ದಳು. ಎಂಟು ಕೈಗಳಲ್ಲಿ ಧನುಸ್ಸು, ಶೂಲ, ಬಾಣ, ಗುರಾಣಿ, ಕತ್ತಿ, ಶಂಖ, ಚಕ್ರ ಮತ್ತು ಗದೆ ಗಳನ್ನು ಹಿಡಿದಿದ್ದಳು (೧೦). ಸಿದ್ಧರೂ ಚಾರಣರೂ ಗಂಧರ್ವರೂ ಅಪ್ಸರೆಯರೂ ಕಿನ್ನರರೂ ಉರಗರೂ ಆ ದೇವಿಗೆ ವಿವಿಧ ಪೂಜೆಗಳನ್ನರ್ಪಿಸಿ ಸ್ತುತಿಸುತ್ತ ನಿಂತಿದ್ದರು. ಆ ಯೋಗಮಾಯೆಯು ಕಂಸನನ್ನು ನೋಡಿ ಹೀಗೆಂದಳು (೧೧): "ಎಲವೋ ಮೂಢ, ನನ್ನನ್ನು ಕೊಲ್ಲಲು ಯತ್ನಿಸಿದರೆ ಏನಾದೀತು? ನಿನಗೆ ಪೂರ್ವಶತ್ರುವಾದವನು ನಿನ್ನನ್ನು ವಧಿಸುವುದಕ್ಕಾಗಿ ಎಲ್ಲಿಯೋ ಜನಿಸಿರುವನು! ದೀನಜನರನ್ನು ವ್ಯರ್ಥವಾಗಿ ಪೀಡಿಸಬೇಡ!" ಎಂದಳು (೧೨). ಭಗವತಿಯಾದ ಮಾಯಾದೇವಿಯು ಈ ರೀತಿಯಲ್ಲಿ ನುಡಿದು ವಿವಿಧಕ್ಷೇತ್ರಗಳಲ್ಲಿ ವಿಭಿನ್ನನಾಮ ಗಳಿಂದ ವಿಖ್ಯಾತಳಾದಳು (೧೩). ಯೋಗಮಾಯೆಯ ನುಡಿಯನ್ನು ಕೇಳಿ ಕಂಸನಿಗೆ ಅತ್ಯಾಶ್ಚರ್ಯವಾಯಿತು. ಅವನು ವಸುದೇವ ದೇವಕಿಯರನ್ನು ಬಂಧನ ದಿಂದ ಬಿಡಿಸಿ ವಿನೀತನಾಗಿ ಹೀಗೆಂದನು (೧೪): "ಓ ತಂಗಿ, ಓ ಭಾವ! ಪಾಪಿ

ಸ ತ್ವಹಂ ತ್ಯಕ್ತ ಕಾರುಣ್ಯಸ್ತ್ಯಕ್ತಜ್ಞಾತಿಸುಹೃತ್ ಖಲಃ ।
ಕಾನ್ ಲೋಕಾನ್ ವೈ ಗಮಿಷ್ಯಾಮಿ ಬ್ರಹ್ಮಹೇವ ಮೃತಃ ಶ್ವಸನ್ ॥

ದೈವಮಪ್ಯನೃತಂ ವಕ್ತಿ ನ ಮರ್ತ್ಯಾ ಏವ ಕೇವಲಮ್ ।
ಯದ್ವಿಶ್ರಂಭಾದಹಂ ಪಾಪಃ ಸ್ವಸುರ್ನಿಹತವಾನ್ ಶಿಶೂನ್ ॥ ೧೭

ಮಾ ಶೋಚತಂ ಮಹಾಭಾಗಾವಾತ್ಮಜಾನ್ ಸ್ವಕೃತಂಭುಜಃ ।
ಜಂತವೋ ನ ಸದೈಕತ್ರ ದೈವಾಧೀನಾಸ್ತದಾಽಽಸತೇ ॥ ೧೮

ಭುವಿ ಭೌಮಾನಿ ಭೂತಾನಿ ಯಥಾ ಯಾಂತ್ಯಪಯಾಂತಿ ಚ ।
ನಾಯಮಾತ್ಮಾ ತಥೈತೇಷು ವಿಪರ್ಯೇತಿ ಯಥೈವ ಭೂಃ ॥ ೧೯

ಯಥಾನೇವಂವಿದೋ ಭೇದೋ ಯತ ಆತ್ಮವಿಪರ್ಯಯಃ ।
ದೇಹಯೋಗವಿಯೋಗೌ ಚ ಸಂಸೃತಿರ್ನ ನಿವರ್ತತೇ ॥ ೨೦

---

ಯಾದ ನಾನು ನರಭಕ್ಷಕನಂತೆ ನಿಮ್ಮ ಬಹುಮಂದಿ ಮಕ್ಕಳನ್ನು ಕೊಂದುಹಾಕಿದೆನು! (೧೫). ನಾನು ಕರುಣೆಯಿಲ್ಲದ ಖಳ. ಬಂಧುಮಿತ್ರರನ್ನು ತೊರೆದವನು. ನಾನು ಬದುಕಿದ್ದರೂ ಸತ್ತಂತೆಯೇ ಸರಿ. ಬ್ರಹ್ಮಹತ್ಯಾಕಾರಿಗೆ ಸಮಾನನಾದೆನು. ಯಾವ ಯಾವ ದುರ್ಗತಿಗೆ ಹೋಗುವೆನೋ! (೧೬). ಮನುಷ್ಯರು ಮಾತ್ರವೇ ಅಲ್ಲ, ದೇವತೆಯೂ ಸುಳ್ಳು ಹೇಳುತ್ತದೆ! ಅಶರೀರವಾಣಿಯನ್ನು ನಂಬಿಕೊಂಡು ಪಾಪಿಯಾದ ನಾನು ಸೋದರಿಯ ಶಿಶುಗಳನ್ನು ಕೊಂದೆನು (೧೭). ಓ ಮಹಾತ್ಮರೆ, ಗತಿಸಿದ ಮಕ್ಕಳಿಗಾಗಿ ಪರಿತಪಿಸಬೇಡಿರಿ. ಅವರು ಯಾವುದೋ ತಮ್ಮ ಕರ್ಮದ ಫಲವನ್ನು ಅನುಭವಿಸಿದರು. ಯಾವ ಪ್ರಾಣಿಗಳೂ ಒಂದೆಡೆಯಲ್ಲಿ ಬಹುಕಾಲ ಬಾಳುವುದಿಲ್ಲ. ದೈವಾಧೀನರಾದ್ದರಿಂದ ಇದ್ದರೂ ಸ್ವಲ್ಪ ಕಾಲವೇ (೧೮). ಭೂಮಿಯಲ್ಲಿ ಮರ, ಬಳ್ಳಿ ಮುಂತಾದವು ಹುಟ್ಟುತ್ತವೆ, ಅಳಿಯುತ್ತವೆ. ಆದರೆ ಭೂಮಿಯು ಮಾತ್ರ ಉಳಿಯುತ್ತದೆ. ಹಾಗೆಯೇ ಈ ದೇಹಗಳು ಬರುತ್ತವೆ, ಹೋಗುತ್ತವೆ. ಆತ್ಮನೊಬ್ಬನು ಏಕರೂಪನಾಗಿ ಉಳಿದಿರುತ್ತಾನೆ (೧೯). ಹೀಗೆ ತಿಳಿಯದಿರುವ ಅಜ್ಞಾನಿಗೆ ದೇಹವೇ ಆತ್ಮವೆಂಬ ವಿಪರೀತ ಬುದ್ಧಿ ಇರುತ್ತದೆ. ಅದರಿಂದ ಭೇದಜ್ಞಾನ ಉದಯಿಸುತ್ತದೆ. ಭೇದ

ತಸ್ಮಾದ್ ಭದ್ರೇ ಸ್ವತನಯಾನ್ ಮಯಾ ವ್ಯಾಪಾದಿತಾನಪಿ ।
ಮಾನುಶೋಚ ಯತಃ ಸರ್ವಃ ಸ್ವಕೃತಂ ವಿಂದತೇಽವಶಃ ॥ ೨೧

ಯಾವದ್ಧತೋಽಸ್ಮಿ ಹಂತಾಸ್ಮೀತ್ಯಾತ್ಮಾನಂ ಮನ್ಯತೇಽಸ್ವದೃಕ್ ।
ತಾವತ್ತದಭಿಮಾನ್ಯಜ್ಞೋ ಬಾಧ್ಯಬಾಧಕತಾಮಿಯಾತ್ ॥ ೨೨

ಕ್ಷಮಧ್ವಂ ಮಮ ದೌರಾತ್ಮ್ಯಂ ಸಾಧವೋ ದೀನವತ್ಸಲಾಃ ।
ಇತ್ಯುಕ್ತ್ವಾಶ್ರುಮುಖಃ ಪಾದೌ ಶ್ಯಾಲಃ ಸ್ವಸ್ರೋರಥಾಗ್ರಹೀತ್ ॥

ಮೋಚಯಾಮಾಸ ನಿಗಡಾದ್ ವಿಶ್ರಬ್ಧಃ ಕನ್ಯಕಾಗಿರಾ ।
ದೇವಕೀಂ ವಸುದೇವಂ ಚ ದರ್ಶಯನ್ನಾತ್ಮಸೌಹೃದಮ್ ॥ ೨೪

ಭ್ರಾತುಃ ಸಮನುತಪ್ತಸ್ಯ ಕ್ಷಾಂತ್ವಾ ರೋಷಂ ಚ ದೇವಕೀ ।
ವ್ಯಸೃಜದ್ ವಸುದೇವಶ್ಚ ಪ್ರಹಸ್ಯ ತಮುವಾಚ ಹ ॥ ೨೫

---

ಜ್ಞಾನವಿದ್ದರೆ ದೇಹಸಂಬಂಧ ಉಂಟಾಗಿ ಹುಟ್ಟುಸಾವುಗಳೂ ಸುಖದುಃಖಾತ್ಮಕ ವಾದ ಸಂಸಾರವೂ ತಪ್ಪುವುದೇ ಇಲ್ಲ (೨೦). ಆದ್ದರಿಂದ, ಭದ್ರೆ, ನನ್ನಿಂದ ಹತರಾದ ಪುತ್ರರಿಗಾಗಿ ಶೋಕಿಸಬೇಡ. ಬೇರೆ ಮಾರ್ಗವಿಲ್ಲದೆ ಸಕಲರೂ ತಮ್ಮ ಕರ್ಮಫಲವನ್ನು ಅನುಭವಿಸಬೇಕಾಗಿದೆ (೨೧). ಆತ್ಮದೃಷ್ಟಿಯಿಲ್ಲದ ದೇಹಾಭಿ ಮಾನಿಯು ನಾನು ಹತನಾಗುತ್ತೇನೆಂದೂ ನಾನು ಇನ್ನೊಬ್ಬನನ್ನು ಕೊಲ್ಲುತ್ತೇ ನೆಂದೂ ಭಾವಿಸುತ್ತಾನೆ. ಅವನು ದೇಹಧರ್ಮವನ್ನು ಆತ್ಮನಲ್ಲಿ ಆರೋಪಿಸಿ ಕೊಳ್ಳತಕ್ಕ ಅಜ್ಞ. ಈ ಅಜ್ಞಾನವಿರುವವರೆಗೆ ತಾನು ಹತನೆಂದೂ ಘಾತುಕ ನೆಂದೂ ತಿಳಿದುಕೊಳ್ಳುತ್ತಾನೆ (೨೨). ಓ ಸಾಧುಗಳೆ, ದೀನವತ್ಸಲರೆ, ನನ್ನ ದೌರ್ಜನ್ಯವನ್ನು ಮನ್ನಿಸಿರಿ" ಎಂದು ನುಡಿದು ಕಂಸನು ಕಣ್ಣೀರು ಸುರಿಸುತ್ತ ತಂಗಿ ಮತ್ತು ಭಾವನ ಪಾದಗಳನ್ನು ಮುಟ್ಟಿ ನಮಸ್ಕರಿಸಿದನು (೨೩). ಬಾಲಿಕೆ ಯಾದ ಯೋಗಮಾಯೆಯ ಮಾತಿನಲ್ಲಿ ನಂಬಿಕೆಯನ್ನಿಟ್ಟು ಆತನು ವಸುದೇವ ನನ್ನೂ ದೇವಕಿಯನ್ನೂ ಸೆರೆಯಿಂದ ಬಿಡಿಸಿದನು. ಒಳ್ಳೆಯ ಮಾತುಗಳಿಂದ ತನ್ನ ಸೌಹಾರ್ದವನ್ನು ವ್ಯಕ್ತಪಡಿಸಿದನು (೨೪). ದೇವಕಿಯು ಪಶ್ಚಾತ್ತಾಪದಿಂದ ಕೊರಗುತ್ತಿದ್ದ ಸೋದರನನ್ನು ಮನ್ನಿಸಿ ಕೋಪವನ್ನು ನುಂಗಿಕೊಂಡಳು. ವಸು

ಏವಮೇತನ್ಮಹಾಭಾಗ ಯಥಾ ವದಸಿ ದೇಹಿನಾಮ್ ।
ಅಜ್ಞಾನಪ್ರಭವಾಹಂಧೀಃ ಸ್ವಪರೇತಿ ಭಿದಾ ಯತಃ ॥ ೨೬

ಶೋಕಹರ್ಷಭಯದ್ವೇಷಲೋಭಮೋಹಮದಾನ್ವಿತಾಃ ।
ಮಿಥೋ ಘ್ನಂತಂ ನ ಪಶ್ಯಂತಿ ಭಾವೈರ್ಭಾವಂ ಪೃಥಗ್ದೃಶಃ ॥ ೨೭

ಶ್ರೀಶುಕ ಉವಾಚ—

ಕಂಸ ಏವಂ ಪ್ರಸನ್ನಾಭ್ಯಾಂ ವಿಶುದ್ಧಂ ಪ್ರತಿಭಾಷಿತಃ ।
ದೇವಕೀವಸುದೇವಾಭ್ಯಾಮನುಜ್ಞಾತೋಽವಿಶದ್ ಗೃಹಮ್ ॥ ೨೮

ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಕಂಸ ಆಹೂಯ ಮಂತ್ರಿಣಃ ।
ತೇಭ್ಯ ಆಚಷ್ಟ ತತ್ ಸರ್ವಂ ಯದುಕ್ತಂ ಯೋಗನಿದ್ರಯಾ ॥ ೨೯

ಆಕರ್ಣ್ಯ ಭರ್ತುರ್ಗದಿತಂ ತಮೂಚುರ್ದೇವಶತ್ರವಃ ।
ದೇವಾನ್ ಪ್ರತಿ ಕೃತಾಮರ್ಷಾ ದೈತೇಯಾ ನಾತಿಕೋವಿದಾಃ ॥ ೩೦

ಏವಂ ಚೇತ್ತರ್ಹಿ ಭೋಜೇಂದ್ರ ಪುರಗ್ರಾಮವ್ರಜಾದಿಷು ।
ಅನಿರ್ದಶಾನ್ ನಿರ್ದಶಾಂಶ್ಚ ಹನಿಷ್ಯಾಮೋಽದ್ಯ ವೈ ಶಿಶೂನ್ ॥ ೩೧

---

ದೇವನು ನಕ್ಕು ಕಂಸನನ್ನು ಕುರಿತು ಹೀಗೆಂದನು (೨೫): "ಮಹಾಭಾಗ, ನೀನು ಹೇಳುವುದು ದಿಟ. ಜನರಿಗೆ ಅಜ್ಞಾನದಿಂದ ಅಹಂಕಾರವೂ ಅದರಿಂದ ನಾವು–ಪರರು ಎಂಬ ಭೇದವೂ ಉಂಟಾಗುತ್ತವೆ (೨೬). ಭೇದದೃಷ್ಟಿಯುಳ್ಳವರು ಶೋಕ ಹರ್ಷ ಭಯ ದ್ವೇಷ ಲೋಭ ಮೋಹ ಮದಗಳಿಂದ ಯುಕ್ತರಾಗಿ ಮೆರೆಯುತ್ತಾರೆ. ಅವರು ರಾಜಸಾದಿ ಗುಣಗಳಿಂದ ಗುಣಗಳನ್ನು ಕೊಲ್ಲಿಸುವ ಈಶ್ವರನನ್ನು ಅರಿಯರು" ಎಂದನು (೨೭). ಈ ರೀತಿಯಲ್ಲಿ ದೇವಕೀವಸುದೇವರು ಪ್ರಸನ್ನರಾಗಿ ಒಳ್ಳೆಯ ಮಾತನ್ನಾಡಲು, ಕಂಸನು ಅವರನ್ನು ಬೀಳ್ಕೊಂಡು ತನ್ನ ಅರಮನೆಯನ್ನು ಪ್ರವೇಶಿಸಿದನು (೨೮). ಆ ರಾತ್ರಿಯು ಕಳೆಯಲಾಗಿ ಕಂಸನು ಮಂತ್ರಿಗಳನ್ನು ಕರೆಸಿ, ಯೋಗನಿದ್ರೆಯು ಹೇಳಿದುದೆಲ್ಲವನ್ನೂ ಅವರಿಗೆ ತಿಳಿಸಿದನು (೨೯). ಅವರೆಲ್ಲರೂ ದೇವಶತ್ರುಗಳಾದ ದೈತ್ಯರು. ದೇವತೆಗಳ ಮೇಲೆ ಅವರಿಗೆ ಬದ್ಧವೈರವಿತ್ತು. ಆ ಮಂತ್ರಿಗಳು ಹೆಚ್ಚು ವಿಚಾರಶೀಲರಲ್ಲ. ಆದ್ದರಿಂದ ಕಂಸನಿಗೆ ಈ ರೀತಿಯಲ್ಲಿ ಸಲಹೆಯನ್ನಿತ್ತರು (೩೦): "ಹಾಗಾದರೆ, ಮಹಾರಾಜ, ನಮ್ಮ

ಕಿಮುದ್ಯಮೈಃ ಕರಿಷ್ಯಂತಿ ದೇವಾಃ ಸಮರಭೀರವಃ ।
ನಿತ್ಯಮುದ್ವಿಗ್ನಮನಸೋ ಜ್ಯಾಘೋಷೈರ್ಧನುಷಸ್ತವ ॥ ೩೨

ಅಸ್ಯತಸ್ತೇ ಶರವ್ರಾತೈರ್ಹನ್ಯಮಾನಾಃ ಸಮಂತತಃ ।
ಜಿಜೀವಿಷವ ಉತ್ಸೃಜ್ಯ ಪಲಾಯನಪರಾ ಯಯುಃ ॥ ೩೩

ಕೇಚಿತ್ ಪ್ರಾಂಜಲಯೋ ದೀನಾ ನ್ಯಸ್ತಶಸ್ತ್ರಾ ದಿವೌಕಸಃ ।
ಮುಕ್ತಕಚ್ಛಶಿಖಾಃ ಕೇಚಿದ್ ಭೀತಾಃ ಸ್ಮ ಇತಿ ವಾದಿನಃ ॥ ೩೪

ನ ತ್ವಂ ವಿಸ್ಮೃತಶಸ್ತ್ರಾಸ್ತ್ರಾನ್ ವಿರಥಾನ್ ಭಯಸಂವೃತಾನ್ ।
ಹಂಸ್ಯನ್ಯಾಸಕ್ತವಿಮುಖಾನ್ ಭಗ್ನಚಾಪಾನಯುಧ್ಯತಃ ॥ ೩೫

ಕಿಂ ಕ್ಷೇಮಶೂರೈರ್ವಿಬುಧೈರಸಂಯುಗವಿಕತ್ಥನೈಃ ।
ರಹೋಜುಷಾ ಕಿಂ ಹರಿಣಾ ಶಂಭುನಾ ವಾ ವನೌಕಸಾ ।
ಕಿಮಿಂದ್ರೇಣಾಲ್ಪವೀರ್ಯೇಣ ಬ್ರಹ್ಮಣಾ ವಾ ತಪಸ್ಯತಾ ॥ ೩೬

---

ನಗರ, ಗ್ರಾಮ, ವ್ರಜಾದಿಗಳಲ್ಲಿರುವ ಸಕಲ ಶಿಶುಗಳನ್ನೂ ಕೊಂದುಬಿಡೋಣ! ಹುಟ್ಟಿ ಹತ್ತು ದಿನಗಳಾಗದಿರುವ ಅಥವಾ ಸ್ವಲ್ಪ ಹೆಚ್ಚು ದಿನಗಳಾಗಿರುವ ಶಿಶುಗಳೆಲ್ಲವನ್ನೂ ವಧಿಸಬೇಕು! (೩೧). ದೇವತೆಗಳು ಇಂಥ ಪ್ರಯತ್ನಗಳಿಂದ ಏನು ಮಾಡಿಯಾರು? ನಿನ್ನ ಧನುಸ್ಸಿನ ಹೆದೆಯ ಠಂಕಾರವನ್ನು ಕೇಳಿದರೆ ಆ ಹೇಡಿಗಳು ಭಯದಿಂದ ತತ್ತರಿಸುತ್ತಾರೆ (೩೨). ನೀನು ಹೋರಾಡುತ್ತಿರುವಾಗ ನಿನ್ನ ಶರಜಾಲಗಳಿಂದ ಘಾತಿಸಲ್ಪಡುತ್ತಿದ್ದ ದೇವತೆಗಳು ಬದುಕಿದರೆ ಸಾಕೆಂದು ರಣರಂಗವನ್ನು ಬಿಟ್ಟು ಓಡಿಹೋಗಿದ್ದಾರೆ (೩೩). ಕೆಲವರು ಶಸ್ತ್ರಗಳನ್ನು ಬಿಸುಟು ದೀನವದನರಾಗಿ ನಿನಗೆ ಕೈಮುಗಿದುಕೊಂಡು ನಿಂತರು. ಕೆಲವರು ಉಟ್ಟಿದ್ದ ವಸ್ತ್ರದ ಕಚ್ಚೆಯೂ ಶಿಖೆಯೂ ಬಿಚ್ಚಿಹೋಗಿರಲಾಗಿ 'ಜೀಯ, ಅಂಜಿದೆವು!' ಎನ್ನುತ್ತ ನಿನ್ನೆದುರಿಗೆ ನಿಂತರು (೩೪). ನೀನು ಯುದ್ಧಮಾಡದವರನ್ನು ಕೊಲ್ಲತಕ್ಕವನಲ್ಲ. ಶಸ್ತ್ರಾಸ್ತ್ರಗಳಿಲ್ಲದವರನ್ನೂ ರಥಹೀನರನ್ನೂ ಭೀತರನ್ನೂ ಕಾರ್ಯಾಂತರ ಪ್ರಸಕ್ತರನ್ನೂ ಯುದ್ಧದಿಂದ ಹಿಮ್ಮೆಟ್ಟಿ ಓಡಿಹೋಗತಕ್ಕವರನ್ನೂ ವಧಿಸತಕ್ಕವನಲ್ಲ (೩೫). ನಿರ್ಭಯಸ್ಥಾನದಲ್ಲಿದ್ದಾಗ ಶೂರರಾಗಿಯೂ ಹೋರಾಟವಿಲ್ಲವಾಗ ಆತ್ಮಶ್ಲಾಘನೆ

ತಥಾಪಿ ದೇವಾಃ ಸಾಪತ್ನ್ಯಾನ್ನೋಪೇಕ್ಷ್ಯಾ ಇತಿ ಮನ್ಮಹೇ ।
ತತಸ್ತನ್ಮೂಲಖನನೇ ನಿಯುಂಕ್ಷ್ವಾಸ್ಮಾನನುವ್ರತಾನ್ ॥ ೩೭

ಯಥಾಽಽಮಯೋಽಂಗೇ ಸಮುಪೇಕ್ಷಿತೋ ನೃಭಿ-
ರ್ನ ಶಕ್ಯತೇ ರೂಢಪದಶ್ಚಿಕಿತ್ಸಿತುಮ್ ।
ಯಥೇಂದ್ರಿಯಗ್ರಾಮ ಉಪೇಕ್ಷಿತಸ್ತಥಾ
ರಿಪುರ್ಮಹಾನ್ ಬದ್ಧಬಲೋ ನ ಚಾಲ್ಯತೇ ॥ ೩೮

ಮೂಲಂ ಹಿ ವಿಷ್ಣುರ್ದೇವಾನಾಂ ಯತ್ರ ಧರ್ಮಃ ಸನಾತನಃ ।
ತಸ್ಯ ಚ ಬ್ರಹ್ಮ ಗೋವಿಪ್ರಾಸ್ತಪೋ ಯಜ್ಞಾಃ ಸದಕ್ಷಿಣಾಃ ॥ ೩೯

---

ಮಾಡಿಕೊಳ್ಳತಕ್ಕವರಾಗಿಯೂ ಇರುವ ದೇವತೆಗಳಿಂದ ಏನಾದೀತು? ಏಕಾಂತದಲ್ಲಿ ನೆಲೆಸಿರುವ ಹರಿಯಿಂದಾಗಲಿ ಇಲಾವೃತವನದಲ್ಲಿರುವ[1] ಹರನಿಂದಾಗಲಿ ಏನೂ ಆಗುವುದಿಲ್ಲ. ಅಲ್ಪವೀರ್ಯನಾದ ಇಂದ್ರನೂ ತಪಸ್ಸಿನಲ್ಲಿ ಮುಳುಗಿರುವ ಬ್ರಹ್ಮನೂ ಏನನ್ನೂ ನಡೆಸಲಾರರು (೩೬). ಆದರೂ ದೇವತೆಗಳು ಶತ್ರುಗಳಾದ್ದರಿಂದ ಉಪೇಕ್ಷಿಸುವುದು ಸರಿಯಲ್ಲವೆಂದು ನಮ್ಮ ಅಭಿಪ್ರಾಯವಿದೆ. ಆದ್ದರಿಂದ ಅವರ ಬೇರನ್ನು ಅಗೆದುಹಾಕಲು ಭೃತ್ಯರಾದ ನಮಗೆ ಆದೇಶವನ್ನು ಕೊಡು (೩೭). ದೇಹದಲ್ಲಿ ಕಾಣಿಸಿಕೊಂಡ ರೋಗವನ್ನು ಉಪೇಕ್ಷಿಸಿದರೆ ಅದು ಪ್ರಬಲವಾಗಿ ಚಿಕಿತ್ಸೆಗೆ ಸಾಧ್ಯವಾಗುವುದಿಲ್ಲ. ಇಂದ್ರಿಯಗಳೂ ಅಷ್ಟೆ. ಅವುಗಳ ಚಾಪಲ್ಯವು ಹೆಚ್ಚಿದಮೇಲೆ ನಿಗ್ರಹಿಸುವುದು ಕಷ್ಟ. ಹಾಗೆಯೇ ವೈರಿಯು ಬದ್ಧಮೂಲನಾಗಿ ಬೆಳೆದುನಿಂತಾಗ ಅವನನ್ನು ಅಲ್ಲಾಡಿಸಲು ಶಕ್ಯವಲ್ಲ (೩೮). ದೇವತೆಗಳ ಬೇರು ವಿಷ್ಣುವೇ! ಅವನಿದ್ದಲ್ಲಿ ಸನಾತನವಾದ ಧರ್ಮವು ಇದ್ದೇ ಇರುತ್ತದೆ! ವೇದ, ಗೋವು, ಬ್ರಾಹ್ಮಣರು, ತಪಸ್ಸು, ದಕ್ಷಿಣಾಸಹಿತವಾದ ಯಜ್ಞ–ಇವು ಧರ್ಮದ

---

[1] ಇದು ಜಂಬೂದ್ವೀಪದ ಒಂದು ಖಂಡ. ಅದರ ವನದಲ್ಲಿ ಹರನು ಪಾರ್ವತಿಯೊಡನೆ ಕ್ರೀಡಿಸುತ್ತಿರುವನು. ಅಲ್ಲಿಗೆ ಪುರುಷರು ಹೋಗಲಾರರು. (ನವಮಸ್ಕಂಧದ ಒಂದನೆಯ ಅಧ್ಯಾಯವನ್ನು ನೋಡಿ).

**ತಸ್ಮಾತ್ ಸರ್ವಾತ್ಮನಾ ರಾಜನ್ ಬ್ರಾಹ್ಮಣಾನ್ ಬ್ರಹ್ಮವಾದಿನಃ ।**
**ತಪಸ್ವಿನೋ ಯಜ್ಞಶೀಲಾನ್ ಗಾಶ್ಚ ಹನ್ಮೋ ಹವಿರ್ದುಘಾಃ ॥೪೦**

**ವಿಪ್ರಾ ಗಾವಶ್ಚ ವೇದಾಶ್ಚ ತಪಃ ಸತ್ಯಂ ದಮಃ ಶಮಃ ।**
**ಶ್ರದ್ಧಾ ದಯಾ ತಿತಿಕ್ಷಾ ಚ ಕ್ರತವಶ್ಚ ಹರೇಸ್ತನೂಃ ॥ ೪೧**

**ಸ ಹಿ ಸರ್ವಸುರಾಧ್ಯಕ್ಷೋ ಹ್ಯಸುರದ್ವಿಡ್ ಗುಹಾಶಯಃ ।**
**ತನ್ಮೂಲಾ ದೇವತಾಃ ಸರ್ವಾಃ ಸೇಶ್ವರಾಃ ಸಚತುರ್ಮುಖಾಃ ।**
**ಅಯಂ ವೈ ತದ್ವಧೋಪಾಯೋ ಯದೃಷೀಣಾಂ ವಿಹಿಂಸನಮ್ ॥**

ಶ್ರೀಶುಕ ಉವಾಚ—

**ಏವಂ ದುರ್ಮಂತ್ರಿಭಿಃ ಕಂಸಃ ಸಹ ಸಮ್ಮಂತ್ರ್ಯ ದುರ್ಮತಿಃ ।**
**ಬ್ರಹ್ಮಹಿಂಸಾಂ ಹಿತಂ ಮೇನೇ ಕಾಲಪಾಶಾವೃತೋಽಸುರಃ ॥ ೪೩**

**ಸಂದಿಶ್ಯ ಸಾಧುಲೋಕಸ್ಯ ಕದನೇ ಕದನಪ್ರಿಯಾನ್ ।**
**ಕಾಮರೂಪಧರಾನ್ ದಿಕ್ಷು ದಾನವಾನ್ ಗೃಹಮಾವಿಶತ್ ॥ ೪೪**

---

ಮೂಲಸ್ಥಾನಗಳು (೩೯). ಆದ್ದರಿಂದ, ಮಹಾರಾಜ, ನಾವು ವೇದಾಧ್ಯಾಯಿಗಳಾದ ಬ್ರಾಹ್ಮಣರನ್ನೂ ತಪಸ್ವಿಗಳನ್ನೂ ಯಜ್ಞಶೀಲರನ್ನೂ ಹವಿಸ್ಸನ್ನು ಸಂಪಾದಿಸಿ ಕೊಡುವ ಗೋವುಗಳನ್ನೂ ಸಕಲೋಪಾಯಗಳಿಂದ ಕೊಂದುಹಾಕಬೇಕು ! (೪೦). ವಿಪ್ರರು, ಗೋವುಗಳು, ವೇದಗಳು, ತಪಸ್ಸು, ಸತ್ಯ, ದಮ, ಶಮ, ಶ್ರದ್ಧೆ, ದಯೆ, ತಿತಿಕ್ಷೆ ಮತ್ತು ಯಜ್ಞಗಳು–ಇವು ವಿಷ್ಣುವಿನ ಶರೀರ (೪೧). ವಿಷ್ಣುವೇ ನಿಖಿಲಸುರರಿಗೂ ಅಧ್ಯಕ್ಷ; ಅಸುರರ ವೈರಿ ; ಹೃದಯ ಗುಹೆಯಲ್ಲಿ ಅಡಗಿರುತ್ತಾನೆ. ಈಶ್ವರ ಬ್ರಹ್ಮಾದಿ ಸರ್ವದೇವತೆಗಳಿಗೂ ಅವನೇ ಮೂಲ. ಆದ್ದರಿಂದ ಅವನನ್ನು ಕೊಲ್ಲುವ ಉಪಾಯವೆಂದರೆ ಋಷಿಗಳನ್ನು ಕೊಲ್ಲುವುದೇ ! " (೪೨). ಈ ರೀತಿಯಲ್ಲಿ ಹೇಳಿದ ದುರ್ಮಂತ್ರಿಗಳ ಮಂತ್ರಾಲೋಚನೆಯನ್ನು ಕೇಳಿ ದುರ್ಮತಿಯಾದ ಕಂಸನು ಬ್ರಹ್ಮಹತ್ಯೆಯೇ ಹಿತಕರವೆಂದು ನಿರ್ಣಯಿಸಿದನು. ಏಕೆಂದರೆ, ಆ ಅಸುರನಿಗೆ ಕಾಲಪಾಶವು ಸುತ್ತಿಕೊಂಡಿತ್ತು (೪೩). ಅವನು ಹಿಂಸಾಪ್ರಿಯರಾದ ದಾನವರನು ಕುರಿತು ದಿಕ್ಕುದಿಕ್ಕುಗಳಿಗೂ ಕಾಮರೂಪಿಗಳಾಗಿ ಹೋಗಿ

ತೇ ವೈ ರಜಃಪ್ರಕೃತಯಸ್ತಮಸಾ ಮೂಢಚೇತಸಃ ।
ಸತಾಂ ವಿದ್ವೇಷಮಾಚೇರುರಾರಾದಾಗತಮೃತ್ಯವಃ ॥ ೪೫

ಆಯುಃ ಶ್ರಿಯಂ ಯಶೋ ಧರ್ಮಂ ಲೋಕಾನಾಶಿಷ ಏವ ಚ ।
ಹಂತಿ ಶ್ರೇಯಾಂಸಿ ಸರ್ವಾಣಿ ಪುಂಸೋ ಮಹದತಿಕ್ರಮಃ ॥ ೪೬

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತುರ್ಥಾಧ್ಯಾಯಃ



ಸಜ್ಜನರನ್ನು ಹಿಂಸಿಸಬೇಕೆಂದು ಆಜ್ಞೆಯನ್ನಿತ್ತು ಅರಮನೆಯೊಳಗೆ ಹೋದನು (೪೪). ಆ ದಾನವರು ವಿಶೇಷವಾಗಿ ರಜೋಗುಣದವರು. ತಮೋಗುಣದಿಂದ ಬುದ್ಧಿಗೆ ಮಂಕುಕವಿಯಿತು. ಮೃತ್ಯುವು ಅವರ ಸಮೀಪಕ್ಕೆ ಬಂದಿತ್ತು. ಆದ್ದರಿಂದ ಸತ್ಪುರುಷರೊಡನೆ ವೈರವನ್ನು ಬೆಳೆಸಿ ವಿದ್ವಿಷ್ಟವಾದ ಕೃತ್ಯವನ್ನು ನಡೆಸಿದರು (೪೫). ಪರೀಕ್ಷಿತರಾಜ, ಮಹಾತ್ಮರನ್ನು ಅತಿಕ್ರಮಿಸುವುದು ಮನುಷ್ಯರ ಸಕಲ ಶ್ರೇಯಸ್ಸುಗಳನ್ನೂ ನಾಶಪಡಿಸುತ್ತದೆ. ಅದರಿಂದ ಆಯುಸ್ಸು, ಐಶ್ವರ್ಯ, ಯಶಸ್ಸು, ಧರ್ಮ, ಉತ್ತಮಲೋಕ, ಶುಭಾಶಂಸನೆಗಳು—ಎಲ್ಲವೂ ನಾಶವಾಗುತ್ತವೆ(೪೬).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಾಲ್ಕನೆಯ ಅಧ್ಯಾಯ



*

## ಪಂಚಮೋಧ್ಯಾಯಃ

ಶ್ರೀಶುಕ ಉವಾಚ—

**ನಂದಸ್ತ್ವಾತ್ಮಜ ಉತ್ಪನ್ನೇ ಜಾತಾಹ್ಲಾದೋ ಮಹಾಮನಾಃ ।**
**ಆಹೂಯ ವಿಪ್ರಾನ್ ವೇದಜ್ಞಾನ್ ಸ್ನಾತಃ ಶುಚಿರಲಂಕೃತಃ ॥ ೧**

**ವಾಚಯಿತ್ವಾ ಸ್ವಸ್ತ್ಯಯನಂ ಜಾತಕರ್ಮಾತ್ಮಜಸ್ಯ ವೈ ।**
**ಕಾರಯಾಮಾಸ ವಿಧಿವತ್ ಪಿತೃದೇವಾರ್ಚನಂ ತಥಾ ॥ ೨**

**ಧೇನೂನಾಂ ನಿಯುತೇ ಪ್ರಾದಾದ್ ವಿಪ್ರೇಭ್ಯಃ ಸಮಲಂಕೃತೇ ।**
**ತಿಲಾದ್ರೀನ್ ಸಪ್ತ ರತ್ನೌಘಶಾತಕೌಂಭಾಂಬರಾವೃತಾನ್ ॥ ೩**

**ಕಾಲೇನ ಸ್ನಾನಶೌಚಾಭ್ಯಾಂ ಸಂಸ್ಕಾರೈಸ್ತಪಸೇಜ್ಯಯಾ ।**
**ಶುಧ್ಯಂತಿ ದಾನೈಃ ಸಂತುಷ್ಟ್ಯಾ ದ್ರವ್ಯಾಣ್ಯಾತ್ಮಾಽಽತ್ಮವಿದ್ಯಯಾ ॥ ೪**

## ಅಧ್ಯಾಯ ೫

ಗೋಕುಲದಲ್ಲಿ ಶ್ರೀ ಕೃಷ್ಣನ ಜಾತಕರ್ಮಾದ್ಯುತ್ಸವ. ಮಥುರೆಗೆ ನಂದನ ಪ್ರಯಾಣ. ನಂದ ವಸುದೇವರ ಸಂಭಾಷಣೆ

ಶುಕಮುನಿಗಳು ಹೇಳಿದರು: ಪರೀಕ್ಷಿತರಾಜ, ಇತ್ತಲಾಗಿ ಮಗನು ಜನಿಸಿದನೆಂದು ನಂದನಿಗೆ ಆನಂದವಾಯಿತು. ಆ ಮಹಾಭಾಗನು ಸ್ನಾನಮಾಡಿ ಶುಚಿಯಾದನಲ್ಲದೆ ಅಲಂಕರಿಸಿಕೊಂಡನು. ವೇದಜ್ಞರಾದ ವಿಪ್ರರನ್ನು ಕರೆಸಿ ಸ್ವಸ್ತಿಯನ್ನು ವಾಚಿಸಿ ವಿಧಿವತ್ತಾಗಿ ಪುತ್ರನಿಗೆ ಜಾತಕರ್ಮವನ್ನೂ ಪಿತೃಗಳ ಮತ್ತು ದೇವತೆಗಳ ಅರ್ಚನೆಯನ್ನೂ ಮಾಡಿಸಿದನು (೧–೨). ಅಲಂಕರಿಸಿದ ಎರಡು ಲಕ್ಷ ಗೋವುಗಳನ್ನೂ ರತ್ನ ಚಿನ್ನ ವಸ್ತ್ರಗಳಿಂದ ಭೂಷಿತವಾದ ಏಳು ತಿಲರಾಶಿಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದನು (೩). ಕಾಲ, ಸ್ನಾನ, ಶೌಚ, ಸಂಸ್ಕಾರ, ತಪಸ್ಸು, ಯಜ್ಞ, ದಾನ, ಸಂತುಷ್ಟಿ—ಇವುಗಳಿಂದ ಕೆಲವು ದ್ರವ್ಯಗಳು[1]

---

1 ಕಾಲದಿಂದ ಭೂಮಿ, ಸ್ನಾನದಿಂದ ದೇಹ, ಶುಚಿಪಡಿಸುವುದರಿಂದ ಕೊಳೆಯಾದ ವಸ್ತು, ಸಂಸ್ಕಾರದಿಂದ ಗರ್ಭ, ತಪಸ್ಸಿನಿಂದ ಇಂದ್ರಿಯ, ಯಜ್ಞದಿಂದ ದ್ವಿಜ, ದಾನದಿಂದ ಧನ, ಸಂತುಷ್ಟಿಯಿಂದ ಮನಸ್ಸು–ಇತ್ಯಾದಿ ದ್ರವ್ಯಗಳು ಶುದ್ಧವಾಗುತ್ತವೆ. ಪ್ರಕೃತದಲ್ಲಿ ಜಾತಕರ್ಮಾದಿ ಸಂಸ್ಕಾರಗಳಿಂದ ಗರ್ಭದ ಶುದ್ಧಿಯೆಂದು ಅಭಿಪ್ರಾಯ.

ಸೌಮಂಗಲ್ಯಗಿರೋ ವಿಪ್ರಾಃ ಸೂತಮಾಗಧವಂದಿನಃ ।
ಗಾಯಕಾಶ್ಚ ಜಗುರ್ನೇದುರ್ಭೇರ್ಯೋ
ದುಂದುಭಯೋ ಮುಹುಃ ॥ ೫

ವ್ರಜಃ ಸಂಮೃಷ್ಟಸಂಸಿಕ್ತದ್ವಾರಾಜಿರಗೃಹಾಂತರಃ ।
ಚಿತ್ರಧ್ವಜಪತಾಕಾಸ್ರಕ್ ಚೈಲಪಲ್ಲವತೋರಣೈಃ ॥ ೬

ಗಾವೋ ವೃಷಾ ವತ್ಸತರಾ ಹರಿದ್ರಾತೈಲರೂಷಿತಾಃ ।
ವಿಚಿತ್ರಧಾತುಬರ್ಹಸ್ರಗ್ವಸ್ತ್ರಕಾಂಚನಮಾಲಿನಃ ॥ ೭

ಮಹಾರ್ಹವಸ್ತ್ರಾಭರಣಕಂಚುಕೋಷ್ಣೀಷಭೂಷಿತಾಃ ।
ಗೋಪಾಃ ಸಮಾಯಯೂ ರಾಜನ್ ನಾನೋಪಾಯನಪಾಣಯಃ ॥

---

ಶುದ್ಧವಾಗುತ್ತವೆ. ಆತ್ಮನು ಆತ್ಮಜ್ಞಾನದಿಂದ ಶುದ್ಧನಾಗುತ್ತಾನೆ (೪). ವಿಪ್ರರು ಸ್ವಸ್ತಿಮಂತ್ರಗಳನ್ನು ಹೇಳಿ ನಂದನಿಗೆ ಮಂಗಳವನ್ನು ಕೋರಿದರು. ಸೂತ ಮಾಗಧ ಬಂದಿಗಳು ಮಂಗಳ ಶ್ಲೋಕಗಳನ್ನು ಹೇಳಿದರು. ಗಾಯಕರು ಹಾಡಿದರು. ಭೇರೀದುಂದುಭಿಗಳು ಮೊಳಗಿದವು (೫). (ನಂದನಿಗೆ ಪುತ್ರೋತ್ಸವವಾಯಿತೆಂದು ಕೇಳಿ ಗೋಪಾಲರು ವ್ರಜವನ್ನು ಅಲಂಕರಿಸಿದರು). ಮನೆಗಳ ಬಾಗಿಲು ಅಂಗಳ ಗೃಹಮಧ್ಯ ಭಾಗಗಳನ್ನು ಗುಡಿಸಿ ಒಳಿದು ಚೊಕ್ಕಟ ಮಾಡಿದರು. ಧ್ವಜಸ್ತಂಭಗಳಲ್ಲಿ ಚಿತ್ರವರ್ಣದ ಪತಾಕೆಗಳನ್ನೇರಿಸಿದರು. ಹೂಮಾಲೆಗಳಿಂದಲೂ ಒಟ್ಟೆ ಮತ್ತು ಚಿಗುರೆಲೆಗಳಿಂದ ರಚಿಸಿದ ತೋರಣಗಳಿಂದಲೂ ವ್ರಜವನ್ನು ಸಿಂಗರಿಸಿದರು (೬). ಆ ಗೊಲ್ಲರು ಹಸುಗಳಿಗೂ ಎತ್ತುಗಳಿಗೂ ಕರುಗಳಿಗೂ ತೈಲದಲ್ಲಿ ಕಲೆಸಿದ ಅರಿಶಿಣವನ್ನು ಲೇಪಿಸಿ, ವಿಚಿತ್ರ ವರ್ಣದ ಧಾತುಗಳು, ನವಿಲುಗರಿಯ ಹಾರಗಳು, ವಸ್ತ್ರಗಳು, ಚಿನ್ನದ ಸರಗಳು—ಇವುಗಳಿಂದ ಅಲಂಕರಿಸಿದರು (೭). ಆಮೇಲೆ ಗೋಪಾಲರು ಬೆಲೆಬಾಳುವ ವಸ್ತ್ರಗಳನ್ನುಟ್ಟು, ಆಭರಣಗಳನ್ನು ತೊಟ್ಟು, ಕಂಚುಕ ಮತ್ತು ಉಷ್ಣೀಷಗಳನ್ನು ಧರಿಸಿ ನಾನಾ ಬಗೆಯ ಕಾಣಿಕೆಗಳನ್ನು ಕೈಯಲ್ಲಿ ಹಿಡಿದು ನಂದನ ಮನೆಗೆ ಆಗಮಿಸಿದರು (೮).

**ಗೋಪ್ಯಶ್ಚಾಕರ್ಣ್ಯ ಮುದಿತಾ ಯಶೋದಾಯಾಃ ಸುತೋದ್ಭವಮ್**
**ಆತ್ಮಾನಂ ಭೂಷಯಾಂಚಕ್ರುರ್ವಸ್ತ್ರಾಕಲ್ಪಾಂಜನಾದಿಭಿಃ ॥ ೯**

**ನವಕುಂಕುಮಕಿಂಜಲ್ಕಮುಖಪಂಕಜಭೂತಯಃ ।**
**ಬಲಿಭಿಸ್ತ್ವರಿತಂ ಜಗ್ಮುಃ ಪೃಥುಶ್ರೋಣ್ಯಶ್ಚಲತ್ಕುಚಾಃ ॥ ೧೦**

**ಗೋಪ್ಯಃ ಸುಮೃಷ್ಟಮಣಿಕುಂಡಲನಿಷ್ಕಕಂಠ್ಯ-**
**ಶ್ಚಿತ್ರಾಂಬರಾಃ ಪಥಿ ಶಿಖಾಚ್ಯುತಮಾಲ್ಯವರ್ಷಾಃ ।**
**ನಂದಾಲಯಂ ಸವಲಯಾ ವ್ರಜತೀರ್ವಿರೇಜು-**
**ರ್ವ್ಯಾಲೋಲಕುಂಡಲಪಯೋಧರಹಾರಶೋಭಾಃ ॥ ೧೧**

**ತಾ ಆಶಿಷಃ ಪ್ರಯುಂಜಾನಾಶ್ಚಿರಂ ಪಾಹೀತಿ ಬಾಲಕೇ ।**
**ಹರಿದ್ರಾಚೂರ್ಣತೈಲಾದ್ಭಿಃ ಸಿಂಚಂತ್ಯೋ ಜನಮುಜ್ಜಗುಃ ॥ ೧೨**

---

ಯಶೋದೆಗೆ ಮಗನು ಜನಿಸಿದನೆಂಬ ಸುದ್ದಿಯನ್ನು ಕೇಳಿ ಗೋಪಿಯರಿಗೆ ಆನಂದವಾಯಿತು. ಅವರು ಉತ್ತಮವಾದ ಸೀರೆಯನ್ನುಟ್ಟು, ಒಡವೆಗಳನ್ನು ತೊಟ್ಟು, ಕಾಡಿಗೆ ಮುಂತಾದವುಗಳಿಂದ ತಮ್ಮನ್ನು ಅಲಂಕರಿಸಿಕೊಂಡರು (೯). ಹಚ್ಚಿಕೊಂಡ ನವಕುಂಕುಮಕೇಸರಗಳಿಂದ ಅವರ ಮುಖಕಮಲಗಳು ಚೆಲುವಾದವು. ಆ ಪೃಥುಶ್ರೋಣಿಯರು ಬಳುವಳಿಗಳನ್ನು ತೆಗೆದುಕೊಂಡು ಸ್ತನಗಳನ್ನು ಚಾಲಿಸುತ್ತ ತ್ವರೆಯಿಂದ ಯಶೋದೆಯನ್ನು ನೋಡಲು ಹೊರಟರು (೧೦). ಆ ಗೋಪಿಯರು ಕಿವಿಗಳಲ್ಲಿ ಹೊಳೆಯುವ ಮಣಿಕುಂಡಲಗಳನ್ನೂ ಕೊರಳಲ್ಲಿ ಸುವರ್ಣ ಪದಕದ ಹಾರವನ್ನೂ ಧರಿಸಿದ್ದರು. ವಿವಿಧವರ್ಣದ ಸೀರೆಗಳನ್ನುಟ್ಟಿದ್ದರು. ಕೈಗಳಲ್ಲಿ ಬಳೆಗಳನ್ನು ತೊಟ್ಟಿದ್ದರು. ತಲೆಯಲ್ಲಿ ಮುಡಿದಿದ್ದ ಹೂಗಳು (ಹೋಗುವ ರಭಸಕ್ಕೆ) ದಾರಿಯಲ್ಲಿ ಉದುರುತ್ತಿದ್ದವು. ಕಿವಿಯ ಕುಂಡಲಗಳೂ ಸ್ತನಗಳ ಮೇಲಿದ್ದ ಮುತ್ತಿನ ಹಾರಗಳೂ ಅಲ್ಲಾಡುತ್ತಿದ್ದವು (೧೧). ಆ ಸ್ತ್ರೀಯರು (ನಂದಗೋಪನ ಮನೆಗೆ ಹೋಗಿ, ರಾಜಪುತ್ರನಾದ್ದರಿಂದ) ಆ ಬಾಲಕನಿಗೆ 'ಚಿರಕಾಲದವರೆಗೆ ನಮ್ಮನ್ನು ಪಾಲಿಸತಕ್ಕವನಾಗು' ಎಂದು ಆಶೀರ್ವದಿಸಿದರು. ಅಲ್ಲದೆ ಅರಿಶಿಣದ ಪುಡಿಯನ್ನು ಕಲಸಿದ ಎಣ್ಣೆ ನೀರನ್ನು[1] ಜನರಿಗೆ ಎರಚುತ್ತ ಹಾಡು

---

1 ಓಕಳಿ.

ಅವಾದ್ಯಂತ ವಿಚಿತ್ರಾಣಿ ವಾದಿತ್ರಾಣಿ ಮಹೋತ್ಸವೇ ।
ಕೃಷ್ಣೇ ವಿಶ್ವೇಶ್ವರೇಽನಂತೇ ನಂದಸ್ಯ ವ್ರಜಮಾಗತೇ ॥ ೧೩

ಗೋಪಾಃ ಪರಸ್ಪರಂ ಹೃಷ್ಟಾ ದಧಿಕ್ಷೀರಘೃತಾಂಬುಭಿಃ ।
ಆಸಿಂಚಂತೋ ವಿಲಿಂಪಂತೋ ನವನೀತೈಶ್ಚ ಚಿಕ್ಷಿಪುಃ ॥ ೧೪

ನಂದೋ ಮಹಾಮನಾಸ್ತೇಭ್ಯೋ ವಾಸೋಽಲಂಕಾರಗೋಧನಮ್ ।
ಸೂತಮಾಗಧವಂದಿಭ್ಯೋ ಯೇಽನ್ಯೇ ವಿದ್ಯೋಪಜೀವಿನಃ ॥ ೧೫

ತೈಸ್ತೈಃ ಕಾಮೈರದೀನಾತ್ಮಾ ಯಥೋಚಿತಮಪೂಜಯತ್ ।
ವಿಷ್ಣೋರಾರಾಧನಾರ್ಥಾಯ ಸ್ವಪುತ್ರಸ್ಯೋದಯಾಯ ಚ ॥ ೧೬

ರೋಹಿಣೀ ಚ ಮಹಾಭಾಗಾ ನಂದಗೋಪಾಭಿನಂದಿತಾ ।
ವ್ಯಚರದ್ ದಿವ್ಯವಾಸಃಸ್ರಕ್ಕಂಠಾಭರಣಭೂಷಿತಾ ॥ ೧೭

ತತ ಆರಭ್ಯ ನಂದಸ್ಯ ವ್ರಜಃ ಸರ್ವಸಮೃದ್ಧಿಮಾನ್ ।
ಹರೇರ್ನಿವಾಸಾತ್ಮಗುಣೈ ರಮಾಕ್ರೀಡಮಭೂನ್ನೃಪ ॥ ೧೮

---

ಗಳನ್ನು ಹೇಳಿದರು (೧೨). ಪರೀಕ್ಷಿತ, ಜಗದೀಶ್ವರನೂ ಅನಂತನೂ ಆದ ಶ್ರೀಕೃಷ್ಣನು ನಂದಗೋಪನ ವ್ರಜಕ್ಕೆ ಆಗಮಿಸಿದಾಗ ಒಂದು ಮಹೋತ್ಸವವೇ ನಡೆದುಹೋಯಿತು. ನಾನಾ ಬಗೆಯ ವಾದ್ಯಗಳು ಘೋರ್ಗರೆದವು (೧೩). ಗೋಪಾಲರು ಆನಂದತುಂದಿಲರಾಗಿ ಹಾಲು ಮೊಸರು ತುಪ್ಪ ನೀರುಗಳನ್ನು ಒಬ್ಬರಿಗೊಬ್ಬರು ಎರಚುತ್ತ, ಬೆಣ್ಣೆಯನ್ನು ಬಳಿಯುತ್ತ ಕ್ರೀಡಿಸಿದರು (೧೪). ವಿಶಾಲಹೃದಯನೂ ಉದಾರಶೀಲನೂ ಆದ ನಂದನು ಆ ಗೋಪಾಲರಿಗೆ ವಸ್ತ್ರಾಲಂಕಾರಗೋವುಗಳನ್ನೂ ಧನವನ್ನೂ ಬಹುಮಾನಿಸಿದನು. ಸೂತಮಾಗಧವಂದಿಗಳಿಗೂ ಇತರ ವಿದ್ಯಾವಂತರಿಗೂ ಬೇಕುಬೇಕಾದ ವಸ್ತುಗಳನ್ನು ಕೊಟ್ಟನಲ್ಲದೆ, ಸಕಲರನ್ನೂ ಯಥೋಚಿತವಾಗಿ ಸತ್ಕರಿಸಿದನು. ಅದರಿಂದ ವಿಷ್ಣುವಿನ ಆರಾಧನೆಯಾಗುವುದೆಂದೂ ತನ್ನ ಪುತ್ರನಿಗೆ ಕಲ್ಯಾಣವಾಗುವುದೆಂದೂ ಅವನು ಬಗೆದನು (೧೫-೧೬). ಆತನು ಮಹಾಭಾಗಳಾದ ರೋಹಿಣಿಯನ್ನೂ ಅಭಿನಂದಿಸಿ ಸತ್ಕರಿಸಿದನು. ಅವಳು ದಿವ್ಯವಸ್ತ್ರದಿಂದಲೂ ಹೂಮಾಲೆ ಕಂಠಾಭರಣಗಳಿಂದಲೂ ಭೂಷಿತಳಾಗಿ ನಲಿಯುತ್ತ ತಿರುಗಾಡಿದಳು (೧೭). ಅಲ್ಲಿಂದ ಮೊದಲು,

**ಗೋಪಾನ್ ಗೋಕುಲರಕ್ಷಾಯಾಂ ನಿರೂಪ್ಯ ಮಥುರಾಂ ಗತಃ ।**
**ನಂದಃ ಕಂಸಸ್ಯ ವಾರ್ಷಿಕ್ಯಂ ಕರಂ ದಾತುಂ ಕುರೂದ್ವಹ ॥ ೧೯**

**ವಸುದೇವ ಉಪಶ್ರುತ್ಯ ಭ್ರಾತರಂ ನಂದಮಾಗತಮ್ ।**
**ಜ್ಞಾತ್ವಾ ದತ್ತಕರಂ ರಾಜ್ಞೇ ಯಯೌ ತದವಮೋಚನಮ್ ॥ ೨೦**

**ತಂ ದೃಷ್ಟ್ವಾ ಸಹಸೋತ್ಥಾಯ ದೇಹಃ ಪ್ರಾಣಮಿವಾಗತಮ್ ।**
**ಪ್ರೀತಃ ಪ್ರಿಯತಮಂ ದೋರ್ಭ್ಯಾಂ ಸಸ್ವಜೇ ಪ್ರೇಮವಿಹ್ವಲಃ ॥ ೨೧**

**ಪೂಜಿತಃ ಸುಖಮಾಸೀನಃ ಪೃಷ್ಟ್ವಾನಾಮಯಮಾದೃತಃ ।**
**ಪ್ರಸಕ್ತಧೀಃ ಸ್ವಾತ್ಮಜಯೋರಿದಮಾಹ ವಿಶಾಂಪತೇ ॥ ೨೨**

---

ಮಹಾರಾಜ, ನಂದನ ವ್ರಜಸ್ಥಳವು ಸರ್ವಸಮೃದ್ಧಿಗಳಿಂದ ಮೆರೆಯತೊಡಗಿತು. ಆತನಲ್ಲಿ ಸರ್ವಪ್ರಿಯತ್ವಾದಿ ಸದ್ಗುಣಗಳಿದ್ದವು. ಅಲ್ಲದೆ ಶ್ರೀಹರಿಯೇ ಈಗ ಅಲ್ಲಿ ನೆಲೆಸಿದ್ದರಿಂದ ವ್ರಜಸ್ಥಳವು ಲಕ್ಷ್ಮಿಯ ವಿಹಾರಭೂಮಿಯೇ ಆಯಿತು (೧೮). ಕುರುಕುಲೋತ್ತಮ ಪರೀಕ್ಷಿತ, ಹೀಗಿರಲು ಒಂದು ಸಲ ನಂದನು ಗೋಕುಲ ರಕ್ಷಣೆಗೆ ಗೋಪರನ್ನು ನಿಯಮಿಸಿ, ವಾರ್ಷಿಕ ಕಪ್ಪವನ್ನು ಕಂಸನಿಗೆ ಕೊಡುವುದ ಕ್ಕಾಗಿ ಮಥುರೆಗೆ ಹೋದನು (೧೯). ಮಿತ್ರನಾದ[1] ನಂದಗೋಪನು ಬಂದಿರುವ ನೆಂದೂ ಕಂಸನಿಗೆ ಕಪ್ಪವನ್ನು ಸಲ್ಲಿಸಿದನೆಂದೂ ಕೇಳಿ ವಸುದೇವನು ಆತನ ಬಿಡಾ ರಕ್ಕೆ ಹೋದನು (೨೦). ವಸುದೇವನನ್ನು ಕಂಡೊಡನೆ ನಂದನಿಗೆ ದೇಹಕ್ಕೆ ಪ್ರಾಣವು ಬಂದಂತಾಯಿತು. ಅವನು ಪ್ರೇಮವಿಹ್ವಲನಾಗಿ ಥಟ್ಟನೆ ಎದ್ದುಬಂದು ಪ್ರಿಯತಮನಾದ ಗೆಳೆಯನನ್ನು ಎರಡು ಕೈಗಳನ್ನೂ ನೀಡಿ ಪ್ರೀತಿಯಿಂದ ಅಪ್ಪಿ ಕೊಂಡನು (೨೧). ವಸುದೇವನು ನಂದನಿಂದ ಸತ್ಕೃತನಾಗಿ ಸುಖಾಸನದಲ್ಲಿ ಕುಳಿತು ಅವನ ಕುಶಲವನ್ನು ವಿಚಾರಿಸಿದನು. ಅನಂತರ ಮಕ್ಕಳಿರ್ವರ ವಿಷಯ

---

1 ಮೂಲದಲ್ಲಿ 'ಭ್ರಾತರಂ' ಎಂದಿದೆ. ಮಿತ್ರನೆಂದು ಶ್ರೀಧರಸ್ವಾಮಿಗಳು ಅದಕ್ಕೆ ಅರ್ಥವನ್ನು ಬರೆದಿದ್ದಾರೆ. ಅತಿಶಯ ಸ್ನೇಹವಿದ್ದುದರಿಂದ ಭ್ರಾತೃಸಮಾನನೆಂದು ಅವರ ಅಭಿಪ್ರಾಯ. ವಸುದೇವನ ತಂದೆಯಾದ ಶೂರನಿಗೆ ಮಲತಾಯಿಯಲ್ಲಿ ಹುಟ್ಟಿದ ಸೋದರ ನಿದ್ದನೆಂದೂ ಅವನಿಗೆ ವೈಶ್ಯಜಾತಿಯ ಭಾರ್ಯೆಯಲ್ಲಿ ನಂದನು ಜನಿಸಿದ್ದರಿಂದ ವಸುದೇವನು ಭ್ರಾತೃವಾಗುತ್ತಾನೆಂದೂ ಕೆಲವರು ಹೇಳುತ್ತಾರೆ.

ದಿಷ್ಟ್ಯಾ ಭ್ರಾತಃ ಪ್ರವಯಸ ಇದಾನೀಮಪ್ರಜಸ್ಯ ತೇ ।
ಪ್ರಜಾಶಾಯಾ ನಿವೃತ್ತಸ್ಯ ಪ್ರಜಾ ಯತ್ ಸಮಪದ್ಯತ ॥ ೨೩

ದಿಷ್ಟ್ಯಾ ಸಂಸಾರಚಕ್ರೇಽಸ್ಮಿನ್ ವರ್ತಮಾನಃ ಪುನರ್ಭವಃ ।
ಉಪಲಬ್ಧೋ ಭವಾನದ್ಯ ದುರ್ಲಭಂ ಪ್ರಿಯದರ್ಶನಮ್ ॥ ೨೪

ನೈಕತ್ರ ಪ್ರಿಯಸಂವಾಸಃ ಸುಹೃದಾಂ ಚಿತ್ರಕರ್ಮಣಾಮ್ ।
ಓಘೇನ ವ್ಯೂಹ್ಯಮಾನಾನಾಂ ಪ್ಲವಾನಾಂ ಸ್ರೋತಸೋ ಯಥಾ ॥

ಕಚ್ಚಿತ್ ಪಶವ್ಯಂ ನಿರುಜಂ ಭೂರ್ಯಂಬುತೃಣವೀರುಧಮ್ ।
ಬೃಹದ್ವನಂ ತದಧುನಾ ಯತ್ರಾಸ್ಸೇ ತ್ವಂ ಸುಹೃದ್ವೃತಃ ॥ ೨೬

ಭ್ರಾತರ್ಮಮ ಸುತಃ ಕಚ್ಚಿನ್ಮಾತ್ರಾ ಸಹ ಭವದ್ವ್ರಜೇ ।
ತಾತಂ ಭವಂತಂ ಮನ್ವಾನೋ ಭವದ್ಭ್ಯಾಮುಪಲಾಲಿತಃ ॥ ೨೭

ಪುಂಸಸ್ತ್ರಿವರ್ಗೋ ವಿಹಿತಃ ಸುಹೃದೋ ಹ್ಯನುಭಾವಿತಃ ।
ನ ತೇಷು ಕ್ಲಿಶ್ಯಮಾನೇಷು ತ್ರಿವರ್ಗೋಽರ್ಥಾಯ ಕಲ್ಪತೇ ॥ ೨೮

---

ವನ್ನು ಸ್ಮರಿಸಿಕೊಂಡು ನಂದನನ್ನು ಕುರಿತು ಹೀಗೆಂದನು (೨೨): "ಸೋದರ, ಸಂತತಿಯಿಲ್ಲದಿದ್ದ ನಿನಗೆ ವಯಸ್ಸಾಗಿದೆ. ಮಕ್ಕಳ ಆಸೆಯನ್ನು ತೊರೆದಿದ್ದ ನಿನಗೆ ಈಗ ಪುತ್ರೋತ್ಸವವಾದದ್ದು ಒಂದು ಭಾಗ್ಯವೇ ಸರಿ (೨೩). ಈ ಸಂಸಾರಚಕ್ರ ದಲ್ಲಿ ಮತ್ತೆ ಹುಟ್ಟಿಬಂದಂತಿರುವ ನಿನ್ನನ್ನು ಇಂದು ಸುದೈವದಿಂದ ಕಂಡೆನು! ಏಕೆಂದರೆ, ಪ್ರಿಯಜನರ ದರ್ಶನವು ಈಗ ದುರ್ಲಭವಾಗಿದೆ (೨೪). ಬೇರೆಬೇರೆ ಕರ್ಮಫಲಗಳಿಗೆ ಒಳಗಾದ ಸ್ನೇಹಿತರು ಒಂದು ಕಡೆ ಪ್ರೀತಿಯಿಂದ ವಾಸಮಾಡು ವುದು ಶಕ್ಯವಿಲ್ಲ. ನೀರಿನ ವೇಗದಿಂದ ಕೊಚ್ಚಿಹೋಗುವ ತೃಣಕಾಷ್ಠಾದಿಗಳಂತೆ ನಮ್ಮ ಸ್ಥಿತಿಯಾಗಿದೆ (೨೫). ನೀನು ಮಿತ್ರರೊಡನೆ ವಾಸವಾಗಿರುವ ಪ್ರದೇಶ ದಲ್ಲಿ ಅರಣ್ಯವು ಪಶುಗಳಿಗೆ ಹಿತಕರವಾಗಿದೆಯೆ? ರೋಗರುಜಿನಗಳು ಇಲ್ಲವಷ್ಟೆ? ನೀರು ಹುಲ್ಲು ಬಳ್ಳಿ ಮುಂತಾದವು ಸಮೃದ್ಧವಾಗಿವೆಯೆ? (೨೬). ಮಿತ್ರ, ನನ್ನ ಮಗನು[1] ತನ್ನ ತಾಯಿಯೊಡನೆ ವ್ರಜಸ್ಥಾನದಲ್ಲಿ ಕ್ಷೇಮದಿಂದಿರುವನೆ? ನಿನ್ನನ್ನು ತಂದೆಯೆಂದು ತಿಳಿದುಕೊಂಡಿರುವನೆ? ನೀವು ಅವನನ್ನು ಲಾಲಿಸುತ್ತಿರುವಿರಾ? (೨೭). ಶಾಸ್ತ್ರವಿಹಿತವಾದ ಧರ್ಮಾರ್ಥಕಾಮಗಳು ತನಗೊಬ್ಬನಿಗೆ ಮಾತ್ರವೇ

---

1 ಬಲರಾಮ.

ನಂದ ಉವಾಚ—

**ಅಹೋ ತೇ ದೇವಕೀಪುತ್ರಾಃ ಕಂಸೇನ ಬಹವೋ ಹತಾಃ ।**
**ಏಕಾವಶಿಷ್ಟಾವರಜಾ ಕನ್ಯಾ ಸಾಪಿ ದಿವಂ ಗತಾ ॥ ೨೯**

**ನೂನಂ ಹ್ಯದೃಷ್ಟನಿಷ್ಠೋಽಯಮದೃಷ್ಟಪರಮೋ ಜನಃ ।**
**ಅದೃಷ್ಟಮಾತ್ಮನಸ್ತತ್ತ್ವಂ ಯೋ ವೇದ ನ ಸ ಮುಹ್ಯತಿ ॥ ೩೦**

ವಸುದೇವ ಉವಾಚ—

**ಕರೋ ವೈ ವಾರ್ಷಿಕೋ ದತ್ತೋ ರಾಜ್ಞೇ ದೃಷ್ಟಾ ವಯಂ ಚ ವಃ।**
**ನೇಹ ಸ್ಥೇಯಂ ಬಹುತಿಥಂ ಸಂತ್ಯುತ್ಪಾತಾಶ್ಚ ಗೋಕುಲೇ ॥ ೩೧**

ಶ್ರೀಶುಕ ಉವಾಚ—

**ಇತಿ ನಂದಾದಯೋ ಗೋಪಾಃ ಪ್ರೋಕ್ತಾಸ್ತೇ ಶೌರಿಣಾ ಯಯುಃ ।**
**ಅನೋಭಿರನಡುದ್ಯುಕ್ತೈಸ್ತಮನುಜ್ಞಾಪ್ಯ ಗೋಕುಲಮ್ ॥ ೩೨**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚಮಾಧ್ಯಾಯಃ

---

ಅಲ್ಲ. ಅವು ಬಂಧುಗಳಿಗೂ ಸಲ್ಲಬೇಕು. ಆದ್ದರಿಂದ ಬಂಧುಗಳಿಗೆ ಕಷ್ಟ ಒದಗಿದಾಗ ಆ ತ್ರಿವರ್ಗಗಳಿಂದ ನಮಗೆ ಸುಖವೇನೂ ಇಲ್ಲ" ಎಂದನು (೨೮). ಆಗ ನಂದನು "ಮಿತ್ರನೆ, ದೇವಕಿಯಲ್ಲಿ ಜನಿಸಿದ ನಿನ್ನ ಬಹುಮಂದಿ ಮಕ್ಕಳನ್ನು ಕಂಸನು ಕೊಂದುಬಿಟ್ಟನು. ಅಯ್ಯೋ! ಕಡೆಯಲ್ಲಿ ಜನಿಸಿದ ಹೆಣ್ಣುಮಗಳೂ ಸ್ವರ್ಗವನ್ನು ಸೇರಿದಳು! (೨೯). ನಿಜವಾಗಿಯೂ ಮನುಷ್ಯನಿಗೆ ಅದೃಷ್ಟದಲ್ಲಿಯೇ ಸಮಾಪ್ತಿ. ಅದೃಷ್ಟವೇ ಪರಮಗತಿ. (ಸುಖದುಃಖಗಳಿಗೆ) ಅದೃಷ್ಟವೇ ನಿಶ್ಚಿತಕಾರಣವೆಂದರಿತವನಿಗೆ ಮೋಹವಿಲ್ಲ" ಎಂದು ನುಡಿದನು (೩೦). ವಸುದೇವನು "ವಾರ್ಷಿಕ ಕರವನ್ನು ರಾಜನಿಗೆ ಕೊಟ್ಟದ್ದಾಯಿತು. ನಮ್ಮನ್ನೂ ಕಂಡಂತಾಯಿತು. ಇನ್ನು ಹೆಚ್ಚು ದಿನಗಳವರೆಗೆ ನೀವು ಇಲ್ಲಿರುವುದು ಯುಕ್ತವಲ್ಲ. ಗೋಕುಲದಲ್ಲಿ ಅನೇಕ ಉತ್ಪಾತಗಳು ಆಗುತ್ತಿವೆಯೆಂದು ತಿಳಿದುಬರುತ್ತಿದೆ" ಎಂದನು (೩೧). ಈ ರೀತಿಯಲ್ಲಿ ವಸುದೇವನು ನುಡಿಯಲಾಗಿ, ನಂದಾದಿಗೋಪರು ಗಾಡಿಗಳಿಗೆ ಎತ್ತುಗಳನ್ನು ಹೂಡಿ, ಆತನನ್ನು ಬೀಳ್ಕೊಂಡು ಗೋಕುಲಕ್ಕೆ ತೆರಳಿದರು (೩೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಐದನೆಯ ಅಧ್ಯಾಯ

## ಷಷ್ಠೋಧ್ಯಾಯಃ

ಶ್ರೀಶುಕ ಉವಾಚ—

ನಂದಃ ಪಥಿ ವಚಃ ಶೌರೇರ್ನ ಮೃಷೇತಿ ವಿಚಿಂತಯನ್ ।
ಹರಿಂ ಜಗಾಮ ಶರಣಮುತ್ಪಾತಾಗಮಶಂಕಿತಃ ॥ ೧

ಕಂಸೇನ ಪ್ರಹಿತಾ ಘೋರಾ ಪೂತನಾ ಬಾಲಘಾತಿನೀ ।
ಶಿಶೂಂಶ್ಚಚಾರ ನಿಘ್ನಂತೀ ಪುರಗ್ರಾಮವ್ರಜಾದಿಷು ॥ ೨

ನ ಯತ್ರ ಶ್ರವಣಾದೀನಿ ರಕ್ಷೋಘ್ನಾನಿ ಸ್ವಕರ್ಮಸು ।
ಕುರ್ವಂತಿ ಸಾತ್ವತಾಂ ಭರ್ತುರ್ಯಾತುಧಾನ್ಯಶ್ಚ ತತ್ರ ಹಿ ॥ ೩

ಸಾ ಖೇಚರ್ಯೇಕದೋಪೇತ್ಯ ಪೂತನಾ ನಂದಗೋಕುಲಮ್ ।
ಯೋಷಿತ್ವಾ ಮಾಯಯಾಽಽತ್ಮಾನಂ ಪ್ರಾವಿಶತ್ ಕಾಮಚಾರಿಣೀ ॥

## ಅಧ್ಯಾಯ ೬

### ಪೂತನಾವಧೆ

ಪರೀಕ್ಷಿತ, ನಂದನು ಗೋಕುಲಕ್ಕೆ ಹಿಂದಿರುಗುವಾಗ ದಾರಿಯಲ್ಲಿ ಉತ್ಪಾತ ದರ್ಶನದಿಂದ ಶಂಕಿತನಾಗಿ, ವಸುದೇವನ ಮಾತು ಸತ್ಯವೆಂದು ಆಲೋಚಿಸುತ್ತ ಶ್ರೀಹರಿಗೆ ಶರಣಾದನು (೧). ಎಳೆಯ ಮಕ್ಕಳನ್ನು ಕೊಲ್ಲುವುದಕ್ಕಾಗಿ ಕರಾಳಿಯಾದ ಪೂತನೆಯೆಂಬವಳನ್ನು ಕಂಸನು ಕಳಿಸಿದ್ದನು. ಅವಳು ಪಟ್ಟಣ, ಗ್ರಾಮ, ವ್ರಜಾದಿಗಳಲ್ಲಿ ಶಿಶುಗಳನ್ನು ಕೊಲ್ಲುತ್ತ ಅಲೆಯುತ್ತಿದ್ದಳು (೨). ಯದುಕುಲೇಶ್ವರನ ಶ್ರವಣಕೀರ್ತನಾದಿಗಳು ರಕ್ಷೋಹಾರಿಗಳು. ತಾವು ಕರ್ಮಗಳನ್ನು ನಡೆಸುವಾಗ ಎಲ್ಲಿ ಜನರು ಶ್ರವಣಾದಿಗಳನ್ನು ಮಾಡುವುದಿಲ್ಲವೋ ಅಲ್ಲಿ ಈ ಬಗೆಯ ರಾಕ್ಷಸಿಯರ ಸಂಚಾರವಿರುತ್ತದೆ (೩). ಖೇಚರಿಯೂ ಕಾಮಚಾರಿಣಿಯೂ ಆದ ಆ ಪೂತನೆಯು ಒಂದುಸಲ ಮಾಯೆಯಿಂದ ಸುಂದರ ತರುಣಿಯ ರೂಪವನ್ನು ತಾಳಿ ನಂದಗೋಕುಲವನ್ನು ಪ್ರವೇಶಿಸಿದಳು (೪). ಅವಳು ಮುಡಿಯಲ್ಲಿ ಮಲ್ಲಿಗೆಯ

ತಾಂ ಕೇಶಬಂಧವ್ಯತಿಷಕ್ತಮಲ್ಲಿಕಾಂ
ಬೃಹನ್ನಿತಂಬಸ್ತನಕೃಚ್ಛ್ರಮಧ್ಯಮಾಮ್ ।
ಸುವಾಸಸಂ ಕಂಪಿತಕರ್ಣಭೂಷಣ-
ತ್ವಿಷೋಲ್ಲಸತ್ಕುಂತಲಮಂಡಿತಾನನಾಮ್ ॥ ೫

ವಲ್ಗುಸ್ಮಿತಾಪಾಂಗವಿಸರ್ಗವೀಕ್ಷಿತೈ-
ರ್ಮನೋ ಹರಂತೀಂ ವನಿತಾಂ ವ್ರಜೌಕಸಾಮ್ ।
ಅಮಂಸತಾಂಭೋಜಕರೇಣ ರೂಪಿಣೀಂ
ಗೋಪ್ಯಃ ಶ್ರಿಯಂ ದ್ರಷ್ಟುಮಿವಾಗತಾಂ ಪತಿಮ್ ॥ ೬

ಬಾಲಗ್ರಹಸ್ತತ್ರ ವಿಚಿನ್ವತೀ ಶಿಶೂನ್
ಯದೃಚ್ಛಯಾ ನಂದಗೃಹೇಽಸದಂತಕಮ್ ।
ಬಾಲಂ ಪ್ರತಿಚ್ಛನ್ನನಿಜೋರುತೇಜಸಂ
ದದರ್ಶ ತಲ್ಪೇಽಗ್ನಿಮಿವಾಹಿತಂ ಭಸಿ ॥ ೭

ವಿಬುಧ್ಯ ತಾಂ ಬಾಲಕಮಾರಿಕಾಗ್ರಹಂ
ಚರಾಚರಾತ್ಮಾಽಽಸ ನಿಮೀಲಿತೇಕ್ಷಣಃ ।

---

ಮಾಲೆಯನ್ನು ಮುಡಿದಿದ್ದಳು. ಪುಷ್ಟನಿತಂಬದಿಂದಲೂ ಪೀನಸ್ತನಗಳಿಂದಲೂ ಕೃಶವಾದ ನಡುವಿನಿಂದಲೂ ಶೋಭಿಸುತ್ತಿದ್ದಳು. ಆ ತರುಣಿಯು ಉತ್ತಮವಾದ ಸೀರೆಯನ್ನುಟ್ಟಿದ್ದಳು. ಚಲಿಸುವ ಕರ್ಣಕುಂಡಲಗಳ ಕಾಂತಿಯು ಮುಖವನ್ನು ಅಲಂಕರಿಸಿದ ಮುಂಗುರುಳಮೇಲೆ ಪಸರಿಸಿತ್ತು (೫). ಆ ವನಿತೆಯು ಮನೋಹರ ವಾದ ಮುಗುಳ್ನಗೆಯಿಂದಲೂ ಕುಡಿನೋಟಗಳಿಂದಲೂ ಗೋಕುಲವಾಸಿಗಳ ಮನಸ್ಸನ್ನು ಸೆರೆಹಿಡಿದಳು. ಕೈಯಲ್ಲಿ ಕಮಲವನ್ನು ಹಿಡಿದುಕೊಂಡು ಹೋಗುತ್ತಿದ್ದ ಆ ರೂಪವತಿಯನ್ನು ಕಂಡು ಗೋಪಿಯರಂತೂ ಸಾಕ್ಷಾಲ್ಲಕ್ಷ್ಮೀದೇವಿಯೇ ತನ್ನ ಪತಿಯನ್ನು ನೋಡಲು ಬಂದಿರಬಹುದೇ ಎಂದು ತಿಳಿದುಕೊಂಡರು! (೬). ಬಾಲಘಾತಿನಿಯಾದ ಪೂತನೆಯು ಶಿಶುಗಳನ್ನು ಹುಡುಕುತ್ತ ಸ್ವೇಚ್ಛೆಯಾಗಿ ಸಂಚರಿಸುತ್ತ ನಂದನ ಅರಮನೆಯನ್ನು ಹೊಕ್ಕಳು. ಅಲ್ಲಿ ಬೂದಿಮುಚ್ಚಿದ ಕೆಂಡದಂತೆ ತನ್ನ ದಿವ್ಯತೇಜಸ್ಸನ್ನು ಮರೆಮಾಚಿಕೊಂಡು ಹಾಸಿಗೆಯಲ್ಲಿ ಮಲಗಿದ್ದ, ದುರ್ಜನರಿಗೆ ಯಮನಾದ ಬಾಲಕನನ್ನು ಕಂಡಳು! (೭). ಚರಾಚರವಸ್ತುಗಳಿಗೆ

ಅನಂತಮಾರೋಪಯದಂಕಮಂತಕಂ
ಯಥೋರಗಂ ಸುಪ್ತಮಬುದ್ಧಿರಜ್ಜುಧೀಃ ॥ ೮

ತಾಂ ತೀಕ್ಷ್ಣಚಿತ್ತಾಮತಿವಾಮಚೇಷ್ಟಿತಾಂ
ವೀಕ್ಷ್ಯಾಂತರಾ ಕೋಶಪರಿಚ್ಛದಾಸಿವತ್ ।
ವರಸ್ತ್ರಿಯಂ ತತ್ಪ್ರಭಯಾ ಚ ಧರ್ಷಿತೇ
ನಿರೀಕ್ಷಮಾಣೇ ಜನನೀ ಹ್ಯತಿಷ್ಠತಾಮ್ ॥ ೯

ತಸ್ಮಿನ್ ಸ್ತನಂ ದುರ್ಜರವೀರ್ಯಮುಲ್ಬಣಂ
ಘೋರಾಂಕಮಾದಾಯ ಶಿಶೋರ್ದದಾವಥ ।
ಗಾಢಂ ಕರಾಭ್ಯಾಂ ಭಗವಾನ್ ಪ್ರಪೀಡ್ಯ ತತ್
ಪ್ರಾಣೈಃ ಸಮಂ ರೋಷಸಮನ್ವಿತೋಽಪಿಬತ್ ॥ ೧೦

ಸಾ ಮುಂಚ ಮುಂಚಾಲಮಿತಿ ಪ್ರಭಾಷಿಣೀ
ನಿಷ್ಪೀಡ್ಯಮಾನಾಖಿಲಜೀವಮರ್ಮಣಿ ।
ವಿವೃತ್ಯ ನೇತ್ರೇ ಚರಣೌ ಭುಜೌ ಮುಹುಃ
ಪ್ರಸ್ವಿನ್ನಗಾತ್ರಾ ಕ್ಷಿಪತೀ ರುರೋದ ಹ ॥ ೧೧

---

ಆತ್ಮನಾದ ಆ ಬಾಲಕನು, ಬಾಲಕರಿಗೆ ಮಾರಿಯಾದವಳು ಬಂದಳೆಂಬುದನ್ನರಿತು ಕಣ್ಣುಮುಚ್ಚಿಕೊಂಡೇ ಇದ್ದನು! ನಿದ್ರಿಸುವ ಸರ್ಪವನ್ನು ಹಗ್ಗವೆಂದು ತಿಳಿದುಕೊಳ್ಳುವ ಬುದ್ಧಿಹೀನಳಂತೆ, ಪೂತನೆಯು ತನಗೆ ಅಂತಕನಾದ ಅನಂತನನ್ನು ತನ್ನ ಮಡಿಲಿಗೆ ಎತ್ತಿಕೊಂಡಳು (೮). ಹೊರಗೆ ವಾತ್ಸಲ್ಯದಿಂದ (ತಾಯಿಯಂತೆ) ನಟಿಸುತ್ತಿದ್ದವಳಾದರೂ ಕ್ರೂರಚಿತ್ತಳಾದ ಪೂತನೆಯು ಒರೆಯಲ್ಲಿರುವ ಖಡ್ಗದಂತಿದ್ದಳು. ತಾಯಂದಿರಾದ ಯಶೋದೆ ರೋಹಿಣಿಯರು ಅವಳನ್ನು ಉತ್ತಮ ಸ್ತ್ರೀಯೆಂದು ಬಗೆದು ಆಕೆಯ ಸೌಂದರ್ಯ ಕಾಂತಿಗಳಿಗೆ ಮುಗ್ಧರಾಗಿ (ಬೆಪ್ಪರಂತೆ) ಸುಮ್ಮನೆ ನೋಡುತ್ತಿದ್ದರು (೯). ಆಮೇಲೆ ಘೋರಾತ್ಮಳಾದ ಪೂತನೆಯು ಮಗುವನ್ನು ತೊಡೆಯಮೇಲೆ ಮಲಗಿಸಿಕೊಂಡು ಜೀರ್ಣಿಸಿಕೊಳ್ಳಲು ಅಶಕ್ಯವಾದ ಉಲ್ಬಣ ವಿಷವುಳ್ಳ ಸ್ತನ್ಯವನ್ನು ಮಗುವಿಗೆ ಕೊಟ್ಟಳು ರೋಷಾನ್ವಿತನಾದ ಭಗವಂತನು ಕೈಗಳಿಂದ ಸ್ತನಗಳನ್ನು ದೃಢವಾಗಿ ಹಿಡಿದುಕೊಂಡು ಸ್ತನ್ಯದೊಡನೆ ಆವಳ ಪ್ರಾಣವನ್ನೂ ಹೀರಿಬಿಟ್ಟನು! (೧೦). ಜೀವದ ನಿಖಿಲ ಮರ್ಮಸ್ಥಾನ

ತಸ್ಯಾಃ ಸ್ವನೇನಾತಿಗಭೀರರಂಹಸಾ
ಸಾದ್ರಿರ್ಮಹೀ ದ್ಯೌಶ್ಚ ಚಚಾಲ ಸಗ್ರಹಾ ।
ರಸಾ ದಿಶಶ್ಚ ಪ್ರತಿನೇದಿರೇ ಜನಾಃ
ಪೇತುಃ ಕ್ಷಿತೌ ವಜ್ರನಿಪಾತಶಂಕಯಾ ॥ ೧೨

ನಿಶಾಚರೀತ್ಥಂ ವ್ಯಥಿತಸ್ತನಾ ವ್ಯಸು-
ರ್ವ್ಯಾದಾಯ ಕೇಶಾಂಶ್ಚರಣೌ ಭುಜಾವಪಿ ।
ಪ್ರಸಾರ್ಯ ಗೋಷ್ಠೇ ನಿಜರೂಪಮಾಸ್ಥಿತಾ
ವಜ್ರಾಹತೋ ವೃತ್ರ ಇವಾಪತನ್ನೃಪ ॥ ೧೩

ಪತಮಾನೋಽಪಿ ತದ್ದೇಹಸ್ತ್ರಿಗವ್ಯೂತ್ಯಂತರದ್ರುಮಾನ್ ।
ಚೂರ್ಣಯಾಮಾಸ ರಾಜೇಂದ್ರ ಮಹದಾಸೀತ್ ತದದ್ಭುತಮ್ ॥

ಈಷಾಮಾತ್ರೋಗ್ರದಂಷ್ಟ್ರಾಸ್ಯಂ ಗಿರಿಕಂದರನಾಸಿಕಮ್ ।
ಗಂಡಶೈಲಸ್ತನಂ ರೌದ್ರಂ ಪ್ರಕೀರ್ಣಾರುಣಮೂರ್ಧಜಮ್ ॥ ೧೫

---

ಗಳೂ ಕಿತ್ತೆಳೆದು ಬರುತ್ತಿರಲು ಪೂತನೆಗೆ ತಡೆಯಲಾರದಷ್ಟು ಯಾತನೆಯಾಯಿತು. 'ಬಿಡು! ಬಿಡು! ಸಾಕು!' ಎಂದು ಅವಳು ಒರಲಿದಳು. ಮೈ ಬೆವರಿತು. ಕಣ್ಣುಗಳನ್ನು ಹಿಗ್ಗಿಸಿಕೊಂಡು ಕೈಕಾಲುಗಳನ್ನು ಕೊಡವಿದಳು. ಅತ್ತಳು (೧೧). ಗಟ್ಟಿಯಾಗಿ ಪೂತನೆಯು ಚೀರಿದಳು. ಅವಳ ಕೂಗಾಟದ ರಭಸಕ್ಕೆ ಪರ್ವತ ಸಹಿತವಾದ ಭೂಮಿಯೂ ಗ್ರಹಸಹಿತವಾಗಿ ಗಗನವೂ ಕಂಪಿಸಿದವು! ಪೃಥ್ವಿಯೂ ದಿಕ್ಕುಗಳೂ ಪ್ರತಿಧ್ವನಿಸಿದವು. ಸಿಡಿಲು ಹೊಡೆಯಿತೋ ಎಂದು ಕಂಗೆಟ್ಟು ಜನರು ಬಿದ್ದರು! (೧೨). ಪರೀಕ್ಷಿತರಾಜ, ಈ ರೀತಿಯಲ್ಲಿ ಶ್ರೀ ಕೃಷ್ಣನು ಅವಳ ಸ್ತನಗಳನ್ನು ಪೀಡಿಸಲು, ಆ ನಿಶಾಚರಿಯು ಸತ್ತುಬಿದ್ದಳು. ಸಾಯುವಾಗ ಆ ರಾಕ್ಷಸಿಯು ತನ್ನ ನಿಜರೂಪವನ್ನು ಧರಿಸಿ ಬಾಯ್ದೆರೆದು ಕೂದಲುಗಳನ್ನು ಕೆದರಿ ಕೊಂಡು ಕೈಕಾಲುಗಳನ್ನು ನೀಡಿ, ವಜ್ರಾಯುಧದಿಂದ ಹತನಾದ ವೃತ್ರಾಸುರನಂತೆ ಉರುಳಿದಳು (೧೩). ರಾಜೇಂದ್ರ, ಒಂದು ಅತ್ಯದ್ಭುತವೇ ನಡೆದುಹೋಯಿತು. ರಾಕ್ಷಸಿಯ ದೇಹವು ಕೆಳಗೆ ಬೀಳುವಾಗ ಮೂರುಗಾವುದ ದೂರದವರೆಗಿದ್ದ ಮರ ಗಳೆಲ್ಲವನ್ನೂ ಕೆಡವಿ ಪುಡಿಮಾಡಿತು! (೧೪). ಅವಳ ದೇಹವು ಭೀಕರವಾಗಿತ್ತು.

ಅಂಧಕೂಪಗಭೀರಾಕ್ಷಂ ಪುಲಿನಾರೋಹಭೀಷಣಮ್ ।
ಬದ್ಧಸೇತುಭುಜೋರ್ವಂಘ್ರಿ ಶೂನ್ಯತೋಯಹ್ರದೋದರಮ್ ॥

ಸಂತತ್ರಸುಃ ಸ್ಮ ತದ್ ವೀಕ್ಷ್ಯ ಗೋಪಾ ಗೋಪ್ಯಃ ಕಲೇವರಮ್ ।
ಪೂರ್ವಂ ತು ತನ್ನಿಃಸ್ವನಿತಭಿನ್ನಹೃತ್ಕರ್ಣಮಸ್ತಕಾಃ ॥ ೧೭

ಬಾಲಂ ಚ ತಸ್ಯಾ ಉರಸಿ ಕ್ರೀಡಂತಮಕುತೋಭಯಮ್ ।
ಗೋಪ್ಯಸ್ತೂರ್ಣಂ ಸಮಭ್ಯೇತ್ಯ ಜಗೃಹುರ್ಜಾತಸಂಭ್ರಮಾಃ ॥ ೧೮

ಯಶೋದಾರೋಹಿಣೀಭ್ಯಾಂ ತಾಃ ಸಮಂ ಬಾಲಸ್ಯ ಸರ್ವತಃ ।
ರಕ್ಷಾಂ ವಿದಧಿರೇ ಸಮ್ಯಗ್ಗೋಪುಚ್ಛಭ್ರಮಣಾದಿಭಿಃ ॥ ೧೯

ಗೋಮೂತ್ರೇಣ ಸ್ನಾಪಯಿತ್ವಾ ಪುನರ್ಗೋರಜಸಾರ್ಭಕಮ್ ।
ರಕ್ಷಾಂ ಚಕ್ರುಶ್ಚ ಶಕೃತಾ ದ್ವಾದಶಾಂಗೇಷು ನಾಮಭಿಃ ॥ ೨೦

---

ಬಾಯಲ್ಲಿದ್ದ ಉಗ್ರವಾದ ಕೋರೆಹಲ್ಲುಗಳು ನೇಗಿಲಿನಂತಿದ್ದವು. ಮೂಗು ಗಿರಿಯ ಗುಹೆಯಂತಿತ್ತು. ಸ್ತನಗಳು ದೊಡ್ಡ ಬಂಡೆಗಳಂತಿದ್ದವು. ಕೆಂಗೂದಲು ಹರಡಿತ್ತು (೧೫). ಅವಳ ಕಣ್ಣುಗಳು ಹಾಳುಭಾವಿಗಳಂತಿದ್ದವು. ಜಘನಪ್ರದೇಶವು ಮರಳುದಿಣ್ಣೆಯಂತೆ ಭೀಷಣವಾಗಿತ್ತು. ತೋಳು ತೊಡೆ ಕಾಲುಗಳು ಕಟ್ಟಿದ ಸೇತುವೆಗಳಂತಿದ್ದವು. ಹೊಟ್ಟೆಯು ನೀರಿಲ್ಲದ ದೊಡ್ಡ ಮಡುವಿನಂತಿತ್ತು (೧೬). ಆ ರಾಕ್ಷಸಿಯ ಕಳೇವರವನ್ನು ಕಂಡು ಗೋಪಗೋಪಿಯರು ಹೆದರಿ ತತ್ತರಿಸಿ ಹೋದರು! ಮೊದಲೇ ಅವಳ ಗರ್ಜನೆಯನ್ನು ಕೇಳಿ ಅವರ ಎದೆಕಿವಿ ತಲೆಗಳು ಸಿಡಿದುಹೋಗಿದ್ದವು! (೧೭). ಈ ಬಾಲಕನು ಮಾತ್ರ ಅವಳ ಎದೆಯಮೇಲೆ ನಿರ್ಭಯದಿಂದ ಆಟವಾಡುತ್ತಿದ್ದನು! ಗೋಪಿಯರು ಕಂಗೆಟ್ಟು ಓಡಿಬಂದು ಮಗುವನ್ನು ಎತ್ತಿಕೊಂಡರು (೧೮). ಯಶೋದೆ ರೋಹಿಣಿ ಗೋಪಿಯರು ಎಲ್ಲರೂ ಸೇರಿ ಶಿಶುವಿಗೆ ಗೋಪುಚ್ಛವನ್ನು ಬೀಸುವುದು ಮುಂತಾದ ವಿವಿಧರಕ್ಷೆಗಳನ್ನು ಕಲ್ಪಿಸಿದರು (೧೯). ಗೋಮೂತ್ರದಿಂದ ಮಗುವಿನ ಮೈತೊಳೆದು, ಗೋಧೂಳಿಯನ್ನು ಸವರಿ, 'ಕೇಶವಾಯ ನಮಃ' ಇತ್ಯಾದಿ ದ್ವಾದಶನಾಮಗಳನ್ನು ಪಠಿಸುತ್ತ ಗೋಮಯವನ್ನು ಅಂಗಗಳಿಗೆ ಹಚ್ಚಿದರು (೨೦).

**ಗೋಪ್ಯಃ ಸಂಸ್ಪೃಷ್ಟಸಲಿಲಾ ಅಂಗೇಷು ಕರಯೋಃ ಪೃಥಕ್ ।**
**ನ್ಯಸ್ಯಾತ್ಮನ್ಯಥ ಬಾಲಸ್ಯ ಬೀಜನ್ಯಾಸಮಕುರ್ವತ ॥ ೨೧**

**ಅವ್ಯಾದಜೋಽಂಘ್ರಿಮಣಿಮಾಂಸ್ತವ ಜಾನ್ವಥೋರೂ**
**ಯಜ್ಞೋಽಚ್ಯುತಃ ಕಟಿತಟಂ ಜಠರಂ ಹಯಾಸ್ಯಃ ।**
**ಹೃತ್ ಕೇಶವಸ್ತ್ವದುರ ಈಶ ಇನಸ್ತು ಕಂಠಂ**
**ವಿಷ್ಣುರ್ಭುಜಂ ಮುಖಮುರುಕ್ರಮ ಈಶ್ವರಃ ಕಮ್ ॥**

**ಚಕ್ರ್ಯಗ್ರತಃ ಸಹಗದೋ ಹರಿರಸ್ತು ಪಶ್ಚಾತ್**
**ತ್ವತ್ಪಾರ್ಶ್ವಯೋರ್ಧನುರಸೀ ಮಧುಹಾಽಜನಶ್ಚ ।**
**ಕೋಣೇಷು ಶಂಖ ಉರುಗಾಯ ಉಪರ್ಯುಪೇಂದ್ರ-**
**ಸ್ತಾರ್ಕ್ಷ್ಯಃ ಕ್ಷಿತೌ ಹಲಧರಃ ಪುರುಷಃ ಸಮಂತಾತ್ ॥**

---

ಗೋಪಿಯರು ಆಚಮನಮಾಡಿ ಅಜಾದ್ಯೇಕಾದಶ[1] ಮಂತ್ರಬೀಜಗಳನ್ನು ತಮ್ಮ ಕೈಗಳಲ್ಲಿಯೂ ಅಂಗಗಳಲ್ಲಿಯೂ ನ್ಯಾಸಮಾಡಿಕೊಂಡು, ಅನಂತರ ಬಾಲಕನ ಅಂಗಗಳಲ್ಲಿಯೂ ನ್ಯಾಸಮಾಡಿದರು (೨೧). "ಅಜನು ನಿನ್ನ ಪಾದಗಳನ್ನೂ ಅಣಿಮನು ಮೊಳಕಾಲುಗಳನ್ನೂ ಯಜ್ಞನು ತೊಡೆಗಳನ್ನೂ ಅಚ್ಯುತನು ಸೊಂಟವನ್ನೂ ಹಯಾಸ್ಯನು ಕಿಬ್ಬೊಟ್ಟೆಯನ್ನೂ ಕೇಶವನು ಎದೆಯನ್ನೂ ಈಶನು ಉದರವನ್ನೂ ಇನನು ಕಂಠವನ್ನೂ ವಿಷ್ಣುವು ಭುಜಗಳನ್ನೂ ಉರುಕ್ರಮನು ಮುಖವನ್ನೂ ಈಶ್ವರನು ಶಿರಸ್ಸನ್ನೂ ರಕ್ಷಿಸಲಿ (೨೨). (ಆಮೇಲೆ ದಿಕ್ಕುಗಳಲ್ಲಿಯೂ

---

[1] ಅಜ, ಅಣಿಮಾನ್, ಯಜ್ಞ, ಅಚ್ಯುತ, ಹಯಾಸ್ಯ, ಕೇಶವ, ಈಶ, ಇನ, ವಿಷ್ಣು, ಉರುಕ್ರಮ, ಈಶ್ವರ–ಇವು ಏಕಾದಶ ಮಂತ್ರ ಬೀಜಗಳು. ರಕ್ಷೆಯನ್ನು ಹಾಕತಕ್ಕವನು ಪ್ರಥಮದಲ್ಲಿ ತನ್ನ ಕರಶುದ್ಧಿಗಾಗಿ ಮೊದಲಿನ ಮೂರು ನಾಮಗಳನ್ನೂ ಬಲಗೈ ಮತ್ತು ಎಡಗೈ ಸಂಧಿಗಳಲ್ಲಿ ಕ್ರಮವಾಗಿ ಮುಂದಿನ ನಾಲ್ಕು ನಾಲ್ಕು ನಾಮಗಳನ್ನೂ ಬಳಸುತ್ತಾನೆ. ಅನಂತರ ತನ್ನ ಏಕಾದಶಾಂಗಗಳಿಗೆ ಅಜ ಮುಂತಾದ ಒಂದೊಂದು ನಾಮವನ್ನು ಬಳಸುತ್ತಾನೆ. ಆಮೇಲೆ ಯಾರಿಗೆ ರಕ್ಷೆಯನ್ನು ಹಾಕಬೇಕೋ ಆತನ ಏಕಾದಶಾಂಗಗಳಿಗೂ ಅಜಾದಿನಾಮಗಳನ್ನು ಬಳಸುತ್ತಾನೆ–ಎಂಬುದು ಸಂಪ್ರದಾಯ. ಪಾದ, ಮೊಳಕಾಲು, ತೊಡೆ, ಸೊಂಟ, ಕಿಬ್ಬೊಟ್ಟೆ, ಎದೆ, ಉದರ, ಕಂಠ, ಭುಜ, ಮುಖ, ಶಿರಸ್ಸು–ಇವು ಕ್ರಮವಾಗಿ ಹನ್ನೊಂದು ಅಂಗಗಳು.

**ಇಂದ್ರಿಯಾಣಿ ಹೃಷೀಕೇಶಃ ಪ್ರಾಣಾನ್ ನಾರಾಯಣೋಽವತು ।**
**ಶ್ವೇತದ್ವೀಪಪತಿಶ್ಚಿತ್ತಂ ಮನೋ ಯೋಗೇಶ್ವರೋಽವತು ॥ ೨೪**

**ಪೃಶ್ನಿಗರ್ಭಸ್ತು ತೇ ಬುದ್ಧಿಮಾತ್ಮಾನಂ ಭಗವಾನ್ ಪರಃ ।**
**ಕ್ರೀಡಂತಂ ಪಾತು ಗೋವಿಂದಃ ಶಯಾನಂ ಪಾತು ಮಾಧವಃ ॥ ೨೫**

**ವ್ರಜಂತಮವ್ಯಾದ್ ವೈಕುಂಠ ಆಸೀನಂ ತ್ವಾಂ ಶ್ರಿಯಃ ಪತಿಃ ।**
**ಭುಂಜಾನಂ ಯಜ್ಞಭುಕ್ ಪಾತು ಸರ್ವಗ್ರಹಭಯಂಕರಃ ॥ ೨೬**

**ಡಾಕಿನ್ಯೋ ಯಾತುಧಾನ್ಯಶ್ಚ ಕೂಷ್ಮಾಂಡಾ ಯೇಽರ್ಭಕಗ್ರಹಾಃ ।**
**ಭೂತಪ್ರೇತಪಿಶಾಚಾಶ್ಚ ಯಕ್ಷರಕ್ಷೋವಿನಾಯಕಾಃ ॥ ೨೭**

**ಕೋಟರಾ ರೇವತೀ ಜ್ಯೇಷ್ಠಾ ಪೂತನಾ ಮಾತೃಕಾದಯಃ ।**
**ಉನ್ಮಾದಾ ಯೇ ಹ್ಯಪಸ್ಮಾರಾ ದೇಹಪ್ರಾಣೇಂದ್ರಿಯದ್ರುಹಃ ॥ ೨೮**

---

ರಕ್ಷೆಯನ್ನಿಟ್ಟರು) : ಎದುರಿಗೆ ಚಕ್ರಧಾರಿಯಾದ ಹರಿಯು ನಿಂತು ನಿನ್ನನ್ನು ರಕ್ಷಿಸಲಿ. ಹಿಂದುಗಡೆ ಗದಾಧಾರಿಯಾದ ಹರಿಯು ಇರಲಿ. ಒಂದು ಪಾರ್ಶ್ವದಲ್ಲಿ ಧನುರ್ಧರನಾದ ಮಧುಸೂದನನೂ ಇನ್ನೊಂದು ಪಾರ್ಶ್ವದಲ್ಲಿ ಖಡ್ಗಧಾರಿಯಾದ ಅಜನನೂ ನಾಲ್ಕುಮೂಲೆಗಳಲ್ಲಿಯೂ ಪಾಂಚಜನ್ಯವನ್ನು ಹಿಡಿದ ಉರುಗಾಯನೂ ನಿಂತಿರಲಿ. ಮೇಲ್ಗಡೆ ಉಪೇಂದ್ರನೂ ಕೆಳಗಡೆ ತಾರ್ಕ್ಷ್ಯನೂ ಸುತ್ತಲೂ ಹಲಧರನಾದ ಪರಮಪುರುಷನೂ ನಿಂತು ನಿನ್ನನ್ನು ರಕ್ಷಿಸಲಿ (೨೩). (ಹೀಗೆ ಬಹಿರಂಗ ರಕ್ಷೆಯನ್ನು ಕಲ್ಪಿಸಿ ಅಂತರಂಗ ರಕ್ಷೆಯನ್ನು ಮಾಡಿದರು): ಹೃಷಿಕೇಶನು ನಿನ್ನ ಇಂದ್ರಿಯಗಳನ್ನೂ ನಾರಾಯಣನು ಪ್ರಾಣಗಳನ್ನೂ ಶ್ವೇತದ್ವೀಪಪತಿಯು ಚಿತ್ತವನ್ನೂ ಯೋಗೇಶ್ವರನು ಮನಸ್ಸನ್ನೂ ಪೃಶ್ನಿಗರ್ಭನು ಬುದ್ಧಿಯನ್ನೂ ಭಗವಾನ್ ಪರಮಾತ್ಮನು ಅಹಂಕಾರವನ್ನೂ ರಕ್ಷಿಸಲಿ. ನೀನು ಆಡುವಾಗ ಗೋವಿಂದನೂ ಮಲಗಿದಾಗ ಮಾಧವನೂ ಪಾಲಿಸಲಿ (೨೪–೨೫). ನಡೆಯುವಾಗ ವೈಕುಂಠನೂ ಕುಳಿತಾಗ ಶ್ರೀಪತಿಯೂ ನಿನ್ನನ್ನು ಕಾಪಾಡಲಿ. ಉಣ್ಣುವಾಗ ಸರ್ವಗ್ರಹಭಯಂಕರನಾದ ಯಜ್ಞಭೋಕ್ತನು ಸಂರಕ್ಷಿಸಲಿ (೨೬). ಬಾಲಗ್ರಹಗಳಾದ ಡಾಕಿನಿ, ಯಾತುಧಾನಿ, ಕೂಷ್ಮಾಂಡಗಳೂ ಭೂತಪ್ರೇತಪಿಶಾಚಗಳೂ ಯಕ್ಷರಕ್ಷೋವಿನಾಯಕರೂ ನಾಶವಾಗಲಿ! (೨೭). ಕೋಟರಾ, ರೇವತೀ, ಜ್ಯೇಷ್ಠಾ, ಪೂತನಾ, ಮಾತೃಕಾದಿಗಳೂ

**ಸ್ವಪ್ನದೃಷ್ಟಾ ಮಹೋತ್ಪಾತಾ ವೃದ್ಧಬಾಲಗ್ರಹಾಶ್ಚ ಯೇ ।**
**ಸರ್ವೇ ನಶ್ಯಂತು ತೇ ವಿಷ್ಣೋರ್ನಾಮಗ್ರಹಣಭೀರವಃ ॥ ೨೯**

ಶ್ರೀಶುಕ ಉವಾಚ—

**ಇತಿ ಪ್ರಣಯಬದ್ಧಾಭಿರ್ಗೋಪೀಭಿಃ ಕೃತರಕ್ಷಣಮ್ ।**
**ಪಾಯಯಿತ್ವಾ ಸ್ತನಂ ಮಾತಾ ಸಂನ್ಯವೇಶಯದಾತ್ಮಜಮ್ ॥ ೩೦**

**ತಾವನ್ನಂದಾದಯೋ ಗೋಪಾ ಮಥುರಾಯಾ ವ್ರಜಂ ಗತಾಃ ।**
**ವಿಲೋಕ್ಯ ಪೂತನಾದೇಹಂ ಬಭೂವುರತಿವಿಸ್ಮಿತಾಃ ॥ ೩೧**

**ನೂನಂ ಬತರ್ಷಿಃ ಸಂಜಾತೋ ಯೋಗೇಶೋ ವಾ ಸಮಾಸ ಸಃ ।**
**ಸ ಏವ ದೃಷ್ಟೋ ಹ್ಯುತ್ಪಾತೋ ಯದಾಹಾನಕದುಂದುಭಿಃ ॥ ೩೨**

**ಕಲೇವರಂ ಪರಶುಭಿಶ್ಛಿತ್ವಾ ತತ್ತೇ ವ್ರಜೌಕಸಃ ।**
**ದೂರೇ ಕ್ಷಿಪ್ತ್ವಾವಯವಶೋ ನ್ಯದಹನ್ ಕಾಷ್ಠಧಿಷ್ಠಿತಮ್ ॥ ೩೩**

---

ದೇಹಪ್ರಾಣೇಂದ್ರಿಯಗಳಿಗೆ ಕೇಡನ್ನುಂಟುಮಾಡುವ ಉನ್ಮಾದಗಳೂ ಅಪಸ್ಮಾರಗಳೂ ನಾಶವಾಗಲಿ ! (೨೮). ಸ್ವಪ್ನದಲ್ಲಿ ಕಾಣಿಸಿಕೊಳ್ಳುವ ಮಹೋತ್ಪಾತಗಳೂ ವೃದ್ಧಬಾಲಗ್ರಹಗಳೂ ವಿಷ್ಣುವಿನ ನಾಮೋಚ್ಚಾರಣೆಯಿಂದ ಭೀತರಾಗಿ ನಾಶವಾಗಲಿ ! " ಎಂದು ರಕ್ಷೆಯನ್ನು ಮಾಡಿದರು (೨೯). ಪ್ರೇಮಬದ್ಧರಾದ ಗೋಪಿಯರು ಈ ಪರಿಯಲ್ಲಿ ರಕ್ಷಾಬಂಧವನ್ನೆಸಗಲು, ತಾಯಿಯಾದ ಯಶೋದೆಯು ಮಗನಿಗೆ ಸ್ತನ್ಯವನ್ನು ಕುಡಿಸಿ ಮಲಗಿಸಿದಳು (೩೦). ಅಷ್ಟರಲ್ಲಿ ನಂದಾದಿ ಗೋಪರು ಮಥುರೆಯಿಂದ ವ್ರಜಸ್ಥಳಕ್ಕೆ ಬಂದರು. ಅವರು ಪೂತನೆಯ ದೇಹವನ್ನು ನೋಡಿ ಆಶ್ಚರ್ಯಚಕಿತರಾದರು (೩೧). ನಂದನು " ಅಬ್ಬಾ ! ವಸುದೇವನು ಋಷಿಯೋ ಯೋಗೇಶ್ವರನೋ ಆಗಿರುವುದು ನಿಶ್ಚಯ ! ಅವನು ಹೇಳಿದ ಉತ್ಪಾತವೇ ಕಂಡುಬಂದಿತು !" ಎಂದುಕೊಂಡನು (೩೨). ಅನಂತರ ಗೋಪಾಲರು ಕೊಡಲಿಗಳಿಂದ ಪೂತನೆಯ ಕಳೇವರವನ್ನು ಕಡಿದು ಕಡಿದು ಒಂದೊಂದು

**ದಹ್ಯಮಾನಸ್ಯ ದೇಹಸ್ಯ ಧೂಮಶ್ಚಾಗುರುಸೌರಭಃ ।**
**ಉತ್ಥಿತಃ ಕೃಷ್ಣನಿರ್ಭುಕ್ತಸಪದ್ಯಾಹತಪಾಪ್ಮನಃ ॥ ೩೪**

**ಪೂತನಾ ಲೋಕಬಾಲಘ್ನೀ ರಾಕ್ಷಸೀ ರುಧಿರಾಶನಾ ।**
**ಜಿಘಾಂಸಯಾಪಿ ಹರಯೇ ಸ್ತನಂ ದತ್ತ್ವಾಽಽಪ ಸದ್ಗತಿಮ್ ॥ ೩೫**

**ಕಿಂ ಪುನಃ ಶ್ರದ್ಧಯಾ ಭಕ್ತ್ಯಾ ಕೃಷ್ಣಾಯ ಪರಮಾತ್ಮನೇ ।**
**ಯಚ್ಛನ್ ಪ್ರಿಯತಮಂ ಕಿಂ ನು ರಕ್ತಾಸ್ತನ್ಮಾತರೋ ಯಥಾ ॥ ೩೬**

**ಪದ್ಭ್ಯಾಂ ಭಕ್ತಹೃದಿಸ್ಥಾಭ್ಯಾಂ ವಂದ್ಯಾಭ್ಯಾಂ ಲೋಕವಂದಿತೈಃ ।**
**ಅಂಗಂ ಯಸ್ಯಾಃ ಸಮಾಕ್ರಮ್ಯ ಭಗವಾನಪಿಬತ್ ಸ್ತನಮ್ ॥ ೩೭**

**ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀಗತಿಮ್ ।**
**ಕೃಷ್ಣಭುಕ್ತಸ್ತನಕ್ಷೀರಾಃ ಕಿಮು ಗಾವೋ ನು ಮಾತರಃ ॥ ೩೮**

---

ಅವಯವವನ್ನಾಗಿ ದೂರಕ್ಕೆ ಒಯ್ದು ಕಟ್ಟಿಗೆಗಳಲ್ಲಿಟ್ಟು ಸುಟ್ಟರು (೩೩). ಪರೀಕ್ಷಿತ, ಪೂತನೆಯ ದೇಹವು ಸುಡುತ್ತಿರುವಾಗ ಧೂಪದಂತೆ ಸುಗಂಧಿಯಾದ ಹೊಗೆಯು ಮೇಲೆದ್ದಿತು! ಶ್ರೀಕೃಷ್ಣನು ಸ್ತನ್ಯಪಾನಮಾಡಿದ್ದರಿಂದ ಒಡನೆಯೇ ಅವಳ ಸಕಲ ಪಾಪಗಳೂ ತೊಡೆದು ಹೋಗಿದ್ದವು (೩೪). ಪೂತನೆಯಾದರೋ ಲೋಕದಲ್ಲಿರುವ ಶಿಶುಗಳನ್ನು ಕೊಲ್ಲತಕ್ಕವಳೂ ರಕ್ತವನ್ನು ಕುಡಿಯತಕ್ಕವಳೂ ಆದ ರಾಕ್ಷಸಿ. ಅವಳು ಕೊಲ್ಲುವ ಇಚ್ಛೆಯಿಂದಲೇ ಸ್ತನ್ಯವನ್ನು ಕೊಟ್ಟಿದ್ದರೂ, ಶ್ರೀಹರಿಗೆ ಸ್ತನ್ಯವನ್ನಿತ್ತು ದರಿಂದ ಸದ್ಗತಿಯನ್ನು ಪಡೆದಳು (೩೫). ಹೀಗಿರುವಾಗ ಶ್ರೀಕೃಷ್ಣಪರಮಾತ್ಮನಿಗೆ ಶ್ರದ್ಧಾಭಕ್ತಿಗಳಿಂದ ತನ್ನ ಪ್ರಿಯತಮವಾದ ವಸ್ತುವನ್ನರ್ಪಿಸತಕ್ಕವನ ವಿಷಯ ವನ್ನೇನು ಹೇಳುವುದು! ಅನುರಾಗದಿಂದ (ಹಾಲನ್ನೆರೆದ) ಅವನ ತಾಯಂದಿರಿಗೆ ಎಂತಹ ಸದ್ಗತಿಯು ದೊರಕಿರಬಹುದು! (೩೬). ಯಾವ ಪಾದಗಳು ಭಕ್ತರ ಹೃದಯ ದಲ್ಲಿ ನೆಲೆಸಿವೆಯೋ, ಯಾವುವನ್ನು ಲೋಕವಂದಿತರಾದ ಮಹಾತ್ಮರೂ ವಂದಿಸು ವರೋ ಅಂತಹ ಪಾದಗಳಿಂದ ಶ್ರೀಕೃಷ್ಣನು ಪೂತನೆಯ ದೇಹವನ್ನೇರಿ ಸ್ತನ್ಯವನ್ನು ಕುಡಿದನು! (೩೭). ಅವಳು ರಾಕ್ಷಸಿಯಾದರೂ ತಾಯಿಗೆ ದೊರೆಯುವ ಸ್ವರ್ಗವು ಅವಳಿಗೆ ದೊರೆಯಿತು! ಯಾವ ಹಸುಗಳ ಮೊಲೆಯ ಹಾಲನ್ನು ಶ್ರೀ ಕೃಷ್ಣನು

*

ಪಯಾಂಸಿ ಯಾಸಾಮಪಿಬತ್ ಪುತ್ರಸ್ನೇಹಸ್ನುತಾನ್ಯಲಮ್ ।
ಭಗವಾನ್ ದೇವಕೀಪುತ್ರಃ ಕೈವಲ್ಯಾದ್ಯಖಿಲಪ್ರದಃ ॥ ೩೯

ತಾಸಾಮವಿರತಂ ಕೃಷ್ಣೇ ಕುರ್ವತೀನಾಂ ಸುತೇಕ್ಷಣಮ್ ।
ನ ಪುನಃ ಕಲ್ಪತೇ ರಾಜನ್ ಸಂಸಾರೋಽಜ್ಞಾನಸಂಭವಃ ॥ ೪೦

ಕಟಧೂಮಸ್ಯ ಸೌರಭ್ಯಮವಘ್ರಾಯ ವ್ರಜೌಕಸಃ ।
ಕಿಮಿದಂ ಕುತ ಏವೇತಿ ವದಂತೋ ವ್ರಜಮಾಯಯುಃ ॥ ೪೧

ತೇ ತತ್ರ ವರ್ಣಿತಂ ಗೋಪೈಃ ಪೂತನಾಗಮನಾದಿಕಮ್ ।
ಶ್ರುತ್ವಾ ತನ್ನಿಧನಂ ಸ್ವಸ್ತಿ ಶಿಶೋಶ್ಚಾಸನ್ ಸುವಿಸ್ಮಿತಾಃ ॥ ೪೨

ನಂದಃ ಸ್ವಪುತ್ರಮಾದಾಯ ಪ್ರೇತ್ಯಾಗತಮುದಾರಧೀಃ ।
ಮೂರ್ಧ್ನ್ಯುಪಾಘ್ರಾಯ ಪರಮಾಂ ಮುದಂ ಲೇಭೇ ಕುರೂದ್ವಹ ॥

---

ಪ್ರೀತಿಯಿಂದ ಕುಡಿದನೋ ಆ ಹಸುಗಳ ಕಥೆಯೇನು ! ಪುತ್ರಸ್ನೇಹದಿಂದ ಒಸರುವ ಯಾವ ತಾಯಂದಿರ ಹಾಲನ್ನು ದೇವಕೀಪುತ್ರನು ತೃಪ್ತಿಯಾಗುವಂತೆ ಕುಡಿದನೋ ಅವರಿಗೆ ಭಗವಂತನು ಕೈವಲ್ಯಾದಿ ನಿಖಿಲ ಕಾಮುಗಳನ್ನೂ ಸಲ್ಲಿಸದಿರುವನೆ ! (೩೮-೩೯). ಸುತನೆಂಬ ವಾತ್ಸಲ್ಯದಿಂದ ಸದಾ ಶ್ರೀ ಕೃಷ್ಣನನ್ನು ನೋಡುತ್ತಿದ್ದ ಗೋಪಿಯರಿಗೆ, ಮಹಾರಾಜ, ಅಜ್ಞಾನಜನ್ಯವಾದ ಸಂಸಾರವು ಪೀಡೆಯನ್ನು ಕೊಡುವುದಿಲ್ಲ (೪೦). ಪೂತನೆಯ ಹೆಣದ[1] ಹೊಗೆಯು ಪರಿಮಳಪೂರ್ಣವಾದ್ದನ್ನು ಕಂಡು ವ್ರಜವಾಸಿಗಳು "ಆಹಾ ! ಇದೇನು ? ಇದು ಹೇಗೆ ಸಾಧ್ಯ !" ಎಂದು ಮಾತಾಡಿಕೊಳ್ಳುತ್ತ ಗೋಕುಲಕ್ಕೆ ಹಿಂದಿರುಗಿದರು (೪೧). ವ್ರಜದಲ್ಲಿದ್ದ ಗೋಪರು ನಂದಾದಿಗಳಿಗೆ ಪೂತನೆಯ ಆಗಮನ ವೃತ್ತಾಂತವನ್ನೂ ಅವಳ ಮರಣದ ಬಗೆಯನ್ನೂ ಶಿಶುವು ಕುಶಲದಿಂದಿರುವುದನ್ನೂ ವರ್ಣಿಸಿ ಹೇಳಿದರು. ಅದನ್ನು ಕೇಳಿ ನಂದಾದಿಗಳು ವಿಸ್ಮಿತರಾದರು (೪೨). ನಂದನಂತೂ ತನ್ನ ಮಗನು ಸತ್ತುಹುಟ್ಟಿದನೆಂದು ತಿಳಿದುಕೊಂಡನು. ಆ ಪುತ್ರವತ್ಸಲನು ಮಗುವನ್ನೆತ್ತಿಕೊಂಡು ಶಿರಸ್ಸನ್ನಾಘ್ರಾಣಿಸುತ್ತ ಆನಂದಿಸಿದನು (೪೩).

---

1 ಕಟ = ಹೆಣ, ಶವ.

**ಯ ಏತತ್ ಪೂತನಾಮೋಕ್ಷಂ ಕೃಷ್ಣಸ್ಯಾರ್ಭಕಮದ್ಭುತಮ್ ।**
**ಶೃಣುಯಾಚ್ಛ್ರದ್ಧಯಾ ಮರ್ತ್ಯೋ ಗೋವಿಂದೇ**
**ಲಭತೇ ರತಿಮ್ ॥ ೪೪**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಷ್ಠಾಧ್ಯಾಯಃ**

---

## ಸಪ್ತಮಾಧ್ಯಾಯಃ

ರಾಜೋವಾಚ—

**ಯೇನ ಯೇನಾವತಾರೇಣ ಭಗವಾನ್ ಹರಿರೀಶ್ವರಃ ।**
**ಕರೋತಿ ಕರ್ಣರಮ್ಯಾಣಿ ಮನೋಜ್ಞಾನಿ ಚ ನಃ ಪ್ರಭೋ ॥ ೧**

**ಯಚ್ಛೃಣ್ವತೋಽಪೈತ್ಯರತಿರ್ವಿತೃಷ್ಣಾ**
**ಸತ್ತ್ವಂ ಚ ಶುದ್ಧ್ಯತ್ಯಚಿರೇಣ ಪುಂಸಃ ।**
**ಭಕ್ತಿರ್ಹರೌ ತತ್ಪುರುಷೇ ಚ ಸಖ್ಯಂ**
**ತದೇವ ಹಾರಂ ವದ ಮನ್ಯಸೇ ಚೇತ್ ॥ ೨**

---

ಕುರುಕುಲೋತ್ತಮ, ಪೂತನೆಗೆ ಮೋಕ್ಷವನ್ನು ಕರುಣಿಸಿದ ಶ್ರೀ ಕೃಷ್ಣನ ವಿಸ್ಮಯಕಾರಿಯಾದ ಈ ಬಾಲಲೀಲೆಯನ್ನು ಯಾವ ಮನುಷ್ಯನು ಆಸ್ತಿಕ್ಯಬುದ್ಧಿಯಿಂದ ಕೇಳುವನೋ ಅವನಿಗೆ ಗೋವಿಂದನಲ್ಲಿ ಭಕ್ತಿಯು ಲಭಿಸುತ್ತದೆ (೪೪).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಆರನೆಯ ಅಧ್ಯಾಯ

---

## ಅಧ್ಯಾಯ ೭

ಶಕಟಪರಿವರ್ತನ. ತೃಣಾವರ್ತನ ವಧೆ. ಶ್ರೀಕೃಷ್ಣನ ಬಾಯಿಯುಲ್ಲಿ ಯಶೋದೆಗೆ ಅದ್ಭುತ ದರ್ಶನ.

ಅನಂತರ ಪರೀಕ್ಷಿತರಾಜನು “ಸ್ವಾಮಿ ಶುಕಮಹರ್ಷಿಗಳೆ, ಭಗವಂತನೂ ಈಶ್ವರನೂ ಆದ ಶ್ರೀಹರಿಯು ಯಾವ ಯಾವ ಅವತಾರದಿಂದ ಯಾವ ಯಾವ ಕಾರ್ಯಗಳನ್ನು ನಡೆಸುವನೋ ಅವೆಲ್ಲವೂ ಕಿವಿಗಳಿಗೆ ಹಿತಕರವಾಗಿಯೂ ಮನೋಹರವಾಗಿಯೂ ಇರುತ್ತವೆ (೧). ಅಲ್ಲದೆ ಆ ಚರಿತೆಯನ್ನು ಕೇಳುವವನ ಮನೋಗ್ಲಾನಿಯೂ ವಿವಿಧ ಆಶಾಪಾಶಗಳೂ ನಶಿಸುತ್ತವೆ. ಆತನ ಚಿತ್ತವು

**ಅಥಾನ್ಯದಪಿ ಕೃಷ್ಣಸ್ಯ ತೋಕಾಚರಿತಮದ್ಭುತಮ್ ।**
**ಮಾನುಷಂ ಲೋಕಮಾಸಾದ್ಯ ತಜ್ಜಾತಿಮನುರುಂಧತಃ ॥ ೩**

**ಶ್ರೀಶುಕ ಉವಾಚ—**

**ಕದಾಚಿದೌತ್ಥಾನಿಕಕೌತುಕಾಪ್ಲವೇ**
**ಜನ್ಮರ್ಕ್ಷಯೋಗೇ ಸಮವೇತಯೋಷಿತಾಮ್ ।**
**ವಾದಿತ್ರಗೀತದ್ವಿಜಮಂತ್ರವಾಚಕೈ-**
**ಶ್ಚಕಾರ ಸೂನೋರಭಿಷೇಚನಂ ಸತೀ ॥ ೪**

**ನಂದಸ್ಯ ಪತ್ನೀ ಕೃತಮಜ್ಜನಾದಿಕಂ**
**ವಿಪ್ರೈಃ ಕೃತಸ್ವಸ್ತ್ಯಯನಂ ಸುಪೂಜಿತೈಃ ।**
**ಅನ್ನಾದ್ಯವಾಸಃಸ್ರಗಭೀಷ್ಟಧೇನುಭಿಃ**
**ಸಂಜಾತನಿದ್ರಾಕ್ಷಮಶೀಶಯಚ್ಛನೈಃ ॥ ೫**

---

ಬೇಗನೆ ಪರಿಶುದ್ಧವಾಗುತ್ತದೆ. ಹರಿಯಲ್ಲಿ ಭಕ್ತಿಯೂ ಹರಿದಾಸರಲ್ಲಿ ಸಖ್ಯವೂ ಬೆಳೆಯುತ್ತವೆ. ಅನುಗ್ರಹಿಸುವುದಾದರೆ, ಮನೋಜ್ಞವಾದ ಕೃಷ್ಣಚರಿತೆಯನ್ನು ಇನ್ನೂ ಹೇಳಿರಿ (೨). ಮನುಷ್ಯಲೋಕದಲ್ಲವತರಿಸಿ ಮನುಷ್ಯನಂತೆ ನಡೆದುಕೊಂಡ ಶ್ರೀಕೃಷ್ಣನ ಅದ್ಭುತವಾದ ಬಾಲಲೀಲೆಯನ್ನು ಇನ್ನೂ ಹೇಳಿರಿ" ಎಂದು ಕೇಳಿದನು (೩). ಆಗ ಶುಕಮಹರ್ಷಿಗಳು ಹೀಗೆಂದರು: ಮಹಾರಾಜ, (ಒಂದು ಸಲ ಮಗು ಪಕ್ಕಕ್ಕೆ ಹೊರಳಿದ ಪ್ರಯುಕ್ತ) ಔತ್ಥಾನಿಕವೆಂಬ ಉತ್ಸವವನ್ನು ನಡೆಸಲು ಏರ್ಪಾಡು ಆಯಿತು. ಆಗ ಬಾಲಕನಿಗೆ ಸ್ನಾನವನ್ನು ಮಾಡಿಸಬೇಕಾಗಿತ್ತು. ಅಲ್ಲದೆ ಜನ್ಮನಕ್ಷತ್ರವೂ ಅಂದು ಕೂಡಿದ್ದರಿಂದ ನಂದಗೃಹದಲ್ಲಿ ದೊಡ್ಡ ಉತ್ಸವವು ನಡೆಯಿತು. ಸ್ತ್ರೀಯರು ಒಂದು ಸೇರಿದ್ದರು. ವಾದ್ಯಗೀತಗಳೂ ವಿಪ್ರರ ಮಂತ್ರವಾಚನಗಳೂ ನಡೆಯುತ್ತಿರುವಾಗ, ಯಶೋದೆಯು ಪುತ್ರನಿಗೆ ಸ್ನಾನ ಮಾಡಿಸಿದಳು (೪). ಸ್ನಾನಾದಿಗಳು ನಡೆದ ಮೇಲೆ, ಅನ್ನ ವಸ್ತ್ರ ಮಾಲ್ಯ ಗೋದಾನಾದಿಗಳಿಂದ ಸತ್ಕೃತರಾದ ವಿಪ್ರರು ಸ್ವಸ್ತಿವಾಚನವನ್ನು ಮಾಡಿ ಶಿಶುವನ್ನು ಆಶೀರ್ವದಿಸಿದರು. ನಿದ್ರೆ ಬಂದುದರಿಂದ ಬಾಲಕನು ಕಣ್ಣುಮುಚ್ಚಿಕೊಂಡುದನ್ನು ನೋಡಿ ನಂದಪತ್ನಿಯು (ಬಂಡಿಯ ಕೆಳಗಿದ್ದ ತೊಟ್ಟಿಲಲ್ಲಿ) ಮೆಲ್ಲಗೆ

ಔತ್ಥಾನಿಕೌತ್ಸುಕ್ಯಮನಾ ಮನಸ್ವಿನೀ
ಸಮಾಗತಾನ್ ಪೂಜಯತೀ ವ್ರಜೌಕಸಃ ।
ನೈವಾಶೃಣೋದ್ ವೈ ರುದಿತಂ ಸುತಸ್ಯ ಸಾ
ರುದನ್ ಸ್ತನಾರ್ಥೀ ಚರಣಾವುದಕ್ಷಿಪತ್ ॥ ೬

ಅಧಃ ಶಯಾನಸ್ಯ ಶಿಶೋರನೋಽಲ್ಪಕ-
ಪ್ರವಾಲಮೃದ್ವಂಘ್ರಿಹತಂ ವ್ಯವರ್ತತ ।
ವಿಧ್ವಸ್ತನಾನಾರಸಕುಪ್ಯಭಾಜನಂ
ವ್ಯತ್ಯಸ್ತಚಕ್ರಾಕ್ಷವಿಭಿನ್ನಕೂಬರಮ್ ॥ ೭

ದೃಷ್ಟ್ವಾ ಯಶೋದಾಪ್ರಮುಖಾ ವ್ರಜಸ್ತ್ರಿಯಃ
ಔತ್ಥಾನಿಕೇ ಕರ್ಮಣಿ ಯಾಃ ಸಮಾಗತಾಃ ।
ನಂದಾದಯಶ್ಚಾದ್ಭುತದರ್ಶನಾಕುಲಾಃ
ಕಥಂ ಸ್ವಯಂ ವೈ ಶಕಟಂ ವಿಪರ್ಯಗಾತ್ ॥ ೮

ಊಚುರವ್ಯವಸಿತಮತೀನ್ ಗೋಪಾನ್ ಗೋಪೀಶ್ಚ ಬಾಲಕಾಃ ।
ರುದತಾನೇನ ಪಾದೇನ ಕ್ಷಿಪ್ತಮೇತನ್ನ ಸಂಶಯಃ ॥ ೯

---

ಮಲಗಿಸಿದಳು (೫). ಆಮೇಲೆ ಉದಾರಬುದ್ಧಿಯಾದ ಯಶೋದೆಯು ಔತ್ಥಾನಿಕೋತ್ಸವದಲ್ಲಿ ಮನಸ್ಸಿಟ್ಟು, ಆಗಮಿಸಿದ ವ್ರಜನಿವಾಸಿಗಳನ್ನು ಸತ್ಕರಿಸುವುದರಲ್ಲಿ ನಿರತಳಾದಳು. ಹೀಗಿರುವಾಗ ಮಗನು ಅಳುತ್ತಿರುವುದು ಆಕೆಗೆ ಕೇಳಿಸಲಿಲ್ಲ. ಬಾಲಕನು ಸ್ತನ್ಯಪಾನಕ್ಕಾಗಿ ಅಳುತ್ತಾ ಕಾಲುಗಳನ್ನು ಮೇಲಕ್ಕೆ ಚಿಮ್ಮಿದನು (೬). ಕೆಳಗೆ ಮಲಗಿದ್ದ ಶಿಶುವಿನ ಚಿಗುರೆಲೆಯಂತೆ ಕೋಮಲವಾದ ಪುಟ್ಟ ಪಾದಗಳ ಘಾತದಿಂದ ಮೇಲಿದ್ದ ಬಂಡಿಯು ಹಾರಿಬಿದ್ದು ಮಗುಚಿತು! ಬಂಡಿಯೊಳಗೆ ವಿವಿಧ ಪಾತ್ರೆಗಳಲ್ಲಿದ್ದ ರಸಮಯವಾದ ನಾನಾ ಭೋಜನ ಸಾಮಗ್ರಿಗಳು ಚೆಲ್ಲಿದವು. ಬಂಡಿಯ ಗಾಲಿ ಅಚ್ಚುಮೂಕಿಗಳು ಪುಡಿಪುಡಿಯಾದವು! (೭). ಔತ್ಥಾನಿಕೋತ್ಸವದಲ್ಲಿ ಭಾಗವಹಿಸಿದ್ದ ಯಶೋದೆ ಮುಂತಾದವರೂ ನಂದಾದಿಗಳೂ ಆ ವಿಸ್ಮಯವನ್ನು ಕಂಡು ವ್ಯಾಕುಲರಾಗಿ 'ಎಲಾ! ಬಂಡಿಯು ತಾನಾಗಿ ಹೇಗೆ ಮಗುಚಿಕೊಂಡಿತು!' ಎಂದು ಬೆರಗಾದರು (೮). ನಿಶ್ಚಯವನ್ನು ಕಾಣದೆ

ನ ತೇ ಶ್ರದ್ದಧಿರೇ ಗೋಪಾ ಬಾಲಭಾಷಿತಮಿತ್ಯುತ ।
ಅಪ್ರಮೇಯಂ ಬಲಂ ತಸ್ಯ ಬಾಲಕಸ್ಯ ನ ತೇ ವಿದುಃ ॥ ೧೦

ರುದಂತಂ ಸುತಮಾದಾಯ ಯಶೋದಾ ಗ್ರಹಶಂಕಿತಾ ।
ಕೃತಸ್ವಸ್ತ್ಯಯನಂ ವಿಪ್ರೈಃ ಸೂಕ್ತೈಃ ಸ್ತನಮಪಾಯಯತ್ ॥ ೧೧

ಪೂರ್ವವತ್ ಸ್ಥಾಪಿತಂ ಗೋಪೈರ್ಬಲಿಭಿಃ ಸಪರಿಚ್ಛದವತ್ ।
ವಿಪ್ರಾ ಹುತ್ವಾರ್ಚಯಾಂಚಕ್ರುರ್ದಧ್ಯಕ್ಷತಕುಶಾಂಬುಭಿಃ ॥ ೧೨

ಯೇಽಸೂಯಾನೃತದಂಭೇರ್ಷ್ಯಾಹಿಂಸಾಮಾನವಿವರ್ಜಿತಾಃ ।
ನ ತೇಷಾಂ ಸತ್ಯಶೀಲಾನಾಮಾಶಿಷೋ ವಿಫಲಾಃ ಕೃತಾಃ ॥ ೧೩

ಇತಿ ಬಾಲಕಮಾದಾಯ ಸಾಮರ್ಗ್ಯಜುರುಪಾಕೃತೈಃ ।
ಜಲೈಃ ಪವಿತ್ರೌಷಧಿಭಿರಭಿಷಿಚ್ಯ ದ್ವಿಜೋತ್ತಮೈಃ ॥ ೧೪

---

ಚಿಂತಿಸುತ್ತಿದ್ದ ಗೋಪರಿಗೂ ಗೋಪಿಯರಿಗೂ ಅಲ್ಲಿ ನೆರೆದಿದ್ದ ಹುಡುಗರು "ಅಳುತ್ತಿದ್ದ ಈ ಮಗು ಕಾಲಿನಿಂದ ಬಂಡಿಯನ್ನು ತಳ್ಳಿಬಿಟ್ಟಿತು! ಸಂದೇಹವಿಲ್ಲ!" ಎಂದು ಹೇಳಿದರು (೯). ಆದರೆ ನಂದಾದಿಗೋಪರು ಅದನ್ನು ನಂಬಲಿಲ್ಲ. "ಎಲ್ಲಾದರೂ ಉಂಟೆ? ಮಗು ಬಂಡಿಯನ್ನು ಹಾರಿಸಿಬಿಟ್ಟಿತು ಎಂದರೇನು! ಹುಡುಗರ ಹೇಳಿಕೆ!" ಎಂದುಬಿಟ್ಟರು! ಅವರಿಗೆ ಆ ಬಾಲಕನ ಅಸಾಧಾರಣವಾದ ಬಲವು ತಿಳಿಯದು (೧೦). 'ಯಾವುದೋ ಗ್ರಹಪೀಡೆಯಾಗಿದೆ!' ಎಂದುಕೊಂಡು ಯಶೋದೆಯು ಅಳುತ್ತಿದ್ದ ಮಗುವನ್ನು ಎತ್ತಿಕೊಂಡಳು. ವಿಪ್ರರು ರಕ್ಷೋಘ್ನಸೂಕ್ತಗಳಿಂದ ಸ್ವಸ್ತಿವಾಚನ ಮಾಡಿದರು. ಯಶೋದೆಯು ಮಗುವಿಗೆ ಸ್ತನ್ಯಪಾನ ಮಾಡಿಸಿದಳು (೧೧). ಗೋಪರು (ಗ್ರಹಚೇಷ್ಟಾಪರಿಹಾರಕ್ಕಾಗಿ) ಬಲಿಗಳನ್ನು ಪರಿಕರ ಸಹಿತವಾಗಿ ಹಿಂದಿನಂತೆ ಅರ್ಪಿಸಿದರು. ವಿಪ್ರರು ಹೋಮವನ್ನು ಮಾಡಿ ದಧಿ, ಅಕ್ಷತೆ, ದರ್ಭೋದಕಾದಿಗಳಿಂದ ದೇವತೆಗಳನ್ನು ಪೂಜಿಸಿದರು (೧೨). ನಂದಗೋಪನು "ಯಾರಲ್ಲಿ ಅಸೂಯೆ, ಅನೃತ, ದಂಭ, ಈರ್ಷ್ಯೆ, ಹಿಂಸೆ, ಅಹಂಕಾರಗಳಿಲ್ಲವೋ ಅಂಥ ಸತ್ಯಶೀಲರಾದ ದ್ವಿಜೋತ್ತಮರ ಆಶೀರ್ವಾದಗಳು ಎಂದಿಗೂ ವಿಫಲವಾಗುವುದಿಲ್ಲ" ಎಂಬ ನಿಲುವನ್ನು ತಳೆದಿದ್ದನು (೧೩). ಆತನು ಬಾಲಕನನ್ನೆತ್ತಿಕೊಂಡು, ಋಗ್ಯಜುಃಸಾಮಮಂತ್ರಗಳಿಂದ ಸಂಸ್ಕೃತ

**ವಾಚಯಿತ್ವಾ ಸ್ವಸ್ತ್ಯಯನಂ ನಂದಗೋಪಃ ಸಮಾಹಿತಃ ।**
**ಹುತ್ವಾ ಚಾಗ್ನಿಂ ದ್ವಿಜಾತಿಭ್ಯಃ ಪ್ರಾದಾದನ್ನಂ ಮಹಾಗುಣಮ್ ॥**

**ಗಾವಃ ಸರ್ವಗುಣೋಪೇತಾ ವಾಸಃಸ್ರಗ್ರುಕ್ಮಮಾಲಿನೀಃ ।**
**ಆತ್ಮಜಾಭ್ಯುದಯಾರ್ಥಾಯ ಪ್ರಾದಾತ್ತೇ ಚಾನ್ವಯುಂಜತ ॥ ೧೬**

**ವಿಪ್ರಾ ಮಂತ್ರವಿದೋ ಯುಕ್ತಾಸ್ತೈರ್ಯಾಃ ಪ್ರೋಕ್ತಾಸ್ತಥಾऽऽಶಿಷಃ ।**
**ತಾ ನಿಷ್ಫಲಾ ಭವಿಷ್ಯಂತಿ ನ ಕದಾಚಿದಪಿ ಸ್ಫುಟಮ್ ॥ ೧೭**

**ಏಕದಾऽऽರೋಹಮಾರೂಢಂ ಲಾಲಯಂತೀ ಸುತಂ ಸತೀ ।**
**ಗರಿಮಾಣಂ ಶಿಶೋರ್ವೋಢುಂ ನ ಸೇಹೇ ಗಿರಿಕೂಟವತ್ ॥ ೧೮**

**ಭೂಮೌ ನಿಧಾಯ ತಂ ಗೋಪೀ ವಿಸ್ಮಿತಾ ಭಾರಪೀಡಿತಾ ।**
**ಮಹಾಪುರುಷಮಾದಧ್ಯೌ ಜಗತಾಮಾಸ ಕರ್ಮಸು ॥ ೧೯**

---

ವಾಗಿಯೂ ಪುಣ್ಯೌಷಧಿಗಳಿಂದ ಯುಕ್ತವಾಗಿಯೂ ಇದ್ದ ಜಲವನ್ನು ದ್ವಿಜೋತ್ತಮರ ಕೈಯಿಂದ ಮಗುವಿಗೆ ಪ್ರೋಕ್ಷಣೆಮಾಡಿಸಿದನು (೧೪). ಆಮೇಲೆ ಸ್ವಸ್ತಿ ವಾಚನವನ್ನು ಮಾಡಿಸಿ ಸಮಾಧಾನಪಟ್ಟನು. ಅಗ್ನಿಯಲ್ಲಿ ಹೋಮವನ್ನು ಮಾಡಿಸಿ ವಿಪ್ರರಿಗೆ ಶ್ರೇಷ್ಠವಾದ ಅನ್ನಸಂತರ್ಪಣೆಯನ್ನು ಮಾಡಿಸಿದನು (೧೫). ಅಲ್ಲದೆ ನಂದಗೋಪನು ಪುತ್ರನಿಗೆ ಕಲ್ಯಾಣವಾಗಲೆಂದು ವಸ್ತ್ರಮೂಲ್ಯಸುವರ್ಣ ಭೂಷಿತಗಳಾದ ಸರ್ವೋತ್ತಮವಾದ ಗೋವುಗಳನ್ನು ದಾನಮಾಡಿದನು. ವಿಪ್ರರು ಮಗುವನ್ನು ಆಶೀರ್ವದಿಸಿದರು (೧೬). ಮಂತ್ರವಿದರೂ ಜಿತೇಂದ್ರಿಯರೂ ಆದ ಬ್ರಾಹ್ಮಣರು ಯಾವ ಆಶೀರ್ವಾದಗಳನ್ನು ಮಾಡುವರೋ ಅವು ಎಂದೆಂದಿಗೂ ನಿಷ್ಫಲವಾಗುವುದಿಲ್ಲವೆಂಬುದು ಸ್ಫುಟವಾಯಿತು (೧೭). ಪರೀಕ್ಷಿತರಾಜ, ಒಂದು ಸಲ ಯಶೋದೆಯು ಶ್ರೀ ಕೃಷ್ಣನನ್ನು ಕಂಕುಳಲ್ಲಿ ಎತ್ತಿಕೊಂಡು ಲಾಲಿಸುತ್ತಿದ್ದಳು. ಇದ್ದಕ್ಕಿದ್ದಹಾಗೆ ಗಿರಿಶಿಖರವೋ ಎಂಬಂತೆ ಶಿಶುವಿನ ಭಾರವು ಅತಿಯಾಯಿತು. ಅವಳಿಗೆ ಹೊರಲಾಗಲಿಲ್ಲ (೧೮). ಭಾರಪೀಡಿತಳಾದ ಯಶೋದೆಯು ವಿಸ್ಮಿತಳಾಗಿ ಮಗುವನ್ನು ನೆಲದಮೇಲಿರಿಸಿ ಭಗವಂತನನ್ನು ಧ್ಯಾನಿಸತೊಡಗಿದಳು. (ಅವಳಿಗೆ ಶ್ರೀಕೃಷ್ಣನ ಮಹಿಮೆ ತಿಳಿಯಲಿಲ್ಲ.) ಎಲ್ಲರಂತೆ ಜಗತ್ತಿನ

ದೈತ್ಯೋ ನಾಮ್ನಾ ತೃಣಾವರ್ತಃ ಕಂಸಭೃತ್ಯಃ ಪ್ರಣೋದಿತಃ ।
ಚಕ್ರವಾತಸ್ವರೂಪೇಣ ಜಹಾರಾಸೀನಮರ್ಭಕಮ್ ॥ ೨೦

ಗೋಕುಲಂ ಸರ್ವಮಾವೃಣ್ವನ್ ಮುಷ್ಣಂಶ್ಚಕ್ಷೂಂಷಿ ರೇಣುಭಿಃ ।
ಈರಯನ್ ಸುಮಹಾಘೋರಶಬ್ದೇನ ಪ್ರದಿಶೋ ದಿಶಃ ॥ ೨೧

ಮುಹೂರ್ತಮಭವದ್ ಗೋಷ್ಠಂ ರಜಸಾ ತಮಸಾಽಽವೃತಮ್ ।
ಸುತಂ ಯಶೋದಾ ನಾಪಶ್ಯತ್ತಸ್ಮಿನ್ ನ್ಯಸ್ತವತೀ ಯತಃ ॥ ೨೨

ನಾಪಶ್ಯತ್ ಕಶ್ಚನಾತ್ಮಾನಂ ಪರಂ ಚಾಪಿ ವಿಮೋಹಿತಃ ।
ತೃಣಾವರ್ತನಿಸೃಷ್ಟಾಭಿಃ ಶರ್ಕರಾಭಿರುಪದ್ರುತಃ ॥ ೨೩

ಇತಿ ಖರಪವನಚಕ್ರಪಾಂಸುವರ್ಷೇ
ಸುತಪದವೀಮಬಲಾವಿಲಕ್ಷ್ಯ ಮಾತಾ ।
ಅತಿಕರುಣಮನುಸ್ಮರಂತ್ಯಶೋಚದ್
ಭುವಿ ಪತಿತಾ ಮೃತವತ್ಸಕಾ ಯಥಾ ಗೌಃ ॥ ೨೪

---

ಕರ್ಮಭೂಮಿಕೆಯಲ್ಲಿದ್ದಳು (೧೯). ಆಗ ಕಂಸಭೃತ್ಯನಾದ ತೃಣಾವರ್ತನೆಂಬ ದೈತ್ಯನು ಕಂಸನಿಂದ ಪ್ರೇರಿತನಾಗಿ ಸುಂಟರಗಾಳಿಯ ರೂಪದಿಂದ ಬಂದು, ಕುಳಿತಿದ್ದ ಬಾಲಕನನ್ನು ಹಾರಿಸಿಕೊಂಡು ಹೋದನು! (೨೦). ಆ ಸುಂಟರ ಗಾಳಿಯು ಗೋಕುಲದ ಸಕಲ ಪ್ರದೇಶಗಳನ್ನೂ ವ್ಯಾಪಿಸಿ, ಜನರ ಕಣ್ಣುಗಳನ್ನು ಧೂಳಿಗಳಿಂದ ಮುಚ್ಚಿ, ದಿಗ್ದಿಗಂತರಗಳನ್ನು ಘೋರಶಬ್ದದಿಂದ ಮೊಳಗಿಸಿ ಬಿಟ್ಟಿತು (೨೧). ಒಂದು ಮುಹೂರ್ತದವರೆಗೆ ಗೋಕುಲವೆಲ್ಲವೂ ಧೂಳಿಂದಲೂ ಕತ್ತಲೆಯಿಂದಲೂ ಮುಚ್ಚಿಹೋಯಿತು. ಯಶೋದೆಯು ಮಗನನ್ನು ಎಲ್ಲಿ ಕುಳ್ಳಿರಿಸಿದ್ದಳೋ ಅಲ್ಲಿ ಕಾಣಲಿಲ್ಲ (೨೨). ತೃಣಾವರ್ತನು ತೂರಿದ ಮರಳಿಂದ ಪೀಡಿತರಾದ ಜನರು ಕಂಗೆಟ್ಟುಹೋದರು. ಒಬ್ಬನಿಗೂ ತನ್ನನ್ನಾಗಲಿ ಇನ್ನೊಬ್ಬ ನನ್ನಾಗಲಿ ನೋಡಲು ಸಾಧ್ಯವಾಗಲಿಲ್ಲ! (೨೩). ಈಪ್ರಕಾರವಾದ ಬಿರುಸಿನ ಸುಂಟರಗಾಳಿಯ ಹೊಡೆತದಿಂದ ಧೂಳಿಯು ಕವಿಯಲಾಗಿ, ಅಬಲೆಯಾದ ಮಾತೆಯು ಸುತನ ಸುಳಿವನ್ನು ಕಾಣದಾದಳು. ಶೋಕದಿಂದ ಯಶೋದೆಯು ನೆಲದಮೇಲೆ ಕುಸಿದಳು. ಕರುವನ್ನು ಕಳೆದುಕೊಂಡ ಹಸುವಿನಂತೆ, ಮಗನಿಗಾಗಿ

ರುದಿತಮನುನಿಶಮ್ಯ ತತ್ರ ಗೋಪ್ಯೋ
ಭೃಶಮನುತಪ್ತಧಿಯೋಽಶ್ರುಪೂರ್ಣಮುಖ್ಯಃ ।
ರುರುದುರನುಪಲಭ್ಯ ನಂದಸೂನುಂ
ಪವನ ಉಪಾರತಪಾಂಸುವರ್ಷವೇಗೇ ॥ ೨೫

ತೃಣಾವರ್ತಃ ಶಾಂತರಯೋ ವಾತ್ಯಾರೂಪಧರೋ ಹರನ್ ।
ಕೃಷ್ಣಂ ನಭೋಗತೋ ಗಂತುಂ ನಾಶಕ್ನೋದ್ ಭೂರಿಭಾರಭೃತ್ ॥

ತಮಶ್ಮಾನಂ ಮನ್ಯಮಾನ ಆತ್ಮನೋ ಗುರುಮತ್ತಯಾ ।
ಗಲೇ ಗೃಹೀತ ಉತ್ಸ್ರಷ್ಟುಂ ನಾಶಕ್ನೋದದ್ಭುತಾರ್ಭಕಮ್ ॥ ೨೭

ಗಲಗ್ರಹಣನಿಶ್ಚೇಷ್ಟೋ ದೈತ್ಯೋ ನಿರ್ಗತಲೋಚನಃ ।
ಅವ್ಯಕ್ತರಾವೋ ನ್ಯಪತತ್ ಸಹಬಾಲೋ ವ್ಯಸುರ್ವ್ರಜೇ ॥ ೨೮

ತಮಂತರಿಕ್ಷಾತ್ ಪತಿತಂ ಶಿಲಾಯಾಂ
ವಿಶೀರ್ಣಸರ್ವಾವಯವಂ ಕರಾಲಮ್ ।

---

ಹಂಬಲಿಸುತ್ತ ಗೋಳಾಡತೊಡಗಿದಳು (೨೪). ಯಶೋದೆಯ ಆಕ್ರಂದನವನ್ನು ಕೇಳಿ ಗೋಪಿಯರು ಓಡಿಬಂದರು. ಬಿರುಗಾಳಿಯು ನಿಂತಾಗ ಬಾಲಕನಿಗಾಗಿ ಹುಡುಕಿ ಕಾಣದಾದರು. ಎಲ್ಲರಿಗೂ ಅತಿಯಾದ ಶೋಕವು ಆವರಿಸಿತು. ಕಣ್ಣೀರು ಹರಿಸುತ್ತ ಅಳತೊಡಗಿದರು (೨೫). ಬಿರುಗಾಳಿಯಾಗಿ ಬಂದ ತೃಣಾವರ್ತನು ಶ್ರೀಕೃಷ್ಣನನ್ನು ಹೊತ್ತುಕೊಂಡು ಹೇಗೋ ಗಗನವನ್ನಡರಿದನು. ಅಷ್ಟರಲ್ಲಿ ಆತನ ವೇಗವು ಶಾಂತವಾಯಿತು. ಶ್ರೀಕೃಷ್ಣನ ಭೂರಿಭಾರವನ್ನು ಹೊತ್ತು ಮುಂದೆ ಹೋಗಲು ಸಾಧ್ಯವಾಗಲಿಲ್ಲ (೨೬). ತೃಣಾವರ್ತನು ಬಾಲಕನ ಭಾರವನ್ನು ಸಹಿಸಲಾರದೆ, ಇದೊಂದು ಭಾರಿಯಾದ ಬಂಡೆಯ ಬೆಟ್ಟವೆಂದು ಭಾವಿಸಿ ಕೆಳಗೆ ತಳ್ಳಲು ಹವಣಿಸಿದನು. ಆದರೆ ಆ ಅದ್ಭುತ ಬಾಲಕನು ತೃಣಾವರ್ತನ ಗಂಟಲನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದರಿಂದ ತಳ್ಳಲೂ ಸಾಧ್ಯವಾಗಲಿಲ್ಲ! (೨೭). ಶ್ರೀಕೃಷ್ಣನು ಅವನ ಕತ್ತನ್ನು ಒತ್ತಿಹಿಡಿದುದರಿಂದ ದೈತ್ಯನು ನಿಶ್ಚೇಷ್ಟನಾದನು. ಕೂಗಲಾರದೆ ಗೊರ ಗೊರ ಎನ್ನುತ್ತ ಪ್ರಾಣವನ್ನು ನೀಗಿ, ತೃಣಾವರ್ತನು ಬಾಲಕ ಸಹಿತನಾಗಿ ವ್ರಜಸ್ಥಾನದಲ್ಲಿಯೇ ಬಿದ್ದನು (೨೮). ಕರಾಳನಾದ ಆ ದೈತ್ಯನು

ಪುರಂ ಯಥಾ ರುದ್ರಶರೇಣ ವಿದ್ಧಂ
ಸ್ತ್ರಿಯೋ ರುದತ್ಯೋ ದದೃಶುಃ ಸಮೇತಾಃ ॥ ೨೯

ಪ್ರಾದಾಯ ಮಾತ್ರೇ ಪ್ರತಿಹೃತ್ಯ ವಿಸ್ಮಿತಾಃ
ಕೃಷ್ಣಂ ಚ ತಸ್ಯೋರಸಿ ಲಂಬಮಾನಮ್ ।
ತಂ ಸ್ವಸ್ತಿಮಂತಂ ಪುರುಷಾದನೀತಂ
ವಿಹಾಯಸಾ ಮೃತ್ಯುಮುಖಾತ್ ಪ್ರಮುಕ್ತಮ್ ॥
ಗೋಪ್ಯಶ್ಚ ಗೋಪಾಃ ಕಿಲ ನಂದಮುಖ್ಯಾ
ಲಬ್ಧ್ವಾ ಪುನಃ ಪ್ರಾಪುರತೀವ ಮೋದಮ್ ॥ ೩೦

ಅಹೋ ಬತಾತ್ಯದ್ಭುತಮೇಷ ರಕ್ಷಸಾ
ಬಾಲೋ ನಿವೃತ್ತಿಂ ಗಮಿತೋಽಭ್ಯಗಾತ್ ಪುನಃ ।
ಹಿಂಸ್ರಃ ಸ್ವಪಾಪೇನ ವಿಹಿಂಸಿತಃ ಖಲಃ
ಸಾಧುಃ ಸಮತ್ವೇನ ಭಯಾದ್ ವಿಮುಚ್ಯತೇ ॥ ೩೧

ಕಿಂ ನಸ್ತಪಶ್ಚೀರ್ಣಮಧೋಕ್ಷಜಾರ್ಚನಂ
ಪೂರ್ತೇಷ್ಟದತ್ತಮುತ ಭೂತಸೌಹೃದಮ್ ।

---

ಅಂತರಿಕ್ಷದಿಂದ ಒಂದು ಬಂಡೆಯ ಮೇಲೆ ಬೀಳಲಾಗಿ, ಅವನ ಸರ್ವಾವಯವಗಳೂ ಜಜ್ಜಿಹೋದವು. ರುದ್ರನ ಶರದಿಂದ ವಿಚ್ಛಿನ್ನನಾದ ತ್ರಿಪುರಾಸುರನಂತೆ ಅವನು ಗೋಚರಿಸಿದನು. ಅಳುತ್ತಿದ್ದ ಗೋಪಿಯರು ಓಡಿಬಂದು ಆ ದೃಶ್ಯವನ್ನು ಕಂಡರು (೨೯). ದೈತ್ಯನ ಎದೆಯ ಮೇಲೆ ಕುಳಿತಿದ್ದ ಕೃಷ್ಣನನ್ನು ನೋಡಿ ಬೆರಗಾಗಿ ಆ ಗೋಪಿಯರು ಅವನನ್ನೆತ್ತಿಕೊಂಡು ಒಂದು ತಾಯಿಗೆ ಕೊಟ್ಟರು. ರಾಕ್ಷಸನು ಗಗನಮಾರ್ಗದಲ್ಲಿ ಎತ್ತಿಕೊಂಡು ಹೋದರೂ ಮೃತ್ಯುವಿನ ಬಾಯಿಂದ ತಪ್ಪಿಸಿಕೊಂಡು ಕ್ಷೇಮವಾಗಿ ಬಂದ ಬಾಲಕನನ್ನು ನೋಡಿ, ನಂದಾದಿಗೋಪರು ಗೋಪಿಯರೂ ಆನಂದದಿಂದ ನಲಿದರು (೩೦). ಅವರು ತಮ್ಮ ತಮ್ಮಲ್ಲಿ "ಅಬ್ಬಬ್ಬಾ! ಏನಚ್ಚರಿ ಇದು! ರಾಕ್ಷಸನು ಈ ಶಿಶುವನ್ನು ಕೊಂದಂತೆಯೇ ಆಗಿತ್ತು! ಆದರೂ ಬಾಲಕನು ಕ್ಷೇಮದಿಂದ ಬದುಕಿಬಂದನಲ್ಲ! ಹಿಂಸಕನಾದ ಆ ದುಷ್ಟನು ತನ್ನ ಪಾಪಕ್ಕೆ ತಾನೇ ಬಲಿಯಾದನು. ಸಮಭಾವದಿಂದಿರುವ ಸಜ್ಜನರಿಗೆ ಭಯವಿಲ್ಲ (೩೧). ನಾವು ಯಾವ ತಪಸ್ಸನ್ನಾಚರಿಸಿರಬಹುದು!

ಯತ್ಸಂಪರೇತಃ ಪುನರೇವ ಬಾಲಕೋ
ದಿಷ್ಟ್ಯಾ ಸ್ವಬಂಧೂನ್ ಪ್ರಣಯನ್ನುಪಸ್ಥಿತಃ ॥ ೩೨

ದೃಷ್ಟ್ವಾದ್ಭುತಾನಿ ಬಹುಶೋ ನಂದಗೋಪೋ ಬೃಹದ್ವನೇ ।
ವಸುದೇವವಚೋ ಭೂಯೋ ಮಾನಯಾಮಾಸ ವಿಸ್ಮಿತಃ ॥ ೩೩

ಏಕದಾರ್ಭಕಮಾದಾಯ ಸ್ವಾಂಕಮಾರೋಪ್ಯ ಭಾಮಿನೀ ।
ಪ್ರಸ್ನುತಂ ಪಾಯಯಾಮಾಸ ಸ್ತನಂ ಸ್ನೇಹಪರಿಪ್ಲುತಾ ॥ ೩೪

ಪೀತಪ್ರಾಯಸ್ಯ ಜನನೀ ಸಾ ತಸ್ಯ ರುಚಿರಸ್ಮಿತಮ್ ।
ಮುಖಂ ಲಾಲಯತೀ ರಾಜನ್ ಜೃಂಭತೋ ದದೃಶೇ ಇದಮ್ ॥

ಖಂ ರೋದಸೀ ಜ್ಯೋತಿರನೀಕಮಾಶಾಃ
ಸೂರ್ಯೇಂದುವಹ್ನಿಶ್ವಸನಾಂಬುಧೀಂಶ್ಚ ।
ದ್ವೀಪಾನ್ ನಗಾಂಸ್ತದ್ದುಹಿತೄರ್ವನಾನಿ
ಭೂತಾನಿ ಯಾನಿ ಸ್ಥಿರಜಂಗಮಾನಿ ॥ ೩೬

---

ಯಾವ ಬಗೆಯಲ್ಲಿ ವಿಷ್ಣುವಿನ ಆರಾಧನೆಯನ್ನು ನಡೆಸಿರಬಹುದು ! ಇದು ಪೂರ್ತ ಇಷ್ಟ[1] ದಾನಗಳ ಫಲವಿರಬಹುದೆ ! ಅಥವಾ ಪ್ರಾಣಿದಯೆಯ ಫಲವೆ ! ಮೃತ್ಯುಮುಖನಾದ ಬಾಲಕನು ಬಂಧುಗಳನ್ನು ಆನಂದಪಡಿಸುತ್ತ ಮತ್ತೆ ಬದುಕಿ ಬಂದನಲ್ಲ ! " ಎಂದು ಮಾತಾಡಿಕೊಳ್ಳುತ್ತಿದ್ದರು (೩೨). ಗೋಕುಲದಲ್ಲಿ ನಡೆದ ಈ ಬಗೆಯ ಅದ್ಭುತಗಳನ್ನು ನೋಡಿ ವಿಸ್ಮಿತನಾದ ನಂದಗೋಪನು, ವಸುದೇವನ ನುಡಿ ಸತ್ಯವೆಂದು ಮತ್ತೆಮತ್ತೆ ಅಂದುಕೊಂಡನು (೩೩). ಒಮ್ಮೆ ಯಶೋದೆಯು ಮಗನನ್ನು ಮಡಿಲಲ್ಲಿ ಮಲಗಿಸಿಕೊಂಡು ವಾತ್ಸಲ್ಯದಿಂದ ಒಸರಿದ ಸ್ತನ್ಯವನ್ನು ಕುಡಿಸುತ್ತಿದ್ದಳು. ಬಹುಮಟ್ಟಿಗೆ ಸ್ತನ್ಯವನ್ನು ಕುಡಿದಮೇಲೆ ಮಗುವಿನ ಮುಖದಲ್ಲಿ ಮುಗುಳ್ನಗೆ ಮೂಡಿತು. ತಾಯಿಯು ಮುದ್ದಿಸುತ್ತಿರುವಾಗ ಬಾಲಕನು ಆಕಳಿಸಿದನು. ಮಹಾರಾಜ, ಆಗ ಯಶೋದೆಯು ಮಗುವಿನ ಬಾಯಲ್ಲಿ ಏನನ್ನು ಕಂಡಳು ಗೊತ್ತೆ ? (೩೪–೩೫). ಆಕಾಶ, ದ್ಯಾವಾಪೃಥಿವಿಗಳು, ಜ್ಯೋತಿರ್ಗಣಗಳು,

---

1 ಪೂರ್ತ = ವಾಪೀಕೂಪಾದಿನಿರ್ಮಾಣ. ಇಷ್ಟ = ಪಂಚಯಜ್ಞ ಹೋಮಾದಿಗಳು.

ಸಾ ವೀಕ್ಷ್ಯ ವಿಶ್ವಂ ಸಹಸಾ ರಾಜನ್ ಸಂಜಾತವೇಪಥುಃ ।
ಸಂಮೀಲ್ಯ ಮೃಗಶಾವಾಕ್ಷೀ ನೇತ್ರೇ ಆಸೀತ್ ಸುವಿಸ್ಮಿತಾ ॥ ೩೭

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತಮಾಧ್ಯಾಯಃ

---

## ಅಷ್ಟಮಾಧ್ಯಾಯಃ

ಶ್ರೀಶುಕ ಉವಾಚ—

ಗರ್ಗಃ ಪುರೋಹಿತೋ ರಾಜನ್ ಯದೂನಾಂ ಸುಮಹಾತಪಾಃ ।
ವ್ರಜಂ ಜಗಾಮ ನಂದಸ್ಯ ವಸುದೇವಪ್ರಚೋದಿತಃ ॥ ೧

ತಂ ದೃಷ್ಟ್ವಾ ಪರಮಪ್ರೀತಃ ಪ್ರತ್ಯುತ್ಥಾಯ ಕೃತಾಂಜಲಿಃ ।
ಆನರ್ಚಾಧೋಕ್ಷಜಧಿಯಾ ಪ್ರಣಿಪಾತಪುರಸ್ಸರಮ್ ॥ ೨

---

ದಶದಿಕ್ಕುಗಳು, ಸೂರ್ಯಚಂದ್ರಾಗ್ನಿವಾಯುಗಳು, ಸಮುದ್ರಗಳು, ದ್ವೀಪಗಳು, ಬೆಟ್ಟಗಳು, ನದಿಗಳು, ಅರಣ್ಯಗಳು, ಚರಾಚರಾತ್ಮಕವಾದ ಸಕಲವಸ್ತುಗಳು – ಇವೆಲ್ಲವನ್ನೂ ಯಶೋದೆಯು ಕಂಡಳು (೩೬). ಪರೀಕ್ಷಿತರಾಜ, ವಿಶ್ವವನ್ನೇ ಮಗುವಿನ ಬಾಯಲ್ಲಿ ಕಂಡಾಗ ಯಶೋದೆ ನಡುಗಿಹೋದಳು. ಆ ಹರಿಣ ನೇತ್ರೆಯು ನಿಬ್ಬೆರಗಾಗಿ ಕಣ್ಣುಗಳನ್ನು ಮುಚ್ಚಿಕೊಂಡುಬಿಟ್ಟಳು (೩೭).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಏಳನೆಯ ಅಧ್ಯಾಯ

---

## ಅಧ್ಯಾಯ ೮

ಶ್ರೀಕೃಷ್ಣಬಲರಾಮರಿಗೆ ಗರ್ಗರಿಂದ ನಾಮಕರಣ. ಯಶೋದೆಗೆ ಶ್ರೀಕೃಷ್ಣನಿಂದ ಬಾಯಿಯಲ್ಲಿ ವಿಶ್ವರೂಪದರ್ಶನ

ಪರೀಕ್ಷಿತರಾಜ, ಯಾದವರಿಗೆ ಗರ್ಗನೆಂಬ ಮಹಾತಪಸ್ವಿಯಾದ ಪುರೋಹಿತನಿದ್ದನು. ವಸುದೇವನ ಪ್ರೇರಣೆಯಿಂದ ಆತನು ನಂದನ ವ್ರಜಕ್ಕೆ ಆಗಮಿಸಿದನು (೧). ಗರ್ಗನನ್ನು ಕಂಡೊಡನೆ ನಂದನು ಪರಮಪ್ರೀತಿಯಿಂದ ಕೃತಾಂಜಲಿಯಾಗಿ ಎದ್ದುಬಂದು ನಮಸ್ಕರಿಸಿ ಸಾಕ್ಷಾದ್ವಿಷ್ಣುವೆಂಬ ಭಾವದಿಂದ ಆತನನ್ನು

ಸೂಪವಿಷ್ಟಂ ಕೃತಾತಿಥ್ಯಂ ಗಿರಾ ಸೂನೃತಯಾ ಮುನಿಮ್ ।
ನಂದಯಿತ್ವಾಬ್ರವೀದ್ ಬ್ರಹ್ಮನ್ ಪೂರ್ಣಸ್ಯ ಕರವಾಮ ಕಿಮ್ ॥ ೩

ಮಹದ್ವಿಚಲನಂ ನೃಣಾಂ ಗೃಹಿಣಾಂ ದೀನಚೇತಸಾಮ್ ।
ನಿಃಶ್ರೇಯಸಾಯ ಭಗವನ್ ಕಲ್ಪತೇ ನಾನ್ಯಥಾ ಕ್ವಚಿತ್ ॥ ೪

ಜ್ಯೋತಿಷಾಮಯನಂ ಸಾಕ್ಷಾದ್
ಯತ್ತಜ್ಜ್ಞಾನಮತೀಂದ್ರಿಯಮ್ ।
ಪ್ರಣೀತಂ ಭವತಾ ಯೇನ ಪುಮಾನ್ ವೇದ ಪರಾವರಮ್ ೫

ತ್ವಂ ಹಿ ಬ್ರಹ್ಮವಿದಾಂ ಶ್ರೇಷ್ಠಃ ಸಂಸ್ಕಾರಾನ್ ಕರ್ತುಮರ್ಹಸಿ ।
ಬಾಲಯೋರನಯೋರ್ನೃಣಾಂ ಜನ್ಮನಾ ಬ್ರಾಹ್ಮಣೋ ಗುರುಃ ॥ ೬

ಗರ್ಗ ಉವಾಚ—

ಯದೂನಾಮಹಮಾಚಾರ್ಯಃ ಖ್ಯಾತಶ್ಚ ಭುವಿ ಸರ್ವತಃ ।
ಸುತಂ ಮಯಾ ಸಂಸ್ಕೃತಂ ತೇ ಮನ್ಯತೇ ದೇವಕೀಸುತಮ್ ॥ ೭

---

ಅರ್ಚಿಸಿದನು (೨). ಗರ್ಗಮುನಿಯು ಆತಿಥ್ಯವನ್ನು ಸ್ವೀಕರಿಸಿ ಸುಖಾಸೀನನಾಗಲು, ನಂದನು ಪ್ರಿಯವಾಕ್ಯಗಳಿಂದ ಸಂತೋಷಪಡಿಸಿ ಹೀಗೆಂದನು : "ಬ್ರಹ್ಮರ್ಷಿಗಳೆ, ಪೂರ್ಣಕಾಮರಾದ ನಿಮಗೆ ನಾವು ಮಾಡಬೇಕಾದ್ದೇನಿದೆ ? (೩). ಮಹಾತ್ಮರು ತಮ್ಮ ಆಶ್ರಮದಿಂದ ಚಲಿಸುವುದು ದೀನರಾದ ಗೃಹಸ್ಥರ ಮಂಗಳಕ್ಕಾಗಿಯೇ. ಹೇ ಭಗವನ್, ಇನ್ನಾವ ನಿಮಿತ್ತದಿಂದಲೂ ನಿಮ್ಮಂಥವರು ಚಲಿಸುವುದಿಲ್ಲ (೪). ಅತೀಂದ್ರಿಯವಾದ ಜ್ಞಾನವನ್ನು ಕೊಡುವ ಜ್ಯೋತಿಶ್ಶಾಸ್ತ್ರವನ್ನು ತಾವು ರಚಿಸಿದ್ದೀರಿ. ಅದರ ನೆರವಿನಿಂದ ಮನುಷ್ಯನು ಪೂರ್ವಜನ್ಮದಲ್ಲಿ ಮಾಡಿದ ಕರ್ಮವನ್ನೂ ಈ ಜನ್ಮದ ಭವಿಷ್ಯತ್ಫಲವನ್ನೂ ತಿಳಿಯಬಲ್ಲನು (೫). ನೀವು ಬ್ರಹ್ಮವಿದರಲ್ಲಿ ಶ್ರೇಷ್ಠರೂ ಆಗಿದ್ದೀರಿ. ಆದ್ದರಿಂದ ಈ ಬಾಲಕರಿಬ್ಬರಿಗೆ ನಾಮಕರಣಾದಿ ಸಂಸ್ಕಾರಗಳನ್ನು ಮಾಡೋಣವಾಗಬೇಕು. ಜನ್ಮಮಾತ್ರದಿಂದಲೇ ಬ್ರಾಹ್ಮಣನು ಮಾನವರಿಗೆ ಗುರುವಾಗುತ್ತಾನಲ್ಲವೆ ? " ಎಂದನು (೬). ಆಗ ಗರ್ಗಮುನಿಯು ಹೀಗೆ ನುಡಿದನು : "ನಂದಗೋಪ, ನಾನು ಯಾದವರಿಗೆ ಪುರೋಹಿತನೆಂದು ಲೋಕದಲ್ಲಿ ವಿಖ್ಯಾತನಾಗಿಬಿಟ್ಟಿದ್ದೇನೆ ! ಹೀಗಿರುವಾಗ ನಿನ್ನ ಮಗನು ನನ್ನಿಂದ ಸಂಸ್ಕೃತನಾದರೆ, ಈತನು ದೇವಕಿಯ ಮಗನೆಂದೇ ಕಂಸನು

**ಕಂಸಃ ಪಾಪಮತಿಃ ಸಖ್ಯಂ ತವ ಚಾನಕದುಂದುಭೇಃ ।**
**ದೇವಕ್ಯಾ ಅಷ್ಟಮೋ ಗರ್ಭೋ ನ ಸ್ತ್ರೀ ಭವಿತುಮರ್ಹತಿ ॥ ೮**

**ಇತಿ ಸಂಚಿಂತಯನ್ ಶ್ರುತ್ವಾ ದೇವಕ್ಯಾ ದಾರಿಕಾವಚಃ ।**
**ಅಪಿ ಹಂತಾಽಽಗತಾಶಂಕಸ್ತರ್ಹಿ ತನ್ನೋಽನಯೋ ಭವೇತ್ ॥ ೯**

ನಂದ ಉವಾಚ—

**ಅಲಕ್ಷಿತೋಽಸ್ಮಿನ್ ರಹಸಿ ಮಾಮಕೈರಪಿ ಗೋವ್ರಜೇ ।**
**ಕುರು ದ್ವಿಜಾತಿಸಂಸ್ಕಾರಂ ಸ್ವಸ್ತಿವಾಚನಪೂರ್ವಕಮ್ ॥ ೧೦**

ಶ್ರೀಶುಕ ಉವಾಚ—

**ಏವಂ ಸಂಪ್ರಾರ್ಥಿತೋ ವಿಪ್ರಃ ಸ್ವಚಿಕೀರ್ಷಿತಮೇವ ತತ್ ।**
**ಚಕಾರ ನಾಮಕರಣಂ ಗೂಢೋ ರಹಸಿ ಬಾಲಯೋಃ ॥ ೧೧**

ಗರ್ಗ ಉವಾಚ—

**ಅಯಂ ಹಿ ರೋಹಿಣೀಪುತ್ರೋ ರಮಯನ್ ಸುಹೃದೋ ಗುಣೈಃ ।**
**ಆಖ್ಯಾಸ್ಯತೇ ರಾಮ ಇತಿ ಬಲಾಧಿಕ್ಯಾದ್ ಬಲಂ ವಿದುಃ ।**
**ಯದೂನಾಮಪೃಥಗ್ಭಾವಾತ್ ಸಂಕರ್ಷಣಮುಶಂತ್ಯುತ ॥ ೧೨**

---

ತಿಳಿಯುತ್ತಾನೆ ! (೭). ನಿನಗೂ ವಸುದೇವನಿಗೂ ಇರುವ ಸಖ್ಯವು ಆ ದುರ್ಬುದ್ಧಿಗೆ ಗೊತ್ತಿದೆ. ದೇವಕಿಯ ಮಗಳ ಮಾತನ್ನು ಕೇಳಿರುವ ಕಂಸನು 'ದೇವಕಿಯ ಎಂಟನೆಯ ಗರ್ಭವು ಹೆಣ್ಣಾಗಿರುವುದು ಸಂಭವವಲ್ಲ' ಎಂದು ಚಿಂತಿಸುತ್ತಿದ್ದಾನೆ. ಆದ್ದರಿಂದ ಅವನ ಶಂಕೆಯು ಇನ್ನೂ ಪ್ರಬಲವಾಗಿ ಅವನು ಈ ಬಾಲಕನನ್ನು ವಧಿಸಿದಲ್ಲಿ, ನಾವು ದೊಡ್ಡ ಅವಿವೇಕವನ್ನು ಮಾಡಿದಂತಾದೀತು" (೮–೯). ಅದಕ್ಕೆ ನಂದನು "ಮುನಿಗಳೆ, ಈ ಗೋವ್ರಜದಲ್ಲಿ ನನ್ನ ಕಡೆಯವರಿಗೂ ಗೊತ್ತಾಗದಂತೆ ರಹಸ್ಯದಲ್ಲಿ ಸ್ವಸ್ತಿವಾಚನಪೂರ್ವಕವಾಗಿ ದ್ವಿಜೋಚಿತವಾದ ಸಂಸ್ಕಾರವನ್ನು ನಡೆಸಿರಿ" ಎಂದು ಪ್ರಾರ್ಥಿಸಿದನು (೧೦). ಪರೀಕ್ಷಿತರಾಜ, ಗರ್ಗಮುನಿಯ ಇಷ್ಟವೇ ಅದಾಗಿತ್ತು ! ಆತನು ರಹಸ್ಯವಾಗಿ ಯಾರಿಗೂ ತಿಳಿಯದಂತೆ ಆ ಬಾಲಕರಿಗೆ ನಾಮಕರಣಸಂಸ್ಕಾರವನ್ನು ನೆರವೇರಿಸಿದನು (೧೧). ಅನಂತರ ನಂದಗೋಪನನ್ನು ಕುರಿತು "ಈ ರೋಹಿಣೀಪುತ್ರನು ತನ್ನ ಗುಣಗಳಿಂದ ಮಿತ್ರರನ್ನು ರಮಿಸು

ಆಸನ್ ವರ್ಣಾಸ್ತ್ರಯೋ ಹ್ಯಸ್ಯ ಗೃಹ್ಣತೋಽನುಯುಗಂ ತನೂಃ ।
ಶುಕ್ಲೋ ರಕ್ತಸ್ತಥಾ ಪೀತ ಇದಾನೀಂ ಕೃಷ್ಣತಾಂ ಗತಃ ॥ ೧೩

ಪ್ರಾಗಯಂ ವಸುದೇವಸ್ಯ ಕ್ವಚಿಜ್ಜಾತಸ್ತವಾತ್ಮಜಃ ।
ವಾಸುದೇವ ಇತಿ ಶ್ರೀಮಾನಭಿಜ್ಞಾಃ ಸಂಪ್ರಚಕ್ಷತೇ ॥ ೧೪

ಬಹೂನಿ ಸಂತಿ ನಾಮಾನಿ ರೂಪಾಣಿ ಚ ಸುತಸ್ಯ ತೇ ।
ಗುಣಕರ್ಮಾನುರೂಪಾಣಿ ತಾನ್ಯಹಂ ವೇದ ನೋ ಜನಾಃ ॥ ೧೫

ಏಷ ವಃ ಶ್ರೇಯ ಆಧಾಸ್ಯದ್ ಗೋಪಗೋಕುಲನಂದನಃ ।
ಅನೇನ ಸರ್ವದುರ್ಗಾಣಿ ಯೂಯಮಂಜಸ್ತರಿಷ್ಯಥ ॥ ೧೬

ಪುರಾನೇನ ವ್ರಜಪತೇ ಸಾಧವೋ ದಸ್ಯುಪೀಡಿತಾಃ ।
ಅರಾಜಕೇ ರಕ್ಷ್ಯಮಾಣಾ ಜಿಗ್ಯುರ್ದಸ್ಯೂನ್ ಸಮೇಧಿತಾಃ ॥ ೧೭

---

ವುದರಿಂದ (ಆನಂದಪಡಿಸುವುದರಿಂದ) ರಾಮನೆಂದೂ, ಅತ್ಯಂತ ಬಲಶಾಲಿಯಾಗು ವುದರಿಂದ ಬಲನೆಂದೂ ವಿಖ್ಯಾತನಾಗುವನು. ಯದುಗಳೆಲ್ಲರೂ ಐಕಮತ್ಯ ದಲ್ಲಿರುವಂತೆ ಆಕರ್ಷಿಸುವುದರಿಂದ ಸಂಕರ್ಷಣನೆಂದೂ ಜನರು ಹೇಳುವರು (೧೨). ನಿನ್ನ ಈ ಪುತ್ರನಾದರೋ ಹಿಂದಿನ ಯುಗಗಳಲ್ಲಿ ಜನಿಸಿದಾಗ ಕ್ರಮವಾಗಿ ಶುಕ್ಲ, ರಕ್ತ, ಪೀತವರ್ಣದ ದೇಹಗಳನ್ನು ಧರಿಸಿದ್ದನು ! ಈಗ ಕೃಷ್ಣವರ್ಣನಾಗಿದ್ದಾನೆ. (ಆದ್ದರಿಂದ ಕೃಷ್ಣನೆಂದು ಇವನ ಹೆಸರಾಗಲಿ) (೧೩). ನಿನ್ನ ಪುತ್ರನು ಹಿಂದೆ ಒಂದುಕಡೆ ವಸುದೇವನಿಗೆ ಮಗನಾಗಿ ಜನಿಸಿದ್ದನು. ಅದನ್ನರಿತವರು ಶ್ರೀಯುಕ್ತ ನಾದ ಈತನನ್ನು ವಾಸುದೇವನೆಂದು ಕರೆಯುತ್ತಾರೆ[1] (೧೪). ನಂದಗೋಪ, ನಿನ್ನ ಪುತ್ರನ ಗುಣಕರ್ಮಗಳಿಗೆ ಅನುಸಾರವಾಗಿ ಆತನ ನಾಮಗಳು ಅಸಂಖ್ಯವಾಗಿವೆ. ಅವನ್ನು ನಾನು ಬಲ್ಲೆ. ಈ ಜನರಿಗೆ ತಿಳಿಯದು ! (೧೫). ಈ ಬಾಲಕನು ನಿಮಗೆ ಶ್ರೇಯಸ್ಸನ್ನುಂಟುಮಾಡುವನು. ಗೋಪರನ್ನೂ ಗೋಕುಲವನ್ನೂ ಆನಂದ ಪಡಿಸುವನು. ಇವನಿಂದ ನೀವು ಸಕಲ ಕಷ್ಟಗಳನ್ನೂ ಶೀಘ್ರವಾಗಿ ನೀಗಿ ಕೊಳ್ಳುವಿರಿ (೧೬). ಗೋಕುಲೇಶ್ವರ, ಹಿಂದೆ ಅರಾಜಕವಾಗಿದ್ದಾಗ ಸಜ್ಜನರು

---

1 ರಾಮಕೃಷ್ಣರಿಬ್ಬರ ವಾಸ್ತವವೃತ್ತಾಂತವನ್ನು ನಂದನಿಗೂ ತಿಳಿಯದಂತೆ ಗರ್ಗ ಮುನಿಗಳು ಗೋಪ್ಯವಾಗಿ ನುಡಿಯುತ್ತಿದ್ದಾರೆ.

ಯ ಏತಸ್ಮಿನ್ ಮಹಾಭಾಗಾಃ ಪ್ರೀತಿಂ ಕುರ್ವಂತಿ ಮಾನವಾಃ ।
ನಾರಯೋಽಭಿಭವಂತ್ಯೇತಾನ್ ವಿಷ್ಣುಪಕ್ಷಾನಿವಾಸುರಾಃ ॥ ೧೮

ತಸ್ಮಾನ್ನಂದಾತ್ಮಜೋಽಯಂ ತೇ ನಾರಾಯಣಸಮೋ ಗುಣೈಃ ।
ಶ್ರಿಯಾ ಕೀರ್ತ್ಯಾನುಭಾವೇನ ಗೋಪಾಯಸ್ವ ಸಮಾಹಿತಃ ॥ ೧೯

ಇತ್ಯಾತ್ಮಾನಂ ಸಮಾದಿಶ್ಯ ಗರ್ಗೇ ಚ ಸ್ವಗೃಹಂ ಗತೇ ।
ನಂದಃ ಪ್ರಮುದಿತೋ ಮೇನೇ ಆತ್ಮಾನಂ ಪೂರ್ಣಮಾಶಿಷಾಮ್ ॥

ಕಾಲೇನ ವ್ರಜತಾಲ್ಪೇನ ಗೋಕುಲೇ ರಾಮಕೇಶವೌ ।
ಜಾನುಭ್ಯಾಂ ಸಹ ಪಾಣಿಭ್ಯಾಂ ರಿಂಗಮಾಣೌ ವಿಜಹ್ರತುಃ ॥ ೨೧

ತಾವಂಘ್ರಿಯುಗ್ಮಮನುಕೃಷ್ಯ ಸರೀಸೃಪಂತೌ
ಘೋಷಪ್ರಘೋಷರುಚಿರಂ ವ್ರಜಕರ್ದಮೇಷು ।
ತನ್ನಾದಹೃಷ್ಟಮನಸಾವನುಸೃತ್ಯ ಲೋಕಂ
ಮುಗ್ಧಪ್ರಭೀತವದುಪೇಯತುರಂತಿ ಮಾತ್ರೋಃ ॥ ೨೨

---

ದುರ್ಜನರ ಪೀಡೆಗೆ ಸಿಕ್ಕಿಕೊಂಡಿದ್ದರು. ಈತನ ರಕ್ಷಣೆಯಲ್ಲಿ ಸಜ್ಜನರು ಪ್ರಬಲರಾಗಿ ದಸ್ಯುಗಳನ್ನು ಜಯಿಸಿದ್ದಾರೆ (೧೭). ಯಾವ ಮಾನವರು ಈತನನ್ನು ಪ್ರೀತಿಸುವರೋ ಆ ಪುಣ್ಯಶಾಲಿಗಳನ್ನು ವೈರಿಗಳು ಜಯಿಸಲಾರರು. ವಿಷ್ಣುಭಕ್ತರನ್ನು ಅಸುರರು ಹೇಗೆ ಜಯಿಸಲಾರರೋ ಹಾಗೆಯೇ ಇದು! (೧೮). ಆದ್ದರಿಂದ, ನಂದ, ನಿನ್ನ ಪುತ್ರನು ಗುಣಗಳಲ್ಲಿ ಶ್ರೀಮನ್ನಾರಾಯಣನಿಗೆ ಸಮಾನನೆಂದು ತಿಳಿ. ಸಂಪತ್ತು, ಕೀರ್ತಿ, ಮಹಿಮೆಗಳಲ್ಲಿಯೂ ಆತನಿಗೆ ಸದೃಶನೇ. ಆದಕಾರಣ ಎಚ್ಚರಿಕೆಯಿಂದ ಈ ಬಾಲಕನನ್ನು ಸಂರಕ್ಷಿಸು" (೧೯) ಎಂದು ಶ್ರೀಕೃಷ್ಣನ ವಿಷಯವಾಗಿ ತಿಳಿಸಿ ಗರ್ಗಮುನಿಯು ತನ್ನ ಆಶ್ರಮಕ್ಕೆ ಹಿಂದಿರುಗಿದನು. ಸಮಸ್ತ ಆಶೀರ್ವಾದಗಳೂ ತನ್ನಲ್ಲಿ ಪೂರ್ಣವಾಗಿ ಫಲಿಸಿದವೆಂದು ನಂದನು ಆನಂದದಿಂದ ಹಿಗ್ಗಿದನು (೨೦). ಸ್ವಲ್ಪಕಾಲವು ಕಳೆಯಲಾಗಿ ರಾಮಕೃಷ್ಣರು ಗೋಕುಲದಲ್ಲಿ ಮೊಳಕಾಲುಗಳಿಂದಲೂ ಕೈಗಳಿಂದಲೂ—ಅಂಬೆಗಾಲಿಡುತ್ತ ಕ್ರೀಡಿಸತೊಡಗಿದರು (೨೧). ಆ ಬಾಲಕರು ಕಾಲೆಳೆದು ಹೆಜ್ಜೆಯಿಡುತ್ತ ಕಾಲ್ಗೆಜ್ಜೆಗಳನ್ನು ಇಂಪಾಗಿ ಜಣಗುಟ್ಟಿಸುತ್ತ ಮೆಲ್ಲಗೆ ನಡೆಯಲಾರಂಭಿಸಿದರು. ಜಣಜಣಕಾರಕ್ಕೆ ಹಿಗ್ಗುತ್ತ,

ತನ್ಮಾತರೌ ನಿಜಸುತೌ ಘೃಣಯಾ ಸ್ನುವಂತ್ಯೌ
ಪಂಕಾಂಗರಾಗರುಚಿರಾವುಪಗುಹ್ಯ ದೋರ್ಭ್ಯಾಮ್ ।
ದತ್ತ್ವಾ ಸ್ತನಂ ಪ್ರಪಿಬತೋಃ ಸ್ಮ ಮುಖಂ ನಿರೀಕ್ಷ್ಯ
ಮುಗ್ಧಸ್ಮಿತಾಲ್ಪದಶನಂ ಯಯತುಃ ಪ್ರಮೋದಮ್ ॥

ಯರ್ಹ್ಯಂಗನಾದರ್ಶನೀಯಕುಮಾರಲೀಲಾ-
ವಂತರ್ವ್ರಜೇ ತದಬಲಾಃ ಪ್ರಗೃಹೀತಪುಚ್ಛೈಃ ।
ವತ್ಸೈರಿತಸ್ತತ ಉಭಾವನುಕೃಷ್ಯಮಾಣೌ
ಪ್ರೇಕ್ಷಂತ್ಯ ಉಜ್ಝಿತಗೃಹಾ ಜಹೃಷುರ್ಹಸಂತ್ಯಃ ॥ ೨೪

ಶೃಂಗ್ಯಗ್ನಿದಂಷ್ಟ್ರ್ಯಸಿಜಲದ್ವಿಜಕಂಟಕೇಭ್ಯಃ
ಕ್ರೀಡಾಪರಾವತಿಚಲೌ ಸ್ವಸುತೌ ನಿಷೇದ್ಧುಮ್ ।
ಗೃಹ್ಯಾಣಿ ಕರ್ತುಮಪಿ ಯತ್ರ ನ ತಜ್ಜನನ್ಯೌ
ಶೇಕಾತ ಆಪತುರಲಂ ಮನಸೋಽನವಸ್ಥಾಮ್ ॥ ೨೫

---

ಗೋಕುಲದ ಕೆಸರುನೆಲದಲ್ಲಿ ನಡೆದಾಡುವ ಜನರನ್ನು ಹಿಂಬಾಲಿಸಿ ಹೋಗಿ, ಮುಗ್ಧರಾಗಿ ಹೆದರಿದವರಂತೆ ಮತ್ತೆ ತಾಯಂದಿರ ಬಳಿಗೆ ಬರುತ್ತಿದ್ದರು (೨೨). ಆಗ ತಾಯಂದಿರಾದ ರೋಹಿಣೀ ಯಶೋದೆಯರಿಗೆ ವಾತ್ಸಲ್ಯದಿಂದ ಸ್ತನ್ಯವು ಒಸರುತ್ತಿತ್ತು. ಕೆಸರಿನಿಂದ ಭೂಷಿತರಾದ ಮಕ್ಕಳನ್ನು ಕೈಗಳಿಂದ ಎತ್ತಿಕೊಂಡು ಸ್ತನ್ಯವನ್ನು ಕೊಡುತ್ತಿದ್ದರು. ಎದೆಹಾಲನ್ನು ಕುಡಿಯುವಾಗ ಕಿರುನಗೆ ಮಿನುಗುವ, ಎಳೆಹಲ್ಲು ಕಾಣುವ ಅವರ ಮುಖಗಳನ್ನು ನೋಡಿ ನೋಡಿ ಆನಂದಿಸುತ್ತಿದ್ದರು (೨೩). ಆಮೇಲೆ ವ್ರಜಸ್ತ್ರೀಯರಿಗೆ ಕಾಣುವಂತೆ ಬಾಲಲೀಲೆ ಆರಂಭವಾಯಿತು. ಈ ಬಾಲಕರು (ಬೀದಿಗೆ ಹೋಗಿ) ಕರುಗಳ ಬಾಲಗಳನ್ನು ಹಿಡಿದುಕೊಳ್ಳುತ್ತಿದ್ದರು. ಕರುಗಳು ಇವರನ್ನು ಅತ್ತಿತ್ತ ಎಳೆದುಕೊಂಡು ಹೋಗುತ್ತಿದ್ದವು. ಆ ದೃಶ್ಯವನ್ನು ನೋಡುವುದಕ್ಕಾಗಿ ಗೋಪಿಯರು ಮನೆಗಳಿಂದ ಹೊರಗೆ ಬಂದು ನೋಡಿ ನೋಡಿ ನಗುತ್ತ ಹರ್ಷಿಸುತ್ತಿದ್ದರು (೨೪). (ರಾಮಕೃಷ್ಣರ ತುಂಟತನವು ಹೆಚ್ಚಿತು) ಕೊಂಬುಗಳು ಬೆಳೆದ ಹಸು ಎತ್ತುಗಳು, ಹಾವು ಚೇಳುಗಳು, ಕತ್ತಿ, ನೀರು, ಹಕ್ಕಿಗಳು, ಮುಳ್ಳು ಇವುಗಳನ್ನು ಲೆಕ್ಕಿಸದೆ ಅತಿಚಪಲರಾದ ಈ ಬಾಲಕರು ಆಟವಾಡುತ್ತಿದ್ದರು. ತಾಯಂದಿರಿಗೆ ಇವರನ್ನು ತಡೆಯುವುದೇ ಆಯಿತು. ಮನೆಗೆಲಸವನ್ನು ಮಾಡಲು

*

ಕಾಲೇನಾಲ್ಪೇನ ರಾಜರ್ಷೇ ರಾಮಃ ಕೃಷ್ಣಶ್ಚ ಗೋಕುಲೇ ।
ಅಘೃಷ್ಟಜಾನುಭಿಃ ಪದ್ಭಿರ್ವಿಚಕ್ರಮತುರಂಜಸಾ ॥ ೨೬

ತತಸ್ತು ಭಗವಾನ್ ಕೃಷ್ಣೋ ವಯಸ್ಯೈರ್ವ್ರಜಬಾಲಕೈಃ ।
ಸಹರಾಮೋ ವ್ರಜಸ್ತ್ರೀಣಾಂ ಚಿಕ್ರೀಡೇ ಜನಯನ್ ಮುದಮ್ ॥

ಕೃಷ್ಣಸ್ಯ ಗೋಪ್ಯೋ ರುಚಿರಂ ವೀಕ್ಷ್ಯ ಕೌಮಾರಚಾಪಲಮ್ ।
ಶೃಣ್ವತ್ಯಾಃ ಕಿಲ ತನ್ಮಾತುರಿತಿ ಹೋಚುಃ ಸಮಾಗತಾಃ ॥ ೨೮

ವತ್ಸಾನ್ ಮುಂಚನ್ ಕ್ವಚಿದಸಮಯೇ ಕ್ರೋಶಸಂಜಾತಹಾಸಃ
ಸ್ತೇಯಂ ಸ್ವಾದ್ವತ್ತ್ಯಥ ದಧಿ ಪಯಃ ಕಲ್ಪಿತೈಃ ಸ್ತೇಯಯೋಗೈಃ ।
ಮರ್ಕಾನ್ ಭೋಕ್ಷ್ಯನ್ ವಿಭಜತಿ ಸ ಚೇನ್ನಾತ್ತಿ ಭಾಂಡಂ ಭಿನತ್ತಿ
ದ್ರವ್ಯಾಲಾಭೇ ಸ ಗೃಹಕುಪಿತೋ ಯಾತ್ಯುಪಕ್ರೋಶ್ಯ ತೋಕಾನ್ ॥

ಹಸ್ತಾಗ್ರಾಹ್ಯೇ ರಚಯತಿ ವಿಧಿಂ ಪೀಠಕೋಲೂಖಲಾದ್ಯೈ-
ಶ್ಛಿದ್ರಂ ಹ್ಯಂತರ್ನಿಹಿತವಯುನಃ ಶಿಕ್ಯಭಾಂಡೇಷು ತದ್ವಿತ್ ।

---

ಸಾಧ್ಯವೇ ಆಗುತ್ತಿರಲಿಲ್ಲ. ಇದರಿಂದ ರೋಹಿಣೀಯಶೋದೆಯರ ಮನಸ್ಸಿಗೆ ಕಿರಿಕಿರಿಯಾಗತೊಡಗಿತು (೨೫). ರಾಜರ್ಷಿ-ಪರೀಕ್ಷಿತ, ಸ್ವಲ್ಪಕಾಲದಲ್ಲಿಯೇ ರಾಮನೂ ಕೃಷ್ಣನೂ ತಡವರಿಸದೆ ನಡೆಯಬಲ್ಲವರಾಗಿ ಗೋಕುಲದಲ್ಲಿ ಯಥೇಚ್ಛೆಯಾಗಿ ಸಂಚರಿಸಲಾರಂಭಿಸಿದರು (೨೬). ಭಗವಾನ್‌ಕೃಷ್ಣನು ಬಲರಾಮನನ್ನೂ ಗೆಳೆಯರಾದ ಗೋಪಬಾಲಕರನ್ನೂ ಕರೆದುಕೊಂಡು ವ್ರಜಸ್ತ್ರೀಯರಿಗೆ ವಿನೋದವಾಗುವಂತೆ ವಿವಿಧ ಕ್ರೀಡೆಗಳಲ್ಲಿ ನಿರತನಾದನು (೨೭). ಬಾಲೋಚಿತವಾಗಿ ಅವನಿಗೆ ಪ್ರಿಯವಾದ ತುಂಟತನವನ್ನು ಕಂಡು ಗೋಪಿಯರು ಆತನ ತಾಯಿಯ ಬಳಿಗೆ ಬಂದು ಈ ರೀತಿಯಲ್ಲಿ ದೂರು ಹೇಳುತ್ತಿದ್ದರು (೨೮): "ನೋಡು ಯಶೋದೆ, ಕೃಷ್ಣನು ಯಾವುದೋ ಅಕಾಲದಲ್ಲಿ ಬಂದು ಕಟ್ಟಿಹಾಕಿದ ಕರುಗಳನ್ನು ಬಿಚ್ಚಿಬಿಡುತ್ತಾನೆ. ಅವು ಕೂಗುತ್ತ ಅಲೆಯುವುದನ್ನು ಕಂಡು ನಗುತ್ತಾನೆ. ಹಾಲು ಮೊಸರನ್ನು ಕದ್ದು ಕುಡಿಯುವುದಲ್ಲದೆ ಕಪಿಗಳಿಗೆ ಹಂಚುತ್ತಾನೆ. ಕಪಿಯು ಬಂದು ಕುಡಿಯದಿದ್ದರೆ ಗಡಿಗೆಯನ್ನು ಒಡೆದುಹಾಕುತ್ತಾನೆ. ಏನೂ ಸಿಗದಿದ್ದರೆ ಮನೆಯ ಮೇಲಿನ ಸಿಟ್ಟಿಗೆ ಮನೆಯಲ್ಲಿರುವ ಮಕ್ಕಳನ್ನು ಅಳಿಸಿ ಓಡಿಹೋಗುತ್ತಾನೆ! (೨೯).

ಧ್ವಾಂತಾಗಾರೇ ಧೃತಮಣಿಗಣಂ ಸ್ವಾಂಗಮರ್ಥಪ್ರದೀಪಂ
ಕಾಲೇ ಗೋಪ್ಯೋ ಯರ್ಹಿ ಗೃಹಕೃತ್ಯೇಷು ಸುವ್ಯಗ್ರಚಿತ್ತಾಃ ॥ ೩೦

ಏವಂ ಧಾರ್ಷ್ಟ್ಯಾನ್ಯುಶತಿ ಕುರುತೇ ಮೇಹನಾದೀನಿ ವಾಸ್ತೌ
ಸ್ತೇಯೋಪಾಯೈರ್ವಿರಚಿತಕೃತಿಃ ಸುಪ್ರತೀಕೋ ಯಥಾಽಽಸ್ತೇ ।
ಇತ್ಥಂ ಸ್ತ್ರೀಭಿಃ ಸಭಯನಯನಶ್ರೀಮುಖಾಲೋಕಿನೀಭಿ-
ರ್ವ್ಯಾಖ್ಯಾತಾರ್ಥಾ ಪ್ರಹಸಿತಮುಖೀ ನ ಹ್ಯುಪಾಲಬ್ಧುಮೈಚ್ಛತ್ ॥

ಏಕದಾ ಕ್ರೀಡಮಾನಾಸ್ತೇ ರಾಮಾದ್ಯಾ ಗೋಪದಾರಕಾಃ ।
ಕೃಷ್ಣೋ ಮೃದಂ ಭಕ್ಷಿತವಾನಿತಿ ಮಾತ್ರೇ ನ್ಯವೇದಯನ್ ॥ ೩೨

ಸಾ ಗೃಹೀತ್ವಾ ಕರೇ ಕೃಷ್ಣಮುಪಾಲಭ್ಯ ಹಿತೈಷಿಣೀ ।
ಯಶೋದಾ ಭಯಸಂಭ್ರಾಂತಪ್ರೇಕ್ಷಣಾಕ್ಷಮಭಾಷತ ॥ ೩೩

---

ಪಾತ್ರೆಯು ಕೈಗೆ ಸಿಲುಕದಿದ್ದರೆ ಪೀಠ, ಒರಳು-ಮುಂತಾದ್ದನ್ನು ಕೆಳಗಿಟ್ಟುಕೊಂಡು ಪಾತ್ರೆಯನ್ನು ಇಳಿಸಿಬಿಡುತ್ತಾನೆ. ಶಿಕ್ಯಗಳಲ್ಲಿರುವ ಗಡಿಗೆಗಳಲ್ಲಿ ಏನಿರುವುದೆಂಬುದು ಅವನಿಗೆ ಗೊತ್ತು ! ಆ ಗಡಿಗೆಗಳಿಗೆ ತೂತುಮಾಡುತ್ತಾನೆ. ತಾನು ಧರಿಸಿರುವ ರತ್ನಗಳೇ ಕತ್ತಲೆಯ ಮನೆಯಲ್ಲಿ ಅವನಿಗೆ ದೀಪವಾಗುತ್ತವೆ. ಗೋಪಿಯರು ಗೃಹ ಕೃತ್ಯದಲ್ಲಿ ಮಗ್ನರಾಗಿರುವಾಗ ಇಂತಹ ಕೈಚಳಕವನ್ನು ತೋರಿಸುತ್ತಾನೆ ! (೩೦). ಹೀಗೆಯೇ ಇವನು ನಡೆಸುವ ತುಂಟ ಚೇಷ್ಟೆಗಳು ಎಷ್ಟೋ ! ವಾಸ್ತುಬಾಗಿಲಿನಲ್ಲಿ ಮೂತ್ರಶಂಕೆಮಾಡುತ್ತಾನೆ ! ಇವನದೆಲ್ಲವೂ ಕಳ್ಳತನದ ಉಪಾಯಕೃತ್ಯವೇ. (ಈಗ ನೋಡು, ನಿನ್ನೆದುರಿನಲ್ಲಿ) ಏನನ್ನೂ ಅರಿಯದ ಸಾಧುಪ್ರಾಣಿಯಂತೆ ಇದ್ದಾನೆ !" ಎಂದು ಹೇಳುತ್ತ ಅಲ್ಲಿದ್ದ ಕೃಷ್ಣನ ಮುದ್ದುಮುಖವನ್ನು ನೋಡುತ್ತಿದ್ದರು. ಕೃಷ್ಣನ ಕಣ್ಣುಗಳಲ್ಲಿ ಹೆದರಿಕೆ ಎದ್ದು ಕಾಣುತ್ತಿತ್ತು. ಆಗ ಯಶೋದೆಯು ನಕ್ಕುಬಿಡು ತ್ತಿದ್ದಳಲ್ಲದೆ ಮಗನನ್ನು ಗದರಿಸಿಕೊಳ್ಳುತ್ತಿರಲಿಲ್ಲ (೩೧). ಹೀಗಿರುವಾಗ ಒಂದು ಸಲ ಕೃಷ್ಣನೊಡನೆ ಬಲರಾಮನೂ ಗೋಪಬಾಲಕರೂ ಆಟವಾಡುತ್ತಿದ್ದರು. ಅವರು ಯಶೋದೆಯ ಬಳಿಗೆ ಬಂದು 'ಕೃಷ್ಣನು ಮಣ್ಣನ್ನು ತಿಂದುಬಿಟ್ಟನು' ಎಂದು ಹೇಳಿದರು ! (೩೨). ಹಿತೈಷಿಣಿಯಾದ ಯಶೋದೆಯು ಕೃಷ್ಣನ ಕೈಯನ್ನು

**ಕಸ್ಮಾನ್ಮೃದಮದಾಂತಾತ್ಮನ್ ಭವಾನ್ ಭಕ್ಷಿತವಾನ್ ರಹಃ ।**
**ವದಂತಿ ತಾವಕಾ ಹ್ಯೇತೇ ಕುಮಾರಾಸ್ತೇಽಗ್ರಜೋಽಪ್ಯಯಮ್ ॥**

**ಶ್ರೀಕೃಷ್ಣ ಉವಾಚ—**

**ನಾಹಂ ಭಕ್ಷಿತವಾನಂಬ ಸರ್ವೇ ಮಿಥ್ಯಾಭಿಶಂಸಿನಃ ।**
**ಯದಿ ಸತ್ಯಗಿರಸ್ತರ್ಹಿ ಸಮಕ್ಷಂ ಪಶ್ಯ ಮೇ ಮುಖಮ್ ॥ ೩೫**

**ಯದ್ಯೇವಂ ತರ್ಹಿ ವ್ಯಾದೇಹೀತ್ಯುಕ್ತಃ ಸ ಭಗವಾನ್ ಹರಿಃ ।**
**ವ್ಯಾದತ್ತಾವ್ಯಾಹತೈಶ್ವರ್ಯಃ ಕ್ರೀಡಾಮನುಜಬಾಲಕಃ ॥ ೩೬**

**ಸಾ ತತ್ರ ದದೃಶೇ ವಿಶ್ವಂ ಜಗತ್ ಸ್ಥಾಸ್ನು ಚ ಖಂ ದಿಶಃ ।**
**ಸಾದ್ರಿದ್ವೀಪಾಬ್ಧಿಭೂಗೋಲಂ ಸವಾಯ್ವಗ್ನೀಂದುತಾರಕಮ್ ॥ ೩೭**

**ಜ್ಯೋತಿಶ್ಚಕ್ರಂ ಜಲಂ ತೇಜೋ ನಭಸ್ವಾನ್ ವಿಯದೇವ ಚ ।**
**ವೈಕಾರಿಕಾಣೀಂದ್ರಿಯಾಣಿ ಮನೋ ಮಾತ್ರಾ ಗುಣಾಸ್ತ್ರಯಃ ॥ ೩೮**

---

ಹಿಡಿದುಕೊಂಡು ಗದರಿಸಿದಳು. ಅವನು ಹೆದರಿ ನಡುಗಿ ಕಣ್ಣುಗಳನ್ನು ಅತ್ತಿತ್ತ ಹೊರಳಿಸುತ್ತಿದ್ದನು (೩೩). ಯಶೋದೆಯು "ಎಲವೊ ತುಂಟ, ಗುಟ್ಟಾಗಿ ಮಣ್ಣನ್ನು ತಿಂದೆಯಾ? ಏಕೆ ತಿಂದೆ? ನಿನ್ನ ಸ್ನೇಹಿತರು ಹಾಗೆ ಹೇಳುತ್ತಿದ್ದಾರೆ. ನಿನ್ನ ಅಣ್ಣನೂ ಹೇಳುತ್ತಿದ್ದಾನೆ" ಎಂದಳು (೩೪). ಕೃಷ್ಣನು "ಅಮ್ಮ, ನಾನು ಮಣ್ಣನ್ನು ತಿಂದಿಲ್ಲ. ಇವರೆಲ್ಲರೂ ಸುಳ್ಳು ಹೇಳುತ್ತಾರೆ! ಅವರು ಹೇಳುವುದು ಸತ್ಯವಾದರೆ, ನನ್ನ ಬಾಯನ್ನು ನೋಡು" ಎಂದು ಹೇಳಿದನು (೩೫). "ಹಾಗಾದರೆ ತೆರೆ ಬಾಯನ್ನು!" ಎಂದು ಯಶೋದೆ ನುಡಿದಳು. ಪರೀಕ್ಷಿತರಾಜ, ಲೀಲಾರ್ಥವಾಗಿ ಮನುಷ್ಯಬಾಲಕನ ವೇಷವನ್ನು ಧರಿಸಿದವನೂ ಅಪ್ರತಿಹತವಾದ ಅಣಿಮಾದಿಸಿದ್ಧಿಯುಳ್ಳವನೂ ಆದ ಭಗವಾನ್ ಶ್ರೀ ಹರಿಯು ಬಾಯ್ದೆರೆದನು (೩೬). ಯಶೋದೆಯು ಕೃಷ್ಣನ ಬಾಯಲ್ಲಿ ಸ್ಥಾವರ ಜಂಗಮಾತ್ಮಕವಾದ ಸಮಸ್ತ ವಿಶ್ವವನ್ನೇ ಕಂಡಳು! ಅಂತರಿಕ್ಷ, ದಿಕ್ಕುಗಳು, ಪರ್ವತ ದ್ವೀಪಸಾಗರ ಸಮೇತವಾದ ಭೂಲೋಕ, ಪ್ರವಹವೆಂಬ ವಾಯು, ವೈದ್ಯುತಾಗ್ನಿ, ಚಂದ್ರ, ನಕ್ಷತ್ರಗಳು ಗೋಚರಿಸಿದವು (೩೭). ಹಾಗೆಯೇ ಸ್ವರ್ಲೋಕ, ಜಲ, ಅಗ್ನಿ, ವಾಯು, ಆಕಾಶ, ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ಮನಸ್ಸು, ಶಬ್ದಾದಿ ಪಂಚಮಾತ್ರೆ

ಏತದ್ ವಿಚಿತ್ರಂ ಸಹ ಜೀವಕಾಲ-
ಸ್ವಭಾವಕರ್ಮಾಶಯಲಿಂಗಭೇದಮ್ ।
ಸೂನೋಸ್ತನೌ ವೀಕ್ಷ್ಯ ವಿದಾರಿತಾಸ್ಯೇ
ವ್ರಜಂ ಸಹಾತ್ಮಾನಮವಾಪ ಶಂಕಾಮ್ ॥ ೩೯

ಕಿಂ ಸ್ವಪ್ನ ಏತದುತ ದೇವಮಾಯಾ
ಕಿಂ ವಾ ಮದೀಯೋ ಬತ ಬುದ್ಧಿಮೋಹಃ ।
ಅಥೋ ಅಮುಷ್ಯೈವ ಮಮಾರ್ಭಕಸ್ಯ
ಯಃ ಕಶ್ಚನೌತ್ಪತ್ತಿಕ ಆತ್ಮಯೋಗಃ ॥ ೪೦

ಅಥೋ ಯಥಾವನ್ನ ವಿತರ್ಕಗೋಚರಂ
ಚೇತೋಮನಃ ಕರ್ಮವಚೋಭಿರಂಜಸಾ ।
ಯದಾಶ್ರಯಂ ಯೇನ ಯತಃ ಪ್ರತೀಯತೇ
ಸುದುರ್ವಿಭಾವ್ಯಂ ಪ್ರಣತಾಸ್ಮಿ ತತ್ಪದಮ್ ॥ ೪೧

ಅಹಂ ಮಮಾಸೌ ಪತಿರೇಷ ಮೇ ಸುತೋ
ವ್ರಜೇಶ್ವರಸ್ಯಾಖಿಲವಿತ್ತಪಾ ಸತೀ ।
ಗೋಪ್ಯಶ್ಚ ಗೋಪಾಃ ಸಹಗೋಧನಾಶ್ಚ ಮೇ
ಯನ್ಮಾಯಯೇತ್ಥಂ ಕುಮತಿಃ ಸ ಮೇ ಗತಿಃ ॥ ೪೨

---

ಗಳು, ಸತ್ತ್ವರಜಸ್ತಮೋಗುಣಗಳು, ಕಾಣಿಸಿದವು (೩೮). ಇವುಗಳನ್ನಲ್ಲದೆ ಯಶೋದೆಯು ಬಾಯ್ದೆರೆದ ಮಗನ ಬಾಯಲ್ಲಿ ಜೀವ, ಕಾಲ, ಸ್ವಭಾವ, ಕರ್ಮ, ಸಂಸ್ಕಾರಗಳಿಂದ ವಿಭಿನ್ನವಾದ ಚರಾಚರ ಶರೀರಗಳನ್ನೂ ಗೋಕುಲವನ್ನೂ ತನ್ನನ್ನೂ ನೋಡಿದಳು! ಇದೇನಿರಬಹುದೆಂದು ಅವಳಿಗೆ ವಿಭ್ರಮೆಯಾಯಿತು (೩೯). "ಆ! ಇದೇನು? ಕನಸೆ? ದೇವಮಾಯೆಯೆ? ನನ್ನ ಬುದ್ಧಿಭ್ರಮಣೆಯೆ? ಅಥವಾ ನನ್ನ ಮಗನಿಗೆ ಸಹಜವಾದ ಒಂದಾನೊಂದು ಸಿದ್ಧಿ ಇರಬಹುದೆ? (೪೦). (ಈ ಬಾಲಕನು ಈಶ್ವರನೇ ಆಗಿರಬೇಕು) ಈ ಜಗತ್ತು ಯಾರಲ್ಲಿ ಯಾರಿಂದ ನಿಂತಿದೆಯೋ ಯಾರ ದೆಸೆಯಿಂದ ಗೋಚರಿಸುತ್ತಿದೆಯೋ ಅಂತಹ ದುರ್ನಿರೂಪ್ಯವೂ ಚಿತ್ತಮನಃಕಾಯವಚನಗಳಿಗೆ ನಿಲುಕದಿರುವುದೂ ಆದ ಪರಮಪದಕ್ಕೆ ನಮೋನಮಃ! (೪೧). ಯಾವ ಪರವಸ್ತುವಿನ ಮಾಯೆಯಿಂದ ಮೋಹಿತ

**ಇತ್ಥಂ ವಿದಿತತತ್ತ್ವಾಯಾಂ ಗೋಪಿಕಾಯಾಂ ಸ ಈಶ್ವರಃ ।**
**ವೈಷ್ಣವೀಂ ವ್ಯತನೋನ್ಮಾಯಾಂ ಪುತ್ರಸ್ನೇಹಮಯೀಂ ವಿಭುಃ ॥**

**ಸದ್ಯೋನಷ್ಟಸ್ಮೃತಿರ್ಗೋಪೀ ಸಾಽಽರೋಪ್ಯಾರೋಹಮಾತ್ಮಜಮ್**
**ಪ್ರವೃದ್ಧಸ್ನೇಹಕಲಿಲಹೃದಯಾಽಽಸೀದ್ ಯಥಾ ಪುರಾ ॥ ೪೪**

**ತ್ರಯ್ಯಾ ಚೋಪನಿಷದ್ಭಿಶ್ಚ ಸಾಂಖ್ಯಯೋಗೈಶ್ಚ ಸಾತ್ವತೈಃ ।**
**ಉಪಗೀಯಮಾನಮಾಹಾತ್ಮ್ಯಂ ಹರಿಂ ಸಾಮನ್ಯತಾತ್ಮಜಮ್॥೪೫**

ರಾಜೋವಾಚ—

**ನಂದಃ ಕಿಮಕರೋದ್ ಬ್ರಹ್ಮನ್ ಶ್ರೇಯ ಏವಂ ಮಹೋದಯಮ್।**
**ಯಶೋದಾ ಚ ಮಹಾಭಾಗಾ ಪಪೌ ಯಸ್ಯಾಃ ಸ್ತನಂ ಹರಿಃ ॥ ೪೬**

---

ಳಾಗಿ 'ನಾನು ಯಶೋದೆ, ನಂದನು ನನ್ನ ಪತಿ, ಕೃಷ್ಣನು ನನ್ನ ಮಗ, ವ್ರಜ ನಾಥನ ನಿಖಿಲೈಶ್ವರ್ಯಕ್ಕೂ ನಾನು ಅಧೀಶ್ವರಿ, ಗೋಪಿಯರು ಗೋಪರು ಗೋವುಗಳು ನನಗೆ ಅಧೀನವಾದವು' ಎಂಬ ದುರ್ಭಾವನೆಯನ್ನು ಪಡೆದಿರುವೆನೋ ಅಂತಹ ಪರವಸ್ತುವಾದ ಈತನೇ ನನಗೆ ಶರಣು" ಎಂದು ನಿಶ್ಚಯಿಸಿದಳು (೪೨). ಈ ಪ್ರಕಾರವಾಗಿ ಗೋಪಿಯು ತತ್ತ್ವವನ್ನರಿತುಕೊಳ್ಳುವಷ್ಟರಲ್ಲಿ, ರಾಜ, ಭಗವಂತನು ಪುತ್ರಸ್ನೇಹಮಯವಾದ ವೈಷ್ಣವಮಾಯೆಯನ್ನು ಮತ್ತೆ ಅವಳ ಮೇಲೆ ಬೀಸಿದನು! (೪೩). ಯಶೋದೆಯು ಎಲ್ಲವನ್ನೂ ಮರೆತು ಮೊದಲಿನಂತಾದಳು! ಪುತ್ರವಾತ್ಸಲ್ಯದಿಂದ ಹೃದಯವು ಕರಗಿತು. ಮಗನನ್ನು ಕಂಕುಳಲ್ಲೆತ್ತಿಕೊಂಡಳು (೪೪). ವೇದೋಪನಿಷತ್ತುಗಳೂ ಸಾಂಖ್ಯಯೋಗಗಳೂ ವೈಷ್ಣವಾಗಮಗಳೂ ಯಾರ ಮಹಿಮೆಯನ್ನು ಕೊಂಡಾಡುತ್ತಿವೆಯೋ[1] ಆ ಶ್ರೀಹರಿಯನ್ನು ಯಶೋದೆಯು ತನ್ನ ಮಗನೆಂದು ತಿಳಿದುಕೊಂಡಳು! (೪೫). ಆಗ ವಿಸ್ಮಿತನಾದ ಪರೀಕ್ಷಿತರಾಜನು ಶುಕಮುನಿಗಳನ್ನು ಕುರಿತು "ಬ್ರಹ್ಮರ್ಷಿಗಳೆ, ಇಂತಹ ಮಹಾಭಾಗ್ಯವನ್ನು ಪಡೆಯಲು ನಂದನು ಯಾವ ಪುಣ್ಯವನ್ನು ಸಂಪಾದಿಸಿದ್ದನು ?

---

[1] ಕರ್ಮಕಾಂಡವಾದ ವೇದವು ಇಂದ್ರಾದಿ ದೇವತೆಯೆಂದೂ ಜ್ಞಾನಕಾಂಡವಾದ ಉಪನಿಷತ್ತು ಬ್ರಹ್ಮವೆಂದೂ ಸಾಂಖ್ಯವು ಪುರುಷನೆಂದೂ ಯೋಗವು ಈಶ್ವರನೆಂದೂ ಆಗಮಗಳು ಭಗವಂತನೆಂದೂ ಕೊಂಡಾಡುತ್ತವೆ.

ಪಿತರೌ ನಾನ್ವವಿಂದೇತಾಂ ಕೃಷ್ಣೋದಾರಾರ್ಭಕೇಹಿತಮ್ ।
ಗಾಯಂತ್ಯದ್ಯಾಪಿ ಕವಯೋ ಯಲ್ಲೋಕಶಮಲಾಪಹಮ್ ॥ ೪೭

ಶ್ರೀಶುಕ ಉವಾಚ—

ದ್ರೋಣೋ ವಸೂನಾಂ ಪ್ರವರೋ ಧರಯಾ ಸಹ ಭಾರ್ಯಯಾ ।
ಕರಿಷ್ಯಮಾಣ ಆದೇಶಾನ್ ಬ್ರಹ್ಮಣಸ್ತಮುವಾಚ ಹ ॥ ೪೮

ಜಾತಯೋರ್ನೌ ಮಹಾದೇವೇ ಭುವಿ ವಿಶ್ವೇಶ್ವರೇ ಹರೌ ।
ಭಕ್ತಿಃ ಸ್ಯಾತ್ ಪರಮಾ ಲೋಕೇ ಯಯಾಂಜೋ ದುರ್ಗತಿಂ ತರೇತ್ ॥ ೪೯

ಅಸ್ತ್ವಿತ್ಯುಕ್ತಃ ಸ ಭಗವಾನ್ ವ್ರಜೇ ದ್ರೋಣೋ ಮಹಾಯಶಾಃ ।
ಜಜ್ಞೇ ನಂದ ಇತಿ ಖ್ಯಾತೋ ಯಶೋದಾ ಸಾ ಧರಾಭವತ್ ॥ ೫೦

---

ಶ್ರೀಹರಿಯು ಯಶೋದೆಯ ಸ್ತನ್ಯವನ್ನು ಕುಡಿದನಲ್ಲ, ಆ ಭಾಗ್ಯವಂತೆಯ ಪುಣ್ಯವಾದರೂ ಎಂತಹುದು ? (೪೬). ಶ್ರೀಕೃಷ್ಣನ ಯಾವ ಬಾಲಲೀಲೆಯು ಜನರ ದುರಿತವನ್ನು ಪರಿಹರಿಸಬಲ್ಲುದೋ, ಯಾವುದನ್ನು ಇಂದಿಗೂ ಕವಿಗಳು ಕೊಂಡಾಡುತ್ತಿರುವರೋ ಆ ಬಾಲಲೀಲೆಯನ್ನು ನೋಡುವ ಭಾಗ್ಯವು ತಂದೆತಾಯಿಗಳಾದ ವಸುದೇವದೇವಕಿಯರಿಗೂ ಲಭಿಸಲಿಲ್ಲ ! (ಆ ಭಾಗ್ಯವು ನಂದಯಶೋದೆಯರಿಗೆ ಲಭಿಸಿತು ! ) " ಎಂದು ಕೇಳಿದನು (೪೭). ಶುಕಮುನಿಗಳು ಹೇಳಿದರು : ವಸುಗಳಲ್ಲಿ ಶ್ರೇಷ್ಠನಾದ ದ್ರೋಣನೆಂಬವನು ಅವನ ಪತ್ನಿಯಾದ ಧರೆಯೊಡನೆ ಗೋಕುಲದಲ್ಲಿ ಜನಿಸಿ ಗೋಪಾಲವೃತ್ತಿಯಲ್ಲಿ ಇರಬೇಕೆಂದು ಬ್ರಹ್ಮನು ಆದೇಶವನ್ನಿತ್ತನು (೪೮). ಆಗ ದ್ರೋಣನು ಬ್ರಹ್ಮದೇವನನ್ನು ಕುರಿತು " ಸ್ವಾಮಿ, ನಾವೀರ್ವರೂ ಭೂಲೋಕದಲ್ಲಿ ಜನಿಸಿದಾಗ, ಮಹಾದೇವನೂ ವಿಶ್ವೇಶ್ವರನೂ ಆದ ಶ್ರೀಹರಿಯಲ್ಲಿ ನಮಗೆ ದುರ್ಗತಿತಾರಕವಾದ ದೃಢಭಕ್ತಿಯು ನೆಲೆಸಿರುವಂತಾಗಲಿ " ಎಂದು ಪ್ರಾರ್ಥಿಸಿಕೊಂಡನು (೪೯). ಹಾಗೆಯೇ ಆಗಲೆಂದು ಬ್ರಹ್ಮನು ಹೇಳಲಾಗಿ, ವಿಖ್ಯಾತನಾದ ದ್ರೋಣನೆಂಬ ವಸುವು ವ್ರಜಸ್ಥಾನದಲ್ಲಿ ನಂದನೆಂಬ ಹೆಸರಿನಿಂದ ಜನಿಸಿದನು. ಅವನ ಪತ್ನಿಯಾದ ಧರೆಯು ಯಶೋದೆ

**ತತೋ ಭಕ್ತಿರ್ಭಗವತಿ ಪುತ್ರೀಭೂತೇ ಜನಾರ್ದನೇ ।**
**ದಂಪತ್ಯೋರ್ನಿತರಾಮಾಸೀದ್ ಗೋಪಗೋಪೀಷು ಭಾರತ ॥ ೫೧**

**ಕೃಷ್ಣೋ ಬ್ರಹ್ಮಣ ಆದೇಶಂ ಸತ್ಯಂ ಕರ್ತುಂ ವ್ರಜೇ ವಿಭುಃ ।**
**ಸಹರಾಮೋ ವಸಂಶ್ಚಕ್ರೇ ತೇಷಾಂ ಪ್ರೀತಿಂ ಸ್ವಲೀಲಯಾ ॥ ೫೨**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಮಾಧ್ಯಾಯಃ

---

## ನವಮಾಧ್ಯಾಯಃ

ಶ್ರೀ ಶುಕ ಉವಾಚ—

**ಏಕದಾ ಗೃಹದಾಸೀಷು ಯಶೋದಾ ನಂದಗೇಹಿನೀ ।**
**ಕರ್ಮಾಂತರನಿಯುಕ್ತಾಸು ನಿರ್ಮಮಂಥ ಸ್ವಯಂ ದಧಿ ॥ ೧**

**ಯಾನಿ ಯಾನೀಹ ಗೀತಾನಿ ತದ್ಬಾಲಚರಿತಾನಿ ಚ ।**
**ದಧಿನಿರ್ಮಂಥನೇ ಕಾಲೇ ಸ್ಮರಂತೀ ತಾನ್ಯಗಾಯತ ॥ ೨**

---

ಯಾದಳು (೫೦). ಅವರಿಗೆ ಪುತ್ರನಾಗಿ ಬಂದ ಭಗವಂತನಾದ ಜನಾರ್ದನನಲ್ಲಿ ಆ ದಂಪತಿಗಳಿಗೆ ಅತಿಶಯವಾದ ಭಕ್ತಿ ನೆಲೆಸಿತ್ತು. ವ್ರಜದಲ್ಲಿದ್ದ ಗೋಪಗೋಪಿಯರಿಗೂ ಭಗವಂತನಲ್ಲಿ ಭಕ್ತಿ ಇದ್ದಿತು (೫೧). ಬ್ರಹ್ಮನ ನುಡಿಯನ್ನು ಸತ್ಯವಾಗಿ ಮಾಡುವುದಕ್ಕಾಗಿ ಮಹಾವಿಷ್ಣುವು ಪುತ್ರಭಾವದಿಂದ ನೆಲೆಸಿ, ಬಲರಾಮನೊಡನೆ ತನ್ನ ಲೀಲೆಯಿಂದ ಅವರಿಗೆ ಹರ್ಷವನ್ನುಂಟುಮಾಡುತ್ತಿದ್ದನು (೫೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಎಂಟನೆಯ ಅಧ್ಯಾಯ

---

## ಅಧ್ಯಾಯ ೯

ಯಶೋದೆಯು ಶ್ರೀಕೃಷ್ಣನನ್ನು ಒರಳಿಗೆ ಕಟ್ಟುವುದು

ಶುಕಮುನಿಗಳು ಹೇಳಿದರು : ಒಂದು ಸಲ ಮನೆಯ ಕೆಲಸಗಾತಿಯರು ಕಾರ್ಯಾಂತರದಲ್ಲಿ ತೊಡಗಿದ್ದಾಗ, ನಂದಪತ್ನಿಯಾದ ಯಶೋದೆಯು ತಾನೇ ಮೊಸರನ್ನು ಕಡೆಯುತ್ತಿದ್ದಳು (೧). ತನ್ನ ಮಗುವಿನ ಬಾಲಲೀಲೆಯನ್ನು ಕುರಿತು

ಕ್ಷೌಮಂ ವಾಸಃ ಪೃಥುಕಟಿತಟೇ ಬಿಭ್ರತೀ ಸೂತ್ರನದ್ಧಂ
ಪುತ್ರಸ್ನೇಹಸ್ನುತಕುಚಯುಗಂ ಜಾತಕಂಪಂ ಚ ಸುಭ್ರೂಃ ।
ರಜ್ಜ್ವಾಕರ್ಷಶ್ರಮಭುಜಚಲತ್ಕಂಕಣೌ ಕುಂಡಲೇ ಚ
ಸ್ವಿನ್ನಂ ವಕ್ತ್ರಂ ಕಬರವಿಗಲನ್ಮಾಲತೀ ನಿರ್ಮಮಂಥ ॥ ೩

ತಾಂ ಸ್ತನ್ಯಕಾಮ ಆಸಾದ್ಯ ಮಥ್ನಂತೀಂ ಜನನೀಂ ಹರಿಃ ।
ಗೃಹೀತ್ವಾ ದಧಿಮಂಥಾನಂ ನ್ಯಷೇಧತ್ ಪ್ರೀತಿಮಾವಹನ್ ॥ ೪

ತಮಂಕಮಾರೂಢಮಪಾಯಯತ್ ಸ್ತನಂ
ಸ್ನೇಹಸ್ನುತಂ ಸಸ್ಮಿತಮೀಕ್ಷತೀ ಮುಖಮ್ ।
ಅತೃಪ್ತಮುತ್ಸೃಜ್ಯ ಜವೇನ ಸಾ ಯಯಾ-
ವುತ್ಸಿಚ್ಯಮಾನೇ ಪಯಸಿ ತ್ವಧಿಶ್ರಿತೇ ॥ ೫

ಸಂಜಾತಕೋಪಃ ಸ್ಫುರಿತಾರುಣಾಧರಂ
ಸಂದಶ್ಯ ದದ್ಭಿರ್ದಧಿಮಂಥಭಾಜನಮ್ ।

---

ಯಾವ ಯಾವ ಹಾಡುಗಳಿದ್ದವೋ ಅವೆಲ್ಲವನ್ನೂ ಸ್ಮರಿಸಿಕೊಂಡು ಮೊಸರು ಕಡೆಯುವಾಗ ಅವಳು ಹಾಡುತ್ತಿದ್ದಳು (೨). ಯಶೋದೆಯು ಮೊಸರನ್ನು ಕಡೆಯುವಾಗ ರೇಷ್ಮೆಯ ಸೀರೆಯನ್ನು ನಿತಂಬಪ್ರದೇಶದಲ್ಲಿ ಕಾಂಚಿಯಿಂದ ಬಿಗಿದಿದ್ದಳು. ಮಗನಲ್ಲಿದ್ದ ವಾತ್ಸಲ್ಯದಿಂದ ಸ್ತನ್ಯವನ್ನು ಒಸರುವ ಸ್ತನಗಳು ಅಲ್ಲಾಡುತ್ತಿದ್ದವು. ಕಡೆಯುವ ಹಗ್ಗವನ್ನೆಳೆದೆಳೆದು ಬಳಲಿದ ಕೈಗಳಲ್ಲಿ ಬಳೆಗಳೂ, ಕಿವಿಗಳಲ್ಲಿ ಕುಂಡಲಗಳೂ ಚಲಿಸುತ್ತಿದ್ದವು. ಮುಖವು ಬೆವರಿತ್ತು. ಮುಡಿಯಲ್ಲಿ ಮುಡಿದಿದ್ದ ಮಲ್ಲಿಗೆಯ ಹೂವು ಉದುರುತ್ತಿತ್ತು (೩). ಹೀಗೆ ಮೊಸರು ಕಡೆಯುತ್ತಿದ್ದ ತಾಯಿಯ ಬಳಿಗೆ ಕೃಷ್ಣನು ಮೊಲೆ ಕುಡಿಯುವುದಕ್ಕಾಗಿ ಬಂದು ಕಡಗೋಲನ್ನು ಹಿಡಿದು ಅಡ್ಡಿಪಡಿಸಿದನು. ಅದರಿಂದ ತಾಯಿಗೆ ಸಂತೋಷವೇ ಆಯಿತು( ೪). ಅವಳು ಕೃಷ್ಣನನ್ನು ಮಡಿಲಲ್ಲಿ ಮಲಗಿಸಿಕೊಂಡು ಅವನ ನಗುಮುಖವನ್ನು ನೋಡುತ್ತ, ಸ್ನೇಹದಿಂದ ಒಸರುವ ಸ್ತನ್ಯವನ್ನು ಕುಡಿಸಿದಳು. ಅಷ್ಟರಲ್ಲಿ ಒಲೆಯ ಮೇಲಿದ್ದ ಹಾಲು ಉಕ್ಕಿಬಂದಿತೆಂದು ಮಗನನ್ನು ಬಿಟ್ಟು ಒಳಗೆ ಎದ್ದುಹೋದಳು. ಕೃಷ್ಣನಿಗೆ ಇನ್ನೂ ತೃಪ್ತಿಯಾಗಿರಲಿಲ್ಲ (೫). ಸಿಟ್ಟಿನಿಂದ ಅವನ ಚೆಂದುಟಿಯು

ಭಿತ್ತ್ವಾ ಮೃಷಾಶ್ರುರ್ದೃಷದಶ್ಮನಾ ರಹೋ
ಜಘಾಸ ಹೈಯಂಗವಮಂತರಂ ಗತಃ ॥ ೬

ಉತ್ತಾರ್ಯ ಗೋಪೀ ಸುಶೃತಂ ಪಯಃ ಪುನಃ
ಪ್ರವಿಶ್ಯ ಸಂದೃಶ್ಯ ಚ ದಧ್ಯಮತ್ರಕಮ್ ।
ಭಗ್ನಂ ವಿಲೋಕ್ಯ ಸ್ವಸುತಸ್ಯ ಕರ್ಮ ತ-
ಜ್ಜಹಾಸ ತಂ ಚಾಪಿ ನ ತತ್ರ ಪಶ್ಯತೀ ॥ ೭

ಉಲೂಖಲಾಂಘ್ರೇರುಪರಿ ವ್ಯವಸ್ಥಿತಂ
ಮರ್ಕಾಯ ಕಾಮಂ ದದತಂ ಶಿಚಿ ಸ್ಥಿತಮ್ ।
ಹೈಯಂಗವಂ ಚೌರ್ಯವಿಶಂಕಿತೇಕ್ಷಣಂ
ನಿರೀಕ್ಷ್ಯ ಪಶ್ಚಾತ್ ಸುತಮಾಗಮಚ್ಛನೈಃ ॥ ೮

ತಾಮಾತ್ತಯಷ್ಟಿಂ ಪ್ರಸಮೀಕ್ಷ್ಯ ಸತ್ವರ-
ಸ್ತತೋಽವರುಹ್ಯಾಪಸಸಾರ ಭೀತವತ್ ।
ಗೋಪ್ಯನ್ವಧಾವನ್ನ ಯಮಾಪ ಯೋಗಿನಾಂ
ಕ್ಷಮಂ ಪ್ರವೇಷ್ಟುಂ ತಪಸೇರಿತಂ ಮನಃ ॥ ೯

---

ಅದುರಿತು. ಅವನು ಕಡೆಗೋಲನ್ನೂ ಮೊಸರಿನ ಗಡಿಗೆಯನ್ನೂ ಹಲ್ಲುಗಳಿಂದ ಕಚ್ಚಿ, ಸುಳ್ಳುಸುಳ್ಳಾಗಿ ಕಣ್ಣೀರನ್ನು ಒರಸಿ, ಕಲ್ಲುಬೊಂಬೆಯಿಂದ ಮೊಸರಿನ ಪಾತ್ರೆಯನ್ನು ಕುಟ್ಟಿದನು. ಆಮೇಲೆ ಬೆಣ್ಣೆಯನ್ನಿಟ್ಟಿದ್ದ ಕೋಣೆಗೆ ಹೋಗಿ ಬೆಣ್ಣೆಯನ್ನು ತಿಂದನು (೬). ಯಶೋದೆಯು ಕಾದ ಹಾಲನ್ನು ಕೆಳಗಿಳಿಸಿ ಮತ್ತೆ ಬಂದಳು. ಮೊಸರಿನ ಪಾತ್ರೆ ಒಡೆದುಹೋಗಿತ್ತು. ಕೃಷ್ಣನು ಇರಲಿಲ್ಲ. ಇದು ಮಗನ ಕೆಲಸವೇ ಎಂದು ತಿಳಿದು ಅವಳು ನಕ್ಕಳು (೭). ಅವನು ಎಲ್ಲಿರುವನೆಂದು ನೋಡಲಾಗಿ ಕೃಷ್ಣನು ಬೀಸುವ ಕಲ್ಲಿನ ಮೇಲೆ ನಿಂತು ಮೇಲ್ಗಡೆ ಶಿಕ್ಯದಲ್ಲಿದ್ದ ಬೆಣ್ಣೆಯನ್ನು ತೆಗೆದು ತೆಗೆದು ಕಪಿಗಳಿಗೆ ತಿನ್ನಿಸುತ್ತಿದ್ದನು! ತನ್ನ ಕಳ್ಳತನವನ್ನು ತಾಯಿ ನೋಡಿಬಿಟ್ಟಾಳೆಂದು ಹೆದರಿ ಅತ್ತಿತ್ತ ನೋಡುತ್ತಿದ್ದನು! ಯಶೋದೆಯು ಸದ್ದುಮಾಡದೆ ಮೆಲ್ಲಗೆ ಹಿಂದಿನಿಂದ ಬಂದಳು! (೮). ಕೋಲನ್ನು ಹಿಡಿದುಕೊಂಡು ಬರುತ್ತಿದ್ದ ಯಶೋದೆಯನ್ನು ಕಂಡು ಕೃಷ್ಣನು ಹೆದರಿದವನಂತೆ ಕೆಳಗೆ ಧುಮುಕಿ ಓಡಿದನು.

ಅನ್ವಂಚಮಾನಾ ಜನನೀ ಬೃಹಚ್ಚಲ-
ಚ್ಛ್ರೋಣೀಭರಾಕ್ರಾಂತಗತಿಃ ಸುಮಧ್ಯಮಾ ।
ಜವೇನ ವಿಸ್ರಂಸಿತಕೇಶಬಂಧನ-
ಚ್ಯುತಪ್ರಸೂನಾನುಗತಿಃ ಪರಾಮೃಶತ್ ॥ ೧೦

ಕೃತಾಗಸಂ ತಂ ಪ್ರರುದಂತಮಕ್ಷಿಣೀ
ಕಷಂತಮಂಜನ್ಮಷಿಣೀ ಸ್ವಪಾಣಿನಾ ।
ಉದ್ವೀಕ್ಷಮಾಣಂ ಭಯವಿಹ್ವಲೇಕ್ಷಣಂ
ಹಸ್ತೇ ಗೃಹೀತ್ವಾ ಭಿಷಯಂತ್ಯವಾಗುರತ್ ॥ ೧೧

ತ್ಯಕ್ತ್ವಾ ಯಷ್ಟಿಂ ಸುತಂ ಭೀತಂ ವಿಜ್ಞಾಯಾರ್ಭಕವತ್ಸಲಾ ।
ಇಯೇಷ ಕಿಲ ತಂ ಬದ್ಧುಂ ದಾಮ್ನಾತದ್ವೀರ್ಯಕೋವಿದಾ ॥ ೧೨

ನ ಚಾಂತರ್ನ ಬಹಿರ್ಯಸ್ಯ ನ ಪೂರ್ವಂ ನಾಪಿ ಚಾಪರಮ್ ।
ಪೂರ್ವಾಪರಂ ಬಹಿಶ್ಚಾಂತರ್ಜಗತೋ ಯೋ ಜಗಚ್ಚ ಯಃ ॥ ೧೩

---

ಯಶೋದೆಯೂ ಹಿಂಬಾಲಿಸಿ ಓಡಿದಳು. ಪರೀಕ್ಷಿತರಾಜ, ತಪಸ್ಸಿನಿಂದ ಏಕಾಗ್ರವಾದ ಯೋಗಿಗಳ ಮನಸ್ಸೂ ಸಹ ಯಾರನ್ನು ಮುಟ್ಟಲು ಅಸಮರ್ಥವಾಗಿದೆಯೋ ಅಂತಹ ಕೃಷ್ಣನನ್ನು ಹಿಡಿಯಲು ಗೋಪಿಯು ಧಾವಿಸಿದಳು ! (೯). ಶ್ರೋಣೀ ಭಾರದಿಂದ ಓಡಲು ತೊಂದರೆಯಾದರೂ ಯಶೋದೆಯು ಮುಡಿದ ಹೂಗಳನ್ನುದುರಿಸುತ್ತ ಬೇಗಬೇಗನೆ ಹೆಜ್ಜೆಯಿಡುತ್ತ ಹೋಗಿ ಮಗನನ್ನು ಹಿಡಿದಳು (೧೦). ತಾನು ತಪ್ಪುಮಾಡಿದ್ದರಿಂದ ಕೃಷ್ಣನು ಅಳುತ್ತ, ಕಾಡಿಗೆ ಹಚ್ಚಿದ್ದ ಕಣ್ಣುಗಳನ್ನು ಕೈಯಿಂದ ತೀಡಿ ಮುಖವನ್ನು ಮಸಿಮಾಡಿಕೊಳ್ಳುತ್ತ, ಹೆದರಿದ ಕಣ್ಣುಗಳಿಂದ ತಾಯಿಯನ್ನು ನೋಡತೊಡಗಿದನು. ಯಶೋದೆಯು ಅವನನ್ನು ಕೈಯಲ್ಲಿ ಹಿಡಿದುಕೊಂಡು ಹೆದರಿಸಿ ಗದರಿಸಿದಳು (೧೧). ಮಗನು ಹೆದರಿದ್ದನ್ನು ಕಂಡು ಪುತ್ರವತ್ಸಲೆಯಾದ ತಾಯಿ ಕೋಲನ್ನೆಸೆದುಬಿಟ್ಟಳು. ಆಮೇಲೆ ಅವನನ್ನು ಹಗ್ಗದಿಂದ ಕಟ್ಟಿಹಾಕಬೇಕೆಂದು ಬಯಸಿದಳು. ಕೃಷ್ಣನ ಸಾಮರ್ಥ್ಯವು ಅವಳಿಗೇನು ಗೊತ್ತು ? (೧೨). ಯಾರಿಗೆ ಒಳಗುಹೊರಗುಗಳೆಂಬ ಪರಿಮಿತಿ ಇಲ್ಲವೋ ಮೊದಲುತುದಿಗಳೆಂಬ ವಿಭಾಗಗಳಿಲ್ಲವೋ ಯಾವನು ಮೊದಲು ತುದಿ ಒಳ

ತಂ ಮತ್ವಾಽಽತ್ಮಜಮವ್ಯಕ್ತಂ ಮರ್ತ್ಯಲಿಂಗಮಧೋಕ್ಷಜಮ್ ।
ಗೋಪಿಕೋಲೂಖಲೇ ದಾಮ್ನಾ ಬಬಂಧ ಪ್ರಾಕೃತಂ ಯಥಾ॥ ೧೪

ತದ್ ದಾಮ ಬಧ್ಯಮಾನಸ್ಯ ಸ್ವಾರ್ಭಕಸ್ಯ ಕೃತಾಗಸಃ ।
ದ್ವ್ಯಂಗುಲೋನಮಭೂತ್ತೇನ ಸಂದಧೇಽನ್ಯಚ್ಚ ಗೋಪಿಕಾ ॥ ೧೫

ಯದಾಽಽಸೀತ್ತದಪಿ ನ್ಯೂನಂ ತೇನಾನ್ಯದಪಿ ಸಂದಧೇ ।
ತದಪಿ ದ್ವ್ಯಂಗುಲಂ ನ್ಯೂನಂ ಯದ್ ಯದಾದತ್ತ ಬಂಧನಮ್॥೧೬

ಏವಂ ಸ್ವಗೇಹದಾಮಾನಿ ಯಶೋದಾ ಸಂದಧತ್ಯಪಿ ।
ಗೋಪೀನಾಂ ಸುಸ್ಮಯಂತೀನಾಂ ಸ್ಮಯಂತೀ ವಿಸ್ಮಿತಾಭವತ್ ॥ ೧೭

ಸ್ವಮಾತುಃ ಸ್ವಿನ್ನಗಾತ್ರಾಯಾ ವಿಸ್ರಸ್ತಕಬರಸ್ರಜಃ ।
ದೃಷ್ಟ್ವಾ ಪರಿಶ್ರಮಂ ಕೃಷ್ಣಃ ಕೃಪಯಾಽಽಸೀತ್ ಸ್ವಬಂಧನೇ ॥ ೧೮

ಏವಂ ಸಂದರ್ಶಿತಾ ಹ್ಯಂಗ ಹರಿಣಾ ಭೃತ್ಯವಶ್ಯತಾ ।
ಸ್ವವಶೇನಾಪಿ ಕೃಷ್ಣೇನ ಯಸ್ಯೇದಂ ಸೇಶ್ವರಂ ವಶೇ ॥ ೧೯

---

ಹೊರಗಳೆಲ್ಲವೂ ಆಗಿರುವನೋ, ಜಗತ್ತೇ ಆಗಿರುವನೋ ಅವನನ್ನು ಕಟ್ಟಿಹಾಕಬೇಕೆಂದು ಯಶೋದೆ ಬಯಸಿದಳು! (೧೩). ಮನುಷ್ಯವೇಷವನ್ನು ಧರಿಸಿದ ಅವ್ಯಕ್ತನಾದ ಅಧೋಕ್ಷಜನು ತನ್ನ ಮಗನೆಂದೇ ತಿಳಿದು, ಒಬ್ಬ ಸಾಮಾನ್ಯ ಬಾಲಕನನ್ನು ಹೇಗೋ ಹಾಗೆ, ಗೋಪಿಯು ಆತನನ್ನು ಹಗ್ಗದಿಂದ ಒರಳಿಗೆ ಕಟ್ಟಿಹಾಕಲು ತೊಡಗಿದಳು (೧೪). ತಪ್ಪುಮಾಡಿದನೆಂದು ಮಗನನ್ನು ಯಶೋದೆಯು ಒರಳಿಗೆ ಕಟ್ಟುತ್ತಿರುವಾಗ ಹಗ್ಗವು ಎರಡು ಅಂಗುಲದಷ್ಟು ಕಡಮೆಯಾಯಿತು. ಆಗ ಇನ್ನೊಂದು ಹಗ್ಗವನ್ನು ಅದಕ್ಕೆ ಗಂಟುಹಾಕಿದಳು (೧೫). ಅದೂ ಎರಡು ಅಂಗುಲದಷ್ಟು ಚಿಕ್ಕದಾಯಿತು. ಹೀಗೆ ಯಾವ ಹಗ್ಗವನ್ನು ಜೋಡಿಸಿದರೂ ಸಾಕಾಗಲಿಲ್ಲ! ಮನೆಯಲ್ಲಿದ್ದ ಹಗ್ಗಗಳನ್ನೆಲ್ಲಾ ಬಳಸಿದಳು. ಆದರೂ ಸಾಲಲಿಲ್ಲ. ಆ ಚಮತ್ಕಾರವನ್ನು ನೋಡುತ್ತ ಗೋಪಿಯರು ನಗುತ್ತಿದ್ದರು. ಯಶೋದೆಯೂ ನಗುತ್ತಲೇ ಹಗ್ಗವನ್ನು ಕಟ್ಟುತ್ತ ಆಶ್ಚರ್ಯಪಟ್ಟಳು! (೧೬–೧೭). ಅವಳ ಮೈ ಬೆವರಿತು. ಮುಡಿದ ಹೂಮಾಲೆ ಜಾರಿತು. ತಾಯಿಯ ಆಯಾಸವನ್ನು ಕಂಡು ಕೃಷ್ಣನು ಕೃಪೆದೋರಿ ಕಡೆಗೆ ತನ್ನನ್ನು ಕಟ್ಟಿಸಿಕೊಂಡನು (೧೮). ಆಹಾ!

ನೇಮಂ ವಿರಿಂಚೋ ನ ಭವೋ ನ ಶ್ರೀರಪ್ಯಂಗಸಂಶ್ರಯಾ ।
ಪ್ರಸಾದಂ ಲೇಭಿರೇ ಗೋಪೀ ಯತ್ತತ್ ಪ್ರಾಪ ವಿಮುಕ್ತಿದಾತ್॥ ೨೦

ನಾಯಂ ಸುಖಾಪೋ ಭಗವಾನ್ ದೇಹಿನಾಂ ಗೋಪಿಕಾಸುತಃ ।
ಜ್ಞಾನಿನಾಂ ಚಾತ್ಮಭೂತಾನಾಂ ಯಥಾ ಭಕ್ತಿಮತಾಮಿಹ ॥ ೨೧

ಕೃಷ್ಣಸ್ತು ಗೃಹಕೃತ್ಯೇಷು ವ್ಯಗ್ರಾಯಾಂ ಮಾತರಿ ಪ್ರಭುಃ ।
ಅದ್ರಾಕ್ಷೀದರ್ಜುನೌ ಪೂರ್ವಂ ಗುಹ್ಯಕೌ ಧನದಾತ್ಮಜೌ ॥ ೨೨

ಪುರಾ ನಾರದಶಾಪೇನ ವೃಕ್ಷತಾಂ ಪ್ರಾಪಿತೌ ಮದಾತ್ ।
ನಲಕೂಬರಮಣಿಗ್ರೀವಾವಿತಿ ಖ್ಯಾತೌ ಶ್ರಿಯಾನ್ವಿತೌ ॥ ೨೩

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ನವಮಾಧ್ಯಾಯಃ



ಈಶ್ವರಸಹಿತವಾದ ವಿಶ್ವವೇ ಯಾರಿಗೆ ಅಧೀನವೋ ಅಂತಹ ಸರ್ವಸ್ವತಂತ್ರನಾದ ಶ್ರೀಹರಿಯು ತಾನು ಭಕ್ತಾಧೀನನೆಂಬುದನ್ನು ತೋರಿಸಿಕೊಂಡನು ! (೧೯). ಮುಕ್ತಿದಾತನಾದ ಶ್ರೀಹರಿಯಿಂದ ಈ ಬಗೆಯ ಅನುಗ್ರಹವು (ಪುತ್ರನಾದ) ಬ್ರಹ್ಮನಿಗೂ ದೊರೆಯಲಿಲ್ಲ. (ಸ್ವಾತ್ಮನಾದ) ಶಿವನಿಗೂ ದೊರೆಯಲಿಲ್ಲ. ತನ್ನ ದೇಹದಲ್ಲಿ ನೆಲೆಸಿದ (ಪತ್ನಿಯಾದ) ಲಕ್ಷ್ಮಿಗೂ ಇಲ್ಲ ! ಇದು ಗೋಪಿಗೆ ಲಭಿಸಿತು ! (೨೦). ದೇಹಾಭಿಮಾನವುಳ್ಳ ತಾಪಸರಿಗಾಗಲಿ, (ದೇಹಾಭಿಮಾನವನ್ನು ಕಳೆದು) ಆತ್ಮಸ್ವರೂಪರಾದ ಜ್ಞಾನಿಗಳಿಗಾಗಲಿ ಸುಲಭವಾಗಿ ದೊರೆಯತಕ್ಕವನಲ್ಲ. ಭಕ್ತರಿಗೆ ಮಾತ್ರ ಈ ಗೋಪಿಕಾತನಯನು ಸುಲಭನು ! (೨೧). ಆಮೇಲೆ ಯಶೋದೆಯು ಮನೆಗೆಲಸದಲ್ಲಿ ತೊಡಗಿದಳು. ಪ್ರಭುವಾದ ಕೃಷ್ಣನಿಗೆ ಇತ್ತಲಾಗಿ ಎರಡು ಮತ್ತಿಯ ಮರಗಳು ಕಾಣಿಸಿದವು. ಅವು ಕುಬೇರನ ಮಕ್ಕಳಾದ ಯಕ್ಷರು. ನಳಕೂಬರ, ಮಣಿಗ್ರೀವ – ಎಂಬ ಆ ಯಕ್ಷರು ಐಶ್ವರ್ಯಮತ್ತರಾಗಿ ಹಿಂದೆ ನಾರದಮುನಿಗಳ ಶಾಪದಿಂದ ಮರಗಳಾಗಿ ಪರಿಣಮಿಸಿದ್ದರು (೨೨–೨೩).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಒಂಬತ್ತನೆಯ ಅಧ್ಯಾಯ



## ದಶಮೋಽಧ್ಯಾಯಃ

ರಾಜೋವಾಚ—

ಕಥ್ಯತಾಂ ಭಗವನ್ನೇತತ್ತಯೋಃ ಶಾಪಸ್ಯ ಕಾರಣಮ್ ।
ಯತ್ತದ್ ವಿಗರ್ಹಿತಂ ಕರ್ಮ ಯೇನ ವಾ ದೇವರ್ಷೇಸ್ತಮಃ ॥ ೧

ಶ್ರೀಶುಕ ಉವಾಚ—

ರುದ್ರಸ್ಯಾನುಚರೌ ಭೂತ್ವಾ ಸುದೃಪ್ತೌ ಧನದಾತ್ಮಜೌ ।
ಕೈಲಾಸೋಪವನೇ ರಮ್ಯೇ ಮಂದಾಕಿನ್ಯಾಂ ಮದೋತ್ಕಟೌ ॥ ೨

ವಾರುಣೀಂ ಮದಿರಾಂ ಪೀತ್ವಾ ಮದಾಘೂರ್ಣಿತಲೋಚನೌ ।
ಸ್ತ್ರೀಜನೈರನುಗಾಯದ್ಭಿಶ್ಚೇರತುಃ ಪುಷ್ಪಿತೇ ವನೇ ॥ ೩

ಅಂತಃ ಪ್ರವಿಶ್ಯ ಗಂಗಾಯಾಮಂಭೋಜವನರಾಜಿನಿ ।
ಚಿಕ್ರೀಡತುರ್ಯುವತಿಭಿರ್ಗಜಾವಿವ ಕರೇಣುಭಿಃ ॥ ೪

## ಅಧ್ಯಾಯ ೧೦

ಮತ್ತಿಮರಗಳಾಗಿ ಹುಟ್ಟಿದ್ದ ನಳಕೂಬರ–ಮಣಿಗ್ರೀವರ
(ಯಮಳಾರ್ಜುನರ) ಉದ್ಧಾರ

ಪರೀಕ್ಷಿತರಾಜನು "ಭಗವನ್–ಮಹರ್ಷಿಗಳೆ, ಅವರಿಗೆ ಶಾಪ ಬರಲು ಕಾರಣವೇನು ? ಆ ಯಕ್ಷರು ಮಾಡಿದ ನಿಂದ್ಯಕರ್ಮವಾದರೂ ಯಾವುದು ? ದೇವರ್ಷಿಗಳಾದ ನಾರದರಿಗೆ ಕೋಪ ಉಂಟಾದ್ದೇಕೆ ? ಹೇಳಬೇಕು" ಎಂದು ಪ್ರಾರ್ಥಿಸಿದನು (೧). ಆಗ ಶುಕಮಹರ್ಷಿಗಳು ಹೇಳಿದರು : ಕುಬೇರನ ಪುತ್ರರಾದ ನಳಕೂಬರ, ಮಣಿಗ್ರೀವ – ಎಂಬವರು ರುದ್ರನ ಅನುಚರರಾಗಿದ್ದರು. ಕೈಲಾಸದ ಬಳಿಯಲ್ಲಿದ್ದ ಗಂಗಾತೀರದ ರಮ್ಯವಾದ ಉಪವನದಲ್ಲಿ ಅವರು ಮದೋದ್ಧತರಾಗಿ ಸಂಚರಿಸುತ್ತಿದ್ದರು (೨). ಮದವೇರಿಸುವ ಮದ್ಯವನ್ನು ಕುಡಿದು ಕಣ್ಣುಗಳನ್ನು ಹೊರಳಿಸುತ್ತ, ಹಾಡುವ ಹೆಂಗಸರೊಡನೆ ಸೇರಿ ಪುಷ್ಪಿತವನದಲ್ಲಿ ಅಲೆದರು (೩). ತಾವರೆಯ ಹೂಗಳಿಂದ ವಿರಾಜಿಸುವ ಗಂಗಾಜಲದ ಮಧ್ಯದಲ್ಲಿ

**ಯದೃಚ್ಛಯಾ ಚ ದೇವರ್ಷಿರ್ಭಗವಾಂಸ್ತತ್ರ ಕೌರವ ।**
**ಅಪಶ್ಯನ್ನಾರದೋ ದೇವೌ ಕ್ಷೀಬಾಣೌ ಸಮಬುಧ್ಯತ ॥ ೫**

**ತಂ ದೃಷ್ಟ್ವಾ ವ್ರೀಡಿತಾ ದೇವ್ಯೋ ವಿವಸ್ತ್ರಾಃ ಶಾಪಶಂಕಿತಾಃ ।**
**ವಾಸಾಂಸಿ ಪರ್ಯಧುಃ ಶೀಘ್ರಂ ವಿವಸ್ತ್ರೌ ನೈವ ಗುಹ್ಯಕೌ ॥ ೬**

**ತೌ ದೃಷ್ಟ್ವಾ ಮದಿರಾಮತ್ತೌ ಶ್ರೀಮದಾಂಧೌ ಸುರಾತ್ಮಜೌ ।**
**ತಯೋರನುಗ್ರಹಾರ್ಥಾಯ ಶಾಪಂ ದಾಸ್ಯನ್ನಿದಂ ಜಗೌ ॥ ೭**

ನಾರದ ಉವಾಚ—

**ನ ಹ್ಯನ್ಯೋ ಜುಷತೋ ಜೋಷ್ಯಾನ್ ಬುದ್ಧಿಭ್ರಂಶೋ ರಜೋಗುಣಃ**
**ಶ್ರೀಮದಾದಾಭಿಜಾತ್ಯಾದಿರ್ಯತ್ರ ಸ್ತ್ರೀ ದ್ಯೂತಮಾಸವಃ ॥ ೮**

**ಹನ್ಯಂತೇ ಪಶವೋ ಯತ್ರ ನಿರ್ದಯೈರಜಿತಾತ್ಮಭಿಃ ।**
**ಮನ್ಯಮಾನೈರಿಮಂ ದೇಹಮಜರಾಮೃತ್ಯು ನಶ್ವರಮ್ ॥ ೯**

---

ಹೆಣ್ಣಾನೆಗಳೊಡನೆ ಕ್ರೀಡಿಸುವ ಗಂಡಾನೆಗಳಂತೆ, ಯುವತಿಯರೊಡನೆ ಜಲಕ್ರೀಡೆ ಯನ್ನಾಡತೊಡಗಿದರು (೪). ಆ ಸಮಯದಲ್ಲಿ ದೇವರ್ಷಿಗಳಾದ ಭಗವಾನ್ ನಾರದರು ಸಂಚರಿಸುತ್ತ ಆಕಸ್ಮಿಕವಾಗಿ ಅಲ್ಲಿಗೆ ಬಂದರು. ಅವರು ಈ ಯಕ್ಷರನ್ನು ವೀಕ್ಷಿಸಿ ಮದ್ಯದಿಂದ ಮದಿಸಿರುವರೆಂದು ತಿಳಿದುಕೊಂಡರು (೫). ಹೇಗೆಂದರೆ, ನಗ್ನರಾಗಿ ಕ್ರೀಡಿಸುತ್ತಿದ್ದ ಸ್ತ್ರೀಯರು ನಾರದರನ್ನು ಕಂಡೊಡನೆ ಅವರು ಶಪಿಸಿ- ಯಾರೆಂಬ ಭಯದಿಂದ ಬೇಗಬೇಗನೆ ಸೀರೆಯನ್ನುಟ್ಟುಕೊಂಡರು; ಆದರೆ ಈ ಯಕ್ಷರು ಮಾತ್ರ ಬತ್ತಲೆಯಾಗಿಯೇ ಇದ್ದರು (೬). ಐಶ್ವರ್ಯಬಲದಿಂದಲೂ ಮದ್ಯಪಾನದಿಂದಲೂ ಮದೋನ್ಮತ್ತರಾದ ಆ ಕುಬೇರಪುತ್ರರನ್ನು ನೋಡಿ ನಾರದ ಮುನಿಗಳು, ಅವರನ್ನು ಅನುಗ್ರಹಿಸುವುದಕ್ಕಾಗಿಯೇ ಶಾಪವನ್ನು ಕೊಡಬೇಕೆಂದು ಉದ್ದೇಶಿಸಿ ಹೀಗೆಂದರು (೭) : " ವಿಷಯಸುಖಗಳನ್ನನುಭವಿಸುವ ಪುರುಷನ ಬುದ್ಧಿಯನ್ನು ಕೆಡಿಸುವುದರಲ್ಲಿ ಐಶ್ವರ್ಯಮದವೆಂಬುದು ಬಹು ದೊಡ್ಡದು. ಸತ್ಕುಲಾದಿಮದಗಳಾಗಲಿ ರಾಜಸ ಇತರ ಗುಣಗಳಾಗಲಿ ಐಶ್ವರ್ಯಮದದಷ್ಟು ಬುದ್ಧಿಯನ್ನು ಕೆಡಿಸುವುದಿಲ್ಲ. ಐಶ್ವರ್ಯವು ಸೇರಿತೆಂದರೆ ಹೆಂಗಸು, ಜೂಜು, ಹೆಂಡಗಳು ಬಂದು ಸೇರಿಕೊಳ್ಳುತ್ತವೆ ! (೮). ಹಣವು ಸೇರಿದೊಡನೆ ಜನರು ಇಂದ್ರಿಯಜಯವಿಲ್ಲದೆ ನಿರ್ದಯರಾಗಿ ಪ್ರಾಣಿಹಿಂಸೆಯಲ್ಲಿ ತೊಡಗುತ್ತಾರೆ. ನಶ್ವರ

**ದೇವಸಂಜ್ಞಿತಮಪ್ಯಂತೇ ಕೃಮಿವಿಡ್ಭಸ್ಮಸಂಜ್ಞಿತಮ್ ।**
**ಭೂತಧ್ರುಕ್ ತತ್ಕೃತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ ॥ ೧೦**

**ದೇಹಃ ಕಿಮನ್ನದಾತುಃ ಸ್ವಂ ನಿಷೇಕ್ತುರ್ಮಾತುರೇವ ಚ ।**
**ಮಾತುಃ ಪಿತುರ್ವಾ ಬಲಿನಃ ಕ್ರೇತುರಗ್ನೇಃ ಶುನೋಽಪಿ ವಾ ॥ ೧೧**

**ಏವಂ ಸಾಧಾರಣಂ ದೇಹಮವ್ಯಕ್ತಪ್ರಭವಾಪ್ಯಯಮ್ ।**
**ಕೋ ವಿದ್ವಾನಾತ್ಮಸಾತ್ ಕೃತ್ವಾ ಹಂತಿ ಜಂತೂನೃತೇಽಸತಃ ॥ ೧೨**

**ಅಸತಃ ಶ್ರೀಮದಾಂಧಸ್ಯ ದಾರಿದ್ರ್ಯಂ ಪರಮಂಜನಮ್ ।**
**ಆತ್ಮೌಪಮ್ಯೇನ ಭೂತಾನಿ ದರಿದ್ರಃ ಪರಮೀಕ್ಷತೇ ॥ ೧೩**

**ಯಥಾ ಕಂಟಕವಿದ್ಧಾಂಗೋ ಜಂತೋರ್ನೇಚ್ಛತಿ ತಾಂ ವ್ಯಥಾಮ್ ।**
**ಜೀವಸಾಮ್ಯಂ ಗತೋ ಲಿಂಗೈರ್ನ ತಥಾವಿದ್ಧಕಂಟಕಃ ॥ ೧೪**

---

ವಾದ ಈ ದೇಹಕ್ಕೆ ಮುಪ್ಪು ಸಾವುಗಳೇ ಇಲ್ಲವೆಂದು ತಿಳಿದುಕೊಂಡುಬಿಡುತ್ತಾರೆ! (೯). ಕೊನೆಯಲ್ಲಿ ಹುಳುವೋ ಅಮೇಧ್ಯವೋ ಬೂದಿಯೋ ಆಗುವ ಈ ಶರೀರ ವನ್ನು ಈಗ 'ನರದೇವ ಭೂದೇವ' ಎಂದು ಸಂಮಾನಿಸುತ್ತಾರೆ. ಭೂತದ್ರೋಹ ವನ್ನು ಮಾಡತಕ್ಕವನು ಅದರಿಂದ ನರಕವನ್ನೇ ಪಡೆಯುತ್ತಾನೆ. ಯಾವುದು ತನಗೆ ಹಿತಕರವೆಂಬುದನ್ನು ಅವನೇನು ಬಲ್ಲನು? (೧೦). (ನಾನು ನಾನು ಎಂದು ಅಹಂಕಾರಪಡುವ) ಈ ದೇಹವಾದರೂ ಯಾರಿಗೆ ಸೇರಿದ್ದು? ಅನ್ನ ಹಾಕಿದವನಿಗೆ ಸೇರಿದ್ದೊ? ತಂದೆಗೊ, ತಾಯಿಗೊ, ತಾಯಿಯ ತಂದೆಗೊ? ಅಥವಾ ಇದನ್ನು ವಶಪಡಿಸಿಕೊಂಡಿರುವ ಬಲಶಾಲಿಗೆ ಸೇರಿದ್ದೊ? ವೇತನ ವನ್ನು ಕೊಟ್ಟುಕೊಂಡಿರುವವನಿಗೊ? ಬೆಂಕಿಗೊ? ನಾಯಿಗೊ? (೧೧). ಹೀಗೆ ಸರ್ವಸಾಧಾರಣವಾದ ಈ ಶರೀರವು ಅವ್ಯಕ್ತದಿಂದ ಹುಟ್ಟಿ ಅವ್ಯಕ್ತವಲ್ಲಿ ಲಯವಾಗಿಹೋಗುತ್ತದೆ. ಇಂಥ ಶರೀರವನ್ನೇ ನಾನೆಂದು ತಿಳಿದು ಯಾವ ವಿದ್ವಾಂಸನು ತಾನೇ ಇತರರನ್ನು ಹಿಂಸೆಪಡಿಸಿಯಾನು? ಹಿಂಸೆಪಡಿಸತಕ್ಕವರು ಮೂಢರೇ ಸರಿ (೧೨). ಧನಮದದಿಂದ ಕುರುಡನಾದ ಮೂಢನಿಗೆ ಬಡತನವೇ ಉತ್ತಮವಾದ ಅಂಜನ! ಏಕೆಂದರೆ, ಬಡವನು ಮಾತ್ರವೇ ತನ್ನ ಹೋಲಿಕೆಯಿಂದ ಸಕಲಜೀವಿಗಳೂ ತನ್ನಂತೆಯೇ ಎಂದು ನೋಡಬಲ್ಲನು (೧೩). ಯಾರ ಕಾಲಿಗೆ ಮುಳ್ಳು ಚುಚ್ಚಿದೆಯೋ ಅವನು ಇನ್ನೊಬ್ಬರಿಗೂ

ದರಿದ್ರೋ ನಿರಹಂಸ್ತಂಭೋ ಮುಕ್ತಃ ಸರ್ವಮದೈರಿಹ ।
ಕೃಚ್ಛ್ರಂ ಯದೃಚ್ಛಯಾಽಽಪ್ನೋತಿ ತದ್ಧಿ ತಸ್ಯ ಪರಂ ತಪಃ ॥ ೧೫

ನಿತ್ಯಂ ಕ್ಷುತ್ಕ್ಷಾಮದೇಹಸ್ಯ ದರಿದ್ರಸ್ಯಾನ್ನಕಾಂಕ್ಷಿಣಃ ।
ಇಂದ್ರಿಯಾಣ್ಯನುಶುಷ್ಯಂತಿ ಹಿಂಸಾಪಿ ವಿನಿವರ್ತತೇ ॥ ೧೬

ದರಿದ್ರಸ್ಯೈವ ಯುಜ್ಯಂತೇ ಸಾಧವಃ ಸಮದರ್ಶಿನಃ ।
ಸದ್ಭಿಃ ಕ್ಷಿಣೋತಿ ಸಂತರ್ಷಂ ತತ ಆರಾದ್ ವಿಶುದ್ಧ್ಯತಿ ॥ ೧೭

ಸಾಧೂನಾಂ ಸಮಚಿತ್ತಾನಾಂ ಮುಕುಂದಚರಣೈಷಿಣಾಮ್ ।
ಉಪೇಕ್ಷ್ಯೈಃ ಕಿಂ ಧನಸ್ತಂಭೈರಸದ್ಭಿರಸದಾಶ್ರಯೈಃ ॥ ೧೮

ತದಹಂ ಮತ್ತಯೋರ್ಮಾಧ್ವ್ಯಾ ವಾರುಣ್ಯಾ ಶ್ರೀಮದಾಂಧಯೋಃ ।
ತಮೋಮದಂ ಹರಿಷ್ಯಾಮಿ ಸ್ತ್ರೈಣಯೋರಜಿತಾತ್ಮನೋಃ ॥ ೧೯

---

ಆ ಬಗೆಯ ನೋವು ಆಗಲೆಂದು ಇಚ್ಛಿಸುವುದಿಲ್ಲ. ಏಕೆಂದರೆ, ಮುಖದ ಮ್ಲಾನತೆ ಮುಂತಾದ ಚಿಹ್ನೆಗಳಿಂದ ಸಕಲಜೀವರಿಗೂ ನೋವು ಸಮಾನವೆಂದು ತಿಳಿದಿರುತ್ತಾನೆ. ಮುಳ್ಳು ಚುಚ್ಚದಿದ್ದವನು ಮಾತ್ರ ಹಾಗಲ್ಲ! (ಅವನಿಗೆ ಇನ್ನೊಬ್ಬರ ನೋವು ಅರ್ಥವಾಗದು) (೧೪). ದರಿದ್ರನಿಗೆ ಅಹಂಕಾರ ದರ್ಪವಿಲ್ಲವಾದ್ದರಿಂದ ಅವನು ಸಕಲಮದಗಳಿಂದಲೂ ಮುಕ್ತನಾಗಿರುತ್ತಾನೆ. ಅವನಿಗೆ ಸದಾ ಕಷ್ಟವೇ. ಕಷ್ಟವೇ ಅವನ ಪರಮತಪಸ್ಸು (೧೫). ಅನ್ನಕ್ಕಾಗಿ ಹಾತೊರೆಯುವ ದರಿದ್ರನ ದೇಹವು ಯಾವಾಗಲೂ ಹಸಿವಿನಿಂದ ಕೃಶವಾಗಿರುತ್ತದೆ. ಇಂದ್ರಿಯಗಳು ದುರ್ಬಲವಾಗಿರುತ್ತವೆ. ಆದ್ದರಿಂದ ಹಿಂಸೆಪಡಿಸುವುದು ದೂರ ತೊಲಗುತ್ತದೆ (೧೬). ಸಮದರ್ಶಿಗಳಾದ ಸಜ್ಜನರ ಸಹವಾಸವು ನಿರ್ಧನರಿಗೇ ದೊರೆಯುವುದು. ಸತ್ಸಂಗದಿಂದ ಆಸೆಯೂ ದೂರವಾಗಿ, ನಿರ್ಧನರು ಬೇಗನೆ ಪರಿಶುದ್ಧರಾಗುತ್ತಾರೆ (೧೭). ಮುಕುಂದನ ಚರಣವನ್ನು ಬಯಸುವ ಸಮಚಿತ್ತರಾದ ಸಾಧುಜನರಿಗೆ, ದರ್ಪದಿಂದ ಬೀಗುವ ಧನಿಕರಿಂದ ಆಗಬೇಕಾದ್ದೇನು? ಕೆಟ್ಟಚಟಗಳಿರುವ ಧನಿಕರಾದ ದುರುಳರು ಸಾಧುಜನರ ದೃಷ್ಟಿಯಲ್ಲಿ ಉಪೇಕ್ಷಣೀಯರು (೧೮). ಧನಮದದಿಂದ ಕಣ್ಗಾಣದ ಈ ಯಕ್ಷರು ಹೆಂಡವನ್ನು ಕುಡಿದು ಉನ್ಮತ್ತರಾಗಿದ್ದಾರೆ. ಸ್ತ್ರೀಲೋಲುಪರೂ ಅಜಿತೇಂದ್ರಿಯರೂ ಆಗಿದ್ದಾರೆ. ಆದ್ದರಿಂದ

**ಯದಿಮೌ ಲೋಕಪಾಲಸ್ಯ ಪುತ್ರೌ ಭೂತ್ವಾ ತಮಃಪ್ಲುತೌ ।**
**ನ ವಿವಾಸಸಮಾತ್ಮಾನಂ ವಿಜಾನೀತಃ ಸುದುರ್ಮದೌ ॥ ೨೦**

**ಅತೋಽರ್ಹತಃ ಸ್ಥಾವರತಾಂ ಸ್ಯಾತಾಂ ನೈವಂ ಯಥಾ ಪುನಃ ।**
**ಸ್ಮೃತಿಃ ಸ್ಯಾನ್ಮತ್ಪ್ರಸಾದೇನ ತತ್ರಾಪಿ ಮದನುಗ್ರಹಾತ್ ॥ ೨೧**

**ವಾಸುದೇವಸ್ಯ ಸಾಂನಿಧ್ಯಂ ಲಬ್ಧ್ವಾ ದಿವ್ಯಶರಚ್ಛತೇ ।**
**ವೃತ್ತೇ ಸ್ವರ್ಲೋಕತಾಂ ಭೂಯೋ ಲಬ್ಧಭಕ್ತೀ ಭವಿಷ್ಯತಃ ॥ ೨೨**

ಶ್ರೀಶುಕ ಉವಾಚ—

**ಏವಮುಕ್ತ್ವಾ ಸ ದೇವರ್ಷಿರ್ಗತೋ ನಾರಾಯಣಾಶ್ರಮಮ್ ।**
**ನಲಕೂಬರಮಣಿಗ್ರೀವಾವಾಸತುರ್ಯಮಲಾರ್ಜುನೌ ॥ ೨೩**

**ಋಷೇರ್ಭಾಗವತಮುಖ್ಯಸ್ಯ ಸತ್ಯಂ ಕರ್ತುಂ ವಚೋ ಹರಿಃ ।**
**ಜಗಾಮ ಶನಕೈಸ್ತತ್ರ ಯತ್ರಾಸ್ತಾಂ ಯಮಲಾರ್ಜುನೌ ॥ ೨೪**

---

ಇವರ ಅಜ್ಞಾನದ ಮದವನ್ನು ಇಳಿಸುವೆನು! (೧೯). ದಿಕ್ಪಾಲನಾದ ಕುಬೇರನ ಮಕ್ಕಳಾಗಿದ್ದರೂ ಇವರು ತಮೋಗುಣದಲ್ಲಿ ಮುಳುಗಿರುವರಲ್ಲ! ದುರ್ಮದದಿಂದ ಬೀಗಿರುವ ಇವರಿಗೆ, ತಾವು ಬೆತ್ತಲೆಯಾಗಿದ್ದೇವೆಂಬ ಅರಿವೂ ಇಲ್ಲ! (೨೦). ಆದ್ದರಿಂದ ಈ ಯಕ್ಷರು ಸ್ಥಾವರವೃಕ್ಷಗಳಾಗಿ ಹೋಗಲಿ! ಇವರಿಗೆ ಪುನಃ ಈ ಬಗೆಯ ದುರ್ಬುದ್ಧಿ ಬರದಿರಲಿ. ವೃಕ್ಷಜನ್ಮದಲ್ಲಿಯೂ ನನ್ನ ಅನುಗ್ರಹದಿಂದ ಹಿಂದಿನ ಸ್ಮರಣೆ ಉಳಿದಿರಲಿ (೨೧). ನೂರು ದಿವ್ಯವರ್ಷಗಳು ಕಳೆದಮೇಲೆ ನನ್ನ ಅನುಗ್ರಹದಿಂದ ಇವರಿಗೆ ಶ್ರೀವಾಸುದೇವನ ಸಾಂನಿಧ್ಯವು ದೊರಕಲಿ. ಆತನ ಸಾಂನಿಧ್ಯದಿಂದ ಈ ಶಾಪವು ನೀಗುವುದು. ಆಗ ಇವರು ಎಂದಿನಂತೆ ಸ್ವರ್ಗಲೋಕವನ್ನು ಸೇರಿ ಭಗವದ್ಭಕ್ತರಾಗಿ ಬಾಳುವರು!" ಎಂದರು (೨೨). ಹೀಗೆ ನುಡಿದು ದೇವರ್ಷಿಗಳಾದ ನಾರದರು ನಾರಾಯಣಾಶ್ರಮಕ್ಕೆ ಹೊರಟುಹೋದರು. ನಳಕೂಬರ ಮಣಿಗ್ರೀವರು ಜೋಡಿಯಲ್ಲಿರುವ ಎರಡು ಮತ್ತಿಮರಗಳಾದರು (೨೩). ಮಹಾರಾಜ, ಭಕ್ತಶಿರೋಮಣಿಗಳಾದ ದೇವರ್ಷಿಗಳ ನುಡಿಯು ಸತ್ಯವಾಗಲೆಂದು ಶ್ರೀಕೃಷ್ಣನು, ಮತ್ತಿಯ ಮರ

ದೇವರ್ಷಿರ್ಮೇ ಪ್ರಿಯತಮೋ ಯದಿಮೌ ಧನದಾತ್ಮಜೌ ।
ತತ್ತಥಾ ಸಾಧಯಿಷ್ಯಾಮಿ ಯದ್ ಗೀತಂ ತನ್ಮಹಾತ್ಮನಾ ॥ ೨೫

ಇತ್ಯಂತರೇಣಾರ್ಜುನಯೋಃ ಕೃಷ್ಣಸ್ತು ಯಮಯೋರ್ಯಯೌ ।
ಆತ್ಮನಿರ್ವೇಶಮಾತ್ರೇಣ ತಿರ್ಯಗ್ಗತಮುಲೂಖಲಮ್ ॥ ೨೬

ಬಾಲೇನ ನಿಷ್ಕರ್ಷಯತಾನ್ವಗುಲೂಖಲಂ ತದ್
ದಾಮೋದರೇಣ ತರಸೋತ್ಕಲಿತಾಂಘ್ರಿಬಂಧೌ ।
ನಿಷ್ಪೇತತುಃ ಪರಮವಿಕ್ರಮಿತಾತಿವೇಪ-
ಸ್ಕಂಧಪ್ರವಾಲವಿಟಪೌ ಕೃತಚಂಡಶಬ್ದೌ ॥ ೨೭

ತತ್ರ ಶ್ರಿಯಾ ಪರಮಯಾ ಕಕುಭಃ ಸ್ಫುರಂತೌ
ಸಿದ್ಧಾವುಪೇತ್ಯ ಕುಜಯೋರಿವ ಜಾತವೇದಾಃ ।
ಕೃಷ್ಣಂ ಪ್ರಣಮ್ಯ ಶಿರಸಾಖಿಲಲೋಕನಾಥಂ
ಬದ್ಧಾಂಜಲೀ ವಿರಜಸಾವಿದಮೂಚತುಃ ಸ್ಮ ॥ ೨೮

---

ಗಳಿದ್ದೆಡೆಗೆ ಮೆಲ್ಲಗೆ ತೆರಳಿದನು (೨೪). "ದೇವರ್ಷಿಯು ನನಗೆ ಅತ್ಯಂತ ಪ್ರಿಯನಾಗಿರುವನು. ಆದ್ದರಿಂದ ಆ ಮಹಾತ್ಮನು ನುಡಿದಂತೆ ಈ ಕುಬೇರ ಪುತ್ರರನ್ನು ಉದ್ಧರಿಸುವೆನು" ಎಂಬ ಆಶಯದಿಂದ ಕೃಷ್ಣನು ಜೊತೆಯಾಗಿ ಬೆಳೆದಿದ್ದ ಮರಗಳ ನಡುವೆ ಹೋದನು. ಮಧ್ಯದಲ್ಲಿ ಪ್ರವೇಶಿಸುವಾಗ ಕಟ್ಟಿದ್ದ ಒರಳು ಅಡ್ಡಬಿದ್ದಿತು (೨೫–೨೬). (ಸೊಂಟಕ್ಕೆ ಹಗ್ಗದಿಂದ ಕಟ್ಟಲ್ಪಟ್ಟು) ದಾಮೋದರನಾದ ಬಾಲಕನು ಒರಳನ್ನೆಳೆಯುತ್ತ ನುಗ್ಗಲು ಮತ್ತಿಯಮರಗಳ ಬುಡವು ಸಡಿಲಿತು. ಶ್ರೀಕೃಷ್ಣನ ವಿಕ್ರಮದಿಂದ ಮರಗಳ ಸ್ಕಂಧ ಚಿಗುರೆಲೆ ಕೊಂಬೆಗಳು ಅಲ್ಲಾಡಿದವು. ಭೀಕರಶಬ್ದವನ್ನು ಮಾಡುತ್ತ ಮರಗಳು ಧಡಾರನೆ ಉರುಳಿಬಿದ್ದವು (೨೭). ಆಗ ಉಜ್ಜ್ವಲಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತಿದ್ದ ಸಿದ್ಧಪುರುಷರಾದ ಇಬ್ಬರು ಯಕ್ಷರು, ವೃಕ್ಷ ಗಳಲ್ಲಡಗಿದ್ದ ಅಗ್ನಿಯೋ ಎಂಬಂತೆ ಹೊರಬಂದರು. ಅಹಂಕಾರಶೂನ್ಯರಾಗಿದ್ದ ಅವರಿಬ್ಬರೂ ಸಮಸ್ತಲೋಕೇಶ್ವರನಾದ ಶ್ರೀಕೃಷ್ಣನಿಗೆ ತಲೆಬಾಗಿ ವಂದಿಸಿ ಕೈಮುಗಿದುಕೊಂಡು ಈ ರೀತಿಯಲ್ಲಿ ಸ್ತುತಿಸಿದರು (೨೮):

**ಕೃಷ್ಣ ಕೃಷ್ಣ ಮಹಾಯೋಗಿಂಸ್ತ್ವಮಾದ್ಯಃ ಪುರುಷಃ ಪರಃ ।**
**ವ್ಯಕ್ತಾವ್ಯಕ್ತಮಿದಂ ವಿಶ್ವಂ ರೂಪಂ ತೇ ಬ್ರಾಹ್ಮಣಾ ವಿದುಃ ॥ ೨೯**

**ತ್ವಮೇಕಃ ಸರ್ವಭೂತಾನಾಂ ದೇಹಾಸ್ವಾತ್ಮೇಂದ್ರಿಯೇಶ್ವರಃ ।**
**ತ್ವಮೇವ ಕಾಲೋ ಭಗವಾನ್ ವಿಷ್ಣುರವ್ಯಯ ಈಶ್ವರಃ ॥ ೩೦**

**ತ್ವಂ ಮಹಾನ್ ಪ್ರಕೃತಿಃ ಸೂಕ್ಷ್ಮಾ ರಜಃಸತ್ತ್ವತಮೋಮಯೀ ।**
**ತ್ವಮೇವ ಪುರುಷೋಽಧ್ಯಕ್ಷಃ ಸರ್ವಕ್ಷೇತ್ರವಿಕಾರವಿತ್ ॥ ೩೧**

**ಗೃಹ್ಯಮಾಣೈಸ್ತ್ವಮಗ್ರಾಹ್ಯೋ ವಿಕಾರೈಃ ಪ್ರಾಕೃತೈರ್ಗುಣೈಃ ।**
**ಕೋನ್ವಿಹಾರ್ಹತಿ ವಿಜ್ಞಾತುಂ ಪ್ರಾಕ್ಸಿದ್ಧಂ ಗುಣಸಂವೃತಃ ॥ ೩೨**

**ತಸ್ಮೈ ತುಭ್ಯಂ ಭಗವತೇ ವಾಸುದೇವಾಯ ವೇಧಸೇ ।**
**ಆತ್ಮದ್ಯೋತಗುಣೈಶ್ಛನ್ನಮಹಿಮ್ನೇ ಬ್ರಹ್ಮಣೇ ನಮಃ ॥ ೩೩**

---

“ಹೇ ಕೃಷ್ಣ, ಕೃಷ್ಣ, ಮಹಾಯೋಗಿಯೆ, ನೀನು ಸರ್ವೋತ್ತಮನಾದ ಆದಿ ಪುರುಷನಾಗಿದ್ದೀಯೆ. ಸ್ಥೂಲಸೂಕ್ಷ್ಮರೂಪವಾದ ಈ ವಿಶ್ವವು ನಿನ್ನ ರೂಪ ವೆಂದು ಬ್ರಹ್ಮಜ್ಞರು ಬಲ್ಲರು (೨೯). ನೀನೊಬ್ಬನೇ ಸಕಲಪ್ರಾಣಿಗಳ ದೇಹ, ಪ್ರಾಣ, ಅಹಂಕಾರ ಮತ್ತು ಇಂದ್ರಿಯಗಳಿಗೆ ಸ್ವಾಮಿಯಾಗಿದ್ದೀಯೆ. ಭಗವಂತನೂ ವಿಷ್ಣುವೂ ಅವ್ಯಯನೂ ಈಶ್ವರನೂ ಆದ ನೀನೇ ಕಾಲನೂ ಆಗಿದ್ದೀಯೆ. (ಕಾಲವು ನಿನ್ನ ಲೀಲೆ) (೩೦). ಮಹತ್ತತ್ತ್ವವೂ ನೀನೇ. ಸತ್ತ್ವರಜಸ್ತಮೋಮಯವಾದ ಸೂಕ್ಷ್ಮಪ್ರಕೃತಿಯೂ ನೀನೇ. ಸಕಲ ಕ್ಷೇತ್ರಗಳನ್ನೂ ವಿಕೃತಿಗಳನ್ನೂ ಅರಿತು ಸಾಕ್ಷಿಯಾಗಿರುವ ಪುರುಷನೂ ನೀನೇ (೩೧). ಪ್ರಕೃತಿಜನ್ಯವಿಕಾರಗಳಾಗಿ ಸ್ವತಃ ಜ್ಞೇಯವಾಗಿರುವ ಬುದ್ಧಿ, ಇಂದ್ರಿಯಾದಿಗಳಿಗೆ ನೀನು ಗೋಚರನಲ್ಲ. (ಜೀವಾದಿಗಳ ಉತ್ಪತ್ತಿಗೆ) ಪೂರ್ವದಲ್ಲಿಯೇ (ಸ್ವಪ್ರಕಾಶನಾಗಿ) ಸಿದ್ಧನಾಗಿರುವ ನಿನ್ನನ್ನು ದೇಹಾದಿಗುಣ ಗಳಿಂದ ಆವೃತನಾದ ಯಾವ ಜೀವನು ತಿಳಿಯಬಲ್ಲನು? (೩೨). ಅಂತಹ ಭಗವಂತನೂ ವಾಸುದೇವನೂ ವೇಧನೂ ಆದ ನಿನಗೆ ನಮಸ್ಕಾರ. ನಿನ್ನಿಂದಲೇ ಪ್ರಕಾಶಿತವಾದ ದೇಹಾದಿಗಳಿಂದ (ಮೋಡಗಳಿಂದ ಸೂರ್ಯ ನಂತೆ) ಆಚ್ಛಾದಿತವಾದ ಮಹಿಮೆಯುಳ್ಳ ಬ್ರಹ್ಮಸ್ವರೂಪನಾದ ನಿನಗೆ

ಯಸ್ಯಾವತಾರಾ ಜ್ಞಾಯಂತೇ ಶರೀರೇಷ್ವಶರೀರಿಣಃ ।
ತೈಸ್ತೈರತುಲ್ಯಾತಿಶಯೈರ್ವೀರ್ಯೈರ್ದೇಹಿಷ್ವಸಂಗತೈಃ ॥ ೩೪

ಸ ಭವಾನ್ ಸರ್ವಲೋಕಸ್ಯ ಭವಾಯ ವಿಭವಾಯ ಚ ।
ಅವತೀರ್ಣೋಽಂಶಭಾಗೇನ ಸಾಂಪ್ರತಂ ಪತಿರಾಶಿಷಾಮ್ ॥ ೩೫

ನಮಃ ಪರಮಕಲ್ಯಾಣ ನಮಃ ಪರಮಮಂಗಲ ।
ವಾಸುದೇವಾಯ ಶಾಂತಾಯ ಯದೂನಾಂ ಪತಯೇ ನಮಃ ॥ ೩೬

ಅನುಜಾನೀಹಿ ನೌ ಭೂಮಂಸ್ತವಾನುಚರಕಿಂಕರೌ ।
ದರ್ಶನಂ ನೌ ಭಗವತ ಋಷೇರಾಸೀದನುಗ್ರಹಾತ್ ॥ ೩೭

ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ
ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ।
ಸ್ಮೃತ್ಯಾಂ ಶಿರಸ್ತವ ನಿವಾಸಜಗತ್ಪ್ರಣಾಮೇ
ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಮ್ ॥ ೩೮

---

ನಮಸ್ಕಾರ (೩೩). ಜೀವರಲ್ಲಿ ಎಂದಿಗೂ ಸಂಘಟಿಸದಿರುವ ಅಸದೃಶ ವೀರ್ಯಾತಿಶಯಗಳನ್ನು ಕಂಡು, ಅಶರೀರಿಯಾದ ನೀನು ಶರೀರಧಾರಿಯಾಗಿ ಅವತರಿಸಿರುವೆಯೆಂದು ಗೊತ್ತಾಗುತ್ತದೆ (೩೪). ಅಂತಹ ನೀನು ಸರ್ವ ಲೋಕದ ಉದ್ಭವಕ್ಕೂ ಕೈವಲ್ಯಕ್ಕೂ ಕಾರಣನಾಗಿರುವೆ. ಅನುಗ್ರಹಗಳಿಗೆ ಅಧೀಶ್ವರನಾದ ನೀನು ಸಾಂಪ್ರತದಲ್ಲಿ ಒಂದು ಅಂಶದಿಂದ ಇಲ್ಲಿ ಅವತರಿಸಿದ್ದೀಯೆ (೩೫). ಹೇ ಪರಮಕಲ್ಯಾಣ, ಹೇ ಪರಮಮಂಗಳ, ನಮೋ ನಮಃ. ಶಾಂತನೂ ವಸುದೇವಪುತ್ರನಾಗಿ ಯದುಪತಿಯಾಗಿಯೂ ಇರುವ ನಿನಗೆ ನಮೋ ನಮಃ (೩೬). ಹೇ ಪರಬ್ರಹ್ಮನೆ, ನಿನ್ನ ಅನುಚರನ * ಕಿಂಕರರಾದ ನಮಗೆ ಅನುಮತಿಯನ್ನು ಕೊಡು. ನಾರದಮುನಿಗಳ ಅನುಗ್ರಹದಿಂದ ನಮಗೆ ಇಂದು ಭಗವಂತನ ದರ್ಶನವಾಯಿತು (೩೭). ನಮ್ಮ ವಾಣಿಯು ನಿನ್ನ ಗುಣಕಥನದಲ್ಲಿ ತೊಡಗಿರಲಿ. ಕಿವಿಗಳು ನಿನ್ನ ಕಥಾಶ್ರವಣದಲ್ಲಿಯೂ ಕೈಗಳು ನಿನ್ನ ಪೂಜಾದಿಕರ್ಮಗಳಲ್ಲಿಯೂ ಮನಸ್ಸು ನಿನ್ನ ಪಾದಸ್ಮರಣೆ

---

* ಅನುಚರ = ಕುಬೇರ ಅಥವಾ ನಾರದಮುನಿ.

ಶ್ರೀಶುಕ ಉವಾಚ—

**ಇತ್ಥಂ ಸಂಕೀರ್ತಿತಸ್ತಾಭ್ಯಾಂ ಭಗವಾನ್ ಗೋಕುಲೇಶ್ವರಃ ।**
**ದಾಮ್ನಾ ಚೋಲೂಖಲೇ ಬದ್ಧಃ ಪ್ರಹಸನ್ನಾಹ ಗುಹ್ಯಕೌ ॥ ೩೯**

ಶ್ರೀ ಭಗವಾನುವಾಚ—

**ಜ್ಞಾತಂ ಮಮ ಪುರೈವೈತದೃಷಿಣಾ ಕರುಣಾತ್ಮನಾ ।**
**ಯಚ್ಛ್ರೀಮದಾಂಧಯೋರ್ವಾಗ್ಭಿರ್ವಿಭ್ರಂಶೋಽನುಗ್ರಹಃ ಕೃತಃ ॥**

**ಸಾಧೂನಾಂ ಸಮಚಿತ್ತಾನಾಂ ಸುತರಾಂ ಮತ್ಕೃತಾತ್ಮನಾಮ್ ।**
**ದರ್ಶನಾನ್ನೋ ಭವೇದ್ ಬಂಧಃ ಪುಂಸೋಽಕ್ಷ್ಣೋಃ ಸವಿತುರ್ಯಥಾ**

**ತದ್ ಗಚ್ಛತಂ ಮತ್ಪರಮೌ ನಲಕೂಬರ ಸಾದನಮ್ ।**
**ಸಂಜಾತೋ ಮಯಿ ಭಾವೋ ವಾಮೀಪ್ಸಿತಃ ಪರಮೋಽಭವಃ ॥ ೪೨**

---

ಯಲ್ಲಿಯೂ ತೊಡಗಿರಲಿ. ನಿನ್ನ ನಿವಾಸಭೂಮಿಯಾದ ಜಗತ್ತನ್ನು ವಂದಿಸಲು ತಲೆಯು ಬಾಗಿರಲಿ! ನಮ್ಮ ಕಣ್ಣುಗಳು ನಿನ್ನ ದೇಹಸ್ವರೂಪರಾದ ಸಜ್ಜನರನ್ನು ಸಂದರ್ಶಿಸುವುದರಲ್ಲಿ ಮಗ್ನವಾಗಿರಲಿ!" (೩೮). ಈ ರೀತಿಯಲ್ಲಿ ಅವರು ಸ್ತುತಿಸಲಾಗಿ, ಹಗ್ಗದಿಂದ ಒರಳಿಗೆ ಕಟ್ಟಲ್ಪಟ್ಟಿದ್ದ ಭಗವಾನ್ ಗೋಕುಲೇಶ್ವರನು ನಗುತ್ತ ಆ ಯಕ್ಷರನ್ನು ಕುರಿತು ಹೀಗೆಂದನು (೩೯): "ಎಲೈ ಯಕ್ಷರೆ, ಧನಬಲದಿಂದ ಮದಾಂಧರಾಗಿದ್ದ ನಿಮ್ಮ ವಿಷಯದಲ್ಲಿ ಕರುಣಾತ್ಮನಾದ ನಾರದಮುನಿಯು ಶಾಪರೂಪವಾದ ಅನುಗ್ರಹವನ್ನು ಮಾಡಿದನೆಂದು ನನಗೆ ಹಿಂದೆಯೇ ತಿಳಿದಿತ್ತು (೪೦). ಬ್ರಹ್ಮವಿದರೂ ಸಂಪೂರ್ಣವಾಗಿ ನನಗೆ ಅರ್ಪಿಸಿದ ಚಿತ್ತವುಳ್ಳವರೂ ಆದ ಸಾಧುಪುರುಷರ ದರ್ಶನವಾದ ಮೇಲೆ ಮನುಷ್ಯನಿಗೆ ಬಂಧನವೆಂಬುದು ಉಳಿದೀತೆ? ಸೂರ್ಯೋದಯವಾದ ಮೇಲೆ ಕಣ್ಣುಗಳಿಗೆ ನೋಡುವ ಅಡಚಣೆಯು ತೊಲಗುವಂತೆ, ಸಂಸಾರಬಂಧನವು ಕಳಚುವುದು (೪೧). ಆದ್ದರಿಂದ, ನಳಕೂಬರ–ಮಣಿಗ್ರೀವ, ನಾನೇ ಸ್ವಾಮಿಯೆಂದು ನಂಬಿ ಮನೆಗೆ ತೆರಳಿರಿ. ನನ್ನಲ್ಲಿ ನಿಮಗೆ ಅಪೇಕ್ಷಿತವಾದ ಭಕ್ತಿಯುಂಟಾಗಿದೆ. ಭಕ್ತಿಯಿಂದ ಸಂಸಾರ

ಶ್ರೀಶುಕ ಉವಾಚ—

**ಇತ್ಯುಕ್ತೌ ತೌ ಪರಿಕ್ರಮ್ಯ ಪ್ರಣಮ್ಯ ಚ ಪುನಃ ಪುನಃ ।**
**ಬದ್ಧೋಲೂಖಲಮಾಮಂತ್ರ್ಯ ಜಗ್ಮತುರ್ದಿಶಮುತ್ತರಾಮ್ ॥ ೪೩**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ದಶಮಾಧ್ಯಾಯಃ

---

## ಏಕಾದಶಾಧ್ಯಾಯಃ

ಶ್ರೀಶುಕ ಉವಾಚ—

**ಗೋಪಾ ನಂದಾದಯಃ ಶ್ರುತ್ವಾ ದ್ರುಮಯೋಃ ಪತತೋ ರವಮ್ ।**
**ತತ್ರಾಜಗ್ಮುಃ ಕುರುಶ್ರೇಷ್ಠ ನಿರ್ಘಾತಭಯಶಂಕಿತಾಃ ॥ ೧**

**ಭೂಮ್ಯಾಂ ನಿಪತಿತೌ ತತ್ರ ದದೃಶುರ್ಯಮಲಾರ್ಜುನೌ ।**
**ಬಭ್ರಮುಸ್ತದವಿಜ್ಞಾಯ ಲಕ್ಷ್ಯಂ ಪತನಕಾರಣಮ್ ॥ ೨**

---

ಬಂಧನವು ತಪ್ಪುವುದು" ಎಂದನು (೪೨). ಶ್ರೀಕೃಷ್ಣನು ಹೀಗೆ ನುಡಿಯು ಲಾಗಿ, ಯಕ್ಷರು ಆತನಿಗೆ ಪ್ರದಕ್ಷಿಣೆ ಮಾಡಿ ಮತ್ತೆ ಮತ್ತೆ ನಮಸ್ಕರಿಸಿ ಅನುಜ್ಞೆಯನ್ನು ಪಡೆದು ಉತ್ತರ ದಿಕ್ಕಿಗೆ ತೆರಳಿದರು (೪೩).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹತ್ತನೆಯ ಸರ್ಗ

---

## ಅಧ್ಯಾಯ ೧೧

ಶ್ರೀಕೃಷ್ಣನ ಬಾಲಲೀಲೆ. ಗೋಪರು ಗೋಕುಲವನ್ನು ತ್ಯಜಿಸಿ ವೃಂದಾವನಕ್ಕೆ ಹೋಗುವುದು. ಶ್ರೀಕೃಷ್ಣನಿಂದ ವತ್ಸಾಸುರ ಬಕಾಸುರರ ವಧೆ.

ಶುಕಮಹರ್ಷಿಗಳು ಹೇಳಿದರು: ಪರೀಕ್ಷಿತರಾಜ, ಮರಗಳು ಉರುಳಿ ಬಿದ್ದ ಶಬ್ದವನ್ನು ಕೇಳಿ, ಸಿಡಿಲು ಹೊಡೆಯಿತೋ ಎಂಬ ಭಯದಿಂದ ನಂದಾದಿ ಗೋಪರು ಅಲ್ಲಿಗೆ ಬಂದರು (೧). ಅಲ್ಲಿ ನೆಲದಮೇಲೆ ಬಿದ್ದಿರುವ ಜೋಡಿಯ ಮತ್ತಿಮರಗಳನ್ನು ನೋಡಿ, ಬೀಳಲು ಕಾರಣವಾದ ವಸ್ತು ಎದುರಿಗಿದ್ದರೂ

**ಉಲೂಖಲಂ ವಿಕರ್ಷಂತಂ ದಾಮ್ನಾ ಬದ್ಧಂ ಚ ಬಾಲಕಮ್ ।**
**ಕಸ್ಯೇದಂ ಕುತ ಆಶ್ಚರ್ಯಮುತ್ಪಾತ ಇತಿ ಕಾತರಾಃ ॥ ೩**

**ಬಾಲಾ ಊಚುರನೇನೇತಿ ತಿರ್ಯಗ್ಗತಮುಲೂಖಲಮ್ ।**
**ವಿಕರ್ಷತಾ ಮಧ್ಯಗೇನ ಪುರುಷಾವಪ್ಯಚಕ್ಷ್ಮಹಿ ॥ ೪**

**ನ ತೇ ತದುಕ್ತಂ ಜಗೃಹುರ್ನ ಘಟೇತೇತಿ ತಸ್ಯ ತತ್ ।**
**ಬಾಲಸ್ಯೋತ್ಪಾಟನಂ ತರ್ವೋಃ ಕೇಚಿತ್ ಸಂದಿಗ್ಧಚೇತಸಃ ॥ ೫**

**ಉಲೂಖಲಂ ವಿಕರ್ಷಂತಂ ದಾಮ್ನಾ ಬದ್ಧಂ ಸ್ವಮಾತ್ಮಜಮ್ ।**
**ವಿಲೋಕ್ಯ ನಂದಃ ಪ್ರಹಸದ್ವದನೋ ವಿಮುಮೋಚ ಹ ॥ ೬**

**ಗೋಪೀಭಿಃ ಸ್ತೋಭಿತೋಽನೃತ್ಯದ್ ಭಗವಾನ್ ಬಾಲವತ್ ಕ್ವಚಿತ್।**
**ಉದ್ಗಾಯತಿ ಕ್ವಚಿನ್ಮುಗ್ಧಸ್ತದ್ವಶೋ ದಾರುಯಂತ್ರವತ್ ॥ ೭**

**ಬಿಭರ್ತಿ ಕ್ವಚಿದಾಜ್ಞಪ್ತಃ ಪೀಠಕೋನ್ಮಾನಪಾದುಕಮ್ ।**
**ಬಾಹುಕ್ಷೇಪಂ ಚ ಕುರುತೇ ಸ್ವಾನಾಂ ಚ ಪ್ರೀತಿಮಾವಹನ್ ॥ ೮**

---

ಅದನ್ನರಿಯಲಾರದೆ ವಿಭ್ರಾಂತರಾದರು! (೨) ಹಗ್ಗದಿಂದ ಒದ್ಧನಾದ ಬಾಲಕನು ಒರಳನ್ನೆಳೆಯುತ್ತಿರುವುದನ್ನು ಕಂಡರು. ಆದರೂ 'ಇದು ಯಾವ (ರಾಕ್ಷಸನ) ಕೃತ್ಯವಿರಬಹುದು? ಈ ಅದ್ಭುತವು ಹೇಗಾಯಿತು?' ಎಂದು ಭೀತರಾದರು (೩). ಅಲ್ಲಿದ್ದ ಕೆಲವು ಹುಡುಗರು "ಕೃಷ್ಣನು ಅಡ್ಡಬಿದ್ದ ಒರಳನ್ನೆಳೆಯುತ್ತ ಈ ಮರಗಳ ಮಧ್ಯದಲ್ಲಿ ನುಗ್ಗಿದನು. ಇವನೇ ಮರಗಳನ್ನು ಉರುಳಿಸಿದ್ದಾನೆ! ಇಬ್ಬರು ದಿವ್ಯಪುರುಷರನ್ನೂ ನಾವು ನೋಡಿದೆವು!" ಎಂದು ಹೇಳಿದರು (೪). ನಂದಾದಿಗೋಪರು ಅವರ ಮಾತನ್ನು ನಂಬಲಿಲ್ಲ. "ಇದೆಲ್ಲಿ ಸಾಧ್ಯ? ಬಾಲಕನು ಮರಗಳನ್ನುರುಳಿಸಬಲ್ಲನೆ?" ಎಂದುಬಿಟ್ಟರು. ಕೆಲವರಿಗೆ ಸಂದೇಹವಾಯಿತು (೫). ಹಗ್ಗದಿಂದ ಒದ್ಧನಾಗಿ ಒರಳನ್ನೆಳೆಯುತ್ತಿದ್ದ ತನ್ನ ಮಗನನ್ನು ನೋಡಿ ನಂದಗೋಪನು ನಕ್ಕು, ಹಗ್ಗವನ್ನು ಬಿಚ್ಚಿದನು (೬). (ಈ ಪ್ರಕಾರವಾಗಿ ಬಾಲಕ್ರೀಡೆಯನ್ನಾಡುತ್ತಿದ್ದ) ಭಗವಂತನು ಕೆಲವು ವೇಳೆ ಗೋಪಿಯರು ಚಪ್ಪಾಳೆ ಹಾಕುತ್ತಿರಲು, ಬಾಲಕನಂತೆ ಕುಣಿಯುತ್ತಿದ್ದನು. ಇನ್ನೊಂದು ಸಲ ಮರದ ಬೊಂಬೆಯಂತೆ ಅವರಿಗೆ ವಶನಾಗಿ, ಅವರ ಮಾತಿಗೆ ಮುಗ್ಧನಾಗಿ ಹಾಡು ಹೇಳುತ್ತಿದ್ದನು! (೭). ಒಮ್ಮೆ 'ಅದನ್ನು ತೆಗೆದುಕೊಂಡು ಬಾ' ಎಂದು

**ದರ್ಶಯಂಸ್ತದ್ವಿದಾಂ ಲೋಕ ಆತ್ಮನೋ ಭೃತ್ಯವಶ್ಯತಾಮ್ ।**
**ವ್ರಜಸ್ಯೋವಾಹ ವೈ ಹರ್ಷಂ ಭಗವಾನ್ ಬಾಲಚೇಷ್ಟಿತೈಃ ॥ ೯**

**ಕ್ರೀಣೀಹಿ ಭೋಃ ಫಲಾನೀತಿ ಶ್ರುತ್ವಾ ಸತ್ವರಮಚ್ಯುತಃ ।**
**ಫಲಾರ್ಥೀ ಧಾನ್ಯಮಾದಾಯ ಯಯೌ ಸರ್ವಫಲಪ್ರದಃ । ೧೦**

**ಫಲವಿಕ್ರಯಿಣೀ ತಸ್ಯ ಚ್ಯುತಧಾನ್ಯಂ ಕರದ್ವಯಮ್ ।**
**ಫಲೈರಪೂರಯದ್ ರತ್ನೈಃ ಫಲಭಾಂಡಮಪೂರಿ ಚ ॥ ೧೧**

**ಸರಿತ್ತೀರಗತಂ ಕೃಷ್ಣಂ ಭಗ್ನಾರ್ಜುನಮಥಾಹ್ವಯತ್ ।**
**ರಾಮಂ ಚ ರೋಹಿಣೀ ದೇವೀ ಕ್ರೀಡಂತಂ ಬಾಲಕೈರ್ಭೃಶಮ್ ॥**

**ನೋಪೇಯಾತಾಂ ಯದಾಽಽಹೂತೌ ಕ್ರೀಡಾಸಂಗೇನ ಪುತ್ರಕೌ ।**
**ಯಶೋದಾಂ ಪ್ರೇಷಯಾಮಾಸ ರೋಹಿಣೀ ಪುತ್ರವತ್ಸಲಾಮ್ ॥**

---

ಗೋಪಿಯರು ಹೇಳಿದರೆ, ಪೀಠ ತಕ್ಕಡಿ ಪಾದುಕೆ ಮುಂತಾದವುಗಳನ್ನು ತರುವುದಕ್ಕೆ ಹೋಗಿ ಅವುಗಳನ್ನು ಹಿಡಿದುಕೊಳ್ಳುತ್ತಿದ್ದನು. ಅವನ್ನು ಎತ್ತಲಾರೆನೆಂದು ಕೈಯಾಡಿಸಿ ಅವರಿಗೆ ಸಂತೋಷವನ್ನುಂಟುಮಾಡುತ್ತಿದ್ದನು (೮). ತಾನು ಭಕ್ತಾಧೀನನೆಂಬುದನ್ನು ತನ್ನನ್ನರಿತ ಜ್ಞಾನಿಗಳಿಗೆ ತೋರಿಸಿ ಕೊಡುತ್ತ, ಭಗವಂತನು ವ್ರಜದಲ್ಲಿದ್ದವರಿಗೆ ಬಾಲಲೀಲೆಗಳಿಂದ ಹರ್ಷವನ್ನುಂಟುಮಾಡುತ್ತಿದ್ದನು (೯). ಹಣ್ಣುಮಾರುವವಳು 'ಹಣ್ಣು ಬೇಕೇ, ಹಣ್ಣು !' ಎಂದು ಬೀದಿಯಲ್ಲಿ ಕೂಗಿದರೆ, ಶ್ರೀಕೃಷ್ಣನು ಮನೆಯಲ್ಲಿದ್ದ ಧಾನ್ಯವನ್ನು ತೆಗೆದುಕೊಂಡು ಹಣ್ಣನ್ನು ಕೊಳ್ಳಲು ಹೋಗುತ್ತಿದ್ದನು! ಪರೀಕ್ಷಿತರಾಜ, ಸಕಲರಿಗೂ ಸಕಲಫಲಗಳನ್ನೂ ಕೊಡಬಲ್ಲವನು ಹಣ್ಣು ಕೊಳ್ಳಲು ಹೋಗುತ್ತಿದ್ದನು! (೧೦). ಧಾನ್ಯವನ್ನು ಕೊಟ್ಟ ಅವನ ಎರಡು ಕೈಗಳ ತುಂಬ ಹಣ್ಣುಮಾರುವವಳು ಹಣ್ಣುಗಳನ್ನು ತುಂಬುತ್ತಿದ್ದಳು. ಅವಳ ಹಣ್ಣಿನ ಬುಟ್ಟಿಯು ರತ್ನಗಳಿಂದ ತುಂಬಿಹೋಗುತ್ತಿತ್ತು! (೧೧). ಮತ್ತಿಯಮರಗಳನ್ನು ಉರುಳಿಸಿದ ಮೇಲೆ, ಒಂದು ಸಲ ರಾಮ ಕೃಷ್ಣರು ಬಾಲಕರೊಡನೆ ನದೀತೀರದಲ್ಲಿ ಆಟವಾಡುತ್ತಿದ್ದರು. ಕ್ರೀಡಾಮಗ್ನರಾದ ಅವರಿಬ್ಬರನ್ನೂ ರೋಹಿಣೀದೇವಿಯು ಮನೆಗೆ ಬರುವಂತೆ ಕರೆದಳು (೧೨). ಆಟದಲ್ಲಿ ತಲ್ಲೀನರಾದ ಆ ಮಕ್ಕಳು ಬರಲೇ ಇಲ್ಲ. ಆಗ ರೋಹಿಣಿಯು

ಕ್ರೀಡಂತಂ ಸಾ ಸುತಂ ಬಾಲೈರತಿವೇಲಂ ಸಹಾಗ್ರಜಮ್ ।
ಯಶೋದಾಜೋಹವೀತ್ ಕೃಷ್ಣಂ ಪುತ್ರಸ್ನೇಹಸ್ನುತಸ್ತನೀ ॥ ೧೪

ಕೃಷ್ಣ ಕೃಷ್ಣಾರವಿಂದಾಕ್ಷ ತಾತ ಏಹಿ ಸ್ತನಂ ಪಿಬ ।
ಅಲಂ ವಿಹಾರೈಃ ಕ್ಷುತ್ಕ್ಷಾಂತಃ ಕ್ರೀಡಾಶ್ರಾಂತೋಽಸಿ ಪುತ್ರಕ ॥ ೧೫

ಹೇ ರಾಮಾಗಚ್ಛ ತಾತಾಶು ಸಾನುಜಃ ಕುಲನಂದನ ।
ಪ್ರಾತರೇವ ಕೃತಾಹಾರಸ್ತದ್ ಭವಾನ್ ಭೋಕ್ತುಮರ್ಹತಿ ॥ ೧೬

ಪ್ರತೀಕ್ಷತೇ ತ್ವಾಂ ದಾಶಾರ್ಹ ಭೋಕ್ಷ್ಯಮಾಣೋ ವ್ರಜಾಧಿಪಃ ।
ಏಹ್ಯಾವಯೋಃ ಪ್ರಿಯಂ ಧೇಹಿ ಸ್ವಗೃಹಾನ್ ಯಾತ ಬಾಲಕಾಃ ॥

ಧೂಲಿಧೂಸರಿತಾಂಗಸ್ತ್ವಂ ಪುತ್ರ ಮಜ್ಜನಮಾವಹ ।
ಜನ್ಮರ್ಕ್ಷಮದ್ಯ ಭವತೋ ವಿಪ್ರೇಭ್ಯೋ ದೇಹಿ ಗಾಃ ಶುಚಿಃ ॥ ೧೮

ಪಶ್ಯ ಪಶ್ಯ ವಯಸ್ಯಾಂಸ್ತೇ ಮಾತೃಮೃಷ್ಟಾನ್ ಸ್ವಲಂಕೃತಾನ್ ।
ತ್ವಂ ಚ ಸ್ನಾತಃ ಕೃತಾಹಾರೋ ವಿಹರಸ್ವ ಸ್ವಲಂಕೃತಃ ॥ ೧೯

---

ಅವರನ್ನು ಕರೆತರುವಂತೆ ಪುತ್ರವತ್ಸಲೆಯಾದ ಯಶೋದೆಯನ್ನು ಕಳಿಸಿದಳು (೧೩). ಅಣ್ಣನೊಡನೆ ಆಟದಲ್ಲಿ ಮುಳುಗಿದ್ದ ಕೃಷ್ಣನನ್ನು ಯಶೋದೆಯು ಹೋಗಿ ಕರೆದಳು. ಪುತ್ರಸ್ನೇಹದಿಂದ ಅವಳ ಸ್ತನ್ಯವು ಒಸರುತ್ತಿತ್ತು (೧೪). ಯಶೋದೆಯು "ಓ ಕೃಷ್ಣ, ಕೃಷ್ಣ, ಅರವಿಂದನೇತ್ರ, ಬಾ. ಮಗು, ಸ್ತನ್ಯವನ್ನು ಕುಡಿಯಬಹುದು; ಬಾ. ಆಟವು ಸಾಕು. ನಿನಗೆ ಹಸಿವಾಗಿದೆ. ಆಡಿ ದಣಿದಿದ್ದೀಯೆ. ಮಗು, ಬಾ (೧೫). ಓ ರಾಮ, ಮಗು, ಬಂದುಬಿಡು. ನಿನ್ನ ತಮ್ಮನೊಡನೆ ಬಂದುಬಿಡು. ನೀನು ಜಾಣ, ಬಾರಪ್ಪ. ಪ್ರಾತಃಕಾಲವೇ ಊಟಮಾಡಿದ್ದೀಯೆ. ಈಗ ಉಣ್ಣಬೇಕು (೧೬). ಏ ಕೃಷ್ಣ, ವ್ರಜಾಧಿಪನು (ನಿನ್ನ ತಂದೆ) ಊಟಮಾಡಲು ಕಾದಿದ್ದಾನೆ, ಬಂದುಬಿಡು. ನಮಗೆ ಸಂತೋಷವನ್ನುಂಟುಮಾಡು. ಎಲೈ ಬಾಲಕರೆ, ನೀವು ಮನೆಗೆ ಹೋಗಿರಿ (೧೭). ಎಲೈ ಮಗು, ನಿನ್ನ ಮೈಯೆಲ್ಲ ಧೂಳಿಯಾಗಿದೆ. ನೀನು ಸ್ನಾನ ಮಾಡಬೇಕು. ಈ ದಿನ ನೀನು ಹುಟ್ಟಿದ ನಕ್ಷತ್ರ ಬಂದಿದೆ. ಸ್ನಾನಮಾಡಿ ವಿಪ್ರರಿಗೆ ಗೋದಾನ ಮಾಡಬೇಕು (೧೮). ನೋಡು, ನೋಡು. ನಿನ್ನ ಗೆಳೆಯರು ತಾಯಂದಿರಿಂದ ಸ್ನಾನಮಾಡಿಸಿಕೊಂಡು ಎಷ್ಟು ಚೆನ್ನಾಗಿ

ಇತ್ಥಂ ಯಶೋದಾ ತಮಶೇಷಶೇಖರಂ
ಮತ್ವಾ ಸುತಂ ಸ್ನೇಹನಿಬದ್ಧಧೀರ್ನೃಪ ।
ಹಸ್ತೇ ಗೃಹೀತ್ವಾ ಸಹರಾಮಮಚ್ಯುತಂ
ನೀತ್ವಾ ಸ್ವವಾಟಂ ಕೃತವತ್ಯಥೋದಯಮ್ ॥ ೨೦

ಗೋಪವೃದ್ಧಾ ಮಹೋತ್ಪಾತಾನನುಭೂಯ ಬೃಹದ್ವನೇ ।
ನಂದಾದಯಃ ಸಮಾಗಮ್ಯ ವ್ರಜಕಾರ್ಯಮಮಂತ್ರಯನ್ ॥ ೨೧

ತತ್ರೋಪನಂದನಾಮಾಽಽಹ ಗೋಪೋ ಜ್ಞಾನವಯೋಽಧಿಕಃ ।
ದೇಶಕಾಲಾರ್ಥತತ್ತ್ವಜ್ಞಃ ಪ್ರಿಯಕೃದ್ ರಾಮಕೃಷ್ಣಯೋಃ ॥ ೨೨

ಉತ್ಥಾತವ್ಯಮಿತೋಽಸ್ಮಾಭಿರ್ಗೋಕುಲಸ್ಯ ಹಿತೈಷಿಭಿಃ ।
ಆಯಾಂತ್ಯತ್ರ ಮಹೋತ್ಪಾತಾ ಬಾಲಾನಾಂ ನಾಶಹೇತವಃ ॥ ೨೩

---

ಅಲಂಕರಿಸಿಕೊಂಡಿದ್ದಾರೆ! ನೀನೂ ಬಂದು ಸ್ನಾನಮಾಡಿ ಊಟಮಾಡು. ಆಮೇಲೆ ಅಲಂಕರಿಸಿಕೊಂಡು ಆಟವಾಡಬಹುದು" ಎಂದಳು (೧೯). ಮಹಾರಾಜ, ಈ ರೀತಿಯಲ್ಲಿ ಪುತ್ರವತ್ಸಲೆಯಾದ ಯಶೋದೆಯು ಸರ್ವೇಶ್ವರನನ್ನು ತನ್ನ ಮಗನೆಂದು ತಿಳಿದು, ಕೃಷ್ಣನನ್ನೂ ಬಲರಾಮನನ್ನೂ ಕೈಯಲ್ಲಿ ಹಿಡಿದು ಮನೆಗೆ ಕರೆದುಕೊಂಡು ಹೋಗಿ ಕೃಷ್ಣನ ಜನ್ಮೋತ್ಸವವನ್ನಾಚರಿಸಿದಳು (೨೦). ಹೀಗಿರಲು ವಿಶಾಲವಾದ ಗೋಕುಲದಲ್ಲಿ ಎಲ್ಲಿಡೆಯೂ ಮಹೋತ್ಪಾತಗಳು ಕಾಣಿಸತೊಡಗಿದವು. ಆಗ ನಂದಾದಿಗೋಪವೃದ್ಧರು ಸಭೆ ಸೇರಿ, ವ್ರಜದ ಹಿತಾರ್ಥವಾಗಿ ಏನು ಮಾಡಬೇಕೆಂದು ಮಂತ್ರಾಲೋಚನೆ ಮಾಡಿದರು (೨೧). ಉಪನಂದನೆಂಬ ಒಬ್ಬ ಗೋಪನು ಜ್ಞಾನದಲ್ಲಿಯೂ ವಯಸ್ಸಿನಲ್ಲಿಯೂ ಹಿರಿಯನಾಗಿದ್ದನು. ಅವನಿಗೆ ದೇಶಕಾಲಗಳ ವಿಷಯದಲ್ಲಿ ನಿಸ್ಪಷ್ಟವಾದ ತಿಳಿವಳಿಕೆ ಇದ್ದಿತು. ರಾಮ ಕೃಷ್ಣರಲ್ಲಿ ಪ್ರೀತಿ ಇತ್ತು. ಅವರ ಹಿತಕ್ಕಾಗಿ ಉಪನಂದನು ಹೀಗೆಂದನು (೨೨): "ಗೋಕುಲದ ಹಿತೈಷಿಗಳಾದ ನಾವು ಇಲ್ಲಿಂದ ನಿರ್ಗಮಿಸಬೇಕು. ಇಲ್ಲಿ ದೊಡ್ಡ ಉತ್ಪಾತಗಳು ಸಂಭವಿಸುತ್ತಿವೆ. ಇವು ಬಾಲಕರಿಗೆ ಕುತ್ತಾಗಿ ಪರಿಣಮಿಸುತ್ತಿವೆ (೨೩).

**ಮುಕ್ತಃ ಕಥಂಚಿದ್ ರಾಕ್ಷಸ್ಯಾ ಬಾಲಘ್ನ್ಯಾ ಬಾಲಕೋ ಹ್ಯಸೌ ।**
**ಹರೇರನುಗ್ರಹಾನ್ನೂನಮನಶ್ಚೋಪರಿ ನಾಪತತ್ ॥ ೨೪**

**ಚಕ್ರವಾತೇನ ನೀತೋಽಯಂ ದೈತ್ಯೇನ ವಿಪದಂ ವಿಯತ್ ।**
**ಶಿಲಾಯಾಂ ಪತಿತಸ್ತತ್ರ ಪರಿತ್ರಾತಃ ಸುರೇಶ್ವರೈಃ ॥ ೨೫**

**ಯನ್ನ ಮ್ರಿಯೇತ ದ್ರುಮಯೋರಂತರಂ ಪ್ರಾಪ್ಯ ಬಾಲಕಃ ।**
**ಅಸಾವನ್ಯತಮೋ ವಾಪಿ ತದಪ್ಯಚ್ಯುತರಕ್ಷಣಮ್ ॥ ೨೬**

**ಯಾವದೌತ್ಪಾತಿಕೋಽರಿಷ್ಟೋ ವ್ರಜಂ ನಾಭಿಭವೇದಿತಃ ।**
**ತಾವದ್ ಬಾಲಾನುಪಾದಾಯ ಯಾಸ್ಯಾಮೋಽನ್ಯತ್ರ ಸಾನುಗಾಃ ॥**

**ವನಂ ವೃಂದಾವನಂ ನಾಮ ಪಶವ್ಯಂ ನವಕಾನನಮ್ ।**
**ಗೋಪಗೋಪೀಗವಾಂ ಸೇವ್ಯಂ ಪುಣ್ಯಾದ್ರಿತೃಣವೀರುಧಮ್ ॥ ೨೮**

---

ಬಾಲಘಾತುಕಿಯಾದ ರಾಕ್ಷಸಿಯಿಂದ ಈ ಬಾಲಕನು ಹೇಗೋ ತಪ್ಪಿಸಿಕೊಂಡು ಉಳಿದನು. ಇವನ ಮೇಲೆ ಬಂಡಿಯು ಉರುಳಿ ಬೀಳಲಿಲ್ಲ. ಶ್ರೀಹರಿಯ ಅನುಗ್ರದಿಂದಲೇ ಈತನು ಪಾರಾದನು! (೨೪). ರಾಕ್ಷಸನೊಬ್ಬನು ಸುಂಟರಗಾಳಿಯಾಗಿ ಬಂದು ಹಕ್ಕಿಗಳು ಹಾರಾಡುವ ಗಗನಮಂಡಲಕ್ಕೆ ಈ ಮಗುವನ್ನು ಹಾರಿಸಿಕೊಂಡು ಹೋದನಲ್ಲವೆ? ಅಲ್ಲಿಂದ ಬಂಡೆಯಮೇಲೆ ಬಿದ್ದಾಗ ದೇವತೆಗಳೇ ಇವನನ್ನು ಕಾಪಾಡಿದರು (೨೫). ಎರಡು ಮರಗಳ ಸಂದಿನಲ್ಲಿ ಹೋದಾಗ ಮರಗಳು ಉರುಳಿಬಿದ್ದರೂ ಈ ಮಗುವಾಗಲಿ ಅಥವಾ ಇನ್ನೊಂದು ಮಗುವಾಗಲಿ ಬದುಕಿ ಉಳಿಯುವುದೆಂದರೆ, ಶ್ರೀಹರಿಯಿಂದಾದ ರಕ್ಷಣೆಯೇ ಸರಿ (೨೬). ಹೀಗೆ ಉತ್ಪಾತದಿಂದ ಇನ್ನೊಂದು ಅನರ್ಥವು ಈ ವ್ರಜಸ್ಥಾನಕ್ಕೆ ಒದಗುವಮೊದಲು, ಮಕ್ಕಳನ್ನು ಕರೆದುಕೊಂಡು ಪರಿವಾರ ಸಮೇತರಾಗಿ ಇಲ್ಲಿಂದ ನಾವು ಹೊರಟುಬಿಡೋಣ (೨೭). ವೃಂದಾವನ ವೆಂಬ ವನವಿದೆಯಷ್ಟೆ. ಅದು ಪಶುಸಂಗೋಪನೆಗೆ ಹಿತಕರವಾಗಿದೆ. ಅಲ್ಲಿ ಹೊಸ ಹೊಸ ಚಿಕ್ಕ ಕಾಡುಗಳಿವೆ. ಗೋಪಿ ಗೋಪಿಯರಿಗೂ ಹಸುಗಳಿಗೂ ಸೇವನೀಯವಾಗಿದೆ. ಉತ್ತಮವಾದ ಬೆಟ್ಟ ಹುಲ್ಲು ಬಳ್ಳಿಗಳಿಂದ ತುಂಬಿದೆ (೨೮).

ತತ್ರತ್ರಾದ್ಯೈವ ಯಾಸ್ಯಾಮಃ ಶಕಟಾನ್ ಯುಂಕ್ತ ಮಾ ಚಿರಮ್ ।
ಗೋಧನಾನ್ಯಗ್ರತೋ ಯಾಂತು ಭವತಾಂ ಯದಿ ರೋಚತೇ ॥ ೨೯

ತಚ್ಛ್ರುತ್ವೈಕಧಿಯೋ ಗೋಪಾಃ ಸಾಧು ಸಾಧ್ವಿತಿ ವಾದಿನಃ ।
ವ್ರಜಾನ್ ಸ್ವಾನ್ ಸ್ವಾನ್ ಸಮಾಯುಜ್ಯ ಯಯೂ
ರೂಢಪರಿಚ್ಛದಾಃ ॥ ೩೦

ವೃದ್ಧಾನ್ ಬಾಲಾನ್ ಸ್ತ್ರಿಯೋ ರಾಜನ್ ಸರ್ವೋಪಕರಣಾನಿ ಚ ।
ಅನಸ್ಸ್ವಾರೋಪ್ಯ ಗೋಪಾಲಾ ಯತ್ತಾ ಆತ್ತಶರಾಸನಾಃ ॥ ೩೧

ಗೋಧನಾನಿ ಪುರಸ್ಕೃತ್ಯ ಶೃಂಗಾಣ್ಯಾಪೂರ್ಯ ಸರ್ವತಃ ।
ತೂರ್ಯಘೋಷೇಣ ಮಹತಾ ಯಯುಃ ಸಹಪುರೋಹಿತಾಃ ॥ ೩೨

ಗೋಪ್ಯೋ ರೂಢರಥಾ ನೂತ್ನಕುಚಕುಂಕುಮಕಾಂತಯಃ ।
ಕೃಷ್ಣಲೀಲಾ ಜಗುಃ ಪ್ರೀತಾ ನಿಷ್ಕಕಂಠ್ಯಃ ಸುವಾಸಸಃ ॥ ೩೩

---

ನಿಮ್ಮೆಲ್ಲರಿಗೂ ನನ್ನ ಮಾತು ರುಚಿಸುವುದಾದರೆ, ಈ ದಿನವೇ ಇಲ್ಲಿಂದ ಹೊರಡೋಣ. ಬಂಡಿಗಳನ್ನು ಕಟ್ಟಿರಿ, ತಡಮಾಡಬೇಡಿರಿ. ನಮ್ಮ ಗೋಧನಗಳು ಬಂಡಿಗಳ ಮುಂದೆ ಸಾಗಲಿ" ಎಂದನು (೨೯). ಉಪನಂದನ ಸಲಹೆಯನ್ನು ಕೇಳಿ ಗೋಪರೆಲ್ಲರೂ ಏಕಕಂಠದಿಂದ 'ಸಾಧು ಸಾಧು, ಸರಿಯಾದ ಮಾತು' ಎಂದು ಹೇಳಿ, ತಮ್ಮ ತಮ್ಮ ಬಂಡಿಗಳನ್ನು ಹೂಡಿ ಗೃಹೋಪಕರಣಗಳನ್ನು ಹೇರಿದರು (೩೦). ಪರೀಕ್ಷಿತರಾಜ, ಆ ಗೋಪಾಲರು ಬಂಡಿಗಳಲ್ಲಿ ಮುದುಕರು ಮಕ್ಕಳು ಹೆಂಗಸರನ್ನು ಕುಳ್ಳಿರಿಸಿದರು. ಯತ್ನಪೂರ್ವಕವಾಗಿ ಸಕಲಸಾಮಗ್ರಿಗಳನ್ನೂ ಹೇರಿದರು. ಕೈಯಲ್ಲಿ ಬಿಲ್ಲುಗಳನ್ನು ಹಿಡಿದರು (೩೧). ಗೋಧನಗಳನ್ನು ಮುಂದಿಟ್ಟುಕೊಂಡು ಕೊಂಬುಗಳನ್ನು ಊದುತ್ತ ಮಂಗಳವಾದ್ಯವನ್ನು ನುಡಿಸುತ್ತ ಪುರೋಹಿತಸಹಿತರಾಗಿ ವ್ರಜಸ್ಥಾನದಿಂದ ಹೊರಟರು (೩೨). ಗೋಪಿಯರು ಒಳ್ಳೆಯ ಸೀರೆಯನ್ನುಟ್ಟು ಕತ್ತಿನಲ್ಲಿ ನಿಷ್ಕಾಭರಣವನ್ನು ಧರಿಸಿ ಕುಚಗಳಿಗೆ ನವಕುಂಕುಮವನ್ನು ಹಚ್ಚಿಕೊಂಡು ರಥವನ್ನೇರಿ ಸಂತೋಷದಿಂದ ಕೃಷ್ಣಲೀಲೆಗಳನ್ನು

**ತಥಾ ಯಶೋದಾರೋಹಿಣ್ಯಾವೇಕಂ ಶಕಟಮಾಸ್ಥಿತೇ ।**
**ರೇಜತುಃ ಕೃಷ್ಣರಾಮಾಭ್ಯಾಂ ತತ್ಕಥಾಶ್ರವಣೋತ್ಸುಕೇ ॥ ೩೪**

**ವೃಂದಾವನಂ ಸಂಪ್ರವಿಶ್ಯ ಸರ್ವಕಾಲಸುಖಾವಹಮ್ ।**
**ತತ್ರ ಚಕ್ರುರ್ವ್ರಜಾವಾಸಂ ಶಕಟೈರರ್ಧಚಂದ್ರವತ್ ॥ ೩೫**

**ವೃಂದಾವನಂ ಗೋವರ್ಧನಂ ಯಮುನಾಪುಲಿನಾನಿ ಚ ।**
**ವೀಕ್ಷ್ಯಾಸೀದುತ್ತಮಾ ಪ್ರೀತೀ ರಾಮಮಾಧವಯೋರ್ನೃಪ ॥ ೩೬**

**ಏವಂ ವ್ರಜೌಕಸಾಂ ಪ್ರೀತಿಂ ಯಚ್ಛಂತೌ ಬಾಲಚೇಷ್ಟಿತೈಃ ।**
**ಕಲವಾಕ್ಯೈಃ ಸ್ವಕಾಲೇನ ವತ್ಸಪಾಲೌ ಬಭೂವತುಃ ॥ ೩೭**

**ಅವಿದೂರೇ ವ್ರಜಭುವಃ ಸಹ ಗೋಪಾಲದಾರಕೈಃ ।**
**ಚಾರಯಾಮಾಸತುರ್ವತ್ಸಾನ್ ನಾನಾಕ್ರೀಡಾಪರಿಚ್ಛದೌ ॥ ೩೮**

**ಕ್ವಚಿದ್ ವಾದಯತೋ ವೇಣುಂ ಕ್ಷೇಪಣೈಃ ಕ್ಷಿಪತಃ ಕ್ವಚಿತ್ ।**
**ಕ್ವಚಿತ್ ಪಾದೈಃ ಕಿಂಕಿಣೀಭಿಃ ಕ್ವಚಿತ್ ಕೃತ್ರಿಮಗೋವೃಷೈಃ ॥ ೩೯**

---

ಹಾಡಲಾರಂಭಿಸಿದರು (೩೩). ರೋಹಿಣೀ ಯಶೋದೆಯರು ರಾಮ ಕೃಷ್ಣರೊಡನೆ ಒಂದೇ ರಥದಲ್ಲಿ ಕುಳಿತರು. ಗೋಪಿಯರು ಹಾಡುತ್ತಿದ್ದ ರಾಮ ಕೃಷ್ಣರ ಕಥೆಗಳನ್ನು ಅವರು ಪ್ರೀತಿಯಿಂದ ಆಲಿಸುತ್ತಿದ್ದರು (೩೪). ಆಮೇಲೆ ಸರ್ವಕಾಲದಲ್ಲಿಯೂ ಸುಖಾವಹವಾದ ವೃಂದಾವನಕ್ಕೆ ಹೋಗಿ, ಆ ಗೋಪಾಲರು ಬಂಡಿಗಳನ್ನು ಅರ್ಧಚಂದ್ರಾಕಾರವಾಗಿ ನಿಲ್ಲಿಸಿ ಗೋವುಗಳಿಗೆ ವಸತಿಸ್ಥಾನವನ್ನು (ತಾತ್ಕಾಲಿಕವಾಗಿ) ಕಲ್ಪಿಸಿದರು (೩೫) ವೃಂದಾವನ, ಗೋವರ್ಧನಗಿರಿ, ಯಮುನಾತೀರದ ಮರಳುದಿಣ್ಣೆಗಳು–ಇವುಗಳನ್ನು ವೀಕ್ಷಿಸಿ ಬಲರಾಮ ಮಾಧವರಿಗೆ ಬಹಳ ಆನಂದವಾಯಿತು (೩೬). ಪರೀಕ್ಷಿತರಾಜ, ಅವರಿಬ್ಬರೂ ತಮ್ಮ ಬಾಲಚೇಷ್ಟೆಗಳಿಂದಲೂ ಇಂಪಾದ ನುಡಿಗಳಿಂದಲೂ ವ್ರಜವಾಸಿಗಳಿಗೆ ಆನಂದವನ್ನುಂಟುಮಾಡುತ್ತ, ಕಾಲಕ್ರಮದಲ್ಲಿ ಕರುಗಳನ್ನು ಕಾಯುತ್ತ ವತ್ಸಪಾಲರಾದರು (೩೭). ನಾನಾಬಗೆಯ ಆಟದ ಸಾಮಾನುಗಳನ್ನು ತೆಗೆದುಕೊಂಡು ಗೋಪಬಾಲಕರೊಡನೆ ಸೇರಿ, ವೃಂದಾವನದ ಸಮೀಪದಲ್ಲಿ ಕರುಗಳನ್ನು ಮೇಯಿಸುತ್ತಿದ್ದರು (೩೮). ಒಮ್ಮೆ ಕೊಳಲೂದುತ್ತಿದ್ದರು. ಇನ್ನೊಮ್ಮೆ ದಾಂಡುಗಳಿಂದ ಚಿನ್ನಿ ಮುಂತಾದವನ್ನು ಚಿಮ್ಮು

ವೃಷಾಯಮಾಣೌ ನರ್ದಂತೌ ಯುಯುಧಾತೇ ಪರಸ್ಪರಮ್ ।
ಅನುಕೃತ್ಯ ರುತೈರ್ಜಂತೂಂಶ್ಚೇರತುಃ ಪ್ರಾಕೃತೌ ಯಥಾ ॥ ೪೦

ಕದಾಚಿದ್ ಯಮುನಾತೀರೇ ವತ್ಸಾಂಶ್ಚಾರಯತೋಃ ಸ್ವಕೈಃ ।
ವಯಸ್ಯೈಃ ಕೃಷ್ಣಬಲಯೋರ್ಜಿಘಾಂಸುರ್ದೈತ್ಯ ಆಗಮತ್ ॥ ೪೧

ತಂ ವತ್ಸರೂಪಿಣಂ ವೀಕ್ಷ್ಯ ವತ್ಸಯೂಥಗತಂ ಹರಿಃ ।
ದರ್ಶಯನ್ ಬಲದೇವಾಯ ಶನೈರ್ಮುಗ್ಧ ಇವಾಸದತ್ ॥ ೪೨

ಗೃಹೀತ್ವಾಪರಪಾದಾಭ್ಯಾಂ ಸಹಲಾಂಗೂಲಮಚ್ಯುತಃ ।
ಭ್ರಾಮಯಿತ್ವಾ ಕಪಿತ್ಥಾಗ್ರೇ ಪ್ರಾಹಿಣೋದ್ ಗತಜೀವಿತಮ್ ।
ಸ ಕಪಿತ್ಥೈರ್ಮಹಾಕಾಯಃ ಪಾತ್ಯಮಾನೈಃ ಪಪಾತ ಹ ॥ ೪೩

ತಂ ವೀಕ್ಷ್ಯ ವಿಸ್ಮಿತಾ ಬಾಲಾಃ ಶಶಂಸುಃ ಸಾಧು ಸಾಧ್ವಿತಿ ।
ದೇವಾಶ್ಚ ಪರಿಸಂತುಷ್ಟಾ ಬಭೂವುಃ ಪುಷ್ಪವರ್ಷಿಣಃ ॥ ೪೪

---

ತ್ತಿದ್ದರು. ಮತ್ತೊಮ್ಮೆ ಕಿರುಗೆಜ್ಜೆಗಳನ್ನು ಕಟ್ಟಿದ ಕಾಲುಗಳಿಂದ ಚೆಂಡು ಮುಂತಾದವನ್ನು ಒದೆಯುತ್ತಿದ್ದರು. ಹೋರಿಗಳಂತೆ ವೇಷಹಾಕಿಕೊಂಡು ಬರುವ ಗೋಪಬಾಲಕರೊಡನೆ ಹೋರಿಗಳಂತೆ ಗುಟರುಹಾಕುತ್ತ ಹೋರಾಡುತ್ತಿದ್ದರು! (ಹಂಸಮಯೂರಾದಿ) ಪ್ರಾಣಿಗಳನ್ನು ಅನುಕರಿಸಿ ಕೂಗುತ್ತ ಪ್ರಾಕೃತರಾದ ಬಾಲಕರಂತೆ ವರ್ತಿಸುತ್ತಿದ್ದರು (೩೯–೪೦). ಹೀಗಿರಲು ಒಂದು ದಿನ ಕೃಷ್ಣನೂ ಬಲರಾಮನೂ ತಮ್ಮ ಗೆಳೆಯರೊಂದಿಗೆ ಯಮುನಾತೀರದಲ್ಲಿ ಕರುಗಳನ್ನು ಮೇಯಿಸುತ್ತಿರುವಾಗ, ಅವರನ್ನು ಕೊಲ್ಲುವ ಉದ್ದೇಶದಿಂದ ಒಬ್ಬ ದೈತ್ಯನು ಬಂದನು (೪೧). ಆತನು ಕರುವಿನ ವೇಷವನ್ನು ಧರಿಸಿ ಕರುಗಳ ಹಿಂಡಿನಲ್ಲಿ ಸೇರಿಕೊಂಡನು. ಕೃಷ್ಣನು ಆ ದೈತ್ಯನನ್ನು ಬಲರಾಮನಿಗೆ ತೋರಿಸಿ, ಏನೂ ಗೊತ್ತಿಲ್ಲದವನಂತೆ ಮೆಲ್ಲಗೆ ಆತನ ಬಳಿಗೆ ಹೋದನು (೪೨). ಅನಂತರ ಆ ಕರುವಿನ ಹಿಂಗಾಲುಗಳನ್ನು ಬಾಲಸಹಿತವಾಗಿ ಹಿಡಿದೆತ್ತಿ ಗಿರ್ರನೆ ತಿರುಗಿಸಿ ಬೇಲದ ಮರಗಳ ಮೇಲೆ ಎಸೆದುಬಿಟ್ಟನು. ದೈತ್ಯನು ಸತ್ತುಹೋದನು. ಬೇಲದ ಮರಗಳು ಉರುಳಿದವು. ಅವುಗಳೊಡನೆ ಬೃಹದಾಕಾರನಾದ ದೈತ್ಯನೂ ಬಿದ್ದನು (೪೩). ಆ ದೈತ್ಯನನ್ನು ನೋಡಿ ಗೋಪಬಾಲಕರು ವಿಸ್ಮಿತರಾಗಿ, 'ಭಲಾ! ಭೇಷ್!' ಎಂದು ಕೃಷ್ಣನನ್ನು

ತೌ ವತ್ಸಪಾಲಕೌ ಭೂತ್ವಾ ಸರ್ವಲೋಕೈಕಪಾಲಕೌ ।
ಸಪ್ರಾತರಾಶೌ ಗೋವತ್ಸಾಂಶ್ಚಾರಯಂತೌ ವಿಚೇರತುಃ ॥ ೪೫

ಸ್ವಂ ಸ್ವಂ ವತ್ಸಕುಲಂ ಸರ್ವೇ ಪಾಯಯಿಷ್ಯಂತ ಏಕದಾ ।
ಗತ್ವಾ ಜಲಾಶಯಾಭ್ಯಾಶಂ ಪಾಯಯಿತ್ವಾ ಪಪುರ್ಜಲಮ್ ॥ ೪೬

ತೇ ತತ್ರ ದದೃಶುರ್ಬಾಲಾ ಮಹಾಸತ್ತ್ವಮವಸ್ಥಿತಮ್ ।
ತತ್ರಸುರ್ವಜ್ರನಿರ್ಭಿನ್ನಂ ಗಿರೇಃ ಶೃಂಗಮಿವ ಚ್ಯುತಮ್ ॥ ೪೭

ಸ ವೈ ಬಕೋ ನಾಮ ಮಹಾನಸುರೋ ಬಕರೂಪಧೃಕ್ ।
ಆಗತ್ಯ ಸಹಸಾ ಕೃಷ್ಣಂ ತೀಕ್ಷ್ಣತುಂಡೋಽಗ್ರಸದ್ಬಲೀ ॥ ೪೮

ಕೃಷ್ಣಂ ಮಹಾಬಕಗ್ರಸ್ತಂ ದೃಷ್ಟ್ವಾ ರಾಮಾದಯೋಽರ್ಭಕಾಃ ।
ಬಭೂವುರಿಂದ್ರಿಯಾಣೀವ ವಿನಾ ಪ್ರಾಣಂ ವಿಚೇತಸಃ ॥ ೪೯

ತಂ ತಾಲುಮೂಲಂ ಪ್ರದಹಂತಮಗ್ನಿವದ್
ಗೋಪಾಲಸೂನುಂ ಪಿತರಂ ಜಗದ್ಗುರೋಃ ।

---

ಕೊಂಡಾಡಿದರು. ದೇವತೆಗಳು ಸಂತುಷ್ಟರಾಗಿ ಹೂಮಳೆಗರೆದರು (೪೪). ಸರ್ವಲೋಕಗಳನ್ನೂ ಪಾಲಿಸತಕ್ಕ ಕೃಷ್ಣ ಬಲರಾಮರು ಈ ಪ್ರಕಾರವಲ್ಲಿ ವತ್ಸಪಾಲಕರಾಗಿ, ಪ್ರಾತಃಕಾಲದಲ್ಲಿ ಆಹಾರವನ್ನು ಸೇವಿಸಿ ಹಸುವಿನ ಕರುಗಳನ್ನು ಮೇಯಿಸುತ್ತ ತಿರುಗುತ್ತಿದ್ದರು (೪೫). ಒಂದು ದಿನ ಅವರೆಲ್ಲರೂ ತಮ್ಮ ತಮ್ಮ ಕರುಗಳಿಗೆ ನೀರು ಕುಡಿಸುವುದಕ್ಕಾಗಿ ಜಲಾಶಯದ ಬಳಿಗೆ ಹೋದರು. ಅಲ್ಲಿ ಕರುಗಳಿಗೆ ನೀರನ್ನು ಕುಡಿಸಿ ತಾವೂ ಕುಡಿದರು (೪೬). ಆಗ ಜಲಾಶಯದಲ್ಲಿದ್ದ ಒಂದು ಬೃಹದಾಕಾರದ ಪ್ರಾಣಿಯನ್ನು ಕಂಡು ಅವರು ಹೆದರಿಹೋದರು. ಅದು ವಜ್ರನಿರ್ಭಿನ್ನವಾದ ಗಿರಿಶೃಂಗದಂತೆ ಬೃಹದಾಕಾರವಾಗಿತ್ತು (೪೭). ಆ ಪ್ರಾಣಿಯೇ ಬಕಪಕ್ಷಿಯ ರೂಪದಿಂದ ಬಂದಿದ್ದ ಬಕನೆಂಬ ಮಹಾಸುರ. ಆ ಬಕಪಕ್ಷಿಯ ಕೊಕ್ಕು ತೀಕ್ಷ್ಣವಾಗಿತ್ತು. ಬಲಾಢ್ಯವಾದ ಆ ಪಕ್ಷಿಯು ಥಟ್ಟನೆ ಮುಂದೆ ಬಂದು ಕೃಷ್ಣನನ್ನು ಕಚ್ಚಿ ಹಿಡಿಯಿತು (೪೮). ಬೃಹದಾಕಾರದ ಬಕವು ಕಚ್ಚಿಹಿಡಿದಿದ್ದ ಕೃಷ್ಣನನ್ನು ನೋಡಿ ಬಲರಾಮನೇ ಮೊದಲಾದ ಬಾಲಕರು, ಪ್ರಾಣರಹಿತವಾದ ಇಂದ್ರಿಯಗಳಂತೆ ಸ್ತಬ್ಧರಾದರು (೪೯). ಜಗತ್‌ಪಿತಾಮಹನಾದ ಬ್ರಹ್ಮನಿಗೂ ತಂದೆ

ಚಚ್ಛರ್ದ ಸದ್ಯೋಽತಿರುಷಾಕ್ಷತಂ ಬಕ-
ಸ್ತುಂಡೇನ ಹಂತುಂ ಪುನರಭ್ಯಪದ್ಯತ ॥ ೫೦

ತಮಾಪತಂತಂ ಸ ನಿಗೃಹ್ಯ ತುಂಡಯೋ-
ರ್ದೋರ್ಭ್ಯಾಂ ಬಕಂ ಕಂಸಸಖಂ ಸತಾಂ ಪತಿಃ ।
ಪಶ್ಯತ್ಸು ಬಾಲೇಷು ದದಾರ ಲೀಲಯಾ
ಮುದಾವಹೋ ವೀರಣವದ್ ದಿವೌಕಸಾಮ್ ॥ ೫೧

ತದಾ ಬಕಾರಿಂ ಸುರಲೋಕವಾಸಿನಃ
ಸಮಾಕಿರನ್ ನಂದನಮಲ್ಲಿಕಾದಿಭಿಃ ।
ಸಮೀಡಿರೇ ಚಾನಕಶಂಖಸಂಸ್ತವೈ-
ಸ್ತದ್ ವೀಕ್ಷ್ಯ ಗೋಪಾಲಸುತಾ ವಿಸಿಸ್ಮಿರೇ ॥ ೫೨

ಮುಕ್ತಂ ಬಕಾಸ್ಯಾದುಪಲಭ್ಯ ಬಾಲಕಾ
ರಾಮಾದಯಃ ಪ್ರಾಣಮಿವೇಂದ್ರಿಯೋ ಗಣಃ ।

---

ಯಾದ ಶ್ರೀಹರಿಯು ಗೊಲ್ಲನ ಮಗನೆಂದು ತಿಳಿದು ಬಕನು ಕಚ್ಚಿದನು! ಬೆಂಕಿಯನ್ನು ಬಾಯಲ್ಲಿ ಇಟ್ಟುಕೊಂಡಂತಾಗಿ ಬಕನ ದವಡೆ ಸುಟ್ಟಿತು! ಒಡನೆಯೇ ಅವನನ್ನು ಉಗುಳಿ ಹಿಂದಕ್ಕೆ ಸರಿದನು. ಕೃಷ್ಣನಿಗೆ ಯಾವ ಗಾಯವೂ ಆಗದೆ ಕ್ಷೇಮವಾಗಿದ್ದನು. ಆಗ ಬಕಾಸುರನು ರೋಷಾನ್ವಿತನಾಗಿ ಕೊಕ್ಕಿನಿಂದ ಕುಕ್ಕಿ ಕೊಲ್ಲಬೇಕೆಂದು ಮುಂದೆ ನುಗ್ಗಿದನು (೫೦). ನುಗ್ಗಿ ಬರುತ್ತಿದ್ದ ಕಂಸಮಿತ್ರನಾದ ಬಕನನ್ನು ಸಜ್ಜನಸಂರಕ್ಷಕನಾದ ಕೃಷ್ಣನು ಅಡ್ಡಗಟ್ಟಿ, ಕೊಕ್ಕಿನ ಎರಡು ಪಾರ್ಶ್ವಗಳನ್ನು ಎರಡು ಕೈಗಳಿಂದ ಹಿಡಿದನು. ಗೋಪಬಾಲಕರು ನೋಡುತ್ತ ನಿಂತಿದ್ದರು. ಒಡನೆಯೇ ಲಾವಂಚದ ಹುಲ್ಲನ್ನು ಸೀಳುವಂತೆ ಕೃಷ್ಣನು ಬಕನನ್ನು ಸುಲಭವಾಗಿ ಸೀಳಿ ಬಿಸುಟನು. ದೇವತೆಗಳು ಆನಂದಿಸಿದರು (೫೧). ಸ್ವರ್ಗವಾಸಿಗಳು ನಂದನವನದಲ್ಲಿ ಬೆಳೆದ ಮಲ್ಲಿಗೆ ಮುಂತಾದ ಹೂಗಳಿಂದ ಆ ಬಕಾಂತಕನ ಮೇಲೆ ಹೂಮಳೆ ಗರೆದರು. ದುಂದುಭಿಗಳನ್ನು ಬಾರಿಸಿದರು. ಶಂಖಗಳನ್ನೂದಿದರು. ಕೃಷ್ಣ ನನ್ನು ಸ್ತುತಿಸಿದರು. ಅದೆಲ್ಲವನ್ನು ಕಂಡು ಗೋಪಬಾಲಕರು ವಿಸ್ಮಿತ ರಾದರು! (೫೨). ಕೃಷ್ಣನು ಬಕನ ಬಾಯಿಂದ ಬದುಕಿ ಬಂದುದನ್ನು ಕಂಡು

*

**ಸ್ಥಾನಾಗತಂ ತಂ ಪರಿರಭ್ಯ ನಿರ್ವೃತಾಃ**
**ಪ್ರಣೀಯ ವತ್ಸಾನ್ ವ್ರಜಮೇತ್ಯ ತಜ್ಜಗುಃ ॥ ೫೩**

**ಶ್ರುತ್ವಾ ತದ್ ವಿಸ್ಮಿತಾ ಗೋಪಾ ಗೋಪ್ಯಶ್ಚಾತಿಪ್ರಿಯಾದೃತಾಃ ।**
**ಪ್ರೇತ್ಯಾಗತಮಿವೌತ್ಸುಕ್ಯಾದೈಕ್ಷಂತ ತೃಷಿತೇಕ್ಷಣಾಃ ॥ ೫೪**

**ಅಹೋ ಬತಾಸ್ಯ ಬಾಲಸ್ಯ ಬಹವೋ ಮೃತ್ಯವೋಽಭವನ್ ।**
**ಅಪ್ಯಾಸೀದ್ ವಿಪ್ರಿಯಂ ತೇಷಾಂ ಕೃತಂ ಪೂರ್ವಂ ಯತೋ ಭಯಮ್ ॥ ೫೫**

**ಅಥಾಪ್ಯಭಿಭವಂತ್ಯೇನಂ ನೈವ ತೇ ಘೋರದರ್ಶನಾಃ ।**
**ಜಿಘಾಂಸಯೈನಮಾಸಾದ್ಯ ನಶ್ಯಂತ್ಯಗ್ನೌ ಪತಂಗವತ್ ॥ ೫೬**

**ಅಹೋ ಬ್ರಹ್ಮವಿದಾಂ ವಾಚೋ ನಾಸತ್ಯಾಃ ಸಂತಿ ಕರ್ಹಿಚಿತ್ ।**
**ಗರ್ಗೋ ಯದಾಹ ಭಗವಾನನ್ವಭಾವಿ ತಥೈವ ತತ್ ॥ ೫೭**

---

ಬಲರಾಮನೇ ಮೊದಲಾದ ಬಾಲಕರಿಗೆ ಬಹಳ ಆನಂದವಾಯಿತು. ಇಂದ್ರಿಯಗಳಿಗೆ, ಹೋದ ಪ್ರಾಣವು ಮತ್ತೆ ತನ್ನ ಸ್ಥಾನಕ್ಕೆ ಬಂದು ಸೇರಿಕೊಂಡಂತಾಯಿತು! ಎಲ್ಲರೂ ಮುತ್ತಿಕೊಂಡು ಕೃಷ್ಣನನ್ನು ಆಲಂಗಿಸಿ ನಲಿದರು. ದನಕರುಗಳನ್ನು ಒಟ್ಟುಗೂಡಿಸಿ ವೃಂದಾವನಕ್ಕೆ ಹಿಂದಿರುಗಿ ಕೃಷ್ಣನ ಕಥೆಯನ್ನು ಹೇಳಿ ಹಾಡಿದರು (೫೩). ಆ ವೃತ್ತಾಂತವನ್ನು ಕೇಳಿ ಗೋಪಗೋಪಿಯರು ಅಚ್ಚರಿಗೊಂಡರು. ಅತ್ಯಂತ ಪ್ರೀತಿಯಿಂದ ಕೃಷ್ಣನನ್ನು ಆದರಿಸುತ್ತ, ಲೋಕಾಂತರದಿಂದ ಮರಳಿಬಂದನೋ ಎಂಬಂತೆ ಔತ್ಸುಕ್ಯದಿಂದ ಅವನನ್ನು ನೋಡುತ್ತಿದ್ದರು. ಎಷ್ಟು ನೋಡಿದರೂ ಅವರಿಗೆ ತೃಪ್ತಿಯಾಗಲಿಲ್ಲ (೫೪). ನಂದಾದಿ ಗೋಪರು "ಅಬ್ಬಬ್ಬಾ! ಏನಚ್ಚರಿ ಇದು! ಈ ಹುಡುಗನಿಗೆ ಬಹಳ ಕಂಟಕಗಳು ಬಂದವು. ಆದರೆ ಯಾರಿಂದ ಭಯ ಒದಗಿತೋ ಅವರಿಗೇ ಕೆಡುಕಾಯಿತು! (೫೫). ಆ ಬಗೆಯ ಘೋರಾಕೃತಿಗಳಿಂದಲೂ ಈತನನ್ನು ಹಿಂಸಿಸಲು ಸಾಧ್ಯವಾಗಲಿಲ್ಲ. ಇವನನ್ನು ಕೊಲ್ಲಬೇಕೆಂದು ಬಂದು, ಬೆಂಕಿಯಲ್ಲಿ ಬಿದ್ದ ದೀಪದ ಹುಳುಗಳಂತೆ ತಾವೇ ಸತ್ತುಹೋಗುತ್ತಿದ್ದಾರೆ! (೫೬). ಆಹಾ! ಬ್ರಹ್ಮಜ್ಞಾನಿಗಳು ಆಡಿದ ನುಡಿ ಎಂದಿಗಾದರೂ ಸುಳ್ಳಾಗುವುದುಂಟೆ? ಭಗವಾನ್ ಗರ್ಗಮುನಿಗಳು

ಇತಿ ನಂದಾದಯೋ ಗೋಪಾಃ ಕೃಷ್ಣರಾಮಕಥಾಂ ಮುದಾ ।
ಕುರ್ವಂತೋ ರಮಮಾಣಾಶ್ಚ ನಾವಿಂದನ್ ಭವವೇದನಾಮ್ ॥ ೫೮

ಏವಂ ವಿಹಾರೈಃ ಕೌಮಾರೈಃ ಕೌಮಾರಂ ಜಹತುರ್ವ್ರಜೇ ।
ನಿಲಾಯನೈಃ ಸೇತುಬಂಧೈರ್ಮರ್ಕಟೋತ್ಪ್ಲವನಾದಿಭಿಃ ॥ ೫೯

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕಾದಶಾಧ್ಯಾಯಃ



'ನಾರಾಯಣಸಮೋ ಗುಣೈಃ' ಎಂದು ಏನು ಹೇಳಿದರೋ . ಹಾಗೆಯೇ ಅನುಭವಕ್ಕೆ ಬಂದಿತು" (೫೭) ಎಂದು ಹೇಳಿಕೊಳ್ಳುತ್ತ ಶ್ರೀಕೃಷ್ಣನ ಮತ್ತು ಬಲರಾಮನ ಚರಿತೆಗಳನ್ನು ಕುರಿತು ಮಾತಾಡುತ್ತ ಆನಂದಪಡುತ್ತಿದ್ದರು. ಸಂಸಾರದ ಕಷ್ಟವನ್ನು ಮರೆತರು (೫೮). ಹೀಗೆಯೇ ಬಲರಾಮಕೃಷ್ಣರು ಕಣ್ಣುಮುಚ್ಚಾಲೆ, ಒಡ್ಡುಕಟ್ಟುವುದು, ಮರಕೋತಿಯಾಟ—ಮುಂತಾದ ಕುಮಾರೋಚಿತ ಕ್ರೀಡೆಗಳನ್ನಾಡುತ್ತ ತಮ್ಮ ಬಾಲ್ಯವನ್ನು ಕಳೆದರು (೫೯).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹನ್ನೊಂದನೆಯ ಅಧ್ಯಾಯ



## ದ್ವಾದಶಾಧ್ಯಾಯಃ

ಶ್ರೀಶುಕ ಉವಾಚ—

ಕ್ವಚಿದ್ ವನಾಶಾಯ ಮನೋ ದಧದ್ ವ್ರಜಾತ್
ಪ್ರಾತಃ ಸಮುತ್ಥಾಯ ವಯಸ್ಯವತ್ಸಪಾನ್ ।
ಪ್ರಬೋಧಯನ್ ಶೃಂಗರವೇಣ ಚಾರುಣಾ
ವಿನಿರ್ಗತೋ ವತ್ಸಪುರಃಸರೋ ಹರಿಃ ॥ ೧

ತೇನೈವ ಸಾಕಂ ಪೃಥುಕಾಃ ಸಹಸ್ರಶಃ
ಸ್ನಿಗ್ಧಾಃ ಸುಶಿಗ್ವೇತ್ರವಿಷಾಣವೇಣವಃ ।
ಸ್ವಾನ್ ಸ್ವಾನ್ ಸಹಸ್ರೋಪರಿಸಂಖ್ಯಯಾನ್ವಿತಾನ್
ವತ್ಸಾನ್ ಪುರಸ್ಕೃತ್ಯ ವಿನಿರ್ಯಯುರ್ಮುದಾ ॥ ೨

ಕೃಷ್ಣವತ್ಸೈರಸಂಖ್ಯಾತೈರ್ಯೂಥೀಕೃತ್ಯ ಸ್ವವತ್ಸಕಾನ್ ।
ಚಾರಯಂತೋಽರ್ಭಲೀಲಾಭಿರ್ವಿಜಹ್ರುಸ್ತತ್ರ ತತ್ರ ಹ ॥ ೩

## ಅಧ್ಯಾಯ ೧೨

### ಅಘಾಸುರನ ವಧೆ

ಶುಕಮುನಿಗಳು ಹೇಳಿದರು: ಒಂದು ಸಲ ಶ್ರೀಕೃಷ್ಣನಿಗೆ ವನದಲ್ಲಿ ಭೋಜನವನ್ನು ಮಾಡಬೇಕೆಂದು ಮನಸ್ಸಾಯಿತು. ಅವನು ಪ್ರಾತಃಕಾಲದಲ್ಲೆದ್ದು ಗೆಳೆಯರಾದ ಗೋಪರನ್ನು ಇಂಪಾದ ಕೊಂಬಿನ ಧ್ವನಿಯಿಂದ ಎಚ್ಚರಿಸಿದನು. ಅನಂತರ ಕರುಗಳನ್ನು ಮುಂದೆಮಾಡಿಕೊಂಡು ವ್ರಜದಿಂದ ಹೊರಟನು (೧). ಅವನ ಮಿತ್ರರಾದ ಸಾವಿರಾರು ಗೋಪಬಾಲಕರು ಶಿಕ್ಯ ಬೆತ್ತ ಕೊಂಬು ಕೊಳಲುಗಳನ್ನು ಹಿಡಿದು ಸಾವಿರಗಟ್ಟಲೆ ಗೋವತ್ಸಗಳನ್ನು ಮುಂದೆಮಾಡಿಕೊಂಡು ನಲಿಯುತ್ತ ಅವನೊಡನೆ ಹೊರಟರು (೨). ಕೃಷ್ಣನ ಅಸಂಖ್ಯಾತವಾದ ಕರುಗಳೊಡನೆ ತಮ್ಮ ಕರುಗಳನ್ನೂ ಒಟ್ಟುಗೂಡಿಸಿ ಮೇಯಿಸುತ್ತ ಆ ಬಾಲಕರು ಬಾಲಲೀಲೆಯಿಂದ ಅಲ್ಲಲ್ಲಿ ವಿಹರಿಸುತ್ತಿದ್ದರು (೩).

**ಫಲಪ್ರವಾಲಸ್ತಬಕಸುಮನಃಪಿಚ್ಛಧಾತುಭಿಃ ।**
**ಕಾಚಗುಂಜಾಮಣಿಸ್ವರ್ಣಭೂಷಿತಾ ಅಪ್ಯಭೂಷಯನ್ ॥ ೪**

**ಮುಷ್ಣಂತೋಽನ್ಯೋನ್ಯಶಿಕ್ಯಾದೀನ್ ಜ್ಞಾತಾನಾರಾಚ್ಚ ಚಿಕ್ಷಿಪುಃ ।**
**ತತ್ರತ್ಯಾಶ್ಚ ಪುನರ್ದೂರಾದ್ಧಸಂತಶ್ಚ ಪುನರ್ದದುಃ ॥ ೫**

**ಯದಿ ದೂರಂ ಗತಃ ಕೃಷ್ಣೋ ವನಶೋಭೇಕ್ಷಣಾಯ ತಮ್ ।**
**ಅಹಂ ಪೂರ್ವಮಹಂ ಪೂರ್ವಮಿತಿ ಸಂಸ್ಪೃಶ್ಯ ರೇಮಿರೇ ॥ ೬**

**ಕೇಚಿದ್ ವೇಣೂನ್ ವಾದಯಂತೋ ಧ್ಮಾಂತಃ ಶೃಂಗಾಣಿ ಕೇಚನ ।**
**ಕೇಚಿದ್ ಭೃಂಗೈಃ ಪ್ರಗಾಯಂತಃ ಕೂಜಂತಃ ಕೋಕಿಲೈಃ ಪರೇ ॥ ೭**

**ವಿಚ್ಛಾಯಾಭಿಃ ಪ್ರಧಾವಂತೋ ಗಚ್ಛಂತಃ ಸಾಧುಹಂಸಕೈಃ ।**
**ಬಕೈರುಪವಿಶಂತಶ್ಚ ನೃತ್ಯಂತಶ್ಚ ಕಲಾಪಿಭಿಃ ॥ ೮**

**ವಿಕರ್ಷಂತಃ ಕೀಶಬಾಲಾನಾರೋಹಂತಶ್ಚ ತೈರ್ದ್ರುಮಾನ್ ।**
**ವಿಕುರ್ವಂತಶ್ಚ ತೈಃ ಸಾಕಂ ಪ್ಲವಂತಶ್ಚ ಪಲಾಶಿಷು ॥ ೯**

---

ಆ ಹುಡುಗರನ್ನು ತಾಯಂದಿರು ಗಾಜಿನ ಮಣಿ, ಗುಲಗಂಜಿ, ರತ್ನ, ಚಿನ್ನ—ಮುಂತಾದವುಗಳಿಂದ ಅಲಂಕರಿಸಿದ್ದರೂ ಅವರು ಹಣ್ಣು, ಚಿಗುರೆಲೆಯ ಗುಚ್ಛ, ಹೂ, ನವಿಲುಗರಿಗಳಿಂದ ತಮ್ಮನ್ನು ಸಿಂಗರಿಸಿಕೊಳ್ಳುತ್ತಿದ್ದರು! (೪). ಇನ್ನೊಬ್ಬರ ಶಿಕ್ಯಾದಿ ವಸ್ತುಗಳನ್ನು ಕದಿಯುವುದು, ಅದು ಗೊತ್ತಾದೊಡನೆ ದೂರಕ್ಕೆ ಎಸೆದುಬಿಡುವುದು, ಅಲ್ಲಿದ್ದವರು ಅದನ್ನು ಇನ್ನೂ ದೂರಕ್ಕೆ ಎಸೆಯುವುದು, ಮತ್ತೆ ನಗುತ್ತ ಹಿಂದಿರುಗಿಸುವುದು—ಈ ಬಗೆಯಲ್ಲಿ ವಿನೋದಿಸುತ್ತಿದ್ದರು (೫). ಕೃಷ್ಣನು ವನದ ಶೋಭೆಯನ್ನು ನೋಡುತ್ತ ದೂರ ಹೋದರೆ, 'ನಾನು ಮೊದಲು ಕೃಷ್ಣನನ್ನು ಮುಟ್ಟುವೆನು, ನಾನು ಮುಟ್ಟುವೆನು!' ಎಂದು ಸ್ಪರ್ಧೆಯಿಂದ ಓಡುವರು (೬). ಕೆಲವರು ಕೊಳಲು ಬಾರಿಸುವರು. ಕೆಲವರು ಕೊಂಬುಗಳನ್ನೂದುವರು. ಕೆಲವರು ದುಂಬಿಗಳೊಂದಿಗೆ 'ಗುಂಯ್' ಎನ್ನುವರು! ಕೆಲವರು ಕೋಗಿಲೆಗಳೊಂದಿಗೆ 'ಕುಹೂ' ಎಂದು ಕೂಗುವರು! (೭). ಹಕ್ಕಿಗಳ ನೆರಳನ್ನು ಹಿಡಿದು ಓಡುವರು. ಹಂಸಗಳನ್ನು ಅನುಕರಿಸಿ ನಡೆಯುವರು. ಬಕಪಕ್ಷಿಗಳನ್ನನುಕರಿಸಿ (ಮೌನವಾಗಿ ಅಲ್ಲಾಡದೆ) ಕುಳಿತುಕೊಳ್ಳುವರು! ನವಿಲುಗಳೊಂದಿಗೆ ಕುಣಿಯುವರು! (೮). ಕಪಿಗಳ ಬಾಲವನ್ನು ಜಗ್ಗುವರು. ಅವುಗಳೊಂದಿಗೆ ಮರ ಹತ್ತುವರು. ಕಪಿಗಳಂತೆ

ಸಾಕಂ ಭೇಕೈರ್ವಿಲಂಘಂತಃ ಸರಿತ್ಪ್ರಸ್ರವಸಂಪ್ಲುತಾಃ ।
ವಿಹಸಂತಃ ಪ್ರತಿಚ್ಛಾಯಾಃ ಶಪಂತಶ್ಚ ಪ್ರತಿಸ್ವನಾನ್ ॥ ೧೦

ಇತ್ಥಂ ಸತಾಂ ಬ್ರಹ್ಮಸುಖಾನುಭೂತ್ಯಾ
ದಾಸ್ಯಂ ಗತಾನಾಂ ಪರದೈವತೇನ ।
ಮಾಯಾಶ್ರಿತಾನಾಂ ನರದಾರಕೇಣ
ಸಾಕಂ ವಿಜಹ್ರುಃ ಕೃತಪುಣ್ಯಪುಂಜಾಃ ॥ ೧೧

ಯತ್ಪಾದಪಾಂಸುರ್ಬಹುಜನ್ಮಕೃಚ್ಛ್ರತೋ
ಧೃತಾತ್ಮಭಿರ್ಯೋಗಿಭಿರಪ್ಯಲಭ್ಯಃ ।
ಸ ಏವ ಯದ್ದೃಗ್ವಿಷಯಃ ಸ್ವಯಂ ಸ್ಥಿತಃ
ಕಿಂ ವರ್ಣ್ಯತೇ ದಿಷ್ಟಮತೋ ವ್ರಜೌಕಸಾಮ್ ॥ ೧೨

ಅಥಾಘನಾಮಾಭ್ಯಪತನ್ಮಹಾಸುರ-
ಸ್ತೇಷಾಂ ಸುಖಕ್ರೀಡನವೀಕ್ಷಣಾಕ್ಷಮಃ ।
ನಿತ್ಯಂ ಯದಂತರ್ನಿಜಜೀವಿತೇಪ್ಸುಭಿಃ
ಪೀತಾಮೃತೈರಪ್ಯಮರೈಃ ಪ್ರತೀಕ್ಷ್ಯತೇ ॥ ೧೩

---

ಅವುಗಳನ್ನು ಅಣಕಿಸುವರು. ಮರಗಳಲ್ಲಿ ಕೊಂಬೆಯಿಂದ ಕೊಂಬೆಗೆ ನೆಗೆಯುವರು (೯). ನದಿಯ ನೀರಿನಲ್ಲಿ ಮುಳುಗಿ ಎದ್ದು ಕಪ್ಪೆಗಳೊಡನೆ ಕುಪ್ಪಳಿಸುವರು. ತಮ್ಮ ನೆರಳನ್ನು ನೋಡಿ ನಗುವರು. ಪ್ರತಿಧ್ವನಿಯನ್ನೆದುರಿಸಿ ಮತ್ತೆ ಕೂಗುವರು (೧೦). ಪರೀಕ್ಷಿತರಾಜ, ಜ್ಞಾನಿಗಳಿಗೆ ಬ್ರಹ್ಮಾನಂದಾನುಭವರೂಪನಾಗಿಯೂ ದಾಸ್ಯವನ್ನವಲಂಬಿಸಿದ ಭಕ್ತರಿಗೆ ಪರದೇವತೆಯಾಗಿಯೂ ಮಾಯಾಧೀನರಾದವರಿಗೆ ಮನುಷ್ಯ ಬಾಲಕನಾಗಿಯೂ ಕಾಣಸುವ ಶ್ರೀಕೃಷ್ಣನೊಂದಿಗೆ ಗೋಪಬಾಲಕರು ಸ್ನೇಹದಿಂದ ಈ ಪ್ರಕಾರವಾಗಿ ಆಟವಾಡಿದರು. ಆಹಾ! ಅವರು ಎಷ್ಟು ಪುಣ್ಯರಾಶಿಯನ್ನು ಗಳಿಸಿದ್ದರೋ! (೧೧). ಎಷ್ಟೋ ಜನ್ಮಗಳಲ್ಲಿ ಬಹುಕಷ್ಟಪಟ್ಟು ಮನಸ್ಸನ್ನು ವಶಪಡಿಸಿಕೊಂಡಿರುವ ಯೋಗಿಗಳಿಗೆ ಯಾರ ಪಾದಧೂಳಿಯೂ ದುರ್ಲಭವಾಗಿದೆಯೋ ಆತನು ಸ್ವಯಂ ಮೂರ್ತಿಮತ್ತಾಗಿ ವ್ರಜವಾಸಿಗಳಿಗೆ ಕಾಣಿಸಿಕೊಳ್ಳುತ್ತಿದ್ದನಲ್ಲ! ಅವರ ಭಾಗ್ಯವನ್ನು ಏನೆಂದು ವರ್ಣಿಸುವುದು! (೧೨). ಅಮೃತವನ್ನು ಕುಡಿದು ಅಮರರಾಗಿರುವ ದೇವತೆಗಳೂ ಸಹ ತಮ್ಮ ಜೀವನದ ಸಾರ್ಥಕ್ಯಕ್ಕಾಗಿ ಭಗವಲ್ಲೀಲೆಯನ್ನು

**ದೃಷ್ಟ್ವಾರ್ಭಕಾನ್ ಕೃಷ್ಣಮುಖಾನಘಾಸುರಃ**
**ಕಂಸಾನುಶಿಷ್ಟಃ ಸ ಬಕೀಬಕಾನುಜಃ ।**
**ಅಯಂ ತು ಮೇ ಸೋದರನಾಶಕೃತ್ತಯೋ-**
**ರ್ದ್ವಯೋರ್ಮಮೈನಂ ಸಬಲಂ ಹನಿಷ್ಯೇ ॥ ೧೪**

**ಏತೇ ಯದಾ ಮತ್ಸುಹೃದೋಸ್ತಿಲಾಪಃ**
**ಕೃತಾಸ್ತದಾ ನಷ್ಟಸಮಾ ವ್ರಜೌಕಸಃ ।**
**ಪ್ರಾಣೇ ಗತೇ ವರ್ಷ್ಮಸು ಕಾ ನು ಚಿಂತಾ**
**ಪ್ರಜಾಸವಃ ಪ್ರಾಣಭೃತೋ ಹಿ ಯೇ ತೇ ॥ ೧೫**

**ಇತಿ ವ್ಯವಸ್ಯಾಜಗರಂ ಬೃಹದ್ ವಪುಃ**
**ಸ ಯೋಜನಾಯಾಮಮಹಾದ್ರಿಪೀವರಮ್ ।**
**ಧೃತ್ವಾದ್ಭುತಂ ವ್ಯಾತ್ತಗುಹಾನನಂ ತದಾ**
**ಪಥಿ ವ್ಯಶೇತ ಗ್ರಸನಾಶಯಾ ಖಲಃ ॥ ೧೬**

---

ನೋಡಬೇಕೆಂದು ಅಂತರಂಗದಲ್ಲಿ ನಿತ್ಯವೂ ಬಯಸುತ್ತಾರೆ. ಹೀಗಿರಲು, ಆ ಗೋಪಬಾಲರ ಸಂತೋಷಕ್ರೀಡೆಯನ್ನು ನೋಡಲಾರದೆ ಅಘನೆಂಬ ಮಹಾಸುರನು ಅಲ್ಲಿಗೆ ಬಂದನು! (೧೩). ಆತನು ಪೂತನೆ ಮತ್ತು ಬಕಾಸುರನ ತಮ್ಮ. ಕಂಸನ ಆದೇಶದಂತೆ ಅಲ್ಲಿಗೆ ಬಂದಿದ್ದನು. ಶ್ರೀಕೃಷ್ಣನೇ ಮೊದಲಾದ ಬಾಲಕರನ್ನು ನೋಡಿ ಅಘಾಸುರನು ಹೀಗೆ ಆಲೋಚಿಸಿದನು: "ಈತನೇ ನನ್ನ ಸೋದರ ಸೋದರಿಯರನ್ನು ಕೊಂದಿದ್ದಾನೆ. ಅವರಿಬ್ಬರಿಗೆ ಪ್ರತಿಯಾಗಿ ಇವನನ್ನು ಇವನ ಪರಿವಾರಸಹಿತವಾಗಿ ಕೊಂದುಹಾಕುವೆನು (೧೪). ನನ್ನ ಬಂಧುಗಳಾದ ಪೂತನಾಬಕಾಸುರರಿಗೆ ಈ ಹುಡುಗರೆಲ್ಲರೂ ತಿಲತರ್ಪಣಗಳಾಗಿ ಹೋದರೆ, ವ್ರಜವಾಸಿಗಳಾದ ಗೋಪರೆಲ್ಲರೂ ಸತ್ತಂತೆಯೇ! ಪ್ರಾಣವು ಹೋದಮೇಲೆ ದೇಹವು ಉಳಿಯುವ ಚಿಂತೆ ಯುಂಟೆ? ಈ ಜನರಿಗೆ ಮಕ್ಕಳೇ ಪ್ರಾಣವಲ್ಲವೆ!" (೧೫). ಹೀಗೆ ಆಲೋಚಿಸಿ ಆ ದುಷ್ಟನು ಅದ್ಭುತವಾದ ಒಂದು ಹೆಬ್ಬಾವಿನ ರೂಪವನ್ನು ತಾಳಿದನು. ಅವನ ದೇಹವು ಒಂದು ಯೋಜನದಷ್ಟು ಉದ್ದವಾಗಿಯೂ ಪರ್ವತದಂತೆ ದೊಡ್ಡದಾಗಿಯೂ ಇತ್ತು. ಆ ಬಾಲಕರನ್ನು ನುಂಗಬೇಕೆಂದು

ಧರಾಧರೋಷ್ಠೋ ಜಲದೋತ್ತರೋಷ್ಠೋ
ದರ್ಯಾನನಾಂತೋ ಗಿರಿಶೃಂಗದಂಷ್ಟ್ರಃ ।
ಧ್ವಾಂತಾಂತರಾಸ್ಯೋ ವಿತತಾಧ್ವಜಿಹ್ವಃ
ಪರುಷಾನಿಲಶ್ವಾಸದವೇಕ್ಷಣೋಷ್ಣಃ ॥ ೧೭

ದೃಷ್ಟ್ವಾ ತಂ ತಾದೃಶಂ ಸರ್ವೇ ಮತ್ವಾ ವೃಂದಾವನಶ್ರಿಯಮ್ ।
ವ್ಯಾತ್ತಾಜಗರತುಂಡೇನ ಹ್ಯುತ್ಪ್ರೇಕ್ಷಂತೇ ಸ್ಮ ಲೀಲಯಾ ॥ ೧೮

ಅಹೋ ಮಿತ್ರಾಣಿ ಗದತ ಸತ್ತ್ವಕೂಟಂ ಪುರಃ ಸ್ಥಿತಮ್ ।
ಅಸ್ಮತ್ಸಂಗ್ರಸನವ್ಯಾತ್ತವ್ಯಾಲತುಂಡಾಯತೇ ನ ವಾ ॥ ೧೯

ಸತ್ಯಮರ್ಕಕರಾರಕ್ತಮುತ್ತರಾಹನುವದ್ ಘನಮ್ ।
ಅಧರಾಹನುವದ್ ರೋಧಸ್ತತ್ಪ್ರತಿಚ್ಛಾಯಯಾರುಣಮ್ ॥ ೨೦

---

ಗುಹೆಯಂತಿದ್ದ ಬಾಯನ್ನು ತೆರೆದುಕೊಂಡು ದಾರಿಯಲ್ಲಿ ಮಲಗಿದನು (೧೬). ಹೆಬ್ಬಾವಿನ ರೂಪವನ್ನು ತಾಳಿದ ಅಘಾಸುರನ ಕೆಳದುಟಿಯು ನೆಲದಮೇಲಿದ್ದರೆ, ಮೇಲ್ದುಟಿಯು ಮೇಘಮಂಡಲವನ್ನು ಮುಟ್ಟಿತ್ತು ! ಕಟವಾಯಿಗಳು ಎರಡು ಗವಿಗಳಂತಿದ್ದವು. ಗಿರಿಶಿಖರಗಳಂತೆ ಕೋರೆಹಲ್ಲುಗಳಿದ್ದವು. ಬಾಯ ಒಳಗಡೆ ಕತ್ತಲೆ ಹಬ್ಬಿತ್ತು. ಉದ್ದವಾದ ರಸ್ತೆಯಂತೆ ಅವನ ನಾಲಿಗೆ ಚಾಚಿಕೊಂಡಿತ್ತು. ಬಿರುಗಾಳಿ ಬೀಸಿದಂತೆ ಬುಸ್ಸೆಂದು ಉಸಿರಾಡುತ್ತಿದ್ದನು. ಕಾಳ್ಗಿಚ್ಚಿನಂತೆ ಕಣ್ಣುಗಳು ಕೆಂಡವಾಗಿ ಬಿಸಿಯನ್ನು ಸೂಸುತ್ತಿದ್ದವು ! (೧೭). ಆ ಗೋಪ ಬಾಲಕರು ಅಘಾಸುರನನ್ನು ನೋಡಿ 'ಆಹಾ ! ಇದೊಂದು ವೃಂದಾವನ ದಲ್ಲಿರುವ ಅಪೂರ್ವ ಸಂಪತ್ತು' ಎಂದು ಬಗೆದು, ಹೆಬ್ಬಾವಿನ ತೆರೆದ ಬಾಯಿಗೆ ಹೋಲಿಸಿ ಮಾತಾಡತೊಡಗಿದರು ! (೧೮): "ಓಹೊ ! ಅಲ್ಲಿ ನೋಡಿ, ಗೆಳೆಯರೆ ! ಎದುರಿಗಿರುವ ಆ ದೃಶ್ಯವು ಒಂದು ಪ್ರಾಣಿಯಂತೆ ಕಾಣುವು ದಲ್ಲವೆ ? ನಮ್ಮನ್ನು ನುಂಗಲು ಬಾಯ್ದೆರೆದ ಹೆಬ್ಬಾವಿನ ಬಾಯಂತೆ ಕಾಣಿಸು ತ್ತದೆಯಲ್ಲವೆ, ಹೇಳಿರಿ ! (೧೯). ಸೂರ್ಯಕಿರಣಗಳಿಂದ ಕೆಂಪಾದ ಮೋಡವು ಹೆಬ್ಬಾವಿನ ಮೇಲ್ದವಡೆ ಎಂದೇ ತಿಳಿಯಿರಿ ! ಕೆಮ್ಮೋಡದ ಕೆಂಪು ಕಾಂತಿಯು ಪ್ರತಿಫಲಿಸಿರುವ ನೆಲದ ದಿಣ್ಣೆಯು ಕೆಳದವಡೆಯೆಂದು ಕಲ್ಪಿಸಿ

ಪ್ರತಿಸ್ಪರ್ಧೇತೇ ಸೃಕ್ಕಿಭ್ಯಾಂ ಸವ್ಯಾಸವ್ಯೇ ನಗೋದರೇ ।
ತುಂಗಶೃಂಗಾಲಯೋಽಪ್ಯೇತಾಸ್ತದ್ದಂಷ್ಟ್ರಾಭಿಶ್ಚ ಪಶ್ಯತ ॥ ೨೧

ಆಸ್ತೃತಾಯಾಮಮಾರ್ಗೋಽಯಂ ರಸನಾಂ ಪ್ರತಿಗರ್ಜತಿ ।
ಏಷಾಮಂತರ್ಗತಂ ಧ್ವಾಂತಮೇತದಪ್ಯಂತರಾನನಮ್ ॥ ೨೨

ದಾವೋಷ್ಣಖರವಾತೋಽಯಂ ಶ್ವಾಸವದ್ ಭಾತಿ ಪಶ್ಯತ ।
ತದ್ದಗ್ಧಸತ್ತ್ವದುರ್ಗಂಧೋಽಪ್ಯಂತರಾಮಿಷಗಂಧವತ್ ॥ ೨೩

ಅಸ್ಮಾನ್ ಕಿಮತ್ರ ಗ್ರಸಿತಾ ನಿವಿಷ್ಟಾ-
ನಯಂ ತಥಾ ಚೇದ್ ಬಕವದ್ ವಿನಂಕ್ಷ್ಯತಿ ।
ಕ್ಷಣಾದನೇನೇತಿ ಬಕಾರ್ಯುಶನ್ಮುಖಂ
ವೀಕ್ಷ್ಯೋದ್ಧಸಂತಃ ಕರತಾಡನೈರ್ಯಯುಃ ॥ ೨೪

ಇತ್ಥಂ ಮಿಥೋಽತಥ್ಯಮತಜ್ಜ್ಞಭಾಷಿತಂ
ಶ್ರುತ್ವಾ ವಿಚಿಂತ್ಯೇತ್ಯಮೃಷಾ ಮೃಷಾಯತೇ ।

---

ಕೊಳ್ಳಿರಿ! (೨೦). ಎಡಬಲಗಳಲ್ಲಿರುವ ಬೆಟ್ಟದ ಗವಿಗಳು ಹೆಬ್ಬಾವಿನ ಕಟವಾಯಿಗಳಿಗೆ ಹೋಲುತ್ತವೆ. ಉನ್ನತಗಿರಿಶೃಂಗಗಳನ್ನು ಅದರ ಕೋರೆಯ ಹಲ್ಲುಗಳೆಂದು ತಿಳಿದುಕೊಳ್ಳಿರಿ! (೨೧). ಅಗಲವಾಗಿ ಉದ್ದಕ್ಕೆ ಚಾಚಿರುವ ರಸ್ತೆಯು ಅದರ ನಾಲಗೆಯನ್ನು ಹೋಲುತ್ತದೆ! ಗಿರಿಶೃಂಗಗಳ ನಡುವೆ ಇರುವ ಕತ್ತಲೆಯು ಹೆಬ್ಬಾವಿನ ಬಾಯಲ್ಲಿರುವ ಕತ್ತಲೆಯೆಂದು ಎಣಿಸಿರಿ (೨೨). ಕಾಳ್ಗಿಚ್ಚಿನಿಂದ ಬಿಸಿಯಾದ ಬಿರುಗಾಳಿಯು ಇದರ ಉಸಿರಿನಂತೆಯೇ ಗೋಚರಿಸುತ್ತದೆ, ನೋಡಿರಿ! ಕಾಳ್ಗಿಚ್ಚಿನಿಂದ ಸುಟ್ಟುಹೋದ ಪ್ರಾಣಿಗಳ ದುರ್ಗಂಧವು, ಹೆಬ್ಬಾವು ನುಂಗಿದ ಪ್ರಾಣಿಗಳ ಮಾಂಸದ ವಾಸನೆಯಂತೆಯೇ ಇದೆ! (೨೩). ಓಹೋ! ಒಳಗೆ ಹೋದರೆ ಈ ಹೆಬ್ಬಾವು ನಮ್ಮನ್ನು ನುಂಗಿಬಿಡುವುದೋ! ಒಂದು ವೇಳೆ ನುಂಗಿದರೆ, ಹೇಗೂ ನಮ್ಮ ಕೃಷ್ಣ ಸಿದ್ಧಾನಲ್ಲ! ಬಕದಂತೆ ಈ ಹಾವೂ ಸಾಯುತ್ತದೆ!" ಎಂದು ಹೇಳುತ್ತಾ, ಶ್ರೀಕೃಷ್ಣನ ಸುಂದರಮುಖವನ್ನು ನೋಡುತ್ತಾ, ನಗುತ್ತಾ, ಕೈಚಪ್ಪಾಳೆ ಹಾಕುತ್ತಾ ಗೋಪಬಾಲಕರು ಅಜಗರದ ಬಳಿಗೆ ಹೋದರು (೨೪). ಈ ಪ್ರಕಾರವಾಗಿ ಗೋಪಬಾಲಕರು ಸತ್ಯವನ್ನರಿಯದೆ ತಪ್ಪು ಕಲ್ಪನೆಯಿಂದ

ರಕ್ಷೋ ವಿದಿತ್ವಾಖಿಲಭೂತಹೃತ್ಸ್ಥಿತಃ
ಸ್ವಾನಾಂ ನಿರೋದ್ಧುಂ ಭಗವಾನ್ ಮನೋ ದಧೇ ॥ ೨೫

ತಾವತ್ ಪ್ರವಿಷ್ಟಾಸ್ತ್ವಸುರೋದರಾಂತರಂ
ಪರಂ ನ ಗೀರ್ಣಾಃ ಶಿಶವಃ ಸವತ್ಸಾಃ ।
ಪ್ರತೀಕ್ಷಮಾಣೇನ ಬಕಾರಿವೇಶನಂ
ಹತಸ್ವಕಾಂತಸ್ಮರಣೇನ ರಕ್ಷಸಾ ॥ ೨೬

ತಾನ್ ವೀಕ್ಷ್ಯ ಕೃಷ್ಣಃ ಸಕಲಾಭಯಪ್ರದೋ
ಹ್ಯನನ್ಯನಾಥಾನ್ ಸ್ವಕರಾದವಚ್ಯುತಾನ್ ।
ದೀನಾಂಶ್ಚ ಮೃತ್ಯೋರ್ಜಠರಾಗ್ನಿಘಾಸಾನ್
ಘೃಣಾರ್ದಿತೋ ದಿಷ್ಟಕೃತೇನ ವಿಸ್ಮಿತಃ ॥ ೨೭

ಕೃತ್ಯಂ ಕಿಮತ್ರಾಸ್ಯ ಖಲಸ್ಯ ಜೀವನಂ
ನ ವಾ ಅಮೀಷಾಂ ಚ ಸತಾಂ ವಿಹಿಂಸನಮ್ ।

---

ಒಬ್ಬರಿಗೊಬ್ಬರು ಆಡಿಕೊಳ್ಳುವ ಮಾತನ್ನು ಶ್ರೀಕೃಷ್ಣನು ಕೇಳಿದನು. "ನಿಜವಾಗಿಯೂ ಹಾವಿನ ರೂಪವನ್ನು ಧರಿಸಿರುವ ರಾಕ್ಷಸನು ಹಾವಿಗೆ ಸದೃಶವಾದ ಇನ್ನೊಂದು ವಸ್ತುವೆಂದು ಸುಳ್ಳಾಗಿ ಈ ಹುಡುಗರಿಗೆ ಗೋಚರಿಸುವನಲ್ಲ!" ಎಂದು ಚಿಂತಿಸಿ ಭಗವಂತನು ಆ ಹುಡುಗರನ್ನು ಮುಂದೆ ಹೋಗದಂತೆ ತಡೆಯಲಿಚ್ಛಿಸಿದನು (೨೫). ಅಷ್ಟರಲ್ಲಿ ಆ ಬಾಲಕರು ಕರುಗಳೊಂದಿಗೆ ಅಘಾಸುರನ ಬಾಯೊಳಗೆ ನುಗ್ಗಿಬಿಟ್ಟರು. ಆದರೆ ರಾಕ್ಷಸನು ಅವರನ್ನು ಒಡನೆಯೇ ನುಂಗಲಿಲ್ಲ. ಹತರಾದ ತನ್ನ ಪ್ರೀತಿಯ ಸೋದರರನ್ನು ಸ್ಮರಿಸಿಕೊಂಡ ಅಘಾಸುರನು 'ಬಕಾರಿಯಾದ ಕೃಷ್ಣನೂ ಬಾಯೊಳಗೆ ಬರಲಿ!' ಎಂದು ಕಾದಿದ್ದನು (೨೬). ಸಕಲರಿಗೂ ಅಭಯದಾತನಾದ ಶ್ರೀಕೃಷ್ಣನು ತನ್ನನ್ನೇ ನಂಬಿದ ದೀನರಾದ ಆ ಹುಡುಗರನ್ನು ನೋಡಿ "ಆಹಾ! ನನ್ನ ಕೈತಪ್ಪಿ ಇವರು ಹೋಗಿಬಿಟ್ಟರಲ್ಲ. ಮೃತ್ಯುವಿನ ಜಠರಾಗ್ನಿಗೆ ಹುಲ್ಲಿನಂತೆ ಸಿಕ್ಕಿಕೊಂಡರು!" ಎಂದು ಅನುಕಂಪೆಯಿಂದ ನೊಂದನು. ದೈವದ ಕಾರ್ಯವನ್ನು ಕಂಡು ವಿಸ್ಮಿತನಾದನು (೨೭). "ಈಗ ಏನು ಮಾಡುವುದು? ಈ ದುಷ್ಟನೂ ಬದುಕಬಾರದು, ಮುಗ್ಧರಾದ ಈ ಬಾಲಕರೂ ಸಾಯಬಾರದು"

ದ್ವಯಂ ಕಥಂ ಸ್ಯಾದಿತಿ ಸಂವಿಚಿಂತ್ಯ ತ-
ಜ್ಜ್ಞಾತ್ವಾವಿಶತ್ತುಂಡಮಶೇಷದೃಗ್ಘರಿಃ ॥ ೨೮

ತದಾ ಘನಚ್ಛದಾ ದೇವಾ ಭಯಾದ್ಧಾಹೇತಿ ಚುಕ್ರುಶುಃ ।
ಜಹೃಷುರ್ಯೇ ಚ ಕಂಸಾದ್ಯಾಃ ಕೌಣಪಾಸ್ತ್ವಘಬಾಂಧವಾಃ ॥ ೨೯

ತಚ್ಛ್ರುತ್ವಾ ಭಗವಾನ್ ಕೃಷ್ಣಸ್ತ್ವವ್ಯಯಃ ಸಾರ್ಭವತ್ಸಕಮ್ ।
ಚೂರ್ಣೀಚಿಕೀರ್ಷೋರಾತ್ಮಾನಂ ತರಸಾ ವವೃಧೇ ಗಲೇ ॥ ೩೦

ತತೋಽತಿಕಾಯಸ್ಯ ನಿರುದ್ಧಮಾರ್ಗಿಣೋ
ಹ್ಯುದ್ಗೀರ್ಣದೃಷ್ಟೇರ್ಭ್ರಮತಸ್ತ್ವಿತಸ್ತತಃ ।
ಪೂರ್ಣೋಽಂತರಂಗೇ ಪವನೋ ನಿರುದ್ಧೋ
ಮೂರ್ಧನ್ ವಿನಿಷ್ಪಾಟ್ಯ ವಿನಿರ್ಗತೋ ಬಹಿಃ ॥ ೩೧

ತೇನೈವ ಸರ್ವೇಷು ಬಹಿರ್ಗತೇಷು
ಪ್ರಾಣೇಷು ವತ್ಸಾನ್ ಸುಹೃದಃ ಪರೇತಾನ್ ।

---

ಇವೆರಡೂ ಹೇಗಾದೀತೆಂದು ಚಿಂತಿಸಿ ಸರ್ವಜ್ಞನಾದ ಹರಿಯು ಆ ಉಪಾಯವನ್ನರಿತು ಅಜಗರದ ಬಾಯನ್ನು ಪ್ರವೇಶಿಸಿಬಿಟ್ಟನು! (೨೮). ಆಗ ಮೋಡದ ಮರೆಯಲ್ಲಿ ನಿಂತಿದ್ದ ದೇವತೆಗಳು 'ಹಾ! ಹಾ!' ಎಂದು ಭಯದಿಂದ ಕೂಗಿಕೊಂಡರು. ಅಘಾಸುರನ ಬಂಧುಗಳಾದ ಕಂಸನೇ ಮೊದಲಾದ ಅಸುರರು ಆನಂದಿಸಿದರು (೨೯). ದೇವತೆಗಳ ಹಾಹಾಕಾರವನ್ನು ಕೇಳಿದ ಅವ್ಯಯನಾದ ಭಗವಾನ್ ಶ್ರೀಕೃಷ್ಣನು, ತನ್ನನ್ನೂ ಬಾಲಕರನ್ನೂ ಕರುಗಳನ್ನೂ ಒಟ್ಟಿಗೆ ಅಗಿದು ಪುಡಿಮಾಡಬೇಕೆಂದಿದ್ದ ರಾಕ್ಷಸನ ಗಂಟಲಿನಲ್ಲಿ ಶೀಘ್ರವಾಗಿ ತನ್ನ ದೇಹವನ್ನು ಬೆಳೆಸಿದನು (೩೦). ಬೃಹದಾಕಾರನಾದ ಅಘಾಸುರನ ಗಂಟಲು ಮಾರ್ಗವು ಕಟ್ಟಿಕೊಂಡಿತು. ಅವನ ಕಣ್ಣುಗುಡ್ಡೆಗಳು ಹೊರಬಂದವು. ಅವನು ಅತ್ತಿತ್ತ ಮಿಸುಕಾಡತೊಡಗಿದನು. ದೇಹದೊಳಗೆ ಪೂರ್ಣವಾಗಿ ತಡೆದು ನಿಂತ ಉಸಿರು ರಾಕ್ಷಸನ ತಲೆಯನ್ನು ಭೇದಿಸಿಕೊಂಡು ಹೊರಹೊಮ್ಮಿತು! (೩೧). ಉಸಿರಿನೊಡನೆ ಅಘಾಸುರನ ಪ್ರಾಣವಾಯುಗಳೆಲ್ಲವೂ ನಿರ್ಗಮಿಸಿದವು! ಮೂರ್ಛಿತರಾಗಿದ್ದ ಗೆಳೆಯರನ್ನೂ ಕರುಗಳನ್ನೂ ಭಗವಾನ್ ಮುಕುಂದನು ತನ್ನ ಅಮೃತದೃಷ್ಟಿಯಿಂದ ಎಚ್ಚರ

ದೃಷ್ಟ್ವಾ ಸ್ವಯೋತ್ಥಾಪ್ಯ ತದನ್ವಿತಃ ಪುನ-
ರ್ವಕ್ತ್ರಾನ್ಮುಕುಂದೋ ಭಗವಾನ್ ವಿನಿರ್ಯಯೌ ॥ ೩೨

ಪೀನಾಹಿಭೋಗೋತ್ಥಿತಮದ್ಭುತಂ ಮಹ-
ಜ್ಜ್ಯೋತಿಃ ಸ್ವಧಾಮ್ನಾ ಜ್ವಲಯದ್ ದಿಶೋ ದಶ ।
ಪ್ರತೀಕ್ಷ್ಯ ಖೇಽವಸ್ಥಿತಮೀಶನಿರ್ಗಮಂ
ವಿವೇಶ ತಸ್ಮಿನ್ ಮಿಷತಾಂ ದಿವೌಕಸಾಮ್ ॥ ೩೩

ತತೋಽತಿಹೃಷ್ಟಾಃ ಸ್ವಕೃತೋಽಕೃತಾರ್ಹಣಂ
ಪುಷ್ಪೈಃ ಸುರಾಃ ಅಪ್ಸರಸಶ್ಚ ನರ್ತನೈಃ ।
ಗೀತೈಃ ಸುಗಾ ವಾದ್ಯಧರಾಶ್ಚ ವಾದ್ಯಕೈಃ
ಸ್ತವೈಶ್ಚ ವಿಪ್ರಾ ಜಯನಿಃಸ್ವನೈರ್ಗಣಾಃ ॥ ೩೪

ತದದ್ಭುತಸ್ತೋತ್ರಸುವಾದ್ಯಗೀತಿಕಾ-
ಜಯಾದಿನೈಕೋತ್ಸವಮಂಗಲಸ್ವನಾನ್ ।
ಶ್ರುತ್ವಾ ಸ್ವಧಾಮ್ನೋಽಂತ್ಯಜ ಆಗತೋಽಚಿರಾದ್
ದೃಷ್ಟ್ವಾ ಮಹೀಶಸ್ಯ ಜಗಾಮ ವಿಸ್ಮಯಮ್ ॥ ೩೫

---

ಗೊಳಿಸಿ, ಅವರೊಡನೆ ಹೆಬ್ಬಾವಿನ ಬಾಯಿಂದ ಹೊರಬಂದನು (೩೨). ಪರೀಕ್ಷಿತರಾಜ, ಬೃಹದಾಕಾರದ ಹೆಬ್ಬಾವಿನ ದೇಹದಿಂದ ಅದ್ಭುತವಾದ ಒಂದು ಮಹಾಜ್ಯೋತಿಯು ಹೊರಬಂದು ದಶದಿಕ್ಕುಗಳನ್ನೂ ಬೆಳಗಿಸುತ್ತ ಗಗನ ಮಧ್ಯದಲ್ಲಿ ನಿಂತಿತ್ತು. ಶ್ರೀಕೃಷ್ಣನು ಹೊರಗೆ ಬಂದೊಡನೆ, ದೇವತೆಗಳು ನೋಡುತ್ತಿರುವಾಗಲೇ, ಆ ಜ್ಯೋತಿಯು ಆತನ ದೇಹದಲ್ಲಿ ಲೀನವಾಯಿತು! (೩೩). ಆನಂದತುಂದಿಲರಾದ ದೇವತೆಗಳು ತಮ್ಮ ಕಾರ್ಯವನ್ನು ನಡೆಸಿ ಕೊಟ್ಟ ಶ್ರೀಕೃಷ್ಣನಮೇಲೆ ಹೂಮಳೆಗರೆದು ಅರ್ಚಿಸಿದರು. ಅಪ್ಸರೆಯರು ನರ್ತಿಸಿದರು. ಗಂಧರ್ವರು ಹಾಡಿದರು. ವಾದ್ಯಗಾರರು ವಾದ್ಯಗಳನ್ನು ನುಡಿಸಿದರು. ವಿಪ್ರರು ಸ್ತುತಿಸಿದರು. ಇತರ ದೇವಗಣಗಳು ಜಯಕಾರ ಗಳಿಂದ ಭಗವಂತನನ್ನು ಸೇವಿಸಿದರು (೩೪). ಅದ್ಭುತವಾದ ಸ್ತೋತ್ರ ವಾದ್ಯ ಗೀತ ಜಯಕಾರಗಳಿಂದಾದ ವಿವಿಧೋತ್ಸವಗಳ ಮಂಗಳಧ್ವನಿಗಳನ್ನು ಸಮೀಪದಲ್ಲಿ ಕೇಳಿ, ಬ್ರಹ್ಮದೇವನು ತನ್ನ ಸತ್ಯಲೋಕದಿಂದ ಕೂಡಲೆ

ರಾಜನ್ನಾಜಗರಂ ಚರ್ಮ ಶುಷ್ಕಂ ವೃಂದಾವನೇಽದ್ಭುತಮ್ ।
ವ್ರಜೌಕಸಾಂ ಬಹುತಿಥಂ ಬಭೂವಾಕ್ರೀಡಗಹ್ವರಮ್ ॥ ೩೬

ಏತತ್ ಕೌಮಾರಜಂ ಕರ್ಮ ಹರೇರಾತ್ಮಾಹಿಮೋಕ್ಷಣಮ್ ।
ಮೃತ್ಯೋಃ ಪೌಗಂಡಕೇ ಬಾಲಾ ದೃಷ್ಟ್ವೋಚುರ್ವಿಸ್ಮಿತಾ ವ್ರಜೇ ॥

ನೈತದ್ ವಿಚಿತ್ರಂ ಮನುಜಾರ್ಭಮಾಯಿನಃ
ಪರಾವರಾಣಾಂ ಪರಮಸ್ಯ ವೇಧಸಃ ।
ಅಘೋಽಪಿ ಯತ್ಸ್ಪರ್ಶನ ಧೌತಪಾತಕಃ
ಪ್ರಾಪಾತ್ಮಸಾಮ್ಯಂ ತ್ವಸತಾಂ ಸುದುರ್ಲಭಮ್ ॥ ೩೮

---

ಹೊರಟುಬಂದನು. ಅವನು ಭಗವಂತನ ಮಹಿಮೆಯನ್ನು ಕಂಡು ವಿಸ್ಮಿತನಾದನು (೩೫). ಪರೀಕ್ಷಿತರಾಜ, ಅಜಗರಸರ್ಪದ ಒಣಗಿದ ಚರ್ಮವು ವೃಂದಾವನದಲ್ಲಿ ಬಹುಕಾಲದವರೆಗೆ ಇತ್ತು. ಅದು ವ್ರಜವಾಸಿಗಳಿಗೆ ಕ್ರೀಡಾರ್ಥವಾದ ಒಂದು ಚೀಲವಾಗಿತ್ತು (೩೬). ಶ್ರೀಹರಿಯು ತನ್ನ ಐದನೆಯ ವರ್ಷದಲ್ಲಿ* ಈ ಪ್ರಕಾರವಾಗಿ ಗೋಪಬಾಲಕರನ್ನೂ ಅಜಗರವನ್ನೂ ಮೃತ್ಯುವಿನಿಂದ ಪಾರುಮಾಡಿದನು.† ಈ ಕಾರ್ಯವನ್ನು ನೋಡಿ ವಿಸ್ಮಿತರಾದ ಗೋಪಬಾಲಕರು ಮುಂದೆ ಆರನೆಯ ವರ್ಷದಲ್ಲಿಯೂ ವ್ರಜದಲ್ಲಿ ಈ ವಿಷಯವನ್ನು ಈ ದಿನ ನಡೆಯಿತೆಂದು ಹೇಳಿಕೊಳ್ಳುತ್ತ ಇದ್ದರು (೩೭). ಅಘಾಸುರನು ಶ್ರೀಹರಿಯ ಸ್ಪರ್ಶಮಾತ್ರದಿಂದ ತನ್ನ ಪಾತಕವೆಲ್ಲವನ್ನೂ ತೊಳೆದುಕೊಂಡು, ದುರ್ಜನರಿಗೆ ದುರ್ಲಭವಾದ ಭಗವತ್ಸಾಯುಜ್ಯವನ್ನು

---

* ಕೌಮಾರಂ ಪಂಚಮಾಬ್ದಾಂತಂ ಪೌಗಂಡಂ ದಶಮಾವಧಿ ।
ಕೈಶೋರಮಾಪಂಚದಶಾದ್ಯೌವನಂ ತು ತತಃ ಪರಮ್ ॥

ಹುಟ್ಟಿದಂದಿನಿಂದ ಐದು ವರ್ಷಗಳವರೆಗೆ ಕೌಮಾರವೆಂದೂ ಆಮೇಲೆ ಹತ್ತು ವರ್ಷಗಳವರೆಗೆ ಪೌಗಂಡವೆಂದೂ ಅನಂತರ ಹದಿನೈದು ವರ್ಷಗಳವರೆಗೆ ಕೈಶೋರವೆಂದೂ ತರುವಾಯ ಯೌವನವೆಂದೂ ಹೆಸರು.

† ಗೋಪಬಾಲರನ್ನು ಪ್ರಸಿದ್ಧವಾದ ಸಾವಿನಿಂದಲೂ ಅಜಗರವನ್ನು ಸಂಸಾರವೆಂಬ ಮೃತ್ಯುವಿನಿಂದಲೂ ಪಾರುಮಾಡಿದನೆಂದು ಅಭಿಪ್ರಾಯ. ಅಜಗರದ ದೇಹದಿಂದ ಹೊರಟ ಜ್ಯೋತಿಯು ಶ್ರೀಕೃಷ್ಣನಲ್ಲಿ ಲೀನವಾದ್ದನ್ನು ಆ ಹುಡುಗರು ನೋಡಿದ್ದರು.

**ಸಕೃದ್ ಯದಂಗಪ್ರತಿಮಾಂತರಾಹಿತಾ**
**ಮನೋಮಯೀ ಭಾಗವತೀಂ ದದೌ ಗತಿಮ್ ।**
**ಸ ಏವ ನಿತ್ಯಾತ್ಮಸುಖಾನುಭೂತ್ಯಭಿ-**
**ವ್ಯುದಸ್ತಮಾಯೋಽಂತರ್ಗತೋ ಹಿ ಕಿಂ ಪುನಃ ॥ ೩೯**

ಸೂತ ಉವಾಚ—

**ಇತ್ಥಂ ದ್ವಿಜಾ ಯಾದವದೇವದತ್ತಃ**
**ಶ್ರುತ್ವಾ ಸ್ವರಾತುಶ್ಚರಿತಂ ವಿಚಿತ್ರಮ್ ।**
**ಪಪ್ರಚ್ಛ ಭೂಯೋಽಪಿ ತದೇವ ಪುಣ್ಯಂ**
**ವೈಯಾಸಕಿಂ ಯನ್ನಿಗೃಹೀತಚೇತಾಃ ॥ ೪೦**

ರಾಜೋವಾಚ—

**ಬ್ರಹ್ಮನ್ ಕಾಲಾಂತರಕೃತಂ ತತ್ಕಾಲೀನಂ ಕಥಂ ಭವೇತ್ ।**
**ಯತ್ ಕೌಮಾರೇ ಹರಿಕೃತಂ ಜಗುಃ ಪೌಗಂಡಕೇಽರ್ಭಕಾಃ ॥ ೪೧**

---

ಪಡೆದನು. ಮನುಷ್ಯ ಬಾಲಕನಾಗಿ ಮಾಯೆಯಿಂದ ವ್ಯವಹರಿಸುತ್ತ ಪರಾವರ ವಸ್ತುಗಳಿಗೆ ಪರಮೇಶ್ವರನಾದ ಸೃಷ್ಟಿಕರ್ತನ ವಿಷಯದಲ್ಲಿ ಇದು ವಿಚಿತ್ರವಾದುದೇನೂ ಅಲ್ಲ (೩೮). ಮನಃಕಲ್ಪಿತವಾದ ಯಾರ ಮೂರ್ತಿಯು ಒಮ್ಮೆ ಹೃದಯದಲ್ಲಿ ಸ್ಫುರಿಸಿದ ಮಾತ್ರದಿಂದಲೇ ಭಾಗವತರಿಗೆ ಸಲ್ಲುವ ಸದ್ಗತಿಯು ಲಭಿಸುವುದೋ, ಆ ಭಗವಂತನು ನಿತ್ಯಸುಖಾನುಭವಸ್ವರೂಪನೂ ಮಾಯಾತೀತನೂ ಆಗಿ ಯಾರ ಹೃದಯದಲ್ಲಿ ನೆಲೆಸಿರುವನೋ ಅವರಿಗೆ ಸದ್ಗತಿಯನ್ನು ಕೊಡುವನೆಂದು ಹೇಳುವುದೇನು ! (೩೯). (ಸೂತಪುರಾಣಿಕರು ಹೇಳಿದರು) ಎಲೈ ದ್ವಿಜರೆ, ಶ್ರೀಕೃಷ್ಣನಿಂದ ಉಜ್ಜೀವಿತನಾದ ಪರೀಕ್ಷಿತರಾಜನು ತನ್ನ ಸ್ವಾಮಿಯ ವಿಚಿತ್ರಚರಿತ್ರೆಯನ್ನು ಆಲಿಸಿ ಅದರಿಂದ ವಶೀಕೃತಚಿತ್ತನಾದನು. ಆತನು ಶುಕಮಹರ್ಷಿಗಳನ್ನು ಕುರಿತು ಆ ಪುಣ್ಯಕಥೆಯ ವಿಷಯವಾಗಿ ಮತ್ತೆ ಹೀಗೆ ಕೇಳಿದನು (೪೦): “ಬ್ರಹ್ಮರ್ಷಿಗಳೆ, ಶ್ರೀಹರಿಯು ತನ್ನ ಐದನೆಯ ವರ್ಷದಲ್ಲಿ ನಡೆಸಿದ ಕಾರ್ಯವನ್ನು ಗೋಪಬಾಲಕರು ಆರನೆಯ ವರ್ಷದಲ್ಲಿ ‘ಈ ದಿನ’ ನಡೆಯಿತೆಂದು ಹೇಳಿದರಲ್ಲವೆ? ಇದು ಹೇಗೆ? ಕಾಲಾಂತರದಲ್ಲಿ ನಡೆದದ್ದು ‘ಈ ಕಾಲ’ದಲ್ಲಿ ನಡೆದದ್ದಾಗುವುದು ಹೇಗೆ? (೪೧).

ತದ್ ಬ್ರೂಹಿ ಮೇ ಮಹಾಯೋಗಿನ್ ಪರಂ ಕೌತೂಹಲಂ ಗುರೋ ।
ನೂನಮೇತದ್ಧರೇರೇವ ಮಾಯಾ ಭವತಿ ನಾನ್ಯಥಾ ॥ ೪೨

ವಯಂ ಧನ್ಯತಮಾ ಲೋಕೇ ಗುರೋಽಪಿ ಕ್ಷತ್ರಬಂಧವಃ ।
ಯತ್ ಪಿಬಾಮೋ ಮುಹುಸ್ತ್ವತ್ತಃ ಪುಣ್ಯಂ ಕೃಷ್ಣಕಥಾಮೃತಮ್ ॥

ಸೂತ ಉವಾಚ—

ಇತ್ಥಂ ಸ್ಮ ಪೃಷ್ಟಃ ಸ ತು ಬಾದರಾಯಣಿ-
ಸ್ತತ್ಸ್ಮಾರಿತಾನಂತಹೃತಾಖಿಲೇಂದ್ರಿಯಃ ।
ಕೃಚ್ಛ್ರಾತ್ ಪುನರ್ಲಬ್ಧಬಹಿರ್ದೃಶಿಃ ಶನೈಃ
ಪ್ರತ್ಯಾಹ ತಂ ಭಾಗವತೋತ್ತಮೋತ್ತಮ ॥ ೪೪

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಾದಶಾಧ್ಯಾಯಃ



ಹೇ ಮಹಾಯೋಗಿಗಳೆ, ಇದು ಅತ್ಯಂತ ಕೌತುಕವಾಗಿದೆ. ಇದು ಶ್ರೀಹರಿಯ ಮಾಯೆಯಲ್ಲದೆ, ಇನ್ನೊಂದಲ್ಲ. ಗುರುಗಳೆ, ಅದೇನೆಂಬುದನ್ನು ಹೇಳಿರಿ (೪೨). ನಾವು ಅಲ್ಪಕ್ಷತ್ರಿಯರಾದರೂ ಈ ಲೋಕದಲ್ಲಿ ಅತ್ಯಂತ ಧನ್ಯರು. ಏಕೆಂದರೆ, ಪುಣ್ಯವಾದ ಶ್ರೀಕೃಷ್ಣಕಥಾಮೃತವನ್ನು ನಿಮ್ಮ ಅನುಗ್ರಹದಿಂದ ಕುಡಿಯುತ್ತಿದ್ದೇವೆ" (೪೩). (ಸೂತರು ಹೇಳಿದರು) ಎಲೈ ಭಾಗವತೋತ್ತಮನಾದ ಶೌನಕ, ಈ ರೀತಿಯಲ್ಲಿ ಪರೀಕ್ಷಿತನು ಕೇಳಲಾಗಿ ವ್ಯಾಸಪುತ್ರರಾದ ಶುಕಮುನಿಗಳಿಗೆ ಭಗವಂತನ ಸ್ಮರಣೆಯಾಗಿ ಸಕಲೇಂದ್ರಿಯಗಳೂ ಅಂತರ್ಮುಖವಾದವು. ಬಹಳ ಹೊತ್ತಿನ ಮೇಲೆ ಬಹಿಃಪ್ರಜ್ಞೆಯುಂಟಾಗಲು, ಅವರು ಪರೀಕ್ಷಿತನನ್ನು ಕುರಿತು ಮುಂದೆ ಕಂಡಂತೆ ಹೇಳಿದರು (೪೪).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹನ್ನೆರಡನೆಯ ಅಧ್ಯಾಯ



## ತ್ರಯೋದಶಾಧ್ಯಾಯಃ

ಶ್ರೀಶುಕ ಉವಾಚ—

ಸಾಧು ಪೃಷ್ಟಂ ಮಹಾಭಾಗ ತ್ವಯಾ ಭಾಗವತೋತ್ತಮ ।
ಯನ್ನೂತನಯಸೀಶಸ್ಯ ಶೃಣ್ವನ್ನಪಿ ಕಥಾಂ ಮುಹುಃ ॥ ೧

ಸತಾಮಯಂ ಸಾರಭೃತಾಂ ನಿಸರ್ಗೋ
ಯದರ್ಥವಾಣೀಶ್ರುತಿಚೇತಸಾಮಪಿ ।
ಪ್ರತಿಕ್ಷಣಂ ನವ್ಯವದಚ್ಯುತಸ್ಯ ಯತ್
ಸ್ತ್ರಿಯಾ ವಿಟಾನಾಮಿವ ಸಾಧು ವಾರ್ತಾ ॥ ೨

ಶೃಣುಷ್ವಾವಹಿತೋ ರಾಜನ್ನಪಿ ಗುಹ್ಯಂ ವದಾಮಿ ತೇ ।
ಬ್ರೂಯುಃ ಸ್ನಿಗ್ಧಸ್ಯ ಶಿಷ್ಯಸ್ಯ ಗುರವೋ ಗುಹ್ಯಮಪ್ಯುತ ॥ ೩

### ಅಧ್ಯಾಯ ೧೩

ಬ್ರಹ್ಮನು ಗೋಪಬಾಲಕರನ್ನೂ ಕರುಗಳನ್ನೂ ಅಪಹರಿಸುವುದು. ಶ್ರೀಕೃಷ್ಣನು ಅವುಗಳ ರೂಪವನ್ನು ಧರಿಸಿ ಗೋಪಬಾಲಕರಂತೆಯೂ ಕರುಗಳಂತೆಯೂ ವರ್ತಿಸುವುದು. ಬ್ರಹ್ಮನ ಮೋಹನಿವೃತ್ತಿ

ಶುಕಮುನಿಗಳು ಪರೀಕ್ಷಿತರಾಜನಿಗೆ ಹೇಳಿದರು: ಮಹಾಭಾಗ—ಭಾಗವತೋತ್ತಮ, ಎಷ್ಟು ಚೆನ್ನಾಗಿ ಕೇಳಿದೆ! ಪರಮಾತ್ಮನ ಕಥೆಯನ್ನು ಆಲಿಸುತ್ತಲೇ ಇದ್ದರೂ ಹೊಸದೋ ಎಂಬಂತೆ ಮತ್ತೆ ಮತ್ತೆ ಕುತೂಹಲವನ್ನು ವ್ಯಕ್ತಪಡಿಸುವೆ (೧). ಸಾರವಾದ್ದನ್ನು ಗ್ರಹಿಸತಕ್ಕವರ ಸ್ವಭಾವವಿದು. ಪರಮಾತ್ಮನ ವಿಷಯವನ್ನೇ ಮಾತನಾಡುತ್ತ, ಕೇಳುತ್ತ, ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದರೂ ಅವರಿಗೆ ಆತನ ಕಥೆಯು ಪ್ರತಿಕ್ಷಣದಲ್ಲಿಯೂ ಹೊಚ್ಚ ಹೊಸದಾಗಿಯೇ ಕಾಣುವುದು. ಕಾಮುಕರಿಗೆ ಕಾಮಿನಿಯ ವಿಷಯವಿದ್ದಂತೆ ಇರುವುದು (೨). ಮಹಾರಾಜ, ಸಾವಧಾನವಾಗಿ ಕೇಳು. ಆ ರಹಸ್ಯವನ್ನು ನಿನಗೆ ಹೇಳುವೆನು. ಪ್ರೀತಿಯ ಶಿಷ್ಯನಿಗೆ ಗುರುಗಳು ರಹಸ್ಯವನ್ನಾದರೂ

ತಥಾಘವದನಾನ್ಮೃತ್ಯೋಃ ರಕ್ಷಿತ್ವಾ ವತ್ಸಪಾಲಕಾನ್ ।
ಸರಿತ್ಪುಲಿನಮಾನೀಯ ಭಗವಾನಿದಮಬ್ರವೀತ್ ॥ ೪

ಅಹೋಽತಿರಮ್ಯಂ ಪುಲಿನಂ ವಯಸ್ಯಾಃ
ಸ್ವಕೇಲಿಸಂಪನ್ಮೃದುಲಾಚ್ಛವಾಲುಕಮ್ ।
ಸ್ಫುಟತ್ಸರೋಗಂಧಹೃತಾಲಿ ಪತ್ರಿಕ-
ಧ್ವನಿಪ್ರತಿಧ್ವಾನಲಸದ್ ದ್ರುಮಾಕುಲಮ್ ॥ ೫

ಅತ್ರ ಭೋಕ್ತವ್ಯಮಸ್ಮಾಭಿರ್ದಿವಾ ರೂಢಂ ಕ್ಷುಧಾರ್ದಿತಾಃ ।
ವತ್ಸಾಃ ಸಮೀಪೇಽಪಃ ಪೀತ್ವಾ ಚರಂತು ಶನಕೈಸ್ತೃಣಮ್ ॥ ೬

ತಥೇತಿ ಪಾಯಯಿತ್ವಾರ್ಭಾ ವತ್ಸಾನಾರುಧ್ಯ ಶಾದ್ವಲೇ ।
ಮುಕ್ತ್ವಾ ಶಿಕ್ಯಾನಿ ಬುಭುಜುಃ ಸಮಂ ಭಗವತಾ ಮುದಾ ॥ ೭

ಕೃಷ್ಣಸ್ಯ ವಿಷ್ವಕ್ ಪುರುರಾಜಿಮಂಡಲೈ-
ರಭ್ಯಾನನಾಃ ಫುಲ್ಲದೃಶೋ ವ್ರಜಾರ್ಭಕಾಃ ।

---

ಹೇಳಬೇಕು (೩). ಭಗವಂತನು ಅಘಾಸುರನ ಮೃತ್ಯುಸ್ವರೂಪವಾದ ಬಾಯಿಂದ ಗೊಲ್ಲರನ್ನು ರಕ್ಷಿಸಿ ನದಿಯ ದಿಣ್ಣೆಯ ಬಳಿಗೆ ಕರೆತಂದು ಹೀಗೆಂದನು (೪): "ಆಹಾ! ಗೆಳೆಯರೆ, ಎಷ್ಟು ಸೊಗಸಾದ ಮರಳುದಿಣ್ಣೆ! ಆಡಲು ಎಷ್ಟು ಚೆನ್ನಾಗಿದೆ! ನುಣ್ಣನೆಯ ಸ್ವಚ್ಛವಾದ ಮರಳು. ನೀರಲ್ಲಿ ಅರಳಿದ ತಾವರೆಗಳ ಸುವಾಸನೆಗೆ ದುಂಬಿಗಳೂ ಹಕ್ಕಿಗಳೂ ಬಂದು ಮುತ್ತಿ ಕೊಂಡಿವೆ. ಅವುಗಳ ಧ್ವನಿಯು ಸುತ್ತಲೂ ಇರುವ ಮರಗಳಲ್ಲಿ ಪ್ರತಿ ಧ್ವನಿಸುತ್ತಿದೆ (೫). ಇಲ್ಲಿ ನಾವು ಊಟಮಾಡಬೇಕು. ಹೊತ್ತೇರಿತು. ಕರುಗಳಿಗೆ ಹಸಿವಾಗಿದೆ. ಅವು ನೀರನ್ನು ಕುಡಿದು ಸಮೀಪದಲ್ಲಿ ಮೆಲ್ಲಗೆ ಹುಲ್ಲನ್ನು ಮೇಯುತ್ತಿರಲಿ" (೬). ಆಗ ಬಾಲಕರು ಹಾಗೆಯೇ ಆಗಲೆಂದು ಹೇಳಿ ಕರುಗಳಿಗೆ ನೀರನ್ನು ಕುಡಿಸಿ ಹುಲ್ಲುಗಾವಲಿನಲ್ಲಿ ಮೇಯಲು ಬಿಟ್ಟರು. ಆಮೇಲೆ ಶಿಕ್ಯಗಳನ್ನು ಬಿಚ್ಚಿ ಶ್ರೀಕೃಷ್ಣನೊಡನೆ ನಲಿಯುತ್ತ ಊಟಮಾಡಿದರು (೭). ಆ ವನಪ್ರದೇಶದಲ್ಲಿ ವ್ರಜಬಾಲಕರು ಶ್ರೀಕೃಷ್ಣನ ಸುತ್ತಲೂ ಸಾಲುಸಾಲಾಗಿ ಅವನಿಗೆ ಅಭಿಮುಖವಾಗಿ ಕುಳಿತಿದ್ದರು. ಹರ್ಷದಿಂದ ಅವರು ಕಣ್ಣರಳಿಸಿ ಕುಳಿತಿರಲಾಗಿ ತಾವರೆಯ ಬೀಜಕೋಶದ ಸುತ್ತಲೂ ಇರುವ ತಾವರೆಯ ದಳಗಳಂತೆ ಶೋಭಿಸಿದರು (೮).

*

ಸಹೋಪವಿಷ್ಟಾ ವಿಪಿನೇ ವಿರೇಜು-
ಶ್ಛದಾ ಯಥಾಂಭೋರುಹಕರ್ಣಿಕಾಯಾಃ ‖ ೮

ಕೇಚಿತ್ ಪ್ರುಷ್ಪೈರ್ದಲೈಃ ಕೇಚಿತ್ ಪಲ್ಲವೈರಂಕುರೈಃ ಫಲೈಃ ।
ಶಿಗ್ಭಿಸ್ತ್ವಗ್ಭಿರ್ದೃಷದ್ಭಿಶ್ಚ ಬುಭುಜುಃ ಕೃತಭಾಜನಾಃ ‖ ೯

ಸರ್ವೇ ಮಿಥೋ ದರ್ಶಯಂತಃ ಸ್ವಸ್ವಭೋಜ್ಯರುಚಿಂ ಪೃಥಕ್ ।
ಹಸಂತೋ ಹಾಸಯಂತಶ್ಚಾಭ್ಯವಜಹ್ರುಃ ಸಹೇಶ್ವರಾಃ ‖ ೧೦

ಬಿಭ್ರದ್ ವೇಣುಂ ಜಠರ ಪಟಯೋಃ ಶೃಂಗವೇತ್ರೇ ಚ ಕಕ್ಷೇ
ವಾಮೇ ಪಾಣೌ ಮಸೃಣಕವಲಂ ತತ್ಫಲಾನ್ಯಂಗುಲೀಷು ।
ತಿಷ್ಠನ್ ಮಧ್ಯೇ ಸ್ವಪರಿಸುಹೃದೋ ಹಾಸಯನ್ ನರ್ಮಭಿಃಸ್ವೈಃ
ಸ್ವರ್ಗೇ ಲೋಕೇ ಮಿಷತಿ ಬುಭುಜೇ ಯಜ್ಞಭುಗ್ ಬಾಲಕೇಲಿಃ ‖

ಭಾರತೈವಂ ವತ್ಸಪೇಷು ಭುಂಜಾನೇಷ್ವಚ್ಯುತಾತ್ಮಸು ।
ವತ್ಸಾಸ್ತ್ವಂತರ್ವನೇ ದೂರಂ ವಿವಿಶುಸ್ತೃಣಲೋಭಿತಾಃ ‖ ೧೨

---

ಹೂಗಳು, ಹೂವಿನ ಎಸಳು, ಚಿಗುರೆಲೆ, ಮೊಳೆತಹುಲ್ಲು, ಹಣ್ಣು, ಹುರಿ, ತೊಗಟೆ, ಕಲ್ಲು—ಇವುಗಳಲ್ಲೊಂದನ್ನು ಊಟದ ಪಾತ್ರೆಯಂತೆ ಬಳಸುತ್ತ ಭುಂಜಿಸಿದರು (೯). ಎಲ್ಲರೂ ತಾವು ತಂದಿದ್ದ ತಿನಿಸಿನ ರುಚಿಯನ್ನು ಇನ್ನೊಬ್ಬರಿಗೆ ತೋರಿಸುತ್ತ ಒಬ್ಬರಿಗೊಬ್ಬರು ನಗುತ್ತ ನಗಿಸುತ್ತ ಶ್ರೀಕೃಷ್ಣನೊಡನೆ ಭುಂಜಿಸಿದರು (೧೦). ಪರೀಕ್ಷಿತರಾಜ, ಬಾಲಕೇಳಿಯಲ್ಲಿ ತೊಡಗಿದ ಯಜ್ಞಭೋಕ್ತನಾದ ಭಗವಂತನು ಉಟ್ಟಬಟ್ಟೆಗೂ ಹೊಟ್ಟೆಗೂ ನಡುವೆ ಕೊಳಲನ್ನು ಸಿಕ್ಕಿಸಿಕೊಂಡಿದ್ದನು. ಎಡಕಂಕುಳಿನಲ್ಲಿ ಊದುವ ಕೊಂಬನ್ನೂ ಬೆತ್ತವನ್ನೂ ಅವಚಿಕೊಂಡಿದ್ದನು. ಕೈಯಲ್ಲಿ ಮೊಸರನ್ನವನ್ನೂ ಬೆರಳುಗಳ ಸಂದಿನಲ್ಲಿ ಹಣ್ಣುಗಳನ್ನೂ ಇಟ್ಟುಕೊಂಡು ಗೆಳೆಯರ ನಡುವೆ ನಿಂತು ವಿನೋದದ ನುಡಿಗಳಿಂದ ಅವರನ್ನು ನಗಿಸುತ್ತ ಭುಂಜಿಸುತ್ತಿದ್ದನು. ಆ ಬಾಲಲೀಲೆಯನ್ನು ಸ್ವರ್ಗಲೋಕವೇ ವಿಸ್ಮಯದಿಂದ ವೀಕ್ಷಿಸುತ್ತಿತ್ತು ! (೧೧). ಹೀಗೆ ಗೋಪಬಾಲಕರು ಶ್ರೀಕೃಷ್ಣನಲ್ಲಿ ಆಸಕ್ತರಾಗಿ ಭೋಜನ ಮಾಡುತ್ತಿರುವಾಗ ಹಸುವಿನ ಕರುಗಳು ಹುಲ್ಲಿನ ಆಸೆಯಿಂದ ವನಮಧ್ಯದಲ್ಲಿ

ತಾನ್ ದೃಷ್ಟ್ವಾ ಭಯಸಂತ್ರಸ್ತಾನೂಚೇ ಕೃಷ್ಣೋಽಸ್ಯ ಭೀಭಯಮ್
ಮಿತ್ರಾಣ್ಯಾಶಾನ್ಮಾ ವಿರಮತೇಹಾನೇಷ್ಯೇ ವತ್ಸಕಾನಹಮ್ ॥ ೧೩

ಇತ್ಯುಕ್ತ್ವಾದ್ರಿದರೀಕುಂಜಗಹ್ವರೇಷ್ವಾತ್ಮವತ್ಸಕಾನ್ ।
ವಿಚಿನ್ವನ್ ಭಗವಾನ್ ಕೃಷ್ಣಃ ಸಪಾಣಿಕವಲೋ ಯಯೌ ॥ ೧೪

ಅಂಭೋಜನ್ಮಜನಿಸ್ತದಂತರಗತೋ ಮಾಯಾರ್ಭಕಸ್ಯೇಶಿತು-
ರ್ದ್ರಷ್ಟುಂ ಮಂಜು ಮಹಿತ್ವಮನ್ಯದಪಿ ತದ್ವತ್ಸಾನಿತೋ ವತ್ಸಪಾನ್ ।
ನೀತ್ವಾನ್ಯತ್ರ ಕುರೂದ್ವಹಾಂತರದಧಾತ್ ಖೇಽವಸ್ಥಿತೋ ಯಃ ಪುರಾ
ದೃಷ್ಟ್ವಾಘಾಸುರಮೋಕ್ಷಣಂ ಪ್ರಭವತಃ ಪ್ರಾಪ್ತಃ ಪರಂ ವಿಸ್ಮಯಮ್

ತತೋ ವತ್ಸಾನದೃಷ್ಟ್ವೈತ್ಯ ಪುಲಿನೇಽಪಿ ಚ ವತ್ಸಪಾನ್ ।
ಉಭಾವಪಿ ವನೇ ಕೃಷ್ಣೋ ವಿಚಿಕಾಯ ಸಮಂತತಃ ॥ ೧೬

---

ಬಹುದೂರ ಹೋಗಿಬಿಟ್ಟವು (೧೨). ಅದನ್ನು ತಿಳಿದು ಹೆದರಿದ ಹುಡುಗ
ರನ್ನು ಕುರಿತು, ಈ ವಿಶ್ವದ ಭಯಕ್ಕೇ ಭಯಸ್ವರೂಪನಾದ ಭಗವಂತನು
"ಗೆಳೆಯರೆ, ಊಟವನ್ನು ನಿಲ್ಲಿಸಬೇಡಿರಿ. ಕರುಗಳನ್ನು ನಾನು ಕರೆತರುವೆನು"
ಎಂದನು (೧೩). ಒಡನೆಯೇ ಕೈಯಲ್ಲಿ ಬುತ್ತಿಯನ್ನು ಹಿಡಿದುಕೊಂಡೇ
ಶ್ರೀಕೃಷ್ಣನು ಬೆಟ್ಟದ ಕಂದಕ ಪೊದೆ ಕಿಬ್ಬದಿಗಳಲ್ಲಿ ಅಲೆಯುವ ಕರುಗಳನ್ನು
ಹುಡುಕುತ್ತ ಹೊರಟನು (೧೪). ರಾಜ, ಈ ಸಮಯದಲ್ಲಿ ಬ್ರಹ್ಮದೇವನಿಗೆ
ಭಗವಂತನ ಇನ್ನೊಂದು ಸುಂದರವಾದ ಮಹಿಮೆಯನ್ನು ನೋಡಬೇಕೆಂದು
ಇಚ್ಛೆಯಾಯಿತು. ಆತನು ಮಹಿಮಾನ್ವಿತನಾದ ಶ್ರೀಕೃಷ್ಣನ ಅಘಾಸುರ
ಸಂಹಾರಲೀಲೆಯನ್ನು ಸ್ವಲ್ಪಹೊತ್ತಿಗೆ ಮೊದಲು ಗಗನದಲ್ಲಿ ನಿಂತು ನೋಡಿ
ವಿಸ್ಮಿತನಾಗಿದ್ದನು. ಈ ಸಂದರ್ಭದಲ್ಲಿ ಅವನು ಅತ್ತಕಡೆಗೆ ಕರುಗಳನ್ನೂ
ಇತ್ತಕಡೆಗೆ ಗೋಪಬಾಲಕರನ್ನೂ ಬೇರೊಂದೆಡೆಗೆ ಒಯ್ದು ಅಡಗಿಸಿ
ಅಂತರ್ಹಿತನಾದನು! (೧೫). ಶ್ರೀಕೃಷ್ಣನು ವನದಲ್ಲಿ ಕರುಗಳನ್ನು ಕಾಣದೆ
ಹಿಂದಿರುಗಿ ಬಂದನು. ಇತ್ತ ಮರಳುದಿಣ್ಣೆಯಲ್ಲಿ ಹುಡುಗರೂ ಇರಲಿಲ್ಲ.

ಕ್ವಾಪ್ಯದೃಷ್ಟ್ವಾಂತರ್ವಿಪಿನೇ ವತ್ಸಾನ್ ಪಾಲಾಂಶ್ಚ ವಿಶ್ವವಿತ್ ।
ಸರ್ವಂ ವಿಧಿಕೃತಂ ಕೃಷ್ಣಃ ಸಹಸಾವಜಗಾಮ ಹ ॥ ೧೭

ತತಃ ಕೃಷ್ಣೋ ಮುದಂ ಕರ್ತುಂ ತನ್ಮಾತೃಣಾಂ ಚ ಕಸ್ಯ ಚ ।
ಉಭಯಾಯಿತಮಾತ್ಮಾನಂ ಚಕ್ರೇ ವಿಶ್ವಕೃದೀಶ್ವರಃ ॥ ೧೮

ಯಾವದ್ ವತ್ಸಪವತ್ಸಕಾಲ್ಪಕವಪುರ್ಯಾವತ್ ಕರಾಂಘ್ರ್ಯಾದಿಕಂ
ಯಾವದ್ ಯಷ್ಟಿವಿಷಾಣವೇಣುದಲಶಿಗ್ ಯಾವದ್
ವಿಭೂಷಾಂಬರಮ್ ।
ಯಾವಚ್ಛೀಲ ಗುಣಾಭಿದಾಕೃತಿವಯೋ ಯಾವದ್ ವಿಹಾರಾದಿಕಂ
ಸರ್ವಂ ವಿಷ್ಣುಮಯಂ ಗಿರೋಽಂಗವದಜಃ ಸರ್ವಸ್ವರೂಪೋ ಬಭೌ॥

ಸ್ವಯಮಾತ್ಮಾಽಽತ್ಮಗೋವತ್ಸಾನ್ ಪ್ರತಿವಾರ್ಯಾತ್ಮವತ್ಸಪೈಃ ।
ಕ್ರೀಡನ್ನಾತ್ಮವಿಹಾರೈಶ್ಚ ಸರ್ವಾತ್ಮಾ ಪ್ರಾವಿಶದ್ ವ್ರಜಮ್ ॥ ೨೦

---

ಆಗ ಸುತ್ತಲೂ ಇವರಿಗಾಗಿ ಹುಡುಕಾಡಿದನು (೧೬). ಕರುಗಳನ್ನಾಗಲಿ ಗೋಪಬಾಲಕರನ್ನಾಗಲಿ ಎಲ್ಲಿಯೂ ಕಾಣಲಿಲ್ಲ. ಆಗ ಆ ಸರ್ವಜ್ಞನಿಗೆ ಅದೆಲ್ಲವೂ ಬ್ರಹ್ಮನ ಚೇಷ್ಟೆಯೆಂದು ತಿಳಿಯಿತು (೧೭). ಆಗ ಬಾಲಕರ ತಾಯಂದಿರಿಗೂ ಬ್ರಹ್ಮನಿಗೂ ಸಂತೋಷವಾಗಲೆಂದು ವಿಶ್ವಕರ್ತನೂ ಸರ್ವಶಕ್ತನೂ ಆದ ಕೃಷ್ಣನು ತನ್ನನ್ನೇ ಕರುಗಳನ್ನಾಗಿಯೂ ಗೋಪಬಾಲಕರನ್ನಾಗಿಯೂ ನಿರ್ಮಿಸಿಕೊಂಡನು! (೧೮). ಗೋಪಬಾಲಕರ ಮತ್ತು ಕರುಗಳ ದೇಹಗಳು ಎಷ್ಟು ಚಿಕ್ಕದಾಗಿ ಹೇಗಿದ್ದವೋ ಹಾಗೆಯೇ ವಿವಿಧ ದೇಹಗಳನ್ನು ಧರಿಸಿದನು. ಅವೇ ಬಗೆಯ ಕೈಕಾಲು ಮುಂತಾದ ಅವಯವಗಳು. ಅವೇ ಕೋಲು ಕೊಂಬು ಬಿದಿರುದಬ್ಬೆ ಹಗ್ಗಗಳು! ಅವೇ ಒಡವೆತೊಡವೆಗಳು! ಅವೇ ನಡೆನುಡಿ ಹೆಸರು ಆಕೃತಿಗಳು! ಅದೇ ವಯಸ್ಸು. ಆಟಪಾಟಗಳು ಅದೇ ಬಗೆಯಲ್ಲಿ! ಸರ್ವಸ್ವರೂಪನಾದ ಭಗವಂತನು 'ಸರ್ವಂ ವಿಷ್ಣುಮಯಂ ಜಗತ್' ಎಂಬ ನುಡಿಯನ್ನು ಪ್ರತ್ಯಕ್ಷವಾಗಿ ತೋರಿಸಿಬಿಟ್ಟನು! (೧೯). ಸರ್ವಾತ್ಮನಾದ ಪರಮಾತ್ಮನು ತಾನೇ ಆದ ಗೋಪಬಾಲಕರಿಂದ ತಾನೇ ಆದ ಗೋವಿನ ಕರುಗಳನ್ನು ಕಾಯುತ್ತ ತಾನೇ ಆದ ವಿನೋದಗಳಿಂದ

ತತ್ತದ್ವತ್ಸಾನ್ ಪೃಥಙ್ನೀತ್ವಾ ತತ್ತದ್ಗೋಷ್ಠೇ ನಿವೇಶ್ಯ ಸಃ ।
ತತ್ತದಾತ್ಮಾಭವದ್ ರಾಜಂಸ್ತತ್ತತ್ಸದ್ಮ ಪ್ರವಿಷ್ಟವಾನ್ ॥ ೨೧

ತನ್ಮಾತರೋ ವೇಣುರವತ್ವರೋತ್ಥಿತಾ
ಉತ್ಥಾಪ್ಯ ದೋರ್ಭಿಃ ಪರಿರಭ್ಯ ನಿರ್ಭರಮ್ ।
ಸ್ನೇಹಸ್ನುತಸ್ತನ್ಯಪಯಃಸುಧಾಸವಂ
ಮತ್ವಾ ಪರಂ ಬ್ರಹ್ಮ ಸುತಾನಪಾಯಯನ್ ॥ ೨೨

ತತೋ ನೃಪೋನ್ಮರ್ದನಮಜ್ಜಲೇಪನಾ-
ಲಂಕಾರರಕ್ಷಾತಿಲಕಾಶನಾದಿಭಿಃ ।
ಸಂಲಾಲಿತಃ ಸ್ವಾಚರಿತೈಃ ಪ್ರಹರ್ಷಯನ್
ಸಾಯಂ ಗತೋ ಯಾಮಯಮೇನ ಮಾಧವಃ ॥ ೨೩

ಗಾವಸ್ತತೋ ಗೋಷ್ಠಮುಪೇತ್ಯ ಸತ್ವರಂ
ಹುಂಕಾರಘೋಷೈಃ ಪರಿಹೂತಸಂಗತಾನ್ ।

---

ಕ್ರೀಡಿಸುತ್ತ ವೃಂದಾವನಕ್ಕೆ ಹಿಂದಿರುಗಿದನು! (೨೦). ಆಯಾ ಕರುಗಳನ್ನು ಬೇರೆಬೇರೆಯಾಗಿ ಅವುಗಳ ಕೊಟ್ಟಿಗೆಗಳಿಗೆ ಸೇರಿಸಿ ಆಯಾ ಬಾಲಕರ ವೇಷ ದಿಂದ ಅವರವರ ಮನೆಗಳನ್ನು ಪ್ರವೇಶಿಸಿದನು! (೨೧). ಆ ಹುಡುಗರ ತಾಯಂದಿರು ಕೊಳಲುನಾದವನ್ನು ಕೇಳಿದೊಡನೆ ಎದ್ದು ಬಂದು ಮಕ್ಕಳನ್ನು ಕೈಗಳಿಂದ ಎತ್ತಿಕೊಂಡು ದೃಢವಾಗಿ ಆಲಿಂಗಿಸಿಕೊಂಡರು. ವಾತ್ಸಲ್ಯದಿಂದ ಸ್ತನ್ಯವು ಒಸರುತ್ತಿರಲು, ಆ ಪರಬ್ರಹ್ಮವಸ್ತುವನ್ನೇ ತಮ್ಮ ಮಕ್ಕಳೆಂದು ತಿಳಿದು, ತಮ್ಮ ಸ್ತನ್ಯವೆಂಬ ಮಾದಕವಾದ ಅಮೃತವನ್ನು ಕುಡಿಸಿದರು! (೨೨). ಅನಂತರ ಮಕ್ಕಳಿಗೆ ಎಣ್ಣೆಯನ್ನೊತ್ತಿ, ಸ್ನಾನಮಾಡಿಸಿ, ಚಂದನಾದಿ ಗಳನ್ನು ಹಚ್ಚಿ, ಅಲಂಕರಿಸಿ, ರಕ್ಷಾತಿಲಕವನ್ನಿಟ್ಟು, ಊಟಮಾಡಿಸಿ ಲಾಲಿಸಿ ದರು. ಮಾಧವನು ಕಾಲನಿಯಮವನ್ನನುಸರಿಸಿ ಸಾಯಂಕಾಲ ಮನೆಗೆ ಬಂದು ಆಯಾ ಹುಡುಗರ ನಡೆನುಡಿಗಳನ್ನೇ ಅನುಕರಿಸಿ ಅವರೆಲ್ಲರಿಗೂ ಸಂತೋಷವನ್ನುಂಟುಮಾಡಿದನು! (೨೩). ಇತ್ತಲಾಗಿ ಹಸುಗಳು ಹುಂಕರಿಸಿ ಕರುಗಳನ್ನು ಕರೆಯುತ್ತ ಕೊಟ್ಟಿಗೆಗೆ ಓಡುತ್ತ ಬಂದವು. ಆಗ ಕರುಗಳು

ಸ್ವಕಾನ್ ಸ್ವಕಾನ್ ವತ್ಸತರಾನಪಾಯಯನ್
ಮುಹುರ್ಲಿಹಂತ್ಯಃ ಸ್ರವದೌಧಸಂ ಪಯಃ ॥ ೨೪

ಗೋಗೋಪೀನಾಂ ಮಾತೃತಾಸ್ಮಿನ್ ಸರ್ವಾ ಸ್ನೇಹರ್ದ್ಧಿಕಾಂ ವಿನಾ ।
ಪುರೋವದಾಸ್ವಪಿ ಹರೇಸ್ತೋಕತಾ ಮಾಯಯಾ ವಿನಾ ॥ ೨೫

ವ್ರಜೌಕಸಾಂ ಸ್ವತೋಕೇಷು ಸ್ನೇಹವಲ್ಲ್ಯಾಬ್ದಮನ್ವಹಮ್ ।
ಶನೈರ್ನಿಃಸೀಮ ವವೃಧೇ ಯಥಾ ಕೃಷ್ಣೇ ತ್ವಪೂರ್ವವತ್ ॥ ೨೬

ಇತ್ಥಮಾತ್ಮಾಽಽತ್ಮನಾಽಽತ್ಮಾನಂ ವತ್ಸಪಾಲಮಿಷೇಣ ಸಃ ।
ಪಾಲಯನ್ ವತ್ಸಪೋ ವರ್ಷಂ ಚಿಕ್ರೀಡೇ ವನಗೋಷ್ಠಯೋಃ ॥ ೨೭

ಏಕದಾ ಚಾರಯನ್ ವತ್ಸಾನ್ ಸರಾಮೋ ವನಮಾವಿಶತ್ ।
ಪಂಚಷಾಸು ತ್ರಿಯಾಮಾಸು ಹಾಯನಾಪೂರಣೀಷ್ವಜಃ ॥ ೨೮

---

ಸಮೀಪಕ್ಕೆ ಬರಲು, ಅವು ತಮ್ಮ ತಮ್ಮ ಕರುಗಳನ್ನು ಮತ್ತೆ ಮತ್ತೆ ನೆಕ್ಕುತ್ತ, ಕೆಚ್ಚಲಿಂದ ಒಸರುವ ಹಾಲನ್ನು ಕುಡಿಸಿದವು (೨೪). (ಪರೀಕ್ಷಿತರಾಜ, ಎಲ್ಲವೂ ಮೊದಲಿನಂತೆಯೇ ಇತ್ತು. ಆದರೆ ಒಂದು ವಿಶೇಷ ಉಂಟು.) ಗೋಪಬಾಲಕರಾಗಿಯೂ ಕರುಗಳಾಗಿಯೂ ವರ್ತಿಸಿದ ಶ್ರೀಕೃಷ್ಣನಲ್ಲಿ ಗೋಪಿಯರಿಗೂ ಗೋವುಗಳಿಗೂ ತಾವು ತಾಯಂದಿರೇ ಎಂಬ ಭಾವನೆಯು ಮೊದಲಿನಂತಿದ್ದರೂ ವಾತ್ಸಲ್ಯವು ಅಧಿಕವಾಯಿತು! ಶ್ರೀಕೃಷ್ಣನು ಅವರಲ್ಲಿ ಮಗನಂತೆ ನಡೆದುಕೊಂಡರೂ 'ಇವಳು ನನ್ನ ತಾಯಿ, ನಾನು ಇವಳ ಮಗ' ಎಂಬ ಮೋಹವು ಮಾತ್ರ ಅವನಿಗೆ ಇರಲಿಲ್ಲ! (೨೫). ಗೋಪರಿಗೆ ತಮ್ಮ ಮಕ್ಕಳಲ್ಲಿದ್ದ ಪ್ರೀತಿಗಿಂತಲೂ ಯಶೋದಾನಂದನನಲ್ಲಿ ಅಧಿಕವಾದ ಸ್ನೇಹವಿತ್ತು. ಆ ಸ್ನೇಹವಲ್ಲಿಯು ಈಗ ತಮ್ಮ ಮಕ್ಕಳಲ್ಲಿಯೂ ಅಧಿಕವಾಗಿ ಬೆಳೆಯಿತು. ಈ ರೀತಿಯಾಗಿ ಒಂದು ವರ್ಷದವರೆಗೆ ನಡೆಯಿತು (೨೬). ಈ ಪ್ರಕಾರವಾಗಿ ಭಗವಂತನು ಗೋಪಬಾಲಕರೂಪದಿಂದಲೂ ಕರುಗಳ ರೂಪದಿಂದಲೂ ಇದ್ದು ತಾನೇ ತನ್ನನ್ನು ತನ್ನಿಂದ ಪಾಲಿಸುತ್ತ, ವನದಲ್ಲಿಯೂ ವ್ರಜದಲ್ಲಿಯೂ ತಿರುಗುತ್ತ ಒಂದು ವರ್ಷದವರೆಗೆ ಕ್ರೀಡಿಸಿದನು (೨೭). ಒಂದು ವರ್ಷವು ಪೂರ್ಣವಾಗಲು ಐದಾರು ರಾತ್ರಿಗಳಿದ್ದವು. ಆಗ ಶ್ರೀಕೃಷ್ಣನು ಕರುಗಳನ್ನು ಮೇಯಿಸುತ್ತ ಬಲರಾಮಸಮೇತನಾಗಿ ವನಕ್ಕೆ

**ತತೋ ವಿದೂರಾಚ್ಚರತೋ ಗಾವೋ ವತ್ಸಾನುಪವ್ರಜನ್ ।**
**ಗೋವರ್ಧನಾದ್ರಿಶಿರಸಿ ಚರಂತ್ಯೋ ದದೃಶುಸ್ತೃಣಮ್ ॥ ೨೯**

**ದೃಷ್ಟ್ವಾಥ ತತ್ಸ್ನೇಹವಶೋಽಸ್ಮೃತಾತ್ಮಾ**
**ಸ ಗೋವ್ರಜೋಽತ್ಯಾತ್ಮಪದುರ್ಗಮಾರ್ಗಃ ।**
**ದ್ವಿಪಾತ್ ಕಕುದ್ಗ್ರೀವ ಉದಾಸ್ಯಪುಚ್ಛೋಽ-**
**ಗಾದ್ಧುಂಕೃತೈರಾಸ್ರುಪಯಾ ಜವೇನ ॥ ೩೦**

**ಸಮೇತ್ಯ ಗಾವೋಽಧೋ ವತ್ಸಾನ್ ವತ್ಸವತ್ಯೋಽಪ್ಯಪಾಯಯನ್ ।**
**ಗಿಲಂತ್ಯ ಇವ ಚಾಂಗಾನಿ ಲಿಹಂತ್ಯಃ ಸ್ವೌಧಸಂ ಪಯಃ ॥ ೩೧**

**ಗೋಪಾಸ್ತದ್ರೋಧನಾಯಾಸಮೌಘ್ಯಲಜ್ಜೋರುಮನ್ಯುನಾ ।**
**ದುರ್ಗಾಧ್ವಕೃಚ್ಛ್ರತೋಽಭ್ಯೇತ್ಯ ಗೋವತ್ಸೈರ್ದದೃಶುಃ ಸುತಾನ್ ॥**

---

ಹೋದನು (೨೮). ಆಗ ದೂರದ ಗೋವರ್ಧನಗಿರಿಯ ಮೇಲೆ ಹುಲ್ಲನ್ನು ಮೇಯುತ್ತಿದ್ದ ಹಸುಗಳು ವ್ರಜದ ಸಮೀಪದಲ್ಲಿ ತಿರುಗುತ್ತಿದ್ದ ತಮ್ಮ ಕರುಗಳನ್ನು ಕಂಡವು (೨೯). ಒಡನೆಯೇ ಸ್ನೇಹವಶದಿಂದ ಆ ಗೋವಿನಹಿಂಡು ತನ್ನನ್ನೇ ಮರೆತು ಗೋಪಾಲರನ್ನೂ ಹಳ್ಳತಿಟ್ಟಿನ ದಾರಿಯನ್ನೂ ಲೆಕ್ಕಿಸದೆ ಹುಂಕರಿಸುತ್ತ ಕರುಗಳಿದ್ದಲ್ಲಿಗೆ ಧಾವಿಸಿತು. (ಓಡುವ ರಭಸಕ್ಕೆ ಎರಡೆರಡು ಕಾಲುಗಳೂ ಕೂಡಿಕೊಂಡಿರಲು) ಎರಡು ಕಾಲುಗಳಿಂದಲೇ ಓಡುತ್ತಿವೆಯೋ ಎಂಬಂತೆ ಕಾಣಿಸಿತು. ಆ ಹಸುಗಳು ಕತ್ತನ್ನು ಹಿಣಿಲಿನವರೆಗೆ ಮುದುರಿಕೊಂಡು ತಲೆಯೆತ್ತಿ ಬಾಲವನ್ನು ನಿಮಿರಿಸಿ ಹಾಲನ್ನು ಸೂಸುತ್ತ ಓಡಿಬಂದವು (೩೦). ಅವು ತಮ್ಮ ಕರುಗಳ ಬಳಿಗೆ ಬಂದು, ಇನ್ನೂ ಬೇರೆ ಚಿಕ್ಕ ಕರುಗಳಿದ್ದರೂ ಸಹ, ಇವುಗಳನ್ನು ನುಂಗುವುವೋ ಎಂಬಂತೆ ಅತ್ಯಾದರದಿಂದ ನೆಕ್ಕುತ್ತ ಕೆಚ್ಚಲಿನ ಹಾಲನ್ನು ಕುಡಿಸಿದವು (೩೧). ಇತ್ತಲಾಗಿ ಗೋಪಾಲರು ಓಡಿಬರುತ್ತಿದ್ದ ಹಸುಗಳನ್ನು ತಡೆಯಲು ಪಟ್ಟ ಶ್ರಮವೆಲ್ಲವೂ ವ್ಯರ್ಥವಾಯಿತು. ಆದರಿಂದ ಅವರಿಗೆ ಲಜ್ಜೆಯಾಯಿತು. ಕೋಪವೂ ಬಂದಿತು. ಕೊರಕಲು ದಾರಿಯಲ್ಲಿ ಬಹುಕಷ್ಟದಿಂದ ಕೆಳಗೆ ಬಂದು ಕರುಗಳೊಡನಿದ್ದ ತಮ್ಮ

ತದೀಕ್ಷಣೋತ್ಪ್ರೇಮರಸಾಪ್ಲುತಾಶಯಾ
ಜಾತಾನುರಾಗಾ ಗತಮನ್ಯವೋಽರ್ಭಕಾನ್ ।
ಉದುಹ್ಯ ದೋರ್ಭಿಃ ಪರಿರಭ್ಯ ಮೂರ್ಧನಿ
ಘ್ರಾಣೈರವಾಪುಃ ಪರಮಾಂ ಮುದಂ ತೇ ॥ ೩೩

ತತಃ ಪ್ರವಯಸೋ ಗೋಪಾಸ್ತೋಕಾಶ್ಲೇಷಸುನಿರ್ವೃತಾಃ ।
ಕೃಚ್ಛ್ರಾಚ್ಛನೈರಪಗತಾಸ್ತದನುಸ್ಮೃತ್ಯುದಶ್ರವಃ ॥ ೩೪

ವ್ರಜಸ್ಯ ರಾಮಃ ಪ್ರೇಮರ್ದ್ಧೇರ್ವೀಕ್ಷ್ಯೌತ್ಕಂಠ್ಯಮನುಕ್ಷಣಮ್ ।
ಮುಕ್ತಸ್ತನೇಷ್ವಪತ್ಯೇಷ್ವಪ್ಯಹೇತುವಿದಚಿಂತಯತ್ ॥ ೩೫

ಕಿಮೇತದದ್ಭುತಮಿವ ವಾಸುದೇವೇಽಖಿಲಾತ್ಮನಿ ।
ವ್ರಜಸ್ಯ ಸಾತ್ಮನಸ್ತೋಕೇಷ್ವಪೂರ್ವಂ ಪ್ರೇಮ ವರ್ಧತೇ ॥ ೩೬

---

ಮಕ್ಕಳನ್ನು ಕಂಡರು (೩೨). ಮಕ್ಕಳನ್ನು ಕಂಡಾಗ ಆ ಗೋಪಾಲರ ಹೃದಯವು ಪ್ರೇಮರಸದಿಂದ ತುಳುಕಿತು. ವಾತ್ಸಲ್ಯವು ಉಕ್ಕಲಾಗಿ ಹಸುಗಳ ಮೇಲಿನ ಕೋಪವೂ ಇಳಿಯಿತು! ಅವರು ತಮ್ಮ ಮಕ್ಕಳನ್ನು ಕೈಗಳಿಂದ ಹಿಡಿದೆತ್ತಿ ಅಪ್ಪಿಕೊಂಡು ಶಿರಸ್ಸನ್ನಾಘ್ರಾಣಿಸಿ ಪರಮಾನಂದವನ್ನನುಭವಿಸಿದರು (೩೩). ಹಿರಿಯರಾದ ಆ ಗೋಪಾಲರು ಮಕ್ಕಳನ್ನು ಆಲಂಗಿಸಿ ತೃಪ್ತರಾದ ಮೇಲೆ, ಮೆಲ್ಲನೆ ಅಲ್ಲಿಂದ ಹೊರಟರು. ಮಕ್ಕಳ ನೆನಹಿನಿಂದ ಕಣ್ಣೀರು ಉಕ್ಕುತ್ತಿರಲು, ಹೇಗೋ ಕಷ್ಟದಿಂದಲೇ ಹಿಂದಿರುಗಿದರು (೩೪). ಸ್ತನ್ಯಪಾನವನ್ನು ಬಿಟ್ಟಿರುವ ಮಕ್ಕಳಲ್ಲಿಯೂ ಸಹ ವ್ರಜವಾಸಿಗಳಿಗೆ ಪ್ರತಿಕ್ಷಣದಲ್ಲಿಯೂ ಪ್ರೇಮಾತಿಶಯವು ವರ್ಧಿಸುತ್ತಿರುವನ್ನು ಬಲರಾಮನು ಗಮನಿಸಿದನು. ಅದಕ್ಕೆ ಕಾರಣವೇನೆಂಬುದನ್ನು ಊಹಿಸಲಾರದೆ ಆತನು ಹೀಗೆ ಆಲೋಚಿಸಿದನು (೩೫): "ಇದೇನು ಅದ್ಭುತ! ವಿಶ್ವಾತ್ಮನಾದ ವಾಸುದೇವನಲ್ಲಿ ಈ ಜನರಿಗೆ ಯಾವ ಬಗೆಯ ಪ್ರೇಮವಿದ್ದಿತೋ ಆ ಬಗೆಯ ಪ್ರೇಮವೇ ಮಕ್ಕಳಲ್ಲಿಯೂ ಇವರಿಗೆ ವರ್ಧಿಸುತ್ತಿದೆಯಲ್ಲ! ಈ ವ್ರಜವಾಸಿಗಳಿಗೆ ಮಾತ್ರವಲ್ಲ, ನನಗೂ ಸಹ ಈ ಬಾಲಕರಲ್ಲಿ ಪ್ರೀತಿಯು ಹೆಚ್ಚುತ್ತಿದೆ.

ಕೇಯಂ ವಾ ಕುತ ಆಯಾತಾ ದೈವೀ ವಾ ನಾರ್ಯುತಾಸುರೀ ।
ಪ್ರಾಯೋ ಮಾಯಾಸ್ತು ಮೇ ಭರ್ತುರ್ನಾನ್ಯಾ ಮೇಽಪಿ
ವಿಮೋಹಿನೀ ॥ ೩೭

ಇತಿ ಸಂಚಿಂತ್ಯ ದಾಶಾರ್ಹೋ ವತ್ಸಾನ್ ಸವಯಸಾನಪಿ ।
ಸರ್ವಾನಾಚಷ್ಟ ವೈಕುಂಠಂ ಚಕ್ಷುಷಾ ವಯುನೇನ ಸಃ ॥ ೩೮

ನೈತೇ ಸುರೇಶಾ ಋಷಯೋ ನ ಚೈತೇ
ತ್ವಮೇವ ಭಾಸೀಶ ಭಿದಾಶ್ರಯೇಽಪಿ ।
ಸರ್ವಂ ಪೃಥಕ್ತ್ವಂ ನಿಗಮಾತ್ ಕಥಂ ವದೇ-
ತ್ಯುಕ್ತೇನ ವೃತ್ತಂ ಪ್ರಭುಣಾ ಬಲೋಽವೈತ್ ॥ ೩೯

ತಾವದೇತ್ಯಾತ್ಮಭೂರಾತ್ಮಮಾನೇನ ತ್ರುಟ್ಯನೇಹಸಾ ।
ಪುರೋವದಬ್ದಂ ಕ್ರೀಡಂತಂ ದದೃಶೇ ಸಕಲಂ ಹರಿಮ್ ॥ ೪೦

---

ಯಾವ ನಿಮಿತ್ತವಿರಬಹುದು ? (೩೬). ಇದು ಯಾವ ಮಾಯೆ ? ಎಲ್ಲಿಂದ ಬಂದಿತು ? ದೇವತೆಗಳ ಮಾಯೆಯೊ ? ಮನುಷ್ಯರದೊ ? ರಾಕ್ಷಸರದೊ ? ಪ್ರಾಯಶಃ ನನ್ನ ಸ್ವಾಮಿಯಾದ ಶ್ರೀಕೃಷ್ಣನ ಮಾಯೆಯೇ ಆಗಿರಬೇಕು ! ಇನ್ನು ಯಾವುದೂ ನನ್ನನ್ನು ಮೋಹಗೊಳಿಸದು !" (೩೭). ಹೀಗೆ ಚಿಂತಿಸುತ್ತಿದ್ದ ಬಲರಾಮನು ಅಲ್ಲಿದ್ದ ಸಕಲ ಬಾಲಕರೂ ಕರುಗಳೂ ಮಹಾ ವಿಷ್ಣುವೇ ಎಂಬುದನ್ನು ಜ್ಞಾನದೃಷ್ಟಿಯಿಂದ ತಿಳಿದನು (೩೮). ಆತನು ಶ್ರೀಕೃಷ್ಣನನ್ನು ಕುರಿತು "ಹೇ ಪ್ರಭು, (ಈ ಗೋಪಾಲರು ದೇವಾಂಶದವರೆಂದೂ ಕರುಗಳು ಋಷಿಗಳ ಅಂಶದವರೆಂದೂ ನಾನು ತಿಳಿದಿದ್ದೆನು) ಈಗಲಾದರೋ ಇವರು ದೇವತೆಗಳೂ ಅಲ್ಲ, ಋಷಿಗಳೂ ಅಲ್ಲ. ದ್ವೈತವಾಗಿ ಕಾಣುವ ಇವರೆಲ್ಲರಲ್ಲಿಯೂ ನೀನೊಬ್ಬನೇ ಕಂಡು ಬರುತ್ತಿರುವೆ. ಇದೆಲ್ಲವೂ ಹೇಗಾಯಿತೆಂಬುದನ್ನು ನನಗೆ ಬಿಡಿಸಿ ಹೇಳು" ಎಂದು ಕೇಳಿದನು. ಆಗ ಸ್ವಾಮಿಯು ಸಂಕ್ಷೇಪವಾಗಿ ಎಲ್ಲವನ್ನೂ ತಿಳಿಸಲು, ಬಲರಾಮನಿಗೆ ಯಥಾರ್ಥವು ಗೊತ್ತಾಯಿತು (೩೯). ಹೀಗೆ ಮನುಷ್ಯಮಾನದಿಂದ ಒಂದು ವರ್ಷವಾದರೂ ಬ್ರಹ್ಮಮಾನದಿಂದ ಅದು ಕ್ಷಣಕ್ಕಿಂತಲೂ ಅತ್ಯಲ್ಪಕಾಲ

**ಯಾವಂತೋ ಗೋಕುಲೇ ಬಾಲಾಃ ಸವತ್ಸಾಃ ಸರ್ವ ಏವ ಹಿ ।**
**ಮಾಯಾಶಯೇ ಶಯಾನಾ ಮೇ ನಾದ್ಯಾಪಿ ಪುನರುತ್ಥಿತಾಃ ॥ ೪೧**

**ಇತ ಏತೇಽತ್ರ ಕುತ್ರತ್ಯಾ ಮನ್ಮಾಯಾಮೋಹಿತೇತರೇ ।**
**ತಾವಂತ ಏವ ತತ್ರಾಬ್ದಂ ಕ್ರೀಡಂತೋ ವಿಷ್ಣುನಾ ಸಮಮ್ ॥ ೪೨**

**ಏವಮೇತೇಷು ಭೇದೇಷು ಚಿರಂ ಧ್ಯಾತ್ವಾ ಸ ಆತ್ಮಭೂಃ ।**
**ಸತ್ಯಾಃ ಕೇ ಕತರೇ ನೇತಿ ಜ್ಞಾತುಂ ನೇಷ್ಟೇ ಕಥಂಚನ ॥ ೪೩**

**ಏವಂ ಸಂಮೋಹಯನ್ ವಿಷ್ಣುಂ ವಿಮೋಹಂ ವಿಶ್ವಮೋಹನಮ್ ।**
**ಸ್ವಯೈವ ಮಾಯಯಾಜೋಽಪಿ ಸ್ವಯಮೇವ ವಿಮೋಹಿತಃ ॥ ೪೪**

**ತಮ್ಯಾಂ ತಮೋವನ್ನೈಹಾರಂ ಖದ್ಯೋತಾರ್ಚಿರಿವಾಹನಿ ।**
**ಮಹತೀತರಮಾಯೈಶ್ಯಂ ನಿಹಂತ್ಯಾತ್ಮನಿ ಯುಂಜತಃ ॥ ೪೫**

---

ವಾಗಿತ್ತು. ಆಗ ಬ್ರಹ್ಮನು ಅಲ್ಲಿಗೆ ಬಂದು, ಮೊದಲಿನಂತೆಯೇ ಪರಿವಾರದೊಡನೆ ಕ್ರೀಡಿಸುತ್ತಿದ್ದ ಶ್ರೀಹರಿಯನ್ನು ನೋಡಿದನು (೪೦). ಬ್ರಹ್ಮನು ತನ್ನ ಮನಸ್ಸಿನಲ್ಲಿ "ಎಲಾ! ಗೋಕುಲದ ಸಕಲಬಾಲಕರೂ ಕರುಗಳೂ ನನ್ನ ಮಾಯಾತಲ್ಪದಲ್ಲಿ ಸಿಕ್ಕಿ ಮಲಗಿದ್ದಾರೆ. ಇನ್ನೂ ಎದ್ದಿಲ್ಲ. ಆದರೆ ಇಲ್ಲಿರತಕ್ಕ ಇವರು ಯಾರು? ಇವರು ನನ್ನ ಮಾಯೆಗೆ ಸಿಕ್ಕಿದವರಲ್ಲ! ಅಲ್ಲಿರುವಷ್ಟೇ ಸಂಖ್ಯೆಯಲ್ಲಿ ಇವರು ಕೃಷ್ಣನೊಡನೆ ಕ್ರೀಡಿಸುತ್ತಿದ್ದಾರೆ. ಒಂದು ವರ್ಷವಾಯಿತು!" (೪೧–೪೨). ಎಂದು ಬಹಳ ಹೊತ್ತು ಚಿಂತಿಸಿದನು. ನಿಜವಾದ ಗೋಪಬಾಲಕರೂ ಕರುಗಳೂ ಯಾರು? ಯಾರಲ್ಲ?—ಎಂಬುದು ಅವನಿಗೆ ತಿಳಿಯಲೇ ಇಲ್ಲ! (೪೩). ಮಹಾರಾಜ, ಈ ಪರಿಯಲ್ಲಿ ಬ್ರಹ್ಮನು ಮೋಹರಹಿತನೂ ವಿಶ್ವಮೋಹನನೂ ಆದ ವಿಷ್ಣುವನ್ನು ಮಾಯೆಯಲ್ಲಿ ಸಿಕ್ಕಿಸಬೇಕೆಂದು ಯತ್ನಿಸಿ, ತನ್ನ ಮಾಯೆಗೇ ತಾನು ಒಳಗಾಗಿ ದಿಕ್ಕು ತೋಚದೆ ಮುಗ್ಧನಾದನು! (೪೪). ರಾತ್ರಿಯ ಕತ್ತಲೆಯಲ್ಲಿ ಮಂಜಿನಿಂದಾದ ಆವರಣವೂ ಹಗಲಿನಲ್ಲಿ ಮಿಂಚುಹುಳುವಿನ ಬೆಳಕೂ ಲಯಿಸಿ ಹೋಗುವುದಲ್ಲವೆ? ಹಾಗೆಯೇ (ಮಹಾಮಾಯಾವಿಯಾದ) ಪರಮಾತ್ಮನಲ್ಲಿ ಪ್ರಯೋಗಿಸುವ ಇತರರ ಕ್ಷುದ್ರಮಾಯೆಯು ತನ್ನ ಸಾಮರ್ಥ್ಯವನ್ನು ಕಳೆದು

ತಾವತ್ ಸರ್ವೇ ವತ್ಸಪಾಲಾಃ ಪಶ್ಯತೋಽಜಸ್ಯ ತತ್ಕ್ಷಣಾತ್ ।
ವ್ಯದೃಶ್ಯಂತ ಘನಶ್ಯಾಮಾಃ ಪೀತಕೌಶೇಯವಾಸಸಃ ॥ ೪೬

ಚತುರ್ಭುಜಾಃ ಶಂಖಚಕ್ರಗದಾರಾಜೀವಪಾಣಯಃ ।
ಕಿರೀಟಿನಃ ಕುಂಡಲಿನೋ ಹಾರಿಣೋ ವನಮಾಲಿನಃ ॥ ೪೭

ಶ್ರೀವತ್ಸಾಂಗದದೋರತ್ನಕಂಬುಕಂಕಣಪಾಣಯಃ ।
ನೂಪುರೈಃ ಕಟಕೈರ್ಭಾತಾಃ ಕಟಿಸೂತ್ರಾಂಗುಲೀಯಕೈಃ ॥ ೪೮

ಆಂಘ್ರಿಮಸ್ತಕಮಾಪೂರ್ಣಾಸ್ತುಲಸೀನವದಾಮಭಿಃ ।
ಕೋಮಲೈಃ ಸರ್ವಗಾತ್ರೇಷು ಭೂರಿಪುಣ್ಯವದರ್ಪಿತೈಃ ॥ ೪೯

ಚಂದ್ರಿಕಾವಿಶದಸ್ಮೇರೈಃ ಸಾರುಣಾಪಾಂಗವೀಕ್ಷಿತೈಃ ।
ಸ್ವಕಾರ್ಥಾನಾಮಿವ ರಜಃ ಸತ್ತ್ವಾಭ್ಯಾಂ ಸ್ರಷ್ಟೃಪಾಲಕಾಃ ॥ ೫೦

ಆತ್ಮಾದಿಸ್ತಂಬಪರ್ಯಂತೈರ್ಮೂರ್ತಿಮದ್ಭಿಶ್ಚರಾಚರೈಃ ।
ನೃತ್ಯಗೀತಾದ್ಯನೇಕಾರ್ಹೈಃ ಪೃಥಕ್ ಪೃಥಗುಪಾಸಿತಾಃ ॥ ೫೧

---

ಕೊಂಡು ಲಯಿಸಿಹೋಗುವುದು (೪೫). ಬ್ರಹ್ಮನು ನೋಡುತ್ತಿರುವಾಗಲೇ ಆ ಗೋಪಬಾಲಕರೆಲ್ಲರೂ ಮೇಘಶ್ಯಾಮಲರೂ ಪೀತಾಂಬರಧಾರಿಗಳೂ ಚತುರ್ಭುಜರೂ ಆಗಿ ಗೋಚರಿಸಿದರು! ಕೈಗಳಲ್ಲಿ ಶಂಖಚಕ್ರಗದಾಪದ್ಮಗಳನ್ನು ಹಿಡಿದಿದ್ದರು. ಎಲ್ಲರ ಶಿರಸ್ಸಿನಲ್ಲಿಯೂ ಕಿರೀಟಗಳು, ಕಿವಿಯಲ್ಲಿ ಕುಂಡಲಗಳು, ಕೊರಳಲ್ಲಿ ಮುತ್ತಿನಹಾರಗಳು, ವನಮಾಲೆಗಳು! (೪೬–೪೭). ಎಲ್ಲರ ತೋಳುಗಳಲ್ಲಿಯೂ ಶ್ರೀವತ್ಸದ ಶೋಭೆಯಿಂದ ಸಂಮಿಶ್ರವಾದ ಕೇಯೂರಗಳು. ಕೈಗಳಲ್ಲಿ ಶಂಖದ ತ್ರಿವಳಿಯಂತಿರುವ ರತ್ನಖಚಿತವಾದ ಕಂಕಣಗಳು. ಎಲ್ಲರೂ ಕಾಲಂದಿಗೆ ಕಡಗ ಉಡಿದಾರ ಉಂಗುರಗಳಿಂದ ಭೂಷಿತರಾಗಿದ್ದರು (೪೮). ಅವರ ದೇಹದಲ್ಲಿ ಪಾದದಿಂದ ಶಿರಸ್ಸಿನವರೆಗೂ ಮಹಾಪುಣ್ಯಶಾಲಿಗಳು ಅರ್ಪಿಸಿದ ಎಳೆತುಳಸಿಯ ಮಾಲೆಗಳು ಶೋಭಿಸುತ್ತಿದ್ದವು (೪೯). ಬೆಳದಿಂಗಳಂತೆ ಬೆಳ್ಳಗೆ ಬೆಳಗುವ ಮುಗುಳ್ನಗೆಯು ಭಕ್ತರ ಅಭೀಷ್ಟವನ್ನು ಸಲ್ಲಿಸುವ ಸತ್ತ್ವಗುಣದಂತೆಯೂ ನಸುಗೆಂಪಿನ ಕಟಾಕ್ಷವೀಕ್ಷಣವು ಸೃಷ್ಟಿಗೈಯುವ ರಜೋಗುಣದಂತೆಯೂ ರಂಜಿಸಿತು (೫೦). ಆ ಗೋಪಬಾಲಕರ ಒಂದೊಂದು ಮೂರ್ತಿಯ ಸುತ್ತಲೂ ಬ್ರಹ್ಮಾದಿಸ್ತಂಬ

ಅಣಿಮಾದ್ಯೈರ್ಮಹಿಮಭಿರಜಾದ್ಯಾಭಿರ್ವಿಭೂತಿಭಿಃ ।
ಚತುರ್ವಿಂಶತಿಭಿಸ್ತತ್ತ್ವೈಃ ಪರೀತಾ ಮಹದಾದಿಭಿಃ ॥ ೫೨

ಕಾಲಸ್ವಭಾವಸಂಸ್ಕಾರಕಾಮಕರ್ಮಗುಣಾದಿಭಿಃ ।
ಸ್ವಮಹಿಧ್ವಸ್ತಮಹಿಭಿರ್ಮೂರ್ತಿಮದ್ಭಿರುಪಾಸಿತಾಃ ॥ ೫೩

ಸತ್ಯಜ್ಞಾನಾನಂತಾನಂದಮಾತ್ರೈಕರಸಮೂರ್ತಯಃ ।
ಅಸ್ಪೃಷ್ಟಭೂರಿಮಾಹಾತ್ಮ್ಯಾ ಅಪಿ ಹ್ಯುಪನಿಷದ್ ದೃಶಾಮ್ ॥ ೫೪

ಏವಂ ಸಕೃದ್ ದದರ್ಶಾಜಃ ಪರಬ್ರಹ್ಮಾತ್ಮನೋಽಖಿಲಾನ್ ।
ಯಸ್ಯ ಭಾಸಾ ಸರ್ವಮಿದಂ ವಿಭಾತಿ ಸಚರಾಚರಮ್ ॥ ೫೫

ತತೋಽತಿಕುತುಕೋದ್ವೃತ್ತಸ್ತಿಮಿತೈಕಾದಶೇಂದ್ರಿಯಃ ।
ತದ್ಧಾಮ್ನಾಭೂದಜಸ್ತೂಷ್ಣೀಂ ಪೂರ್ದೇವ್ಯಂತೀವ ಪುತ್ರಿಕಾ ॥ ೫೬

---

ಪರ್ಯಂತವಾದ ಸಕಲಚರಾಚರವಸ್ತುಗಳೂ ದೇಹಧಾರಿಗಳಾಗಿ ನೃತ್ಯಗೀತಾದಿಗಳಿಂದ ಸೇವಿಸುತ್ತಿದ್ದವು (೫೧). ಅಣಿಮಾದ್ಯಷ್ಟಸಿದ್ಧಿಗಳೂ ಮಾಯಾವಿದ್ಯಾ ಮುಂತಾದ ವಿಭೂತಿಗಳೂ ಮಹದಾದಿ ಚತುರ್ವಿಂಶತಿತತ್ತ್ವಗಳೂ* ಕಾಲ, ಸ್ವಭಾವ, ಸಂಸ್ಕಾರ, ಕಾಮ, ಕರ್ಮ, ಗುಣಾದಿಗಳೂ ಭಗವನ್ಮಹಿಮೆಯಿಂದ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಶರೀರಧಾರಿಗಳಾಗಿ ಓಲೈಸುತ್ತಿದ್ದವು (೫೨–೫೩). ಆ ಗೋಪಬಾಲಕರೆಲ್ಲರೂ ಸತ್ಯ–ಜ್ಞಾನ–ಅನಂತ–ಆನಂದೈಕರಸವಾದ ಪರಬ್ರಹ್ಮವಸ್ತುವಿನ ಮೂರ್ತಿಗಳಾಗಿ ಬ್ರಹ್ಮನಿಗೆ ಗೋಚರಿಸಿದರು. ಆ ಮೂರ್ತಿಗಳ ಭೂರಿಮಹಿಮೆಯು ಮಹಾಜ್ಞಾನಿಗಳಿಗೂ ನಿಲುಕತಕ್ಕದ್ದಲ್ಲ (೫೪). ಈ ರೀತಿಯಲ್ಲಿ ಸಕಲರೂ ಪರಬ್ರಹ್ಮಸ್ವರೂಪರಾಗಿರುವುದನ್ನು ಬ್ರಹ್ಮನು ಒಂದು ಸಲ ಮಾತ್ರವೇ ಕಂಡನು. ಆ ಪರಬ್ರಹ್ಮದ ಬೆಳಕಿನಿಂದಲೇ ಚರಾಚರಾತ್ಮಕವಾದ ಈ ವಿಶ್ವವು ಬೆಳಗುತ್ತಿದೆ (೫೫). ಅತಿವಿಸ್ಮಯಾಕುಲನಾದ ಬ್ರಹ್ಮನ ಏಕಾದಶೇಂದ್ರಿಯಗಳೂ ಭಗವಂತನ ತೇಜಸ್ಸಿನಿಂದ ಸ್ತಬ್ಧವಾದವು. ಆಗ ಬ್ರಹ್ಮನು ವ್ರಜಾಧಿದೇವತೆಯ ಬಳಿಯಲ್ಲಿರುವ ನಾಲ್ಕು ಮುಖದ ಬೊಂಬೆಯಂತೆ ಕಾಣಿಸಿದನು ! (೫೬).

---

* ಪ್ರಧಾನವನ್ನೂ ಸೇರಿಸಿಕೊಂಡು ಇಪ್ಪತ್ತುನಾಲ್ಕು ತತ್ತ್ವಗಳು.

ಇತೀರೇಶೇಽತರ್ಕ್ಯೇ ನಿಜಮಹಿಮನಿ ಸ್ವಪ್ರಮಿತಿಕೇ
ಪರತ್ರಾಜಾತೋಽತನ್ನಿರಸನಮುಖಬ್ರಹ್ಮಕಮಿತೌ ।
ಅನಿಶೇಽಪಿ ದ್ರಷ್ಟುಂ ಕಿಮಿದಮಿತಿ ವಾ ಮುಹ್ಯತಿ ಸತಿ
ಚಛಾದಾಜೋ ಜ್ಞಾತ್ವಾ ಸಪದಿ ಪರಮೋಽಜಾಜವನಿಕಾಮ್ ॥

ತತೋಽರ್ವಾಕ್ ಪ್ರತಿಲಬ್ಧಾಕ್ಷಃ ಕಃ ಪರೇತವದುತ್ಥಿತಃ ।
ಕೃಚ್ಛ್ರಾದುನ್ಮೀಲ್ಯ ವೈ ದೃಷ್ಟೀರಾಚಷ್ಟೇದಂ ಸಹಾತ್ಮನಾ ॥ ೫೮
ಸಪದ್ಯೇವಾಭಿತಃ ಪಶ್ಯನ್ ದಿಶೋಽಪಶ್ಯತ್ ಪುರಃಸ್ಥಿತಮ್ ।
ವೃಂದಾವನಂ ಜನಾಜೀವ್ಯದ್ರುಮಾಕೀರ್ಣಂ ಸಮಾಪ್ರಿಯಮ್ ॥ ೫೯

ಯತ್ರ ನೈಸರ್ಗದುರ್ವೈರಾಃ ಸಹಾಸನ್ ನೃಮೃಗಾದಯಃ ।
ಮಿತ್ರಾಣೀವಾಜಿತಾವಾಸದ್ರುತರುಟ್ತರ್ಷಕಾದಿಕಮ್ ॥ ೬೦

ತತ್ರೋದ್ವಹತ್ ಪಶುಪವಂಶಶಿಶುತ್ವನಾಟ್ಯಂ
ಬ್ರಹ್ಮಾದ್ವಯಂ ಪರಮನಂತಮಗಾಧಬೋಧಮ್ ।

---

ವಾಗೀಶನಾದ ಬ್ರಹ್ಮನಿಗೆ ತರ್ಕಾತೀತವೂ ಅಸಾಧಾರಣಮಹಿಮೆಯುಳ್ಳದ್ದೂ ಆದ ಭಗವತ್ಸ್ವರೂಪವನ್ನು ಇದೇನೆಂದು ಊಹಿಸಲೂ ಆಗಲಿಲ್ಲ. ಸ್ವಪ್ರಕಾಶವೂ ಆನಂದರೂಪವೂ ಉಪನಿಷತ್ತುಗಳಿಂದ 'ಇದಲ್ಲ, ಇದಲ್ಲ' ಎಂದು ನೇತಿಗಳೆಯುವುದರ ಮೂಲಕ ಜ್ಞೇಯವೂ ಆದ ಆ ಬ್ರಹ್ಮವಸ್ತುವನ್ನು ಸರಿಯಾಗಿ ವೀಕ್ಷಿಸಲೂ ಶಕ್ಯವಾಗಲಿಲ್ಲ. ಆಗ ಪರಮಾತ್ಮನು (ಅದ್ಭುತರೂಪವನ್ನು ತೋರಿಸಿದ) ಮಾಯಾರೂಪವಾದ ಹೊದಿಕೆಯನ್ನು ತೆಗೆದುಹಾಕಿದನು (೫೭). ಆಗ ಬ್ರಹ್ಮನಿಗೆ ಕಣ್ಣುಗಳನ್ನು ತೆರೆಯಲು ಶಕ್ಯವಾಯಿತು. ಸತ್ತವನು ಬದುಕಿದಂತಾಗಿ ಬ್ರಹ್ಮನು ಕಣ್ದೆರೆದು ಶ್ರೀಕೃಷ್ಣನನ್ನೂ ಅಲ್ಲಿದ್ದ ವಸ್ತುಗಳನ್ನೂ ನೋಡಿದನು (೫೮). ಅವನು ಸುತ್ತಲೂ ದಿಕ್ಕುಗಳನ್ನು ನೋಡಿದಾಗ ಜನರಿಗೆ ಆಸರೆಯಾದ ಮರಗಳಿಂದ ಕೂಡಿ ನೇತ್ರಾನಂದಕರವಾದ ವೃಂದಾವನವು ಕಾಣಿಸಿತು (೫೯). ಸಹಜವೈರಿಗಳಾದ ಮನುಷ್ಯಮೃಗಾದಿಗಳು ಅಲ್ಲಿ (ವೈರವನ್ನು ಬಿಟ್ಟು) ಮಿತ್ರರಂತೆ ಇದ್ದವು. ಶ್ರೀಕೃಷ್ಣನ ವಾಸದ ಮಹಿಮೆಯಿಂದ ಕ್ರೋಧಲೋಭಾದಿಗಳು ಅಲ್ಲಿಂದ ತೊಲಗಿದ್ದವು (೬೦). ಆ ವೃಂದಾವನದಲ್ಲಿ ಗೊಲ್ಲರ ವಂಶದ

ನತ್ಸಾನ್ ಸಖೀನಿವ ಪುರಾ ಪರಿತೋ ವಿಚಿನ್ವ-
ದೇಕಂ ಸಪಾಣಿಕವಲಂ ಪರಮೇಷ್ಠ್ಯಚಷ್ಟ ॥ ೬೧

ದೃಷ್ಟ್ವಾ ತ್ವರೇಣ ನಿಜಧೋರಣತೋಽವತೀರ್ಯ
ಪೃಥ್ವ್ಯಾಂ ವಪುಃ ಕನಕದಂಡಮಿವಾಭಿಪಾತ್ಯ ।
ಸ್ಪೃಷ್ಟ್ವಾ ಚತುರ್ಮುಕುಟಕೋಟಿಭಿರಂಘ್ರಿಯುಗ್ಮಂ
ನತ್ವಾ ಮುದಶ್ರುಸುಜಲೈರಕೃತಾಭಿಷೇಕಮ್ ॥ ೬೨

ಉತ್ಥಾಯೋತ್ಥಾಯ ಕೃಷ್ಣಸ್ಯ ಚಿರಸ್ಯ ಪಾದಯೋಃ ಪತನ್ ।
ಆಸ್ತೇ ಮಹಿತ್ವಂ ಪ್ರಾಗ್ದೃಷ್ಟಂ ಸ್ಮೃತ್ವಾ ಸ್ಮೃತ್ವಾಪುನಃ ಪುನಃ ॥ ೬೩

ಶನೈರಥೋತ್ಥಾಯ ವಿಮೃಜ್ಯ ಲೋಚನೇ
ಮುಕುಂದಮುದ್ವೀಕ್ಷ್ಯ ವಿನಮ್ರಕಂಧರಃ ।

---

ಬಾಲಕನ ನಾಟ್ಯವನ್ನು ಅಭಿನಯಿಸುತ್ತಿದ್ದ ಪರಬ್ರಹ್ಮವನ್ನು ಬ್ರಹ್ಮನು ಕಂಡನು. ಆ ಪರಬ್ರಹ್ಮವು ವಿಜಾತೀಯರಹಿತವಾದ ಅದ್ವಯವಾಗಿದ್ದರೂ ಹಸುವಿನ ಕರುಗಳನ್ನು ಹುಡುಕುತ್ತ, ಸಜಾತೀಯರಹಿತವಾದ ಏಕವಾಗಿದ್ದರೂ ಗೆಳೆಯರನ್ನು ಅರಸುತ್ತ, ಸರ್ವಜ್ಞವೂ ಅನಂತವೂ ಆದರೂ ಸುತ್ತಲೂ ಅನ್ವೇಷಿಸುತ್ತ, ಪ್ರಕೃತಿಗೆ ಪರದಲ್ಲಿದ್ದು ಸರ್ವೋತ್ತಮವಾದರೂ ಬಾಲಕನಾಗಿ, ಬಹು ದೊಡ್ಡದಾದರೂ ಕೈಯಲ್ಲಿ ಬುತ್ತಿಯನ್ನು ಹಿಡಿದು ನಟಿಸುವುದನ್ನು ಬ್ರಹ್ಮನು ನೋಡಿದನು! (೬೧). ಒಡನೆಯೇ ಬ್ರಹ್ಮನು ತನ್ನ ವಾಹನದಿಂದಿಳಿದು, ಸುವರ್ಣದಂಡದಂತೆ ದೇಹವನ್ನು ನೆಲದಮೇಲೆ ಚಾಚಿ ನಮಸ್ಕರಿಸಿ, ತನ್ನ ನಾಲ್ಕು ಕಿರೀಟಗಳ ತುದಿಯಿಂದ ಭಗವಂತನ ಪಾದಯುಗ್ಮವನ್ನು ಸ್ಪರ್ಶಿಸಿ ಆನಂದಬಾಷ್ಪಗಳಿಂದ ತೊಳೆದನು (೬೨). ಆತನು ತಾನು ಕಂಡ ಭಗವನ್ಮಹಿಮೆಯನ್ನು ಮತ್ತೆ ಮತ್ತೆ ನೆನೆಸಿಕೊಳ್ಳುತ್ತ, ಶ್ರೀಕೃಷ್ಣನ ಪಾದಗಳಿಗೆ ವಂದಿಸಿ ಮೇಲೆದ್ದು ಮತ್ತೆ ಮತ್ತೆ ಅಡ್ಡಬೀಳುತ್ತಲೇ ಇದ್ದನು (೬೩). ಆಮೇಲೆ ಮೆಲ್ಲಗೆ ಎದ್ದು ನಿಂತು ಕಣ್ಣುಗಳನ್ನೊರಸಿಕೊಂಡು ಮುಕುಂದನನ್ನು ನೋಡಿ ತಲೆಬಾಗಿದನು. ವಿನಯದಿಂದ ಕೈಮುಗಿದು

ಕೃತಾಂಜಲಿಃ ಪ್ರಶ್ರಯವಾನ್ ಸಮಾಹಿತಃ
ಸವೇಪಥುರ್ಗದ್ಗದಯೈಲತೇಲಯಾ ॥ ೬೪

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಯೋದಶಾಧ್ಯಾಯಃ

---

## ಚತುರ್ದಶಾಧ್ಯಾಯಃ

ಬ್ರಹ್ಮೋವಾಚ—

ನೌಮೀಡ್ಯ ತೇಽಭ್ರವಪುಷೇ ತಡಿದಂಬರಾಯ
ಗುಂಜಾವತಂಸಪರಿಪಿಚ್ಛಲಸನ್ಮುಖಾಯ ।
ವನ್ಯಸ್ರಜೇ ಕವಲವೇತ್ರವಿಷಾಣವೇಣು-
ಲಕ್ಷ್ಮಶ್ರಿಯೇ ಮೃದುಪದೇ ಪಶುಪಾಂಗಜಾಯ ॥ ೧

---

ನಡುಗುತ್ತ ಏಕಾಗ್ರಚಿತ್ತನಾಗಿ ಗದ್ಗದಧ್ವನಿಯಿಂದ ಭಗವಂತನನ್ನು ಈ ಪ್ರಕಾರದಲ್ಲಿ ಸ್ತುತಿಸಿದನು (೬೪).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹದಿಮೂರನೆಯ ಸರ್ಗ

---

## ಅಧ್ಯಾಯ ೧೪

ಬ್ರಹ್ಮನಿಂದ ಶ್ರೀಕೃಷ್ಣನ ಸ್ತುತಿ. ಗೋಪಬಾಲಕರನ್ನೂ ಕರುಗಳನ್ನೂ ಕರೆತರುವುದು.

ಬ್ರಹ್ಮನು ಈ ಪ್ರಕಾರವಾಗಿ ಸ್ತುತಿಸಿದನು: ಹೇ ಸ್ವಾಮಿ, ನಿನಗೆ ನಮಸ್ಕಾರ. ಮೇಘಶ್ಯಾಮಲದೇಹನಾಗಿ ಮಿಂಚಿನಂತಿರುವ ಪೀತಾಂಬರವನ್ನುಟ್ಟಿರುವ ನಿನಗೆ ನಮಸ್ಕಾರ. ಕಿವಿಯಲ್ಲಿ ಧರಿಸಿದ ಗುಲಗಂಜಿಯ ಒಡವೆಯಿಂದ, ಶಿರದಲ್ಲಿ ಮುಡಿದ ನವಿಲುಗರಿಯಿಂದ ಮಂಜುಲಮುಖನಾದ ನಿನಗೆ ನಮಸ್ಕಾರ. ವನ್ಯಸುಮಗಳ ಮಾಲೆಯನ್ನು ಧರಿಸಿ, ಬುತ್ತಿ ಬೆತ್ತ ಕೊಂಬು ಕೊಳಲುಗಳಿಂದ ಶೋಭಿಸುವ ನಿನಗೆ ನಮಸ್ಕಾರ. ಗೊಲ್ಲನ ಮಗ

**ಅಸ್ಯಾಪಿ ದೇವ ವಪುಷೋ ಮದನುಗ್ರಹಸ್ಯ**
**ಸ್ವೇಚ್ಛಾಮಯಸ್ಯ ನ ತು ಭೂತಮಯಸ್ಯ ಕೋಽಪಿ ।**
**ನೇಶೇ ಮಹಿ ತ್ವವಸಿತುಂ ಮನಸಾಽಽಂತರೇಣ**
**ಸಾಕ್ಷಾತ್ತವೈವ ಕಿಮುತಾತ್ಮಸುಖಾನುಭೂತೇಃ ॥ ೨**

**ಜ್ಞಾನೇ ಪ್ರಯಾಸಮುದಪಾಸ್ಯ ನಮಂತ ಏವ**
**ಜೀವಂತಿ ಸನ್ಮುಖರಿತಾಂ ಭವದೀಯವಾರ್ತಾಮ್ ।**
**ಸ್ಥಾನೇ ಸ್ಥಿತಾಃ ಶ್ರುತಿಗತಾಂ ತನುವಾಙ್ಮನೋಭಿ-**
**ರ್ಯೇ ಪ್ರಾಯಶೋಽಜಿತ ಜಿತೋಽಪ್ಯಸಿ ತೈ-**
**ಸ್ತ್ರಿಲೋಕ್ಯಾಮ್ ॥ ೩**

**ಶ್ರೇಯಃಸ್ರುತಿಂ ಭಕ್ತಿಮುದಸ್ಯ ತೇ ವಿಭೋ**
**ಕ್ಲಿಶ್ಯಂತಿ ಯೇ ಕೇವಲಬೋಧಲಬ್ಧಯೇ ।**

---

ನಾಗಿ ಕೋಮಲಚರಣನಾಗಿರುವ ನಿನಗೆ ನಮಸ್ಕಾರ (೧). ಹೇ ದೇವ, ನನ್ನನ್ನು ಅನುಗ್ರಹಿಸುವುದಕ್ಕಾಗಿ ಅವತರಿಸಿ ಭಕ್ತರ ಇಚ್ಛೆಯಂತೆ ಕಲ್ಪಿತ ವಾದ ನಿನ್ನ ಈ ಶರೀರದ ಮಹಿಮೆಯನ್ನರಿಯಲು ಬ್ರಹ್ಮನಾದ ನನಗೂ ಸಾಧ್ಯವಿಲ್ಲ. ಈ ಶರೀರವು ಪಂಚಭೂತಮಯವಾಗದೆ, ಅಚಿಂತ್ಯಶುದ್ಧ ಸತ್ತ್ವಾತ್ಮಕವಾಗಿದೆ. ಹೀಗಿರುವಾಗ, ಆತ್ಮಾನಂದಾನುಭವಸ್ವರೂಪನಾದ ಸಾಕ್ಷಾತ್ ನಿನ್ನ ಮಹಿಮೆಯನ್ನು ಅಂತರ್ಮುಖವಾದ ಮನಸ್ಸಿನಿಂದಲೂ ತಿಳಿಯಲು ನನಗೆ ಸಾಧ್ಯವಿಲ್ಲವೆಂಬುದು ಸ್ಫುಟವಾಗಿದೆ (೨). (ಹಾಗಾದರೆ ಅಜ್ಞರು ಸಂಸಾರವನ್ನು ದಾಟುವುದು ಹೇಗೆ?—ಎಂದರೆ) ತಾವು ಇದ್ದಲ್ಲಿಗೇ ಬಂದು ಸಜ್ಜನರು ಕೀರ್ತಿಸುವ ನಿನ್ನ ಮಹಿಮೆಯನ್ನು ಜನರು ಕಿವಿಗೆ ಹಾಕಿ ಕೊಳ್ಳುತ್ತಾರೆ. ಅವರು ದೇಹ ವಾಙ್ಮನಸ್ಸುಗಳಿಂದ ನಿನಗೆ ತಲೆಬಾಗಿ ಭಕ್ತಿ ಯಿಂದ ತಮ್ಮ ಜೀವನವನ್ನು ಸಾಗಿಸುತ್ತಾರೆ. ಅವರು ನಿನ್ನ ನಿಜಸ್ವರೂಪ ವನ್ನರಿಯಲು ಪ್ರಯಾಸಪಡುವುದೇ ಇಲ್ಲ. ಮೂರು ಲೋಕಗಳಲ್ಲಿಯೂ ಅಂಥವರಿಗೆ ನೀನು, ಹೇ ಅಜಿತ, ಪ್ರಾಯಶಃ ದೊರಕಿಬಿಡುತ್ತೀಯೆ! (೩). ಹೇ ವಿಭೊ, ಶ್ರೇಯಸ್ಸಾಧನವಾದ ಭಕ್ತಿಯನ್ನು ಪರಿತ್ಯಜಿಸಿ, ಕೇವಲ ಜ್ಞಾನಕ್ಕಾಗಿ ಯಾರು ಯತ್ನಿಸುವರೋ ಅವರಿಗೆ ದೊರಕುವುದು ಶ್ರಮವು

ತೇಷಾಮಸೌ ಕ್ಲೇಶಲ ಏವ ಶಿಷ್ಯತೇ
ನಾನ್ಯದ್ ಯಥಾ ಸ್ಥೂಲತುಷಾವಘಾತಿನಾಮ್ ॥ ೪

ಪುರೇಹ ಭೂಮನ್ ಬಹವೋಽಪಿ ಯೋಗಿನ-
ಸ್ತ್ವದರ್ಪಿತೇಹಾ ನಿಜಕರ್ಮಲಬ್ಧಯಾ ।
ವಿಬುಧ್ಯ ಭಕ್ತ್ಯೈವ ಕಥೋಪನೀತಯಾ
ಪ್ರಪೇದಿರೇಽಂಜೋಽಚ್ಯುತ ತೇ ಗತಿಂ ಪರಾಮ್ ॥ ೫

ತಥಾಪಿ ಭೂಮನ್ ಮಹಿಮಾಗುಣಸ್ಯ ತೇ
ವಿಬೋದ್ಧುಮರ್ಹತ್ಯಮಲಾಂತರಾತ್ಮಭಿಃ ।
ಅವಿಕ್ರಿಯಾತ್ ಸ್ವಾನುಭವಾದರೂಪತೋ
ಹ್ಯನನ್ಯಬೋಧ್ಯಾತ್ಮತಯಾ ನ ಚಾನ್ಯಥಾ ॥ ೬

ಗುಣಾತ್ಮನಸ್ತೇಽಪಿ ಗುಣಾನ್ ವಿಮಾತುಂ
ಹಿತಾವತೀರ್ಣಸ್ಯ ಕ ಈಶಿರೇಽಸ್ಯ ।

---

ಮಾತ್ರವೇ! ಇನ್ನೇನೂ ಇಲ್ಲ. ಅವರ ಶ್ರಮವು ದಪ್ಪವಾದ ಜೊಳ್ಳು ಕಾಳುಗಳನ್ನು ಕುಟ್ಟಿದಂತೆ! (೪). ಹೇ ಭೂಮಸ್ವರೂಪನೆ, ಈ ಲೋಕದಲ್ಲಿ ಹಿಂದೆ ಬಹು ಮಂದಿ ಯೋಗಿಗಳೂ ಸಹ ಕಡೆಯಲ್ಲಿ ತಮ್ಮ ಕರ್ಮಗಳೆಲ್ಲವನ್ನೂ ನಿನಗೇ ಅರ್ಪಿಸಿದರು. ಅರ್ಪಿತಕರ್ಮಗಳ ಬಲದಿಂದಲೂ ನಿನ್ನ ಕಥೆಯ ಶ್ರವಣದಿಂದಲೂ ಅವರಿಗೆ ಭಕ್ತಿಯು ಲಭಿಸಿತು. ಭಕ್ತಿಯಿಂದ ನಿನ್ನನ್ನರಿತು, ಅಚ್ಯುತ, ಶೀಘ್ರದಲ್ಲಿಯೇ ನಿನ್ನ ಪರಮಗತಿಯನ್ನು ಪಡೆದರು (೫). ಆದರೆ ನಿರ್ಗುಣನಾದ ನಿನ್ನ ಮಹಿಮೆಯು ನಿರ್ಮಲಾಂತಃಕರಣದವರಿಗೆ ತಿಳಿಯಲು ಸಾಧ್ಯವಾಗಬಹುದು. ಆಗಲೂ ಸಹ ನಿರ್ವಿಕಾರವೂ ನಿರ್ವಿಷಯವೂ ಆದ ಸ್ವಾನುಭವಕ್ಕೆ ಸ್ವಯಂಪ್ರಕಾಶವಾಗಿ ಗೋಚರಿಸೀತೇ ಹೊರತು ಬೇರೆ ವಿಧದಿಂದಲ್ಲ (೬). ಆದರೆ ಲೋಕಹಿತಕ್ಕೋಸ್ಕರ ಸಗುಣನಾಗಿ ಅವತರಿಸಿದ ನಿನ್ನ ಗುಣಗಳನ್ನಳೆಯಲು ಯಾರಿಗೆ ಸಾಮರ್ಥ್ಯ ಉಂಟು? ಅತಿನಿಪುಣರಾದವರು ದೀರ್ಘಕಾಲವನ್ನು ತೆಗೆದುಕೊಂಡು ಭೂಮಿಯ ಪರಮಾಣುಗಳನ್ನೂ ಆಕಾಶದಲ್ಲಿರುವ ಮಂಜಿನ ಕಣಗಳನ್ನೂ ನಕ್ಷತ್ರಗಳನ್ನೂ ಸಹ ಎಣಿಸಿಯಾರು! ಅವರು ನಿನ್ನ ಗುಣಗಳನ್ನು ಎಣಿಸಬಲ್ಲರೆ? (೭).

*

ಕಾಲೇನ ಯೈರ್ವಾ ವಿಮಿತಾಃ ಸುಕಲ್ಪೈ-
ರ್ಭೂಪಾಂಸವಃ ಖೇ ಮಿಹಿಕಾ ದ್ಯುಭಾಸಃ ॥ ೭

ತತ್ತೇಽನುಕಂಪಾಂ ಸುಸಮೀಕ್ಷಮಾಣೋ
ಭುಂಜಾನ ಏವಾತ್ಮಕೃತಂ ವಿಪಾಕಮ್ ।
ಹೃದ್ವಾಗ್ವಪುರ್ಭಿರ್ವಿದಧನ್ನಮಸ್ತೇ
ಜೀವೇತ ಯೋ ಮುಕ್ತಿಪದೇ ಸ ದಾಯಭಾಕ್ ॥ ೮

ಪಶ್ಯೇಶ ಮೇಽನಾರ್ಯಮನಂತ ಆದ್ಯೇ
ಪರಾತ್ಮನಿ ತ್ವಯ್ಯಪಿ ಮಾಯಿಮಾಯಿನಿ ।
ಮಾಯಾಂ ವಿತತ್ಯೇಕ್ಷಿತುಮಾತ್ಮವೈಭವಂ
ಹ್ಯಹಂ ಕಿಯಾನೈಚ್ಛಮಿವಾರ್ಚಿರಗ್ನೌ ॥ ೯

ಅತಃ ಕ್ಷಮಸ್ವಾಚ್ಯುತ ಮೇ ರಜೋಭುವೋ
ಹ್ಯಜಾನತಸ್ತ್ವತ್ಪೃಥಗೀಶಮಾನಿನಃ ।
ಅಜಾವಲೇಪಾಂಧತಮೋಽಂಧಚಕ್ಷುಷಃ
ಏಷೋಽನುಕಂಪ್ಯೋ ಮಯಿ ನಾಥವಾನಿತಿ ॥ ೧೦

---

ಆದ್ದರಿಂದ ನಿನ್ನ ಕೃಪೆಯನ್ನೇ ಪ್ರತೀಕ್ಷಿಸುತ್ತ, ತಾನು ಆರ್ಜಿಸಿದ ಕರ್ಮಫಲ ವನ್ನು (ಅನಾಸಕ್ತಿಯಿಂದ) ಅನುಭವಿಸುತ್ತ ಮನಸ್ಸು ಮಾತು ಕಾಯಗಳಿಂದ ನಿನಗೆ ನಮಿಸುತ್ತ ಯಾವನು ಜೀವಿಸುವನೋ ಅವನು ಮುಕ್ತಿಯಲ್ಲಿ ಪಾಲು ಗಾರನಾಗುತ್ತಾನೆ (೮). ಈಶ, ನನ್ನ ದೌರ್ಜನ್ಯವನ್ನಾದರೂ ನೋಡು! ಅನಂತನೂ ಆದ್ಯನೂ ಪರಮಾತ್ಮನೂ ಮಾಯಾವಿಗಳನ್ನೂ ಮೋಹಗೊಳಿಸುವ ಮಹಾಮಾಯಾವಿಯೂ ಆದ ನಿನ್ನಲ್ಲಿ ನನ್ನ ಮಾಯೆಯನ್ನು ಬೀಸಲು ಯತ್ನಿಸಿದೆನು! ಮಾಯೆಯನ್ನು ಬೀಸಿ ನನ್ನ ಸಾಮರ್ಥ್ಯವನ್ನು ನೋಡಲು ಇಚ್ಛಿಸಿದೆನು! ಆಹಾ! ನಾನು ಎಷ್ಟರವನು? ಅಗ್ನಿಯಲ್ಲಿ ಅದರ ಒಂದು ಕಣವಾದ ಜ್ವಾಲೆ ಇದ್ದಂತೆ ನಾನು (೯). ಆದ್ದರಿಂದ, ಅಚ್ಯುತ, ರಜೋಗುಣ ದಿಂದ ಜನಿಸಿದ ಅಜ್ಞನಾದ ನನ್ನ ದೌರ್ಜನ್ಯವನ್ನು ಮನ್ನಿಸು. ನಿನಗೆ ಅತಿರಿಕ್ತವಾಗಿ ನಾನೊಬ್ಬ ಸಮರ್ಥನೆಂದು ತಿಳಿದಿದ್ದೆನು. ನಾನು ಸೃಷ್ಟಿಕರ್ತ ನೆಂಬ ಮದದ ಗಾಢತಮಸ್ಸಿನಿಂದ ನನ್ನ ಕಣ್ಣುಗಳು ಕುರುಡಾಗಿದ್ದವು!

ಕ್ವಾಹಂ ತಮೋಮಹದಹಂಖಚರಾಗ್ನಿವಾರ್ಭೂ-
ಸಂವೇಷ್ಟಿತಾಂಡಘಟಸಪ್ತವಿತಸ್ತಿಕಾಯಃ ।
ಕ್ವೇದೃಗ್ವಿಧಾವಿಗಣಿತಾಂಡಪರಾಣುಚರ್ಯಾ-
ವಾತಾಧ್ವರೋಮವಿವರಸ್ಯ ಚ ತೇ ಮಹಿತ್ವಮ್ ॥ ೧೧

ಉತ್ಕ್ಷೇಪಣಂ ಗರ್ಭಗತಸ್ಯ ಪಾದಯೋಃ
ಕಿಂ ಕಲ್ಪತೇ ಮಾತುರಧೋಕ್ಷಜಾಗಸೇ ।
ಕಿಮಸ್ತಿನಾಸ್ತಿವ್ಯಪದೇಶಭೂಷಿತಂ
ತವಾಸ್ತಿ ಕುಕ್ಷೇಃ ಕಿಯದಪ್ಯನಂತಃ ॥ ೧೨

ಜಗತ್ತ್ರಯಾಂತೋದಧಿಸಂಪ್ಲವೋದೇ
ನಾರಾಯಣಸ್ಯೋದರನಾಭಿನಾಲಾತ್ ।
ವಿನಿರ್ಗತೋಽಜಸ್ತ್ವಿತಿ ವಾಙ್ ನ ವೈ ಮೃಷಾ
ಕಿಂ ತ್ವೀಶ್ವರ ತ್ವನ್ನ ವಿನಿರ್ಗತೋಽಸ್ಮಿ ॥ ೧೩

---

'ಈತನು ನನ್ನ ಭೃತ್ಯನಾದ್ದರಿಂದ ಅನುಕಂಪನೀಯನು' ಎಂಬ ಭಾವದಿಂದ ನನ್ನನ್ನು ಕ್ಷಮಿಸು (೧೦). ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ–ಇವುಗಳಿಂದೊಡಗೂಡಿದ ಅಂಡವೆಂಬ ಗಡಿಗೆಯಲ್ಲಿ ಏಳುಗೇಣಿನ ದೇಹವುಳ್ಳ ನಾನೆಲ್ಲಿ! ಇಂತಹ ಲೆಕ್ಕವಿಲ್ಲದಷ್ಟು ಬ್ರಹ್ಮಾಂಡಗಳೆಂಬ ಪರಮಾಣುಗಳು ನಿನ್ನ ರೋಮರಂಧ್ರಗಳಲ್ಲಿ, ಕಿಟಕಿಗಳಲ್ಲಿ ತೂರಿಹೋಗುವಂತೆ ತೂರಿಹೋಗುತ್ತವೆ! ಇಂತಹ ನಿನ್ನ ಮಹಾಮಹಿಮೆ ಎಲ್ಲಿ! (೧೧). ಗರ್ಭದಲ್ಲಿರುವ ಮಗು ತನ್ನ ಕಾಲುಗಳನ್ನು ಎತ್ತಿದರೆ, ತಾಯಿಯನ್ನು ಒದೆದ ಅಪರಾಧಕ್ಕೆ ಗುರಿಯಾಗುವುದೆ? ಹೇ ಅಧೋಕ್ಷಜ, 'ಅಸ್ತಿ ನಾಸ್ತಿ' ಎಂಬ ವ್ಯವಹಾರಕ್ಕೆ ವಿಷಯವಾದ ಯಾವ ವಸ್ತುವಾದರೂ ನಿನ್ನ ಉದರದಿಂದ ಹೊರಗೆ ಇರುವುದುಂಟೆ?* (೧೨). ಮೂರು ಲೋಕಗಳೂ ನಶಿಸಿದ ಪ್ರಳಯಕಾಲದಲ್ಲಿ ಸಮುದ್ರಜಲವೆಲ್ಲವೂ ಏಕವಾದಾಗ

---

* ನಾನೂ ಸಕಲ ಚರಾಚರಗಳೂ ನಿನ್ನ ಉದರದಲ್ಲಿ ಇರತಕ್ಕವರು. ನಾನು ಮಾಡಿದ ಕಾರ್ಯವು ಗರ್ಭದಲ್ಲಿರುವ ಮಗುವಿನ ಚೇಷ್ಟೆ ಇದ್ದಂತೆ. ಆದ್ದರಿಂದ ನನ್ನನ್ನು ಕ್ಷಮಿಸು ಎಂದು ಅಭಿಪ್ರಾಯ.

ನಾರಾಯಣಸ್ತ್ವಂ ನ ಹಿ ಸರ್ವದೇಹಿನಾ-
ಮಾತ್ಮಾಸ್ಯಧೀಶಾಖಿಲಲೋಕಸಾಕ್ಷೀ ।
ನಾರಾಯಣೋಽಂಗಂ ನರಭೂಜಲಾಯನಾ-
ತ್ತಚ್ಚಾಪಿ ಸತ್ಯಂ ನ ತವೈವ ಮಾಯಾ ॥ ೧೪

ತಚ್ಚೇಜ್ಜಲಸ್ಥಂ ತವ ಸಜ್ಜಗದ್ವಪುಃ
ಕಿಂ ಮೇ ನ ದೃಷ್ಟಂ ಭಗವಂಸ್ತದೈವ ।
ಕಿಂ ವಾ ಸುದೃಷ್ಟಂ ಹೃದಿ ಮೇ ತದೈವ
ಕಿಂ ನೋ ಸಪದ್ಯೇವ ಪುನರ್ವ್ಯದರ್ಶಿ ॥ ೧೫

---

ನಾರಾಯಣನ ಉದರದ ನಾಭಿನಾಳದಿಂದ ಬ್ರಹ್ಮನು ಜನಿಸಿದನೆಂಬ ನುಡಿ ಸುಳ್ಳಲ್ಲವಷ್ಟೆ?—ಹೇ ಪರಮೇಶ್ವರ, ನಿನ್ನಿಂದ ನಾನು ಜನಿಸಿದ್ದೇನಲ್ಲವೆ? † (೧೩). ನೀನು 'ಶ್ರೀಮನ್ನಾರಾಯಣನಾಗಿದ್ದೀಯೆ. ಸರ್ವದೇಹಿಗಳಿಗೂ ನೀನು ಆತ್ಮನಲ್ಲವೆ? ಹೇ ಅಧೀಶ, ನೀನು ಅಧೀಶನಾದ್ದರಿಂದಲೂ ಸರ್ವ ಲೋಕಗಳಿಗೆ ಸಾಕ್ಷಿಯಾದ್ದರಿಂದಲೂ ನಾರಾಯಣನೇ. ನರಜಾತಗಳಾದ್ದರಿಂದ ನಾರಗಳೆನಿಸಿದ ತತ್ತ್ವಗಳಿಗೂ ಜಲಗಳಿಗೂ ಆಶ್ರಯನಾಗಿ ನಾರಾಯಣ ನೆನಿಸಿದ ಪರಮಾತ್ಮನು ನಿನ್ನ ಮೂರ್ತಿ. ಆದರೆ ಇದೂ ಪರಮಾರ್ಥವಲ್ಲ; ನಿನ್ನ ಮಾಯೆಯಾಗಿದೆ * (೧೪). ಜಗತ್ತಿಗೆ ಆಶ್ರಯವಾದ ನಿನ್ನ ಮೂರ್ತಿಯು ಜಲಶಾಯಿಯಾಗಿರುವುದು ಸತ್ಯವಾದರೆ, ಕಮಲನಾಳಮಾರ್ಗ ದಿಂದ ನಾನು ಒಳಹೊಕ್ಕು ನೂರು ವರ್ಷಗಳವರೆಗೆ ಹುಡುಕಿದಾಗಲೇ ಕಾಣ ದಿದ್ದುದೇಕೆ? ಹೇ ಅಚಿಂತ್ಯಮಹಿಮನೆ, ಮತ್ತೆ ನನ್ನ ಹೃದಯದಲ್ಲಿಯೂ

---

† 'ನಿನ್ನಿಂದ ನಾನು ವಿನಿರ್ಗತನಾದರೂ ಬಹಿರ್ಭೂತನಲ್ಲ; ನಿನ್ನ ಉದರ ದಲ್ಲಿಯೇ ಇರತಕ್ಕವನು ನಾನು' ಎಂಬ ತಾತ್ಪರ್ಯವನ್ನೂ ಹೇಳಬಹುದು.

* ನಾರಾಯಣ ಶಬ್ದಕ್ಕೆ ಅನೇಕ ರೀತಿಯ ವ್ಯುತ್ಪತ್ತಿಯುಂಟು:—೧. ನಾರಂ ಜೀವಸಮೂಹಃ ಅಯನಮಾಶ್ರಯೋ ಯಸ್ಯ ೨. ನಾರಸ್ಯ ಅಯನಂ ಪ್ರವೃತ್ತಿಃ ಯಸ್ಮಾತ್ (ಅಧೀಶ ಎಂದರೆ ಪ್ರವರ್ತಕ). ೩. ನಾರಮಯಸೇ ಜಾನಾಸಿ (ಸರ್ವ ಲೋಕ ಸಾಕ್ಷಿ). ೪. ನರಾತ್ ಜಾತಾನಿ ತತ್ತ್ವಾನಿ ಜಲಾನಿ ಚ ಅಯನಮಾಶ್ರಯೋ ಯಸ್ಯ. ಅಪರಿಚ್ಛಿನ್ನವಾದ ನಾರಾಯಣಮೂರ್ತಿಗೆ ಜಲವು ಆಶ್ರಯವೆನಿಸುವುದು ಪರಮಾರ್ಥವಲ್ಲ, ಅದೂ ಒಂದು ಮಾಯೆ.

ಅತ್ರೈವ ಮಾಯಾಧಮನಾವತಾರೇ
ಹ್ಯಸ್ಯ ಪ್ರಪಂಚಸ್ಯ ಬಹಿಃ ಸ್ಫುಟಸ್ಯ ।
ಕೃತ್ಸ್ನಸ್ಯ ಚಾಂತರ್ಜಠರೇ ಜನನ್ಯಾ
ಮಾಯಾತ್ವಮೇವ ಪ್ರಕಟೀಕೃತಂ ತೇ ॥ ೧೬

ಯಸ್ಯ ಕುಕ್ಷಾವಿದಂ ಸರ್ವಂ ಸಾತ್ಮಂ ಭಾತಿ ಯಥಾ ತಥಾ ।
ತತ್ತ್ವಯ್ಯಪೀಹ ತತ್ ಸರ್ವಂ ಕಿಮಿದಂ ಮಾಯಯಾ ವಿನಾ ॥ ೧೭

ಅದ್ಯೈವ ತ್ವದೃತೇಽಸ್ಯ ಕಿಂ ಮಮ ನ ತೇ ಮಾಯಾತ್ವಮಾದರ್ಶಿತ-
ಮೇಕೋಽಸಿ ಪ್ರಥಮಂ ತತೋ ವ್ರಜಸುಹೃದ್ ವತ್ಸಾಃ ಸಮಸ್ತಾ
ಅಪಿ ।
ತಾವಂತೋಽಸಿ ಚತುರ್ಭುಜಾಸ್ತದಖಿಲೈಃ ಸಾಕಂ ಮಯೋಪಾಸಿತಾ-
ಸ್ತಾವಂತ್ಯೇವ ಜಗಂತ್ಯಭೂಸ್ತದಮಿತಂ ಬ್ರಹ್ಮಾದ್ವಯಂ ಶಿಷ್ಯತೇ ॥

---

ಮೂರ್ತಿಯು ಏಕೆ ಗೋಚರವಾಗಲಿಲ್ಲ? ನಾನು ತಪಸನ್ನಾಚರಿಸಿದಾಗ ಒಡನೆಯೇ ನಿನ್ನ ಮೂರ್ತಿಯು ಚೆನ್ನಾಗಿ ಗೋಚರಿಸಿಬಿಟ್ಟಿತಲ್ಲ! (ಆದ್ದರಿಂದ ಜಲಶಾಯಿಯಾಗಿರುವುದು ಮಾಯೆಯಿಂದಲೇ) (೧೫). ಎಲೈ ಮಾಯಾವಿಯೆ, ಈ ಜಲಾದಿಪ್ರಪಂಚವು ಸತ್ಯವಾದರೆ, ಈ ಕೃಷ್ಣಾವತಾರ ದಲ್ಲಿಯೇ–ಹೊರಗಡೆ ಪ್ರಪಂಚವು ಸ್ಫುಟವಾಗಿ ಕಾಣುತ್ತಿರುವಾಗ–ನಿನ್ನ ಉದರದಲ್ಲಿರುವಂತೆ ಎಲ್ಲವೂ ತಾಯಿಗೆ ಕಾಣಿಸಿದ್ದು ಹೇಗೆ? ಮಾಯೆಯನ್ನೇ ನೀನು ಪ್ರಕಟಿಸಿದ್ದೀಯೆ! (೧೬). ನೀನು ಸಹಿತವಾಗಿ ಸಕಲ ವಿಶ್ವವೂ ನಿನ್ನ ಉದರದಲ್ಲಿ ಹೇಗೆ ತೋರುವುದೋ ಹಾಗೆಯೇ ಹೊರಗಡೆಯಲ್ಲಿಯೂ ತೋರುತ್ತಿದೆ. ಇದೆಲ್ಲವೂ ನಿನ್ನಲ್ಲಿ ಮಾಯೆಯಿಲ್ಲದೆ ಹೇಗೆ ಸಾಧ್ಯ? * (೧೭). ಅಲ್ಲದೆ, ನಿನ್ನೊಬ್ಬನನ್ನು ಬಿಟ್ಟು ಸಕಲ ವಿಶ್ವವೂ ಮಾಯಾಕಲ್ಪಿತ ವೆಂಬುದನ್ನು ಈಗ ತಾನೇ ನನಗೆ ನೀನು ತೋರಿಸಲಿಲ್ಲವೆ? ಮೊದಲು

---

* ಉದರದಲ್ಲಿ ಕಾಣಿಸಿದ್ದು ಸತ್ಯಪ್ರಪಂಚದ ಪ್ರತಿಬಿಂಬವೆಂದೂ ಹೇಳುವಂತಿಲ್ಲ. ಪ್ರತಿಬಿಂಬವಾಗಿದ್ದರೆ ವಿಲೋಮವಾಗಿ ಕಾಣಿಸಬೇಕಾಗಿತ್ತು. ಅಲ್ಲದೆ ನೀನೇ ಉದರದ ಒಳಗೂ ಹೊರಗೂ ಕಾಣಿಸುವುದು ಶಕ್ಯವಲ್ಲ. ಆದ್ದರಿಂದ ಇದೆಲ್ಲವೂ ಮಾಯೆಯೆಂದು ತಾತ್ಪರ್ಯ.

ಅಜಾನತಾಂ ತ್ವತ್ಪದವೀಮನಾತ್ಮ-
ನ್ಯಾತ್ಮಾಽಽತ್ಮನಾ ಭಾಸಿ ವಿತತ್ಯ ಮಾಯಾಮ್ ।
ಸೃಷ್ಟಾವಿವಾಹಂ ಜಗತೋ ವಿಧಾನ
ಇವ ತ್ವಮೇಷೋಽಂತ ಇವ ತ್ರಿನೇತ್ರಃ ॥ ೧೯

ಸುರೇಷ್ವೃಷಿಷ್ವೀಶ ತಥೈವ ನೃಷ್ವಪಿ
ತಿರ್ಯಕ್ಷು ಯಾದಸ್ಸ್ವಪಿ ತೇಽಜನಸ್ಯ ।
ಜನ್ಮಾಸತಾಂ ದುರ್ಮದನಿಗ್ರಹಾಯ
ಪ್ರಭೋ ವಿಧಾತಃ ಸದನುಗ್ರಹಾಯ ಚ ॥ ೨೦

ಕೋ ವೇತ್ತಿ ಭೂಮನ್ ಭಗವನ್ ಪರಾತ್ಮನ್
ಯೋಗೇಶ್ವರೋತೀರ್ಭವತಸ್ತ್ರಿಲೋಕ್ಯಾಮ್ ।
ಕ್ವ ವಾ ಕಥಂ ವಾ ಕತಿ ವಾ ಕದೇತಿ
ವಿಸ್ತಾರಯನ್ ಕ್ರೀಡಸಿ ಯೋಗಮಾಯಾಮ್ ॥ ೨೧

---

ಏಕನಾಗಿದ್ದ ನೀನು ಸಮಸ್ತ ಗೋಪಬಾಲಕರಾಗಿಯೂ ಹಸುವಿನ ಕರುಗಳಾಗಿಯೂ ಕಾಣಿಸಿದೆ. ಆಮೇಲೆ ಅವರೆಲ್ಲರೂ ನನ್ನಿಂದಲೂ ಮಹದಾದಿ ತತ್ತ್ವಗಳಿಂದಲೂ ಸೇವೆಯನ್ನು ಸ್ವೀಕರಿಸುವ ಚತುರ್ಭುಜರಾಗಿ ನೀನೇ ಗೋಚರಿಸಿದೆ. ಸಕಲ ಬ್ರಹ್ಮಾಂಡಗಳೂ ನೀನೇ ಆದೆ! ಆದ್ದರಿಂದ ಊಹಾತೀತವೂ ಅದ್ವಿತೀಯವೂ ಆದ ಬ್ರಹ್ಮ ಒಂದೇ ಉಳಿಯುತ್ತದೆ (೧೮). ನಿನ್ನ ಶುದ್ಧಚೈತನ್ಯಸ್ವರೂಪವನ್ನರಿಯದವರಿಗೆ, ಪ್ರಕೃತಿಸ್ಥನಾದ ನೀನು ನಿನ್ನಿಂದಲೇ ಮಾಯೆಯನ್ನು ಬೀರಿ, ಸೃಷ್ಟಿಕಾರ್ಯದಲ್ಲಿ ನಾನಾಗಿಯೂ ಸ್ಥಿತಿಕಾರ್ಯದಲ್ಲಿ ನೀನಾಗಿಯೂ (ವಿಷ್ಣುವಾಗಿಯೂ) ಲಯಕಾರ್ಯದಲ್ಲಿ ತ್ರಿಯಂಬಕನಾಗಿಯೂ ಗೋಚರಿಸುವೆ (೧೯). ಹೇ ಪರಮೇಶ್ವರ, ಜನ್ಮರಹಿತನಾದ ನೀನು ದೇವತೆಗಳಲ್ಲಿ (ಉಪೇಂದ್ರನಾಗಿ), ಋಷಿಗಳಲ್ಲಿ (ಪರಶುರಾಮನಾಗಿ), ಮನುಷ್ಯರಲ್ಲಿ (ಶ್ರೀರಾಮನಾಗಿ), ತಿರ್ಯಗ್‌ಜಂತುಗಳಲ್ಲಿ (ವರಾಹನಾಗಿ), ಜಲಚರಗಳಲ್ಲಿ (ಮೀನಾಗಿ) ಜನ್ಮವನ್ನು ತಾಳುತ್ತೀಯೆ. ಹೇ ಪ್ರಭುವೆ, ವಿಧಾತನೆ, ಇದೆಲ್ಲವೂ ದುಷ್ಟರ ನಿಗ್ರಹಕ್ಕಾಗಿ ಮತ್ತು ಶಿಷ್ಟರ ಅನುಗ್ರಹಕ್ಕಾಗಿ (೨೦). ಹೇ ಭೂಮನ್, ಭಗವನ್, ಪರಾತ್ಮನ್,

**ತಸ್ಮಾದಿದಂ ಜಗದಶೇಷಮಸತ್ಸ್ವರೂಪಂ**
**ಸ್ವಪ್ನಾಭಮಸ್ತಧಿಷಣಂ ಪುರುದುಃಖದುಃಖಮ್ ।**
**ತ್ವಯ್ಯೇವ ನಿತ್ಯಸುಖಬೋಧತನಾವನಂತೇ**
**ಮಾಯಾತ ಉದ್ಯದಪಿ ಯತ್ ಸದಿವಾವಭಾತಿ ॥ ೨೨**

**ಏಕಸ್ತ್ವಮಾತ್ಮಾ ಪುರುಷಃ ಪುರಾಣಃ**
**ಸತ್ಯಃ ಸ್ವಯಂಜ್ಯೋತಿರನಂತ ಆದ್ಯಃ ।**
**ನಿತ್ಯೋಽಕ್ಷರೋಽಜಸ್ರಸುಖೋ ನಿರಂಜನಃ**
**ಪೂರ್ಣೋಽದ್ವಯೋ ಮುಕ್ತ ಉಪಾಧಿತೋಽಮೃತಃ ॥**

**ಏವಂವಿಧಂ ತ್ವಾಂ ಸಕಲಾತ್ಮನಾಮಪಿ**
**ಸ್ವಾತ್ಮಾನಮಾತ್ಮಾತ್ಮತಯಾ ವಿಚಕ್ಷತೇ ।**
**ಗುರ್ವರ್ಕಲಬ್ಧೋಪನಿಷತ್ಸುಚಕ್ಷುಷಾ**
**ಯೇ ತೇ ತರಂತೀವ ಭವಾನೃತಾಂಬುಧಿಮ್ ॥ ೨೪**

---

ಯೋಗೇಶ್ವರ, ನಿನ್ನ ಲೀಲೆಗಳನ್ನು ಅರಿಯಬಲ್ಲವನು ಮೂರುಲೋಕಗಳಲ್ಲಿ ಯಾವನಿದ್ದಾನೆ? ಎಲ್ಲಿ ಹೇಗೆ ಎಷ್ಟು ಯಾವಾಗ?—ಎಂಬುದನ್ನು ಯಾವನು ಬಲ್ಲನು? ಯೋಗಮಾಯೆಯನ್ನು ಬಿತ್ತರಿಸಿ ಕ್ರೀಡಿಸುತ್ತೀಯೆ (೨೧). ಈ ಸಮಸ್ತ ಜಗತ್ತೂ ಅಸತ್ಯವಾದದ್ದು. ಇದು ಸ್ವಪ್ನಸದೃಶವೂ ಚೈತನ್ಯರಹಿತವೂ ಅತ್ಯಂತ ದುಃಖಮಯವೂ ಆಗಿದೆ. ನಿತ್ಯನೂ ಸುಖಬೋಧ ಸ್ವರೂಪನೂ ಅನಂತನೂ ಆದ ನಿನ್ನಲ್ಲಿ ಈ ಜಗತ್ತು ಮಾಯಾವಶದಿಂದ ಉದ್ಭವಿಸಿದರೂ ಸತ್ಯವೆಂಬಂತೆ ತೋರುತ್ತದೆ (೨೨). ನೀನೊಬ್ಬನೇ ಸತ್ಯನು. ಏಕೆಂದರೆ, ನೀನು (ಅದೃಶ್ಯನಾದ) ಆತ್ಮನು. ಸನಾತನಪುರುಷನೂ ಸ್ವಯಂಜ್ಯೋತಿಯೂ ಅನಂತನೂ ಆದಿಕಾರಣನೂ ಆಗಿದ್ದೀಯೆ. ನಿತ್ಯನೂ ಕ್ಷಯರಹಿತನೂ ಆನಂದಘನನೂ ಆಗಿದ್ದೀಯೆ. ನಿರಂಜನನೂ ಪೂರ್ಣನೂ ಅದ್ವಯನೂ ನೀನೇ. ಉಪಾಧಿವಿನಿರ್ಮುಕ್ತನೂ ಅಮೃತಸ್ವರೂಪನೂ ನೀನೇ (೨೩). ಈ ರೀತಿಯಲ್ಲಿ ಸಕಲಜೀವಾತ್ಮರಿಗೂ ಮುಖ್ಯಾತ್ಮನಾದ ನಿನ್ನನ್ನು, ಗುರುವೆಂಬ ಸೂರ್ಯನಿಂದ ಜ್ಞಾನವೆಂಬ ಕಣ್ಣನ್ನು ಪಡೆದ

ಆತ್ಮಾನಮೇವಾತ್ಮತಯಾವಿಜಾನತಾಂ
ತೇನೈವ ಜಾತಂ ನಿಖಿಲಂ ಪ್ರಪಂಚಿತಮ್ ।
ಜ್ಞಾನೇನ ಭೂಯೋಽಪಿ ಚ ತತ್ ಪ್ರಲೀಯತೇ
ರಜ್ಜ್ವಾಮಹೇರ್ಭೋಗಭವಾಭವೌ ಯಥಾ ॥ ೨೫

ಅಜ್ಞಾನಸಂಜ್ಞೌ ಭವಬಂಧಮೋಕ್ಷೌ
ದ್ವೌ ನಾಮ ನಾನ್ಯೌ ಸ್ತ ಋತಜ್ಞಭಾವಾತ್ ।
ಅಜಸ್ರಚಿತ್ಯಾತ್ಮನಿ ಕೇವಲೇ ಪರೇ
ವಿಚಾರ್ಯಮಾಣೇ ತರಣಾವಿವಾಹನೀ ॥ ೨೬

ತ್ವಾಮಾತ್ಮಾನಂ ಪರಂ ಮತ್ವಾ ಪರಮಾತ್ಮಾನಮೇವ ಚ ।
ಆತ್ಮಾ ಪುನರ್ಬಹಿರ್ಮೃಗ್ಯ ಅಹೋಽಜ್ಞಜನತಾಜ್ಞತಾ ॥ ೨೭

ಯಾರು, ತಮ್ಮ ಪ್ರತ್ಯಗಾತ್ಮನೆಂದು ತಿಳಿಯುವರೋ ಅವರು ಸಂಸಾರವೆಂಬ ಅನೃತಸಾಗರವನ್ನು ದಾಟುತ್ತಾರೆ ಎಂಬಂತೆ ಕಾಣುವುದು! * (೨೪). ಆತ್ಮನನ್ನು ಆತ್ಮನೆಂದೇ ಯಾರು ಅರಿತಿಲ್ಲವೋ ಅವರಿಗೆ ಆ ಅಜ್ಞಾನದಿಂದ ನಿಖಿಲಪ್ರಪಂಚವೂ ಉತ್ಪನ್ನವಾಗಿ ಗೋಚರಿಸುತ್ತದೆ. ಜ್ಞಾನದಿಂದ ಆ ಪ್ರಪಂಚವು ಲಯಿಸುತ್ತದೆ. ಹಗ್ಗದಲ್ಲಿ ಹಾವಿನ ದೇಹವು ಅಜ್ಞಾನದಿಂದ ಗೋಚರಿಸಿ ಜ್ಞಾನದಿಂದ ಲಯಿಸುವಂತೆ ಆಗುತ್ತದೆ (೨೫). ಸಂಸಾರದಿಂದ ಬಂಧನ, ಸಂಸಾರದಿಂದ ಮೋಕ್ಷ–ಎಂಬಿವೆರಡೂ ಅಜ್ಞಾನದಿಂದ ಕಲ್ಪಿತವಾದ ಸಂಕೇತಗಳು. ಋತ ಮತ್ತು ಸರ್ವಜ್ಞ ಎಂಬ ಆತ್ಮಸ್ವರೂಪಕ್ಕೆ ಬೇರೆಯಾದ ಬಂಧಮೋಕ್ಷಗಳೆಂಬವು ಇಲ್ಲ. ಸೂರ್ಯನಿಗೆ ಹಗಲು ರಾತ್ರಿಗಳು ಹೇಗಿಲ್ಲವೋ ಹಾಗೆ, ಅಖಂಡಾನುಭವರೂಪನೂ ಪರಿಶುದ್ಧನೂ ಆದ ಆತ್ಮನಿಗೆ ಬಂಧ ಮೋಕ್ಷಗಳಿಲ್ಲ (೨೬). ಪ್ರತ್ಯಗಾತ್ಮನಾದ ನಿನ್ನನ್ನು ಬೇರೊಬ್ಬನೆಂದು ತಿಳಿದು, ದೇಹಾದಿಗಳನ್ನು ಆತ್ಮನೆಂದು ತಿಳಿದು, ಆತ್ಮನನ್ನು ಹೊರಗಡೆ ಎಲ್ಲಿಯೋ ಹುಡುಕಬೇಕೆಂದು ಜನರು ಹವಣಿಸುತ್ತಿರುವರಲ್ಲ! ಅಬ್ಬಾ!

* ಈ ಶ್ಲೋಕದಲ್ಲಿ 'ಜ್ಞಾನದಿಂದ ದಾಟುತ್ತಾರೆ, ದಾಟುವಂತೆ ಕಾಣುವುದು, ಅದೂ ಸಹ ಪ್ರತ್ಯಗಾತ್ಮನೆಂಬ ಜ್ಞಾನದಿಂದ' ಎಂಬ ಮೂರು ಅಂಶಗಳು ಉಕ್ತವಾಗಿವೆ. ಈ ಅಂಶಗಳನ್ನು ಮುಂದಿನ ಮೂರು ಶ್ಲೋಕಗಳಿಂದ ಕ್ರಮವಾಗಿ ಉಪಪಾದಿಸಲಾಗಿದೆ.

ಅಂತರ್ಭವೇಽನಂತ ಭವಂತಮೇವ
ಹ್ಯತತ್ತ್ಯಜಂತೋ ಮೃಗಯಂತಿ ಸಂತಃ ।
ಅಸಂತಮಪ್ಯಂತ್ಯಹಿಮಂತರೇಣ
ಸಂತಂ ಗುಣಂ ತಂ ಕಿಮು ಯಂತಿ ಸಂತಃ ॥ ೨೮

ಅಥಾಪಿ ತೇ ದೇವ ಪದಾಂಬುಜದ್ವಯ-
ಪ್ರಸಾದಲೇಶಾನುಗೃಹೀತ ಏವ ಹಿ ।
ಜಾನಾತಿ ತತ್ತ್ವಂ ಭಗವನ್ ಮಹಿಮ್ನೋ
ನ ಚಾನ್ಯ ಏಕೋಽಪಿ ಚಿರಂ ವಿಚಿನ್ವನ್ ॥ ೨೯

ತದಸ್ತು ಮೇ ನಾಥ ಸ ಭೂರಿಭಾಗೋ
ಭವೇಽತ್ರ ವಾನ್ಯತ್ರ ತು ವಾ ತಿರಶ್ಚಾಮ್ ।
ಯೇನಾಹಮೇಕೋಽಪಿ ಭವಜ್ಜನಾನಾಂ
ಭೂತ್ವಾ ನಿಷೇವೇ ತವ ಪಾದಪಲ್ಲವಮ್ ॥ ೩೦

---

ಏನಿದು ಅಜ್ಞಾನಿಗಳ ಬುದ್ಧಿವಂತಿಕೆ ! * (೨೭). ಹೇ ಅನಂತ, ವಿವೇಕಿಗಳಾದರೋ ಈ ದೇಹದಲ್ಲಿಯೇ ಚೇತನವಲ್ಲದ ಭಾಗವನ್ನು ಅಲ್ಲಗಳೆದು ಚೇತನನಾದ ನಿನ್ನನ್ನು ಅನ್ವೇಷಿಸುತ್ತಾರೆ. ಸಮೀಪದಲ್ಲಿ ಹಾವು ಇಲ್ಲದಿದ್ದರೂ (ರಜ್ಜುಸರ್ಪಸ್ಥಳದಲ್ಲಿ) ಇದು ಹಾವಲ್ಲವೆಂಬ ನಿಷೇಧಬುದ್ಧಿಪೂರ್ವಕವಾಗಿಯೇ ಹಗ್ಗವನ್ನು ತಿಳಿಯುತ್ತಾರಲ್ಲವೆ ? (೨೮). ಆದರೂ, ಹೇ ದೇವ, ನಿನ್ನ ಪಾದಕಮಲಗಳ ಪ್ರಸಾದಲವದಿಂದ ಅನುಗ್ರಹವಾದರೆ ಮಾತ್ರವೇ ನಿನ್ನ ಮಹಿಮೆಯ ತತ್ತ್ವವನ್ನು ತಿಳಿಯಲು ಸಾಧ್ಯ. ಹೇ ಭಗವನ್, ನಿನ್ನ ಅನುಗ್ರಹವಿಲ್ಲದೆ ಯಾವನು ಎಷ್ಟು ಕಾಲ ಅನ್ವೇಷಿಸಿದರೂ ನಿನ್ನ ಸತ್ಯಸ್ವರೂಪವನ್ನು ತಿಳಿಯಲಾರನು (೨೯). ಆದ್ದರಿಂದ, ಹೇ ಸ್ವಾಮಿ, ನಿನ್ನ ಕೋಮಲಪಾದವನ್ನು ಸೇವಿಸುವ ಮಹಾಭಾಗ್ಯವು ನನಗೆ ದೊರಕಲಿ. ಈ ಬ್ರಹ್ಮಜನ್ಮದಲ್ಲಾಗಲಿ ಇನ್ನೊಂದು ಮೃಗಪಕ್ಷಿಗಳ ಜನ್ಮದಲ್ಲಾಗಲಿ ಸರಿಯೆ, ಹೇಗಾದರೂ ನಿನ್ನ ಭಕ್ತರಲ್ಲೊಬ್ಬನಾಗಿ ನಿನ್ನನ್ನು ಸೇವಿಸುವಂತೆ

---

* ಮನೆಯಲ್ಲಿ ಕಳೆದದ್ದನ್ನು ವನದಲ್ಲಿ ಹುಡುಕಬಾರದು—ಎಂದು ಅಭಿಪ್ರಾಯ.

ಅಹೋಽತಿಧನ್ಯಾ ವ್ರಜಗೋರಮಣ್ಯಃ
ಸ್ತನ್ಯಾಮೃತಂ ಪೀತಮತೀವ ತೇ ಮುದಾ ।
ಯಾಸಾಂ ವಿಭೋ ವತ್ಸತರಾತ್ಮಜಾತ್ಮನಾ
ಯತ್ತೃಪ್ತಯೇಽದ್ಯಾಪಿ ನ ಚಾಲಮಧ್ವರಾಃ ॥ ೩೧

ಅಹೋ ಭಾಗ್ಯಮಹೋ ಭಾಗ್ಯಂ ನಂದಗೋಪವ್ರಜೌಕಸಾಮ್ ।
ಯನ್ಮಿತ್ರಂ ಪರಮಾನಂದಂ ಪೂರ್ಣಂ ಬ್ರಹ್ಮ ಸನಾತನಮ್ ॥ ೩೨

ಏಷಾಂ ತು ಭಾಗ್ಯಮಹಿಮಾಚ್ಯುತ ತಾವದಾಸ್ತಾ-
ಮೇಕಾದಶೈವ ಹಿ ವಯಂ ಬತ ಭೂರಿಭಾಗಾಃ ।
ಏತದ್ಧೃಷೀಕಚಷಕೈರಸಕೃತ್ ಪಿಬಾಮಃ
ಶರ್ವಾದಯೋಽಂಘ್ರ್ಯುದಜಮಧ್ವಮೃತಾಸವಂ ತೇ ॥ ೩೩

ತದ್ ಭೂರಿಭಾಗ್ಯಮಿಹ ಜನ್ಮ ಕಿಮಪ್ಯಟವ್ಯಾಂ
ಯದ್ ಗೋಕುಲೇಽಪಿ ಕತಮಾಂಘ್ರಿರಜೋಽಭಿಷೇಕಮ್ ।

---

ಆಗಲಿ! (೩೦). ಆಹಾ! ವ್ರಜದ ಹಸುಗಳೂ ಗೋಪಿಯರೂ ಎಷ್ಟು ಧನ್ಯರೋ! ಕರುವಾಗಿ ಮಗುವಾಗಿ, ಅವರ ಸ್ತನ್ಯಾಮೃತವನ್ನು ಬಹು ಸಂತೋಷದಿಂದ ಕುಡಿದು ತೃಪ್ತನಾದೆಯಲ್ಲಾ! ಸಕಲ ಯಜ್ಞಯಾಗಾದಿಗಳಲ್ಲಿ ಅರ್ಪಿಸಿದ ಅಮೃತವೂ ನಿನಗೆ ತೃಪ್ತಿಯನ್ನುಂಟುಮಾಡಲು ಸಮರ್ಥವಾಗಲಿಲ್ಲ! (೩೧). ಆಹಾ! ಏನು ಭಾಗ್ಯ ಏನು ಭಾಗ್ಯವಿದು! ನಂದಗೋಪಾದಿ ವ್ರಜವಾಸಿಗಳ ಭಾಗ್ಯವನ್ನೇನು ಹೇಳಲಿ! ಪರಮಾನಂದ ಸ್ವರೂಪವೂ ಸನಾತನವೂ ಆದ ಪರಬ್ರಹ್ಮವು ಅವರ ಗೆಳೆಯನಾಗಿ ಅವತರಿಸಿದೆಯಲ್ಲ! (೩೨). ಈ ವ್ರಜವಾಸಿಗಳ ಭಾಗ್ಯಮಹಿಮೆಯು ಹಾಗಿರಲಿ. (ಅದನ್ನು ಯಾವನು ವರ್ಣಿಸಿಯಾನು?) ರುದ್ರ, ನಾನು ಮತ್ತು ಈ ಹನ್ನೊಂದು ಇಂದ್ರಿಯಾಧಿದೇವತೆಗಳು– ಈ ಹದಿಮೂರು ಜನರು ಮಹಾಭಾಗ್ಯಶಾಲಿಗಳಲ್ಲವೆ? ನಾವು ಇಂದ್ರಿಯಗಳೆಂಬ ಪಾನಪಾತ್ರೆಗಳಿಂದ ನಿನ್ನ ಪಾದಕಮಲದ ಮಕರಂದವೆಂಬ ಮಾದಕವಾದ ಅಮೃತವನ್ನು ಮತ್ತೆ ಮತ್ತೆ ಕುಡಿಯುತ್ತಿದ್ದೇವೆ! * (೩೩). ಆದ್ದರಿಂದ, ಈ ಅಡವಿಯಲ್ಲಿ—ಅದರಲ್ಲಿಯೂ

---

* ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಒಂದು ಮನಸ್ಸು– ಇವು ಏಕಾದಶೇಂದ್ರಿಯಗಳು. ಇವುಗಳ ಅಧಿದೇವತೆಗಳು ಹನ್ನೊಂದು. ಮೂಲದಲ್ಲಿ

ಯಜ್ಜೀವಿತಂ ತು ನಿಖಿಲಂ ಭಗವಾನ್ ಮುಕುಂದ-
ಸ್ತ್ವದ್ಯಾಪಿ ಯತ್ಪದರಜಃ ಶ್ರುತಿಮೃಗ್ಯಮೇವ || ೩೪

ಏಷಾಂ ಘೋಷನಿವಾಸಿನಾಮುತ ಭವಾನ್ ಕಿಂ ದೇವ ರಾತೇತಿ ನ-
ಶ್ಚೇತೋ ವಿಶ್ವ ಫಲಾತ್ ಫಲಂ ತ್ವದಪರಂ ಕುತ್ರಾಪ್ಯಯನ್ ಮುಹ್ಯತಿ
ಸದ್ವೇಷಾದಿವ ಪೂತನಾಪಿ ಸಕುಲಾ ತ್ವಾಮೇವ ದೇವಾಪಿತಾ
ಯದ್ಧಾಮಾರ್ಥಸುಹೃತ್ಪ್ರಿಯಾತ್ಮತನಯಪ್ರಾಣಾಶಯಾಸ್ತ್ವತ್ಕೃತೇ ||

---

ಈ ಗೋಕುಲದಲ್ಲಿ ಜನ್ಮವೆತ್ತುವುದು ಒಂದು ಅತಿಶಯವಾದ ಭಾಗ್ಯ. ಇಲ್ಲಿ ಯಾವನಾದರೊಬ್ಬನ ಪಾದಧೂಳಿಯಿಂದ ಅಭಿಷೇಕವಾಗುವ ಜನ್ಮವಾದರೂ ಉತ್ತಮ! ಈ ಗೋಕುಲವಾಸಿಗಳ ನಿಖಿಲಜೀವನವೇ ಭಗವಾನ್ ಮುಕುಂದ ನಿಗೋಸ್ಕರ ಮೀಸಲಾಗಿದೆ! ಮುಕುಂದನ ಪಾದಧೂಳಿಯನ್ನು ವೇದಗಳು ಇಂದಿಗೂ ಅರಸುತ್ತಲೇ ಇವೆ! (೩೪). ಸ್ವಾಮಿ, ಈ ಗೋಕುಲವಾಸಿಗಳಿಗೆ ನೀನು ಏನನ್ನು ಕೊಟ್ಟೀಯೆ? ಏನನ್ನು ಕೊಟ್ಟು ಋಣಮುಕ್ತನಾದೀಯೆ?–ಎಂದು ಎಷ್ಟು ಆಲೋಚಿಸಿದರೂ ನನ್ನ ಬುದ್ಧಿಗೆ ಹೊಳೆಯುವುದೇ ಇಲ್ಲ! ಸರ್ವಫಲಾತ್ಮಕವಾದ ನಿನ್ನ ಸ್ವರೂಪಕ್ಕಿಂತಲೂ ಹೆಚ್ಚಿನದಾದ ಇನ್ನು ಯಾವುದನ್ನು ಕೊಡಲು ಸಾಧ್ಯ? ಇಲ್ಲ, ಇಲ್ಲ! ಹೇ ದೇವ, ಸಜ್ಜನವೇಷವನ್ನು

---

'ಶರ್ವಾದಯಃ' ಎಂದಿದೆ. ಶರ್ವನು (ರುದ್ರ) ಅಹಂಕಾರದ ಅಧಿದೇವತೆ. ಆದ್ದರಿಂದ ಅಂತಃಕರಣವನ್ನು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ—ಎಂದು ವಿಂಗಡಿಸಿಕೊಳ್ಳದೆ ಗತ್ಯಂತರವಿಲ್ಲ. ''ಶರ್ವಾದಯಃ' ಎಂಬುದು ಅತದ್ಗುಣಸಂವಿಜ್ಞಾನ ಬಹುವ್ರೀಹಿ ಸಮಾಸ. ಶರ್ವನನ್ನು ಬಿಟ್ಟು ಉಳಿದ ಹನ್ನೊಂದು ಎಂದರ್ಥ. ವಯಂ= ನಾನು, ಬ್ರಹ್ಮ (ಆತ್ಮನಿ ಬಹುವಚನ). ಶರ್ವ, ಬ್ರಹ್ಮ–ಇವರಲ್ಲದೆ ಉಳಿದ ೧೧ ಅಧಿದೇವತೆಗಳೆಂದು ಅರ್ಥ. ಒಟ್ಟು ೧೩ ದೇವತೆಗಳಾಗುತ್ತಾರೆ. ಮೇಲೆ ಕಾಣಿಸಿದಂತೆ ೧೪ ಇಂದ್ರಿಯಗಳಾಗುವುದರಿಂದ ೧೪ ದೇವತೆಗಳಾಗಬೇಕು. ೧೪ನೆಯ ದೇವತೆ ಚಿತ್ತಕ್ಕೆ ಅಧಿದೇವತೆಯಾದ ಕ್ಷೇತ್ರಜ್ಞ–ಪರಬ್ರಹ್ಮ. ಕ್ಷೇತ್ರಜ್ಞನಾದ ನಿನ್ನನ್ನು ನಾವು ೧೩ ದೇವತೆಗಳು ಸೇವಿಸುತ್ತಿದ್ದೇವೆಂದು ಅಭಿಪ್ರಾಯ. 'ನಾವು ಒಂದೊಂದು ಇಂದ್ರಿಯದ ಮೂಲಕ ನಿನ್ನ ಕೀರ್ತಿ, ಸೌಂದರ್ಯಾದಿಗಳನ್ನು ಕ್ರಮವಾಗಿ ಅನುಭವಿಸಿ ಧನ್ಯರಾಗಿದ್ದೇವೆ. ಸಕಲೇಂದ್ರಿಯಗಳಿಂದಲೂ ನಿನ್ನನ್ನು ಸೇವಿಸುವ ವ್ರಜವಾಸಿಗಳು ಎಷ್ಟು ಧನ್ಯರು!' ಎಂದು ತಾತ್ಪರ್ಯ.

**ತಾವದ್ ರಾಗಾದಯಃ ಸ್ತೇನಾಸ್ತಾವತ್ ಕಾರಾಗೃಹಂ ಗೃಹಮ್ ।**
**ತಾವನ್ಮೋಹೋಽಂಘ್ರಿನಿಗಡೋ ಯಾವತ್ ಕೃಷ್ಣ ನ ತೇ ಜನಾಃ ॥**
**ಪ್ರಪಂಚಂ ನಿಷ್ಪ್ರಪಂಚೋಽಪಿ ವಿಡಂಬಯಸಿ ಭೂತಲೇ ।**
**ಪ್ರಪನ್ನಜನತಾನಂದಸಂದೋಹಂ ಪ್ರಥಿತುಂ ಪ್ರಭೋ ॥** ೩೭

**ಜಾನಂತ ಏವ ಜಾನಂತು ಕಿಂ ಬಹೂಕ್ತ್ಯಾ ನ ಮೇ ಪ್ರಭೋ ।**
**ಮನಸೋ ವಪುಷೋ ವಾಚೋ ವೈಭವಂ ತವ ಗೋಚರಃ ॥** ೩೮

**ಅನುಜಾನೀಹಿ ಮಾಂ ಕೃಷ್ಣ ಸರ್ವಂ ತ್ವಂ ವೇತ್ಸಿ ಸರ್ವದೃಕ್ ।**
**ತ್ವಮೇವ ಜಗತಾಂ ನಾಥೋ ಜಗದೇತತ್ತವಾರ್ಪಿತಮ್ ॥** ೩೯

---

ಧರಿಸಿ ಬಂದ ಪೂತನೆಗೂ ಅವಳ ಬಂಧುಗಳಾದ ಅಘಾಸುರ ಬಕಾಸುರರಿಗೂ ಸಹ ನಿನ್ನ ಸ್ವರೂಪವನ್ನು ಕರುಣಿಸಿದ್ದೀಯೆ! ಹೀಗಿರುವಾಗ ಮನೆ, ಹಣ, ಸ್ನೇಹಿತ, ಪ್ರಿಯ, ಆತ್ಮ, ಪುತ್ರ, ಪ್ರಾಣ, ಹೃದಯ—ಇವೆಲ್ಲವನ್ನೂ ನಿನಗಾಗಿ ಅರ್ಪಿಸಿಕೊಂಡಿರುವ ಗೋಪರಿಗೆ ನಿನ್ನ ಸ್ವರೂಪವನ್ನು ಕರುಣಿಸಿವರೆ ಸಾಕಾದೀತೆ! (೩೫). ಹೇ ಕೃಷ್ಣ, ಎಲ್ಲಿಯವರೆಗೆ ಜನರು ನಿನ್ನ ಭಕ್ತರಾಗಿ ನಿನ್ನವರಾಗುವುದಿಲ್ಲವೊ ಅಲ್ಲಿಯವರೆಗೆ ರಾಗಾದಿಗಳು ಕಳ್ಳರಾಗಿರುತ್ತವೆ. ಗೃಹವು ಕಾರಾಗೃಹವಾಗುತ್ತದೆ. ಮೋಹವು ಕಾಲಿನ ಸಂಕೋಲೆಯಾಗಿರುತ್ತದೆ* (೩೬). ಹೇ ಪ್ರಭು, ಪ್ರಪಂಚದ ಸೋಂಕಿಲ್ಲದ ನೀನು ಈ ಭೂತಳದಲ್ಲಿ ಪ್ರಪಂಚವನ್ನನುಕರಿಸಿ ನಟಿಸುತ್ತಿದ್ದೀಯೆ. ಇದೆಲ್ಲವೂ ಭಕ್ತಜನರ ಆನಂದ ಸಂದೋಹವನ್ನು ವರ್ಧಿಸುವುದಕ್ಕಾಗಿ (೩೭). ನಿನ್ನ ವೈಭವವನ್ನು ಬಲ್ಲೆವೆಂಬವರು ಹಾಗೆ ತಿಳಿದುಕೊಂಡಿದ್ದರೆ ತಿಳಿದುಕೊಂಡಿರಲಿ! ಹೆಚ್ಚು ಹೇಳಿ ಫಲವೇನು? ಹೇ ಸ್ವಾಮಿ, ನನಗಂತೂ ನಿನ್ನ ವೈಭವವು ಮನೋವಾಕ್ಕಾಯಗಳಿಗೂ ಗೋಚರವಾಗಿಲ್ಲ! (೩೮). ಶ್ರೀಕೃಷ್ಣ, ಇನ್ನು ನನಗೆ ಅನುಜ್ಞೆಯನ್ನು ಕೊಡು. ಸರ್ವಜ್ಞನಾದ ನಿನಗೆ ನಮ್ಮ ಜ್ಞಾನಬಲಾದಿಗಳು ಎಷ್ಟು ಪರಿಮಿತವೆಂಬುದು ಗೊತ್ತೇ ಇದೆ! ನೀನೇ ಜಗನ್ನಾಥ. ಈ ಜಗತ್ತು—

---

* ಭಕ್ತರೂ ರಾಗಾದಿಗಳನ್ನು ನೀಗಿ ಯತಿಗಳಿಗೆ ಸಮಾನರಾಗಿರುತ್ತಾರೆ. ಭಕ್ತಿಯೊಂದು ಅಧಿಕ. ಆದ್ದರಿಂದ ಯತಿಗಳಿಗೆ ದೊರಕುವ ಫಲವೇ ಭಕ್ತರಿಗೂ ದೊರಕುವುದಾದರೆ ಅತ್ಯಲ್ಪವಾಯಿತು!—ಎಂದು ಅಭಿಪ್ರಾಯ.

ಶ್ರೀಕೃಷ್ಣ ವೃಷ್ಣಿಕುಲಪುಷ್ಕರಜೋಷದಾಯಿನ್
ಕ್ಷ್ಮಾನಿರ್ಜರದ್ವಿಜಪಶೂದಧಿವೃದ್ಧಿಕಾರಿನ್ ।
ಉದ್ಧರ್ಮಶಾರ್ವರಹರ ಕ್ಷಿತಿರಾಕ್ಷಸಧ್ರು-
ಗಾಕಲ್ಪಮಾರ್ಕಮರ್ಹನ್ ಭಗವನ್ ನಮಸ್ತೇ ॥ ೪೦

ಶ್ರೀಶುಕ ಉವಾಚ—
ಇತ್ಯಭಿಷ್ಟೂಯ ಭೂಮಾನಂ ತ್ರಿಃ ಪರಿಕ್ರಮ್ಯ ಪಾದಯೋಃ ।
ನತ್ವಾಭೀಷ್ಟಂ ಜಗದ್ಧಾತಾ ಸ್ವಧಾಮ ಪ್ರತ್ಯಪದ್ಯತ ॥ ೪೧

ತತೋಽನುಜ್ಞಾಪ್ಯ ಭಗವಾನ್ ಸ್ವಭುವಂ ಪ್ರಾಗವಸ್ಥಿತಾನ್ ।
ವತ್ಸಾನ್ ಪುಲಿನಮಾನಿನ್ಯೇ ಯಥಾಪೂರ್ವಸಖಂ ಸ್ವಕಮ್ ॥ ೪೨

ಏಕಸ್ಮಿನ್ನಪಿ ಯಾತೇಽಬ್ದೇ ಪ್ರಾಣೇಶಂ ಚಾಂತರಾಽಽತ್ಮನಃ ।
ಕೃಷ್ಣಮಾಯಾಹತಾ ರಾಜನ್ ಕ್ಷಣಾರ್ಧಂ ಮೇನಿರೇಽರ್ಭಕಾಃ ॥ ೪೩

---

ಈ ದೇಹ ನಿನಗೆ ಅರ್ಪಿತವಾಗಿದೆ (೩೯). ಹೇ ಶ್ರೀಕೃಷ್ಣ, ವೃಷ್ಣಿಕುಲವೆಂಬ ತಾವರೆಗೆ ಆನಂದದಾಯಕ (ಸೂರ್ಯೋಪಮ), ಭೂಮಿ ಅಮರ ದ್ವಿಜ ಪಶುಗಳೆಂಬ ಸಮುದ್ರದ ವೃದ್ಧಿಕಾರಿ (ಚಂದ್ರೋಪಮ), ಪಾಖಂಡಧರ್ಮ ವೆಂಬ ಕತ್ತಲೆಯ ನಾಶಕಾರಿ (ಸೂರ್ಯಚಂದ್ರೋಪಮ), ಸೂರ್ಯಪರ್ಯಂತ ವಾಗಿ ಸಕಲರಿಗೂ ಪರಮಪೂಜ್ಯ, ಹೇ ಭಗವನ್, ಕಲ್ಪಪರ್ಯಂತವಾಗಿಯೂ ನಿನಗೆ ನಮೋ ನಮಃ!" (೪೦). ಶುಕಮಹರ್ಷಿಗಳು ಹೇಳಿದರು: ಪರೀಕ್ಷಿತರಾಜ, ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನು ಈ ಪ್ರಕಾರವಾಗಿ ಆ ಮಹಾಮಹಿಮನನ್ನು ಸ್ತುತಿಸಿ, ಆತನ ಪಾದಗಳಿಗೆ ಮೂರು ಸಲ ಪ್ರದಕ್ಷಿಣೆ ಮಾಡಿ ನಮಿಸಿ, ಲೋಕವಂದಿತವಾದ ತನ್ನ ಸತ್ಯಲೋಕಕ್ಕೆ ತೆರಳಿದನು. (೪೧). ಭಗವಂತನು ತನ್ನ ಪುತ್ರನಾದ ಬ್ರಹ್ಮನಿಗೆ ತಿಳಿಸಿ ಅದರಂತೆ ತನ್ನ ಗೆಳೆಯರಾದ ಗೋಪಬಾಲಕರು ಮೊದಲು ತನ್ನ ಪುಲಿನಕ್ಕೆ ಬರುವಂತೆ ಮಾಡಿ, ತಾನು ಕರುಗಳನ್ನು ಅಲ್ಲಿಗೆ ಕರೆತಂದನು (೪೨). ಮಹಾರಾಜ, ತಮ್ಮ ಪ್ರಾಣಮಿತ್ರನಾದ ಕೃಷ್ಣನಿಲ್ಲದೆ ಒಂದು ವರ್ಷವು ಕಳೆದುಹೋಗಿದ್ದರೂ, ಆತನಮಾಯೆಗೆ ಒಳಗಾದ ಗೋಪಾಲಬಾಲಕರಿಗೆ ಕ್ಷಣಾರ್ಧವು ಕಳೆದಂತೆ ತೋರಿತು! (೪೩).

ಕಿಂ ಕಿಂ ನ ವಿಸ್ಮರಂತೀಹ ಮಾಯಾಮೋಹಿತಚೇತಸಃ ।
ಯನ್ಮೋಹಿತಂ ಜಗತ್ ಸರ್ವಮಭೀಕ್ಷ್ಣಂ ವಿಸ್ಮೃತಾತ್ಮಕಮ್ ॥

ಊಚುಶ್ಚ ಸುಹೃದಃ ಕೃಷ್ಣಂ ಸ್ವಾಗತಂ ತೇಽತಿರಂಹಸಾ ।
ನೈಕೋಽಪ್ಯಭೋಜಿ ಕವಲ ಏಹೀತಃ ಸಾಧು ಭುಜ್ಯತಾಮ್ ॥ ೪೫

ತತೋ ಹಸನ್ ಹೃಷೀಕೇಶೋಽಭ್ಯವಹೃತ್ಯ ಸಹಾರ್ಭಕೈಃ ।
ದರ್ಶಯಂಶ್ಚರ್ಮಾಜಗರಂ ನ್ಯವರ್ತತ ವನಾದ್ ವ್ರಜಮ್ ॥ ೪೬

ಬರ್ಹಪ್ರಸೂನವನಧಾತುವಿಚಿತ್ರಿತಾಂಗಃ
ಪ್ರೋದ್ದಾಮವೇಣುದಲಶೃಂಗರವೋತ್ಸವಾಢ್ಯಃ ।
ವತ್ಸಾನ್ ಗೃಣನ್ನನುಗಗೀತಪವಿತ್ರಕೀರ್ತಿ-
ರ್ಗೋಪೀದೃಗುತ್ಸವದೃಶಿಃ ಪ್ರವಿವೇಶ ಗೋಷ್ಠಮ್ ॥

---

ಮಾಯೆಯಿಂದ ಮೋಹಿತಮನಸ್ಕರಾದ ಜನರು ಯಾವ ಯಾವುದನ್ನು ಮರೆಯುವುದಿಲ್ಲ! ಮಾಯಾಮೋಹಿತವಾದ ಸಕಲಜಗತ್ತೂ ತನ್ನ ಆತ್ಮವನ್ನೇ ಮತ್ತೆ ಮತ್ತೆ ಮರೆತುಬಿಡುವುದಲ್ಲ! (೪೪). ಆ ಗೆಳೆಯರು ಕೃಷ್ಣನನ್ನು ನೋಡಿ "ಮಿತ್ರ, ಎಷ್ಟು ಬೇಗನೆ ಬಂದುಬಿಟ್ಟೆ! ನೀನಿಲ್ಲದೆ ಒಂದು ತುತ್ತನ್ನೂ ನಾವು ತಿನ್ನಲಿಲ್ಲ. ಒಳ್ಳೆಯದಾಯಿತು. ಇತ್ತ ಬಾ, ತಿನ್ನೋಣ" ಎಂದರು (೪೫). ಆಗ ಹೃಷೀಕೇಶನು ನಗುತ್ತ ಗೋಪಬಾಲಕರೊಡನೆ ಸೇರಿ ಊಟಮಾಡಿದನು. ಆಮೇಲೆ ಅಜಗರಸರ್ಪದ ಚರ್ಮವನ್ನು ತೋರಿಸುತ್ತ ವನದಿಂದ ವ್ರಜಕ್ಕೆ ಹಿಂದಿರುಗಿದನು (೪೬). ಶ್ರೀಕೃಷ್ಣನು ನವಿಲುಗರಿಯನ್ನು ಮುಡಿದು ಹೂವಿನಮಾಲೆಯನ್ನು ಧರಿಸಿ ಗೈರಿಕಧಾತುಗಳ ಬಣ್ಣದಿಂದ ದೇಹವನ್ನಲಂಕರಿಸಿಕೊಂಡು, ಬಿದಿರುಕೋಲನ್ನು ಕಂಕುಳಲ್ಲಿ ಅವಚಿ, ಕೊಳಲುಕೊಂಬುಗಳ ಮಧುರನಾದದಿಂದ ಗೋವಿನ ಕರುಗಳನ್ನು ಒಲಿಸಿ ಕರೆಯುತ್ತ, ಹಿಂಬದಿಯಲ್ಲಿ ಗೋಪಬಾಲಕರು ಅವನ ಮಹಿಮೆಯನ್ನು ಹಾಡುತ್ತ ಬರುತ್ತಿರಲು, ಗೋಪಿಯರ ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತ ಗೋಕುಲವನ್ನು ಪ್ರವೇಶಿಸಿದನು! (೪೭).

**ಅದ್ಯಾನೇನ ಮಹಾವ್ಯಾಲೋ ಯಶೋದಾನಂದಸೂನುನಾ ।**
**ಹತೋಽವಿತಾ ವಯಂ ಚಾಸ್ಮಾದಿತಿ ಬಾಲಾ ವ್ರಜೇ ಜಗುಃ ॥ ೪೮**

ರಾಜೋವಾಚ—

**ಬ್ರಹ್ಮನ್ ಪರೋದ್ಭವೇ ಕೃಷ್ಣೇ ಇಯಾನ್ ಪ್ರೇಮಾ ಕಥಂ ಭವೇತ್।**
**ಯೋಽಭೂತಪೂರ್ವಸ್ತೋಕೇಷು ಸ್ವೋದ್ಭವೇಷ್ವಪಿ ಕಥ್ಯತಾಮ್ ॥**

ಶ್ರೀಶುಕ ಉವಾಚ—

**ಸರ್ವೇಷಾಮಪಿ ಭೂತಾನಾಂ ನೃಪ ಸ್ವಾತ್ಮೈವ ವಲ್ಲಭಃ ।**
**ಇತರೇಽಪತ್ಯವಿತ್ತಾದ್ಯಾಸ್ತದ್ವಲ್ಲಭತಯೈವ ಹಿ ॥ ೫೦**

**ತದ್ ರಾಜೇಂದ್ರ ಯಥಾ ಸ್ನೇಹಃ ಸ್ವಸ್ವಕಾತ್ಮನಿ ದೇಹಿನಾಮ್ ।**
**ನ ತಥಾ ಮಮತಾಲಂಬಿಪುತ್ರವಿತ್ತಗೃಹಾದಿಷು ॥ ೫೧**

**ದೇಹಾತ್ಮವಾದಿನಾಂ ಪುಂಸಾಮಪಿ ರಾಜನ್ಯಸತ್ತಮ ।**
**ಯಥಾ ದೇಹಃ ಪ್ರಿಯತಮಸ್ತಥಾ ನ ಹ್ಯನು ಯೇ ಚ ತಮ್ ॥ ೫೨**

---

ಗೋಪಬಾಲಕರು ಗೋಕುಲಕ್ಕೆ ಬಂದು "ಈ ದಿನ ಯಶೋದೆಯ ಪ್ರಿಯಪುತ್ರನಾದ ಕೃಷ್ಣನು ಒಂದು ಭಾರಿ ಹೆಬ್ಬಾವನ್ನು ಕೊಂದು ಹಾಕಿ ನಮ್ಮನ್ನು ಕಾಪಾಡಿದನು!" ಎಂದು ಎಲ್ಲೆಲ್ಲಿಯೂ ಹೇಳತೊಡಗಿದರು (೪೮). ಪರೀಕ್ಷಿತರಾಜನು ಕೇಳಿದನು: "ಬ್ರಹ್ಮರ್ಷಿಗಳೆ, ವ್ರಜವಾಸಿಗಳಿಗೆ ತಮ್ಮ ಮಕ್ಕಳಲ್ಲಿಯೂ ಇಲ್ಲದಷ್ಟು ಪ್ರೇಮವು ಶ್ರೀಕೃಷ್ಣನಲ್ಲಿ ಅಭೂತಪೂರ್ವವಾಗಿ ಹೆಚ್ಚಿತು–ಎಂದು ಹೇಳಿದಿರಿ. ಅದು ಹೇಗಾಯಿತು? ಹೇಳೋಣವಾಗಲಿ" (೪೯). ಶುಕಮಹರ್ಷಿಗಳು ಹೇಳಿದರು: ಮಹಾರಾಜ, ಸಕಲ ಪ್ರಾಣಿಗಳಿಗೂ ತಮ್ಮ ಆತ್ಮವೇ ಅತ್ಯಂತಪ್ರಿಯವಾದದ್ದು. ಉಳಿದ ಮಕ್ಕಳು, ಹಣ–ಮುಂತಾದುವು ಆತ್ಮಕ್ಕೆ ಪ್ರಿಯವಾದ್ದರಿಂದ ಪ್ರಿಯವಾಗಿ ತೋರುತ್ತವೆ (೫೦). ಆದ್ದರಿಂದ ನಾನೆಂಬ ಅಹಂಕಾರಕ್ಕೆ ಆಸ್ಪದವಾದ ದೇಹದಲ್ಲಿ ಜನರಿಗೆ ಎಷ್ಟು ಪ್ರೀತಿ ಇರುವುದೋ, ಅಷ್ಟು ಪ್ರೀತಿಯು ನನ್ನದೆಂಬ ಮಮತೆಗೆ ಆಸ್ಪದವಾದ ಪುತ್ರವಿತ್ತ ಗೃಹಾದಿಗಳಲ್ಲಿ ಇರುವುದಿಲ್ಲ (೫೧). ರಾಜೇಂದ್ರ, ದೇಹವೇ ಆತ್ಮವೆಂದು ಹೇಳುವ ಪುರುಷರಿಗೂ ಸಹ ತಮ್ಮ ದೇಹವು ಪ್ರಿಯತಮವಾದಷ್ಟು ದೇಹಸಂಬಂಧಿಗಳಾದ ಪುತ್ರಾದಿಗಳು ಪ್ರಿಯ

ದೇಹೋಽಪಿ ಮಮತಾಭಾಕ್ ಚೇತ್ತರ್ಹ್ಯಸೌ ನಾತ್ಮವತ್ ಪ್ರಿಯಃ ।
ಯಜ್ಜೀರ್ಯತ್ಯಪಿ ದೇಹೇಽಸ್ಮಿನ್ ಜೀವಿತಾಶಾ ಬಲೀಯಸೀ ॥ ೫೩

ತಸ್ಮಾತ್ ಪ್ರಿಯತಮಃ ಸ್ವಾತ್ಮಾ ಸರ್ವೇಷಾಮಪಿ ದೇಹಿನಾಮ್ ।
ತದರ್ಥಮೇವ ಸಕಲಂ ಜಗದೇತಚ್ಚರಾಚರಮ್ ॥ ೫೪

ಕೃಷ್ಣಮೇನಮವೇಹಿ ತ್ವಮಾತ್ಮಾನಮಖಿಲಾತ್ಮನಾಮ್ ।
ಜಗದ್ಧಿತಾಯ ಸೋಽಪ್ಯತ್ರ ದೇಹೀವಾಭಾತಿ ಮಾಯಯಾ ॥ ೫೫

ವಸ್ತುತೋ ಜಾನತಾಮತ್ರ ಕೃಷ್ಣಂ ಸ್ಥಾಸ್ನು ಚರಿಷ್ಣು ಚ ।
ಭಗವದ್ರೂಪಮಖಿಲಂ ನಾನ್ಯದ್ ವಸ್ತ್ವಿಹ ಕಿಂಚನ ॥ ೫೬

ಸರ್ವೇಷಾಮಪಿ ವಸ್ತೂನಾಂ ಭಾವಾರ್ಥೋ ಭವತಿ ಸ್ಥಿತಃ ।
ತಸ್ಯಾಪಿ ಭಗವಾನ್ ಕೃಷ್ಣಃ ಕಿಮತದ್ವಸ್ತು ರೂಪ್ಯತಾಮ್ ॥ ೫೭

---

ರಾಗಿರುವುದಿಲ್ಲ (೫೨). ದೇಹದಲ್ಲಿಯೂ ಪ್ರೀತಿ ಇರುತ್ತದೆಯೆಂದು ಹೇಳುವುದಾದರೆ, ಆತ್ಮದಲ್ಲಿರುವಷ್ಟು ಪ್ರೀತಿ ಇರುವುದಿಲ್ಲವೆಂದೇ ಹೇಳಬೇಕು. ಏಕೆಂದರೆ, ದೇಹವು ಕ್ಷೀಣಿಸಿ ನಾಶವಾಗುವುದೆಂದು ನಿಶ್ಚಯವಿದ್ದರೂ ಜನರಿಗೆ ಜೀವಿಸಬೇಕೆಂಬ ಆಸೆ ಪ್ರಬಲವಾಗಿ ಉಳಿದುಕೊಂಡಿರುತ್ತದೆ* (೫೩). ಆದ್ದರಿಂದ ಸಕಲ ದೇಹಿಗಳಿಗೂ ತಮ್ಮ ಆತ್ಮವೇ ಅತ್ಯಂತ ಪ್ರಿಯವಾದುದು. ಚರಾಚರಾತ್ಮಕವಾದ ಸಕಲ ಜಗತ್ತೂ ಆತ್ಮಾರ್ಥವಾಗಿಯೇ ಪ್ರಿಯವೆನಿಸುತ್ತದೆ (೫೪). ನಿಖಿಲ ಜೀವಾತ್ಮರಿಗೂ ಕೃಷ್ಣನೇ ಆತ್ಮನೆಂದು ನೀನು ತಿಳಿದುಕೊ. ಜಗತ್ತಿನ ಹಿತಕ್ಕಾಗಿ ಆತನು ಮಾಯೆಯಿಂದ ದೇಹಧಾರಿಯಂತೆ ಕಾಣಿಸಿಕೊಳ್ಳುತ್ತಾನೆ (೫೫). ವಸ್ತುತಃ ಕೃಷ್ಣನು ಸಕಲ ಜಗತ್ತಿಗೂ ಕಾರಣನೆಂದು ತಿಳಿದವರಿಗೆ ಚರಾಚರಾತ್ಮಕವಾದ ಸಕಲವೂ ಭಗವತ್ ಸ್ವರೂಪವಾಗಿಯೇ ಗೋಚರಿಸುತ್ತದೆ. ಭಗವತ್ ಸ್ವರೂಪವಲ್ಲದ ಇನ್ನೊಂದು ವಸ್ತುವೇ ಇರುವುದಿಲ್ಲ (೫೬). ಸಕಲ ವಸ್ತುಗಳ ಪರಮಾರ್ಥವು ಪರಿಣಾಮಕಾರಣದಲ್ಲಿ ನಿಂತಿರುತ್ತದೆ. ಅಂತಹ ಪರಿಣಾಮಕಾರಣಕ್ಕೂ

---

* 'ಈ ದೇಹವು ಹೋದರೂ ಚಿಂತೆ ಇಲ್ಲ. ನಾನು ಉಳಿದುಕೊಳ್ಳಬೇಕು' ಎಂಬ ಆಸೆ ಇರುವುದರಿಂದ ದೇಹಾತಿರಿಕ್ತವಾದ ಆತ್ಮದಲ್ಲಿಯೇ ಪ್ರೀತಿ ಇದೆಯೆಂದು ಹೇಳಬೇಕಾಗುತ್ತದೆ.

ಸಮಾಶ್ರಿತಾ ಯೇ ಪದಪಲ್ಲವಪ್ಲವಂ
ಮಹತ್ಪದಂ ಪುಣ್ಯಯಶೋಮುರಾರೇಃ ||
ಭವಾಂಬುಧಿರ್ವತ್ಸಪದಂ ಪರಂ ಪದಂ
ಪದಂ ಪದಂ ಯದ್ ವಿಪದಾಂ ನ ತೇಷಾಮ್ || ೫೮

ಏತತ್ತೇ ಸರ್ವಮಾಖ್ಯಾತಂ ಯತ್ ಪೃಷ್ಟೋಽಹಮಿಹ ತ್ವಯಾ |
ಯತ್ ಕೌಮಾರೇ ಹರಿಕೃತಂ ಪೌಗಂಡೇ ಪರಿಕೀರ್ತಿತಮ್ || ೫೯

ಏತತ್ ಸುಹೃದ್ಭಿಶ್ಚರಿತಂ ಮುರಾರೇ-
ರಘಾರ್ದನಂ ಶಾದ್ವಲಜೇಮನಂ ಚ |
ವ್ಯಕ್ತೇತರದ್ ರೂಪಮಜೋರ್ವಭಿಷ್ಟವಂ
ಶೃಣ್ವನ್ ಗೃಣನ್ನೇತಿ ನರೋಽಖಿಲಾರ್ಥಾನ್ || ೬೦

---

ಕಾರಣನಾದವನು ಭಗವಾನ್ ಶ್ರೀಕೃಷ್ಣನು. ಹೀಗಿರುವಾಗ ಶ್ರೀಕೃಷ್ಣನಲ್ಲದ ಇನ್ನೊಂದು ವಸ್ತು ಯಾವುದಿದ್ದೀತು? (೫೭). ಪುಣ್ಯಕೀರ್ತಿಯಾದ ಮುರಾರಿಯ ಕೋಮಲಪಾದವೆಂಬ ದೋಣಿಯು ಮಹಾತ್ಮರಿಗೆ ಆಶ್ರಯವಾದದ್ದು. ಅದನ್ನು ಆಶ್ರಯಿಸಿದವರಿಗೆ ಸಂಸಾರಸಮುದ್ರವು ಕರುವಿನ ಹೆಜ್ಜೆಯಷ್ಟು ಅಗಲ! ಪರಮಪದವಾದ ವೈಕುಂಠವು ಅವರ ಸ್ಥಾನ. ಅವರಿಗೆ ವಿಪತ್ತುಗಳ ಪ್ರಾಪ್ತಿಯೆಂಬುದಿಲ್ಲ (೫೮). ಪರೀಕ್ಷಿತರಾಜ, 'ಕೌಮಾರವಯಸ್ಸಿನಲ್ಲಿ ಶ್ರೀಹರಿಯು ನಡೆಸಿದ ಲೀಲೆಯನ್ನು ಪೌಗಂಡವಯಸ್ಸಿನಲ್ಲಿ ಗೋಪಬಾಲರು ಹೇಳಿದರು' ಎಂಬ ವಿಷಯವಾಗಿ ನನ್ನನ್ನು ಕೇಳಿದೆಯಲ್ಲ, ಅದೆಲ್ಲವನ್ನೂ ನಿನಗೆ ಹೇಳಿದ್ದೇನೆ (೫೯). ಈ ರೀತಿಯಲ್ಲಿ ಗೆಳೆಯರೊಡನೆ ಸೇರಿ ಶಿಕ್ಯಗಳನ್ನು ಅಪಹರಿಸಿ ಎಸೆಯುವುದು ಮೊದಲಾದ ಶ್ರೀಕೃಷ್ಣನ ಲೀಲೆ, ಅಘಾಸುರಸಂಹಾರ, ಹುಲ್ಲುಗಾವಲಿನಲ್ಲಿ ಭೋಜನ, ಚಿದ್ವಿಲಾಸದರ್ಶನ, ಬ್ರಹ್ಮಕೃತವಾದ ಮಹಾಸ್ತುತಿ—ಇವುಗಳನ್ನು ಯಾವನು ಕೇಳುವನೋ ಹಾಡುವನೋ ಆತನು ಸಕಲಾಭೀಷ್ಟಗಳನ್ನೂ ಪಡೆಯುತ್ತಾನೆ (೬೦).

*

ಏವಂ ವಿಹಾರೈಃ ಕೌಮಾರೈಃ ಕೌಮಾರಂ ಜಹತುರ್ವ್ರಜೇ ।
ನಿಲಾಯನೈಃ ಸೇತುಬಂಧೈರ್ಮರ್ಕಟೋತ್ಪ್ಲವನಾದಿಭಿಃ ॥ ೬೧

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತುರ್ದಶಾಧ್ಯಾಯಃ

---

## ಪಂಚದಶಾಧ್ಯಾಯಃ

ಶ್ರೀಶುಕ ಉವಾಚ—

ತತಶ್ಚ ಪೌಗಂಡವಯಃ ಶ್ರಿತೌ ವ್ರಜೇ
ಬಭೂವತುಸ್ತೌ ಪಶುಪಾಲಸಂಮತೌ ।
ಗಾಶ್ಚಾರಯಂತೌ ಸಖಿಭಿಃ ಸಮಂ ಪದೈ-
ರ್ವೃಂದಾವನಂ ಪುಣ್ಯಮತೀವ ಚಕ್ರತುಃ ॥ ೧

---

ಈ ಪ್ರಕಾರವಾಗಿ ಶ್ರೀಕೃಷ್ಣನೂ ಬಲರಾಮನೂ ಕಣ್ಣುಮುಚ್ಚಾಲೆ, ಒಡ್ಡು ಕಟ್ಟುವುದು, ಮರಕೋತಿಯಾಟ—ಮುಂತಾದ ಕೌಮಾರಲೀಲೆಗಳಿಂದ ತಮ್ಮ ಬಾಲ್ಯವನ್ನು ಗೋಕುಲದಲ್ಲಿ ಕಳೆದರು (೬೧).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹದಿನಾಲ್ಕನೆಯ ಅಧ್ಯಾಯ

---

## ಅಧ್ಯಾಯ ೧೫

ಬಲರಾಮನಿಂದ ಧೇನುಕಾಸುರವಧೆ. ವಿಷಮಿಶ್ರವಾದ ನೀರನ್ನು ಕುಡಿದ ಗೋವುಗಳನ್ನೂ ಗೋಪಾಲರನ್ನೂ ಶ್ರೀಕೃಷ್ಣನು ಬದುಕಿಸುವುದು

ಶುಕಮಹರ್ಷಿಗಳು ಹೇಳಿದರು: ಆಮೇಲೆ ಶ್ರೀಕೃಷ್ಣಬಲರಾಮರು ಪೌಗಂಡವಯಸ್ಸಿನವರಾಗಿ (ವಯೋಬಲಗಳ ದೃಷ್ಟಿಯಿಂದ) ಸರಿಯಾದ ಪಶುಪಾಲಕರೆಂದು ವ್ರಜದಲ್ಲಿ ಸಂಮಾನ್ಯರಾದರು. ಅವರಿಬ್ಬರೂ ಗೆಳೆಯರೊಡನೆ ಸೇರಿ ಹಸುಗಳನ್ನು ಮೇಯಿಸುತ್ತ ತಮ್ಮ ಪಾದಸ್ಪರ್ಶದಿಂದ

ತನ್ಮಾಧವೋ ವೇಣುಮುದೀರಯನ್ ವೃತೋ
 ಗೋಪೈರ್ಗೃಣದ್ಭಿಃ ಸ್ವಯಶೋ ಬಲಾನ್ವಿತಃ ।
ಪಶೂನ್ ಪುರಸ್ಕೃತ್ಯ ಪಶವ್ಯಮಾವಿಶದ್
 ವಿಹರ್ತುಕಾಮಃ ಕುಸುಮಾಕರಂ ವನಮ್ ॥ ೨

ತನ್ಮಂಜುಘೋಷಾಲಿಮೃಗದ್ವಿಜಾಕುಲಂ
 ಮಹನ್ಮನಃಪ್ರಖ್ಯಪಯಃಸರಸ್ವತಾ ।
ವಾತೇನ ಜುಷ್ಟಂ ಶತಪತ್ರಗಂಧಿನಾ
 ನಿರೀಕ್ಷ್ಯ ರಂತುಂ ಭಗವಾನ್ ಮನೋ ದಧೇ ॥ ೩

ಸ ತತ್ರ ತತ್ರಾರುಣಪಲ್ಲವಶ್ರಿಯಾ
 ಫಲಪ್ರಸೂನೋರುಭರೇಣ ಪಾದಯೋಃ ।
ಸ್ಪೃಶಚ್ಛಿಖಾನ್ ವೀಕ್ಷ್ಯ ವನಸ್ಪತೀನ್ ಮುದಾ
 ಸ್ಮಯನ್ನಿವಾಹಾಗ್ರಜಮಾದಿಪೂರುಷಃ ॥ ೪

---

ವೃಂದಾವನವನ್ನು ಪವಿತ್ರಗೊಳಿಸುತ್ತಿದ್ದರು (೧). ಒಂದು ಸಲ ಮಾಧವನು ಕೊಳಲೂದುತ್ತ ಹಸುಗಳ ಹಿಂದೆ ಬಲರಾಮನೊಡನೆ ಹೊರಟನು.- ಗೋಪರು ಅವನ ಕೀರ್ತಿಯನ್ನು ಹಾಡುತ್ತ ಜೊತೆಯಲ್ಲಿ ಬಂದರು. ಶ್ರೀಕೃಷ್ಣನು ವಿಹರಿಸುವ ಇಚ್ಛೆಯಿಂದ ಅವರೆಲ್ಲರೊಡನೆ, ಹಸುಗಳಿಗೆ ಮೇಯಲು ಹಿತಕರ ವಾಗಿಯೂ ಕುಸುಮಗಳಿಗೆ ಆಸರೆಯಾಗಿಯೂ ಇದ್ದ ಒಂದು ವನವನ್ನು ಪ್ರವೇಶಿಸಿದನು (೨). ಮನೋಹರವಾಗಿ ಧ್ವನಿಗೈಯುವ ಭ್ರಮರ ಮೃಗ ಪಕ್ಷಿಗಳಿಂದ ವನವು ನಿಬಿಡವಾಗಿತ್ತು. ಸಜ್ಜನರ ಮನಸ್ಸಿನಂತೆ ತಿಳಿಯಾದ ನೀರಿಂದ ತುಂಬಿದ ಕೊಳದ ಮೇಲೆ ಬೀಸುವ ತಂಗಾಳಿ ತಾವರೆಯ ಕಂಪನ್ನು ಹೊತ್ತು ತೀಡುತ್ತಿತ್ತು. ಆ ವನವನ್ನು ನೋಡಿ ಭಗವಂತನಿಗೆ ವಿಹರಿಸಲು ಮನಸ್ಸಾಯಿತು (೩). ಅಲ್ಲಿ ಮರಗಳು ಕೆಂದಳಿರಿನ ಸಮೃದ್ಧಿಯಿಂದ ರಂಜಿಸುತ್ತಿದ್ದವು. ಹೂಹಣ್ಣುಗಳ ಭಾರದಿಂದ ಕೊಂಬೆಗಳು ಮರದ ಬುಡ ದವರೆಗೆ ಬಾಗಿದ್ದವು. ಅವುಗಳನ್ನು ನೋಡಿ ಆದಿಪುರುಷನು ಸಂತೋಷದಿಂದ ಮುಗುಳ್ನಗೆ ಬೀರುತ್ತ ತನ್ನ ಅಣ್ಣನನ್ನು ನೋಡಿ ಹೀಗೆಂದನು * (೪) :

---

* ಅನುಬಂಧವನ್ನು ನೋಡಿ.

ಶ್ರೀಭಗವಾನುವಾಚ—

ಅಹೋ ಅಮೀ ದೇವವರಾಮರಾರ್ಚಿತಂ
ಪಾದಾಂಬುಜಂ ತೇ ಸುಮನಃಫಲಾರ್ಹಣಮ್ ।
ನಮಂತ್ಯುಪಾದಾಯ ಶಿಖಾಭಿರಾತ್ಮನ-
ಸ್ತಮೋಽಪಹಂತ್ಯೈ ತರುಜನ್ಮ ಯತ್ಕೃತಮ್ ॥ ೫

ಏತೇಽಲಿನಸ್ತವ ಯಶೋಽಖಿಲಲೋಕತೀರ್ಥಂ
ಗಾಯಂತ ಆದಿಪುರುಷಾನುಪದಂ ಭಜಂತೇ ।
ಪ್ರಾಯೋ ಅಮೀ ಮುನಿಗಣಾ ಭವದೀಯಮುಖ್ಯಾ
ಗೂಢಂ ವನೇಽಪಿ ನ ಜಹತ್ಯನಘಾತ್ಮದೈವಮ್ ॥ ೬

ನೃತ್ಯಂತ್ಯಮೀ ಶಿಖಿನ ಈಡ್ಯ ಮುದಾ ಹರಿಣ್ಯಃ
ಕುರ್ವಂತಿ ಗೋಪ್ಯ ಇವ ತೇ ಪ್ರಿಯಮೀಕ್ಷಣೇನ ।
ಸೂಕ್ತೈಶ್ಚ ಕೋಕಿಲಗಣಾ ಗೃಹಮಾಗತಾಯ
ಧನ್ಯಾ ವನೌಕಸ ಇಯಾನ್ ಹಿ ಸತಾಂ ನಿಸರ್ಗಃ ॥ ೭

---

"ಹೇ ದೇವೋತ್ತಮ, ಈ ಮರಗಳು ಕೊಂಬೆಗಳಿಂದ ಹೂಹಣ್ಣುಗಳೆಂಬ ಪೂಜಾದ್ರವ್ಯವನ್ನು ತೆಗೆದುಕೊಂಡು ದೇವಪೂಜಿತವಾದ ನಿನ್ನ ಪಾದಕಮಲಕ್ಕೆ ವಂದಿಸುತ್ತಿವೆ! ಆಹಾ! ತಮಗೆ ವೃಕ್ಷಜನ್ಮವು ಬಂದಿತೆಂದು ಅದಕ್ಕೆ ಕಾರಣವಾದ ಅಜ್ಞಾನವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ವಂದಿಸುತ್ತಿವೆ! (೫). ಆದಿಪುರುಷ, ಈ ದುಂಬಿಗಳು ನಿಖಿಲರಿಗೂ ತೀರ್ಥರೂಪವಾದ ನಿನ್ನ ಕೀರ್ತಿಯನ್ನು ಹಾಡುತ್ತ ನಿನ್ನ ಹಿಂದೆಯೇ ಸುಳಿಯುತ್ತಿವೆ! ಪ್ರಾಯಶಃ ಈ ದುಂಬಿಗಳು ನಿನ್ನ ಭಕ್ತಾಗ್ರಗಣ್ಯರಾದ ಮುನಿಗಳೇ ಇರಬೇಕು! ಹೇ ಅನಘ, ಈ ವನದಲ್ಲಿ ನೀನು ಗೂಢವೇಷದಿಂದ ಅಡಗಿದ್ದರೂ ಆತ್ಮದೈವವಾದ ನಿನ್ನನ್ನು ಬಿಡಲಾರರು! (೬). ಪೂಜ್ಯನೆ, ಈ ನವಿಲುಗಳು ನಿನ್ನನ್ನು ನೋಡಿ ಸಂತೋಷದಿಂದ ಕುಣಿಯುತ್ತಿವೆ. ಹೆಣ್ಣುಜಿಂಕೆಗಳು ಗೋಪಿಯರಂತೆ ವೀಕ್ಷಿಸಿ ನಿನಗೆ ಆನಂದವನ್ನುಂಟುಮಾಡುತ್ತಿವೆ. ಮನೆಗೆ ಬಂದ ಮಹಾಪುರುಷನನ್ನು ಕೋಗಿಲೆಗಳು ಇಂಚರದಿಂದ ಸ್ವಾಗತಿಸುತ್ತಿವೆ. ಈ ವನಚಾರಿಗಳು ಧನ್ಯರು! ಸಜ್ಜನರ ಸ್ವಭಾವ ಇದೇ ಅಲ್ಲವೆ? (೭).

ಧನ್ಯೇಯಮದ್ಯ ಧರಣೀ ತೃಣವೀರುಧಸ್ತ್ವತ್-
ಪಾದಸ್ಪೃಶೋ ದ್ರುಮಲತಾಃ ಕರಜಾಭಿಮೃಷ್ಟಾಃ ।
ನದ್ಯೋಽದ್ರಯಃ ಖಗಮೃಗಾಃ ಸದಯಾವಲೋಕೈ-
ರ್ಗೋಪ್ಯೋಽಂತರೇಣ ಭುಜಯೋರಪಿ ಯತ್ಸ್ಪೃಹಾ ಶ್ರೀಃ ॥

ಶ್ರೀಶುಕ ಉವಾಚ—

ಏವಂ ವೃಂದಾವನಂ ಶ್ರೀಮತ್ ಕೃಷ್ಣಃ ಪ್ರೀತಮನಾಃ ಪಶೂನ್ ।
ರೇಮೇ ಸಂಚಾರಯನ್ನದ್ರೇಃ ಸರಿದ್ರೋಧಸ್ಸು ಸಾನುಗಃ ॥ ೯

ಕ್ವಚಿದ್ ಗಾಯತಿ ಗಾಯತ್ಸು ಮದಾಂಧಾಲಿಷ್ವನುವ್ರತೈಃ ।
ಉಪಗೀಯಮಾನಚರಿತಃ ಸ್ರಗ್ವೀ ಸಂಕರ್ಷಣಾನ್ವಿತಃ ॥ ೧೦

ಕ್ವಚಿಚ್ಚ ಕಲಹಂಸಾನಾಮನು ಕೂಜತಿ ಕೂಜಿತಮ್ ।
ಅಭಿನೃತ್ಯತಿ ನೃತ್ಯಂತಂ ಬರ್ಹಿಣಂ ಹಾಸಯನ್ ಕ್ವಚಿತ್ ॥ ೧೧

ಮೇಘಗಂಭೀರಯಾ ವಾಚಾ ನಾಮಭಿರ್ದೂರಗಾನ್ ಪಶೂನ್ ।
ಕ್ವಚಿದಾಹ್ವಯತಿ ಪ್ರೀತ್ಯಾ ಗೋಗೋಪಾಲಮನೋಜ್ಞಯಾ ॥ ೧೨

---

ಈಗ ನಿನ್ನ ಪಾದಸ್ಪರ್ಶದಿಂದ ಭೂಮಿ ಹುಲ್ಲುಪೊದೆಗಳು ಧನ್ಯವಾದವು. ಉಗುರಿನ ಸ್ಪರ್ಶದಿಂದ ಮರಬಳ್ಳಿಗಳು ಧನ್ಯವಾದವು. ಕೃಪಾವಲೋಕನದಿಂದ ಹೊಳೆ ಬೆಟ್ಟಗಳೂ ಖಗಮೃಗಗಳೂ ಧನ್ಯವಾದವು. ಲಕ್ಷ್ಮೀದೇವಿಯೂ ಬಯಸುವ ನಿನ್ನ ವಕ್ಷಸ್ಥಳದಿಂದ ಗೋಪಿಯರು ಧನ್ಯರಾದರು !" (೮). ಈ ರೀತಿಯಲ್ಲಿ ಶ್ರೀಕೃಷ್ಣನು ಮನೋಹರವಾದ ವೃಂದಾವನವನ್ನು ಕಂಡು ಸಂಪ್ರೀತನಾಗಿ, ಬೆಟ್ಟದ ಬಳಿ ಹೊಳೆಯ ದಡಗಳಲ್ಲಿ ಗೋವುಗಳನ್ನು ಮೇಯಿಸುತ್ತ ಗೋಪರೊಡನೆ ವಿಹರಿಸಿದನು (೯). ಪುಷ್ಪಮಾಲೆಯನ್ನು ಧರಿಸಿ ಬಲರಾಮನೊಡನೆ ತಿರುಗುತ್ತಿದ್ದನು. ಜೊತೆಯಲ್ಲಿದ್ದ ಗೋಪಾಲರು ಪದಗಳನ್ನು ಕಟ್ಟಿ ಆತನ ಚರಿತೆಯನ್ನು ಹಾಡುತ್ತಿದ್ದರು. ಮದಿಸಿದ ದುಂಬಿಗಳು ಗುಂಯ್ ಎಂದು ಹಾಡಿದಾಗ ಶ್ರೀಕೃಷ್ಣನೂ ಅವುಗಳನ್ನು ಅನುಕರಿಸಿ 'ಗುಂಯ್' ಎಂದು ಹಾಡುವನು ! (೧೦). ರಾಜಹಂಸಗಳು ಕೂಗಿದಾಗ ಈತನೂ ಅವುಗಳಂತೆ ಕೂಗುವನು ! ನವಿಲು ಕುಣಿಯುವುದನ್ನು ಕಂಡಾಗ ಅದರಂತೆ ತಾನೂ ಕುಣಿದು ಜೊತೆಗಾರರನ್ನು ನಗಿಸುವನು ! (೧೧). ಗೋವುಗಳು ದೂರ ಹೋದಾಗ ಮೇಘಗಂಭೀರವಾದ ಧ್ವನಿಯಿಂದ ಅವುಗಳ ಹೆಸರನ್ನು ಹಿಡಿದು

**ಚಕೋರಕ್ರೌಂಚಚಕ್ರಾಹ್ವಭಾರದ್ವಾಜಾಂಶ್ಚ ಬರ್ಹಿಣಃ ।**
**ಅನುರೌತಿ ಸ್ಮ ಸತ್ತ್ವಾನಾಂ ಭೀತವದ್ ವ್ಯಾಘ್ರಸಿಂಹಯೋಃ ॥ ೧೩**

**ಕ್ವಚಿತ್ ಕ್ರೀಡಾಪರಿಶ್ರಾಂತಂ ಗೋಪೋತ್ಸಂಗೋಪಬರ್ಹಣಮ್ ।**
**ಸ್ವಯಂ ವಿಶ್ರಮಯತ್ಯಾರ್ಯಂ ಪಾದಸಂವಾಹನಾದಿಭಿಃ ॥ ೧೪**

**ನೃತ್ಯತೋ ಗಾಯತಃ ಕ್ವಾಪಿ ವಲ್ಗತೋ ಯುಧ್ಯತೋರ್ಮಿಥಃ ।**
**ಗೃಹೀತಹಸ್ತೌ ಗೋಪಾಲಾನ್ ಹಸಂತೌ ಪ್ರಶಶಂಸತುಃ ॥ ೧೫**

**ಕ್ವಚಿತ್ ಪಲ್ಲವತಲ್ಪೇಷು ನಿಯುದ್ಧಶ್ರಮಕರ್ಶಿತಃ ।**
**ವೃಕ್ಷಮೂಲಾಶ್ರಯಃ ಶೇತೇ ಗೋಪೋತ್ಸಂಗೋಪಬರ್ಹಣಃ ॥ ೧೬**

**ಪಾದಸಂವಾಹನಂ ಚಕ್ರುಃ ಕೇಚಿತ್ತಸ್ಯ ಮಹಾತ್ಮನಃ ।**
**ಅಪರೇ ಹತಪಾಪ್ಮಾನೋ ವ್ಯಜನೈಃ ಸಮವೀಜಯನ್ ॥ ೧೭**

---

ಕರೆಯುವನು! ಆ ಧ್ವನಿಯನ್ನು ಕೇಳಿ ಗೋವುಗಳಿಗೂ ಗೋಪಾಲರಿಗೂ ಆನಂದವಾಗುವುದು (೧೨). ಚಕೋರ, ಕ್ರೌಂಚ, ಚಕ್ರವಾಕ, ಭಾರದ್ವಾಜ, ಮಯೂರ—ಮುಂತಾದ ಪಕ್ಷಿಗಳು ಕೂಗಿದಾಗ ಅವುಗಳಂತೆ ತಾನೂ ಕೂಗುವನು! ಹುಲಿ ಸಿಂಹಗಳನ್ನು ಕಂಡು ಕಾಡುಪ್ರಾಣಿಗಳು ಹೆದರಿ ಓಡಿದಾಗ ತಾನು ಹೆದರಿದಂತೆ ಓಡುವನು! (೧೩). ಅಣ್ಣನಾದ ಬಲರಾಮನು ಕ್ರೀಡಿಸಿ ಬಳಲಿದಾಗ ಗೋಪಾಲರ ತೊಡೆಯಮೇಲೆ ತಲೆಯಿಟ್ಟು ವಿಶ್ರಮಿಸುತ್ತಿದ್ದನು. ಆಗ ಶ್ರೀಕೃಷ್ಣನು ಅವನ ಪಾದಗಳನ್ನು ನೀವಿ ಉಪಚರಿಸಿ ಅವನ ಆಯಾಸವನ್ನು ಪರಿಹರಿಸುತ್ತಿದ್ದನು (೧೪). ಗೋಪಬಾಲಕರು ಕುಣಿಯುತ್ತ ಹಾಡುತ್ತ ನೆಗೆಯುತ್ತ ಒಬ್ಬರಿಗೊಬ್ಬರು ಹೋರಾಡುತ್ತ ಇರುವಾಗ, ರಾಮ ಕೃಷ್ಣರು ಅವರ ಕೈಗಳನ್ನು ಹಿಡಿದು ಹೊಗಳಿ ಹುರಿದುಂಬಿಸುತ್ತಿದ್ದರು (೧೫). ಒಮ್ಮೊಮ್ಮೆ ಶ್ರೀಕೃಷ್ಣನು ಕುಸ್ತಿಯನ್ನಾಡಿ ದಣಿದು ಮರದ ಬುಡದಲ್ಲಿ ಚಿಗುರೆಲೆಯ ಹಾಸಿಗೆಯ ಮೇಲೆ ಗೋಪರ ತೊಡೆಯಲ್ಲಿ ತಲೆಯಿಟ್ಟು ಮಲಗುತ್ತಿದ್ದನು (೧೬). ಆಗ ಕೆಲವರು ಆ ಮಹಾತ್ಮನ ಕಾಲುಗಳನ್ನು ನೀವುತ್ತಿದ್ದರು. ಪುಣ್ಯಾತ್ಮರಾದ ಕೆಲವರು ಬೀಸಣಿಗೆಗಳಿಂದ ಗಾಳಿಹಾಕು

ಅನ್ಯೇ ತದನುರೂಪಾಣಿ ಮನೋಜ್ಞಾನಿ ಮಹಾತ್ಮನಃ ।
ಗಾಯಂತಿ ಸ್ಮ ಮಹಾರಾಜ ಸ್ನೇಹಕ್ಲಿನ್ನಧಿಯಃ ಶನೈಃ ॥ ೧೮

ಏವಂ ನಿಗೂಢಾತ್ಮಗತಿಃ ಸ್ವಮಾಯಯಾ
ಗೋಪಾತ್ಮಜತ್ವಂ ಚರಿತೈರ್ವಿಡಂಬಯನ್ ।
ರೇಮೇ ರಮಾಲಾಲಿತಪಾದಪಲ್ಲವೋ
ಗ್ರಾಮ್ಯೈಃ ಸಮಂ ಗ್ರಾಮ್ಯವದೀಶಚೇಷ್ಟಿತಃ ॥ ೧೯

ಶ್ರೀದಾಮಾ ನಾಮ ಗೋಪಾಲೋ ರಾಮಕೇಶವಯೋಃ ಸಖಾ ।
ಸುಬಲಸ್ತೋಕಕೃಷ್ಣಾದ್ಯಾ ಗೋಪಾಃ ಪ್ರೇಮ್ಣೇದಮಬ್ರುವನ್ ॥ ೨೦

ರಾಮ ರಾಮ ಮಹಾಬಾಹೋ ಕೃಷ್ಣ ದುಷ್ಟನಿಬರ್ಹಣ ।
ಇತೋಽವಿದೂರೇ ಸುಮಹದ್ ವನಂ ತಾಲಾಲಿಸಂಕುಲಮ್ ॥ ೨೧

ಫಲಾನಿ ತತ್ರ ಭೂರೀಣಿ ಪತಂತಿ ಪತಿತಾನಿ ಚ ।
ಸಂತಿ ಕಿಂತ್ವವರುದ್ಧಾನಿ ಧೇನುಕೇನ ದುರಾತ್ಮನಾ ॥ ೨೨

---

ತ್ತಿದ್ದರು (೧೭). ಪರೀಕ್ಷಿತಮಹಾರಾಜ, ಇನ್ನು ಕೆಲವು ಗೋಪಬಾಲಕರು ಸ್ನೇಹಾರ್ದ್ರಹೃದಯರಾಗಿ ಆ ಮಹಾತ್ಮನಿಗೆ ಹಿತಕರವಾದ ಮನೋಹರಗೀತ ಗಳನ್ನು ಮೆಲ್ಲಗೆ ಹಾಡುತ್ತಿದ್ದರು (೧೮). ಈ ಪ್ರಕಾರವಾಗಿ ಲಕ್ಷ್ಮೀಲಾಲಿತ ಪಾದಪಲ್ಲವನಾದ ಸ್ವಾಮಿಯು ತನ್ನ ಮಾಯೆಯಿಂದ ಆತ್ಮಸ್ವರೂಪವನ್ನು ಮರೆಮಾಡಿ, ನಡೆನುಡಿಗಳಿಂದ ಗೋಪತನಯನಾಗಿ ನಟಿಸುತ್ತ, ಪಾಮರ ರೊಡನೆ ಪಾಮರನಂತೆ ಕ್ರೀಡಿಸಿದನು. ಈಶ್ವರಮಹಿಮೆಯನ್ನು ಒಮ್ಮೊಮ್ಮೆ ಪ್ರಕಟಿಸಿದನು (೧೯). ಬಲರಾಮಕೇಶವರಿಗೆ ಶ್ರೀದಾಮ, ಸುಬಲ, ಸ್ತೋಕಕೃಷ್ಣ–ಮುಂತಾದ ಗೋಪಾಲರು ಆಪ್ತಮಿತ್ರರಾಗಿದ್ದರು. ಅವರು ಪ್ರೀತಿಯಿಂದ ಹೀಗೆಂದರು (೨೦). "ರಾಮ–ಮಹಾಬಾಹು, ಕೃಷ್ಣ– ಶತ್ರುನಾಶನ, ಇಲ್ಲಿಗೆ ಸ್ವಲ್ಪದೂರದಲ್ಲಿ ತಾಳೆಮರಗಳಿಂದ ತುಂಬಿದ ಒಂದು ದೊಡ್ಡ ವನವಿದೆ (೨೧). ಅಲ್ಲಿ ಬೇಕಾದಷ್ಟು ಹಣ್ಣುಗಳು ಉದುರಿವೆ; ಉದುರುತ್ತಲೇ ಇವೆ. ಆದರೆ ಧೇನುಕನೆಂಬ ದುರಾತ್ಮನೊಬ್ಬನು ಅವುಗಳನ್ನು

**ಸೋಽತಿವೀರ್ಯೋಽಸುರೋ ರಾಮ ಹೇ ಕೃಷ್ಣ ಖರರೂಪಧೃಕ್ ।**
**ಆತ್ಮತುಲ್ಯಬಲೈರನ್ಯೈರ್ಜ್ಞಾತಿಭಿರ್ಬಹುಭಿರ್ವೃತಃ ॥ ೨೩**

**ತಸ್ಮಾತ್ ಕೃತನರಾಹಾರಾದ್ ಭೀತೈರ್ನೃಭಿರಮಿತ್ರಹನ್ ।**
**ನ ಸೇವ್ಯತೇ ಪಶುಗಣೈಃ ಪಕ್ಷಿಸಂಘೈರ್ವಿವರ್ಜಿತಮ್ ॥ ೨೪**

**ವಿದ್ಯಂತೇಽಭುಕ್ತಪೂರ್ವಾಣಿ ಫಲಾನಿ ಸುರಭೀಣಿ ಚ ।**
**ಏಷ ವೈ ಸುರಭಿರ್ಗಂಧೋ ವಿಷೂಚೀನೋಽವಗೃಹ್ಯತೇ ॥ ೨೫**

**ಪ್ರಯಚ್ಛ ತಾನಿ ನಃ ಕೃಷ್ಣ ಗಂಧಲೋಭಿತಚೇತಸಾಮ್ ।**
**ವಾಂಛಾಸ್ತಿ ಮಹತೀ ರಾಮ ಗಮ್ಯತಾಂ ಯದಿ ರೋಚತೇ ॥ ೨೬**

**ಏವಂ ಸುಹೃದ್ವಚಃ ಶ್ರುತ್ವಾ ಸುಹೃತ್ಪ್ರಿಯಚಿಕೀರ್ಷಯಾ ।**
**ಪ್ರಹಸ್ಯ ಜಗ್ಮತುರ್ಗೋಪೈರ್ವೃತೌ ತಾಲವನಂ ಪ್ರಭೂ ॥ ೨೭**

**ಬಲಃ ಪ್ರವಿಶ್ಯ ಬಾಹುಭ್ಯಾಂ ಬಾಲಾನ್ ಸಂಪರಿಕಂಪಯನ್ ।**
**ಫಲಾನಿ ಪಾತಯಾಮಾಸ ಮತಂಗಜ ಇವೌಜಸಾ ॥ ೨೮**

---

ಮುಟ್ಟಲೀಸುವುದಿಲ್ಲ (೨೨). ಆ ಅಸುರನು ಬಹಳ ಬಲಶಾಲಿ. ಎಲೈ ರಾಮ, ಕೃಷ್ಣ, ಆತನು ಕತ್ತೆಯವೇಷವನ್ನು ಧರಿಸಿ ತನ್ನಂತೆಯೇ ಬಲಾಢ್ಯರಾದ ಬಹುಮಂದಿ ಬಂಧುಗಳಿಂದ ಪರಿವೃತನಾಗಿದ್ದಾನೆ (೨೩). ನರಭಕ್ಷಕನಾದ ಧೇನುಕಾಸುರನಿಗೆ ಹೆದರಿ ಮನುಷ್ಯರಾಗಲಿ ಪಶುಗಳಾಗಲಿ ಆ ವನಕ್ಕೆ ಹೋಗುವುದಿಲ್ಲ. ಹಕ್ಕಿಗಳೂ ಸುಳಿಯುವುದಿಲ್ಲ (೨೪). ಅಲ್ಲಿ ದೊರೆಯುವ ಸುಗಂಧಿಯಾದ ಹಣ್ಣುಗಳನ್ನು ಇದುವರೆಗೆ ನಾವು ತಿಂದಿಲ್ಲ! ಇದೋ ನೋಡು! ಆ ಹಣ್ಣುಗಳ ವಾಸನೆಯೇ ಇಲ್ಲಿ ಹರಡಿದೆ! (೨೫). ಆ ವಾಸನೆಯು ನಮ್ಮ ಮನಸ್ಸನ್ನು ಸೆಳೆಯುತ್ತಿದೆ. ಕೃಷ್ಣ, ಆ ಹಣ್ಣುಗಳನ್ನು ನಮಗೆ ದೊರಕಿಸಿಕೊಡು! ರಾಮ, ನಮಗೆ ಬಹಳ ಆಸೆಯಾಗಿದೆ. , ನಿನಗೆ ಸರಿಯೆನಿಸಿದರೆ ಅಲ್ಲಿಗೆ ಹೋಗೋಣ" (೨೬). ಮಿತ್ರರ ಈ ನುಡಿಯನ್ನು ಕೇಳಿ ಬಲರಾಮಕೃಷ್ಣರು ನಕ್ಕರು. ಅನಂತರ ಅವರಿಗೆ ಸಂತೋಷವಾಗಲೆಂದು ಆ ಬಲಾಢ್ಯರು ಗೋಪಬಾಲರೊಡನೆ ತಾಳೆಯವನಕ್ಕೆ ಹೋದರು (೨೭). ಬಲರಾಮನು ಒಳಗೆ ನುಗ್ಗಿ ತೋಳುಗಳಿಂದ ತಾಳೆಯಮರಗಳನ್ನು ಹಿಡಿದು, ಆನೆಯು ಅಲ್ಲಾಡಿಸುವಂತೆ ಮರಗಳನ್ನು ಅಲ್ಲಾಡಿಸಿ ಹಣ್ಣುಗಳನ್ನು

ಫಲಾನಾಂ ಪತತಾಂ ಶಬ್ದಂ ನಿಶಮ್ಯಾಸುರರಾಸಭಃ ।
ಅಭ್ಯಧಾವತ್ ಕ್ಷಿತಿತಲಂ ಸನಗಂ ಪರಿಕಂಪಯನ್ ॥ ೨೯

ಸಮೇತ್ಯ ತರಸಾ ಪ್ರತ್ಯಗ್ ದ್ವಾಭ್ಯಾಂ ಪದ್ಭ್ಯಾಂ ಬಲಂ ಬಲೀ ।
ನಿಹತ್ಯೋರಸಿ ಕಾಶಬ್ದಂ ಮುಂಚನ್ ಪರ್ಯಸರತ್ ಖಲಃ ॥ ೩೦

ಪುನರಾಸಾದ್ಯ ಸಂರಬ್ಧ ಉಪಕ್ರೋಷ್ಟಾ ಪರಾಕ್ ಸ್ಥಿತಃ ।
ಚರಣಾವಪರೌ ರಾಜನ್ ಬಲಾಯ ಪ್ರಾಕ್ಷಿಪದ್ ರುಷಾ ॥ ೩೧

ಸ ತಂ ಗೃಹೀತ್ವಾ ಪ್ರಪದೋರ್ಭ್ರಾಮಯಿತ್ವೈಕಪಾಣಿನಾ ।
ಚಿಕ್ಷೇಪ ತೃಣರಾಜಾಗ್ರೇ ಭ್ರಾಮಣತ್ಯಕ್ತಜೀವಿತಮ್ ॥ ೩೨

ತೇನಾಹತೋ ಮಹಾತಾಲೋ ವೇಪಮಾನೋ ಬೃಹಚ್ಛಿರಾಃ ।
ಪಾರ್ಶ್ವಸ್ಥಂ ಕಂಪಯನ್ ಭಗ್ನಃ ಸ ಚಾನ್ಯಂ ಸೋಽಪಿ ಚಾಪರಮ್ ॥

ಬಲಸ್ಯ ಲೀಲಯೋತ್ಸೃಷ್ಟಖರದೇಹಹತಾಹತಾಃ ।
ತಾಲಾಶ್ಚಕಂಪಿರೇ ಸರ್ವೇ ಮಹಾವಾತೇರಿತಾ ಇವ ॥ ೩೪

---

ಉದುರಿಸಿದನು (೨೮). ಹಣ್ಣುಗಳು ಉದುರುವ ಶಬ್ದವನ್ನು ಕೇಳಿದೊಡನೆ, ಗರ್ದಭರೂಪಧಾರಿಯಾದ ಅಸುರನು ಭೂಮಿಯನ್ನೂ ಮರಗಳನ್ನೂ ನಡುಗಿಸುತ್ತ ಅಟ್ಟಿಸಿಕೊಂಡು ಬಂದನು (೨೯). ಬಲಾಢ್ಯನಾದ ಧೇನುಕಾಸುರನು ರಭಸದಿಂದ ಓಡಿಬಂದು ಹಿಂಗಾಲುಗಳಿಂದ ಬಲರಾಮನ ಎದೆಯನ್ನೊದೆದು ಕತ್ತೆಯಂತೆ ಕಿರುಚುತ್ತ ಅವನ ಸುತ್ತಲೂ ಸುತ್ತಿದನು (೩೦). ಮಹಾರಾಜ, ಗರ್ದಭರೂಪನಾದ ಆ ಖಳನು ರುಷ್ಟನಾಗಿ ಬಲರಾಮನೆದುರಿಗೆ ಹಿಮ್ಮುಖನಾಗಿ ನಿಂತು, ಆತನನ್ನು ಕೊಲ್ಲಬೇಕೆಂದು ಹಿಂಗಾಲುಗಳಿಂದ ಮತ್ತೆ ಎದೆಯಮೇಲೆ ಒದೆದನು (೩೧). ಆಗ ಬಲರಾಮನು ಧೇನುಕಾಸುರನ ಎರಡು ಪಾದಾಗ್ರಗಳನ್ನು ಒಂದೇ ಕೈಯಿಂದ ಹಿಡಿದೆತ್ತಿ ಗಿರ್ರನೆ ತಿರುಗಿಸಿ ತಾಳೆಯ ಮರದ ತುದಿಗೆ ರಪ್ಪನೆ ಎಸೆದನು! ತಿರುಗಿಸಿದ ಭರದಿಂದಲೇ ಅಸುರನು ಸತ್ತುಹೋದನು (೩೨). ತುದಿಯಲ್ಲಿ ಬೃಹದಾಕೃತಿಯಾಗಿದ್ದ ತಾಳೆಯ ಮರಕ್ಕೆ ಅಸುರನ ದೇಹವು ಬಡಿದಾಗ ಆ ಮಹಾವೃಕ್ಷವು ಅಲ್ಲಾಡಿ ಬಳಿಯಲ್ಲಿದ್ದ ಇನ್ನೊಂದು ಮರವನ್ನಲ್ಲಾಡಿಸಿ ಮುರಿದುಹೋಯಿತು. ಆ ಇನ್ನೊಂದು ಮರವು ಮತ್ತೊಂದನ್ನೂ ಅದು ಮಗದೊಂದನ್ನೂ ಅಲ್ಲಾಡಿಸಿದವು (೩೩). ಹೀಗೆ ಬಲರಾಮನು ಲೀಲೆಯಿಂದ ಬೀಸಿದ ಗರ್ದಭದೇಹವು

ನೈತಚ್ಚಿತ್ರಂ ಭಗವತಿ ಹ್ಯನಂತೇ ಜಗದೀಶ್ವರೇ ।
ಓತಪ್ರೋತಮಿದಂ ಯಸ್ಮಿಂಸ್ತಂತುಷ್ವಂಗ ಯಥಾ ಪಟಃ ॥ ೩೫

ತತಃ ಕೃಷ್ಣಂ ಚ ರಾಮಂ ಚ ಜ್ಞಾತಯೋ ಧೇನುಕಸ್ಯ ಯೇ ।
ಕ್ರೋಷ್ಟಾರೋಽಭ್ಯದ್ರವನ್ ಸರ್ವೇ ಸಂರಬ್ಧಾ ಹತಬಾಂಧವಾಃ ॥ ೩೬

ತಾಂಸ್ತಾನಾಪತತಃ ಕೃಷ್ಣೋ ರಾಮಶ್ಚ ನೃಪ ಲೀಲಯಾ ।
ಗೃಹೀತಪಶ್ಚಾಚ್ಚರಣಾನ್ ಪ್ರಾಹಿಣೋತ್ತೃಣರಾಜಸು ॥ ೩೭

ಫಲಪ್ರಕರಸಂಕೀರ್ಣಂ ದೈತ್ಯದೇಹೈರ್ಗತಾಸುಭಿಃ ।
ರರಾಜ ಭೂಃ ಸತಾಲಾಗ್ರೈರ್ಘನೈರಿವ ನಭಸ್ತಲಮ್ ॥ ೩೮

ತಯೋಸ್ತತ್ ಸುಮಹತ್ ಕರ್ಮ ನಿಶಾಮ್ಯ ವಿಬುಧಾದಯಃ ।
ಮುಮುಚುಃ ಪುಷ್ಪವರ್ಷಾಣಿ ಚಕ್ರುರ್ವಾದ್ಯಾನಿ ತುಷ್ಟುವುಃ ॥ ೩೯

---

ಬಡಿಯಲಾಗಿ, ಆ ಒಂದು ತಾಳೆಯಮರವು ಇನ್ನೊಂದನ್ನೂ ಅದು ಮತ್ತೊಂದನ್ನೂ ಅಲ್ಲಾಡಿಸುತ್ತ ಹೋಗಲು, ಬಿರುಗಾಳಿ ಬೀಸಿದಂತಾಗಿ ಅಲ್ಲಿದ್ದ ಸಕಲ ತಾಳೆಯಮರಗಳೂ ಅಲ್ಲಾಡಿಹೋದವು! (೩೪). ಮಹಾರಾಜ, ಇದೇನೂ ಅದ್ಭುತವಲ್ಲ. ಭಗವಂತನೂ ಜಗದೀಶ್ವರನೂ ಆದ ಅನಂತನಲ್ಲಿ ಯಾವುದು ತಾನೇ ವಿಸ್ಮಯಾವಹ? ನೂಲಿನ ಎಳೆಗಳಲ್ಲಿ ವಸ್ತ್ರವು ಹರಡಿರುವಂತೆ ಆತನಲ್ಲಿ ಈ ವಿಶ್ವವು ಹಾಸುಹೊಕ್ಕುಗಳಾಗಿ ಹರಡಿದೆಯಲ್ಲವೆ? (೩೫). ಅನಂತರ ಧೇನುಕಾಸುರನ ಬಂಧುಗಳಾದ ಗರ್ದಭವೇಷದ ಅಸುರರು ತಮ್ಮ ಬಾಂಧವನು ಹತನಾದನೆಂದು ಕ್ರುದ್ಧರಾಗಿ, ಬಲರಾಮನನ್ನೂ ಕೃಷ್ಣನನ್ನೂ ಅಟ್ಟಿಸಿಕೊಂಡು ಬಂದರು (೩೬). ಹಾಗೆ ನುಗ್ಗಿಬಂದ ಪ್ರತಿಯೊಬ್ಬನ ಹಿಂಗಾಲುಗಳನ್ನೂ ಬಲರಾಮನೂ ಶ್ರೀಕೃಷ್ಣನೂ ಲೀಲೆಯಿಂದ ಹಿಡಿದೆತ್ತಿ ತಾಳೆಯಮರಗಳ ಮೇಲೆ ಬೀಸಿ ಎಸೆಯುತ್ತ ಹೋದರು! (೩೭). ತಾಳೆಯ ಹಣ್ಣುಗಳು ಉದುರಿ ಉದುರಿ ಬಿದ್ದವು. ನಿರ್ಜೀವಗಳಾದ ದೈತ್ಯದೇಹಗಳು ಮರಗಳ ಚೆಂಡೆಗಳೊಡನೆ ನೆಲದಮೇಲೆ ಎಲ್ಲೆಲ್ಲಿಯೂ ಉರುಳಾಡಿದವು. ಆಗ (ಚಿತ್ರವರ್ಣವಾದ) ವನಭೂಮಿಯು ಮೋಡಮುಸುಕಿದ ಗಗನದಂತೆ ಕಂಗೊಳಿಸಿತು (೩೮). ಅವರೀರ್ವರ ಅದ್ಭುತ ಕಾರ್ಯವನ್ನು ನೋಡಿ ದೇವಾದಿಗಳು ಹೂಮಳೆಗರೆದರು. ವಾದ್ಯಗಳನ್ನು ನುಡಿಸಿದರು. ಸ್ತೋತ್ರ

ಅಥ ತಾಲಫಲಾನ್ಯಾದನ್ ಮನುಷ್ಯಾ ಗತಸಾಧ್ವಸಾಃ ।
ತೃಣಂ ಚ ಪಶವಶ್ಚೇರುರ್ಹತಧೇನುಕಕಾನನೇ ॥ ೪೦

ಕೃಷ್ಣಃ ಕಮಲಪತ್ರಾಕ್ಷಃ ಪುಣ್ಯಶ್ರವಣಕೀರ್ತನಃ ।
ಸ್ತೂಯಮಾನೋಽನುಗೈರ್ಗೋಪೈಃ ಸಾಗ್ರಜೋ ವ್ರಜಮಾವ್ರಜತ್॥

ತಂ ಗೋರಜಶ್ಛುರಿತಕುಂತಲಬದ್ಧಬರ್ಹ-
ವನ್ಯಪ್ರಸೂನರುಚಿರೇಕ್ಷಣಚಾರುಹಾಸಮ್ ।
ವೇಣುಂ ಕ್ವಣಂತಮನುಗೈರನುಗೀತಕೀರ್ತಿಂ
ಗೋಪ್ಯೋ ದಿದೃಕ್ಷಿತದೃಶೋಽಭ್ಯಗಮನ್ ಸಮೇತಾಃ ॥

ಪೀತ್ವಾ ಮುಕುಂದಮುಖಸಾರಘಮಕ್ಷಿಭೃಂಗೈ-
ಸ್ತಾಪಂ ಜಹುರ್ವಿರಹಜಂ ವ್ರಜಯೋಷಿತೋಽಹ್ನಿ ।
ತತ್ಸತ್ಕೃತಿಂ ಸಮಧಿಗಮ್ಯ ವಿವೇಶ ಗೋಷ್ಠಂ
ಸವ್ರೀಡಹಾಸವಿನಯಂ ಯದಪಾಂಗಮೋಕ್ಷಮ್ ॥ ೪೩

---

ಮಾಡಿದರು (೩೯). ಈ ಪ್ರಕಾರವಾಗಿ ಧೇನುಕಾಸುರನು ಹತನಾಗಲು ಜನರು ನಿರ್ಭಯದಿಂದ ವನದಲ್ಲಿದ್ದ ತಾಳೆಯ ಹಣ್ಣುಗಳನ್ನು ತಿಂದರು. ದನಕರುಗಳು ಹುಲ್ಲನ್ನು ಮೇದವು (೪೦). ಯಾರ ಶ್ರವಣವೂ ಕೀರ್ತನೆಯೂ ಪುಣ್ಯಕರವೋ ಆ ಕಮಲದಳನೇತ್ರನಾದ ಶ್ರೀಕೃಷ್ಣನು ತನ್ನ ಅಣ್ಣನೊಡನೆ ವ್ರಜಕ್ಕೆ ಹಿಂದಿರುಗಿದನು. ಜೊತೆಯಲ್ಲಿದ್ದ ಗೋಪಾಲರು ಆತನನ್ನು ಸ್ತುತಿಸುತ್ತಿದ್ದರು (೪೧). ಶ್ರೀಕೃಷ್ಣನ ಗುಂಗುರುಕೂದಲಿನಮೇಲೆ ಗೋಧೂಳಿಯು ಹರಡಿತ್ತು. ಆ ಕೂದಲಲ್ಲಿ ನವಿಲುಗರಿಯನ್ನು ಸಿಕ್ಕಿಸಿಕೊಂಡು ವನ್ಯಕುಸುಮಗಳನ್ನು ಮುಡಿದಿದ್ದನು. ಸುಂದರನೇತ್ರನಾಗಿ ಮಂದಸ್ಮಿತವನ್ನು ಬೀರುತ್ತ ಕೊಳಲನ್ನೂದುತ್ತ ಗೋಪಾಲರಿಂದ ಸ್ತುತಿಸಲ್ಪಡುತ್ತ ಬರುತ್ತಿದ್ದ ಗೋವಿಂದನನ್ನು ನೋಡಲು ಗೋಪಿಯರು ಉತ್ಕಂಠೆಯಿಂದ ಕಣ್ಣರಳಿಸಿಕೊಂಡು ಬಂದರು (೪೨). ಆ ಗೋಪಿಯರು ಮುಕುಂದನ ಮುಖಪದ್ಮದ ಮಧುವನ್ನು ನೇತ್ರಗಳೆಂಬ ದುಂಬಿಗಳಿಂದ ಹೀರಿ, ಹಗಲಲ್ಲಿ ಅವನ ವಿರಹದಿಂದಾದ ತಾಪವನ್ನು ಪರಿಹರಿಸಿಕೊಂಡರು. ನಾಚಿಕೆ ನಗು ವಿನಯಗಳಿಂದ ಕೂಡಿದ ಗೋಪಿಯರ ಕಟಾಕ್ಷವೀಕ್ಷಣವೆಂಬ ಸತ್ಕಾರವನ್ನು ಪಡೆದು ಮುಕುಂದನು ವ್ರಜವನ್ನು

ತಯೋರ್ಯಶೋದಾರೋಹಿಣ್ಯೌ ಪುತ್ರಯೋಃ ಪುತ್ರವತ್ಸಲೇ ।
ಯಥಾಕಾಮಂ ಯಥಾಕಾಲಂ ವ್ಯಧತ್ತಾಂ ಪರಮಾಶಿಷಃ ॥ ೪೪

ಗತಾಧ್ವಾನಶ್ರಮೌ ತತ್ರ ಮಜ್ಜನೋನ್ಮರ್ದನಾದಿಭಿಃ ।
ನೀವೀಂ ವಸಿತ್ವಾ ರುಚಿರಾಂ ದಿವ್ಯಸ್ರಗ್ಗಂಧಮಂಡಿತೌ ॥ ೪೫

ಜನನ್ಯುಪಹೃತಂ ಪ್ರಾಶ್ಯ ಸ್ವಾದ್ವನ್ನಮುಪಲಾಲಿತೌ ।
ಸಂವಿಶ್ಯ ವರಶಯ್ಯಾಯಾಂ ಸುಖಂ ಸುಷುಪತುರ್ವ್ರಜೇ ॥ ೪೬

ಏವಂ ಸ ಭಗವಾನ್ ಕೃಷ್ಣೋ ವೃಂದಾವನಚರಃ ಕ್ವಚಿತ್ ।
ಯಯೌ ರಾಮಮೃತೇ ರಾಜನ್ ಕಾಲಿಂದೀಂ ಸಖಿಭಿರ್ವೃತಃ ॥ ೪೭

ಅಥ ಗಾವಶ್ಚ ಗೋಪಾಶ್ಚ ನಿದಾಘಾತಪಪೀಡಿತಾಃ ।
ದುಷ್ಟಂ ಜಲಂ ಪಪುಸ್ತಸ್ಯಾಸ್ತೃಷಾರ್ತಾ ವಿಷದೂಷಿತಮ್ ॥ ೪೮

ವಿಷಾಂಭಸ್ತದುಪಸ್ಪೃಶ್ಯ ದೈವೋಪಹತಚೇತಸಃ ।
ನಿಪೇತುರ್ವ್ಯಸವಃ ಸರ್ವೇ ಸಲಿಲಾಂತೇ ಕುರೂದ್ವಹ ॥ ೪೯

---

ಪ್ರವೇಶಿಸಿದನು (೪೩). ಪುತ್ರವತ್ಸಲೆಯರಾದ ಯಶೋದಾರೋಹಿಣಿಯರಿಬ್ಬರೂ ತಮ್ಮ ಮಕ್ಕಳಿಗೆ ಕಾಲಕ್ಕೆ ಸರಿಯಾಗಿ ತಮಗೆ ತೋರಿದ ಆಶೀರ್ವಾದಗಳನ್ನು ಮಾಡಿ ಹರಸಿದರು (೪೪). ಸ್ನಾನ, ಅಂಗಮರ್ದನ—ಮುಂತಾದವುಗಳಿಂದ ದಾರಿ ನಡೆದ ಆಯಾಸವನ್ನು ಪರಿಹರಿಸಿಕೊಂಡು ಉತ್ತಮವಾದ ವಸ್ತ್ರವನ್ನುಟ್ಟು ಶ್ರೀಕೃಷ್ಣನೂ ಬಲರಾಮನೂ ದಿವ್ಯಹಾರ ದಿವ್ಯಗಂಧಗಳಿಂದ ಅಲಂಕೃತರಾದರು (೪೫). ಅನಂತರ ತಾಯಂದಿರು ಬಡಿಸಿದ ಮೃಷ್ಟಾನ್ನವನ್ನು ಭುಂಜಿಸಿ ಅವರಿಂದ ಲಾಲಿತರಾಗಿ ದಿವ್ಯಶಯನದಲ್ಲಿ ಸುಖವಾಗಿ ಪವಡಿಸಿದರು (೪೬). ಪರೀಕ್ಷಿತರಾಜ, ಹೀಗೆ ವೃಂದಾವನದಲ್ಲಿ ವಿಹರಿಸುತ್ತಿದ್ದ ಭಗವಾನ್ ಶ್ರೀಕೃಷ್ಣನು ಒಂದು ಸಲ ಬಲರಾಮನನ್ನು ಬಿಟ್ಟು ಗೆಳೆಯರೊಂದಿಗೆ ಕಾಳಿಂದೀನದಿಯ ಬಳಿಗೆ ಹೋದನು (೪೭). ಬಿಸಿಲಿನ ಬೇಗೆಯಿಂದ ಬಳಲಿದ ಗೋವುಗಳಿಗೂ ಗೋಪಾಲರಿಗೂ ಬಹಳ ಬಾಯಾರಿಕೆಯಾಯಿತು. ಆಗ ಅವರು ವಿಷಮಿಶ್ರಿತವಾದ ಕಾಳಿಂದೀನದಿಯ ನೀರನ್ನು ಕುಡಿದರು (೪೮). ಆ ದುರ್ದೈವಿಗಳು ವಿಷದ ನೀರನ್ನು ಕುಡಿದೊಡನೆ

ವೀಕ್ಷ್ಯ ತಾನ್ ವೈ ತಥಾ ಭೂತಾನ್ ಕೃಷ್ಣೋ ಯೋಗೇಶ್ವರೇಶ್ವರಃ ।
ಈಕ್ಷಯಾಮೃತವರ್ಷಿಣ್ಯಾ ಸ್ವನಾಥಾನ್ ಸಮಜೀವಯತ್ ॥ ೫೦

ತೇ ಸಂಪ್ರತೀತಸ್ಮೃತಯಃ ಸಮುತ್ಥಾಯ ಜಲಾಂತಿಕಾತ್ ।
ಆಸನ್ ಸುವಿಸ್ಮಿತಾಃ ಸರ್ವೇ ವೀಕ್ಷಮಾಣಾಃ ಪರಸ್ಪರಮ್ ॥ ೫೧

ಅನ್ವಮಂಸತ ತದ್ ರಾಜನ್ ಗೋವಿಂದಾನುಗ್ರಹೇಕ್ಷಿತಮ್ ।
ಪೀತ್ವಾ ವಿಷಂ ಪರೇತಸ್ಯ ಪುನರುತ್ಥಾನಮಾತ್ಮನಃ ॥ ೫೨

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚದಶಾಧ್ಯಾಯಃ



ಎಲ್ಲರೂ ಮೃತರಾಗಿ ನೀರಿನ ಬಳಿ ಒರಗಿದರು (೪೯). ಆಗ ಯೋಗೇಶ್ವರೇಶ್ವರನಾದ ಶ್ರೀಕೃಷ್ಣನು ತನ್ನನ್ನೇ ನಂಬಿದ ಅವರೆಲ್ಲರೂ ಮೃತರಾದುದನ್ನು ಕಂಡು, ಅಮೃತಮಯವಾದ ದೃಷ್ಟಿಯಿಂದ ನೋಡಿ ಎಲ್ಲರನ್ನೂ ಬದುಕಿಸಿದನು (೫೦). ಗೋಪಾಲರಿಗೆ ತಾವು ಮೃತರಾಗಿ ಬಿದ್ದುದು ಸ್ಮರಣೆಗೆ ಬಂದಿತು. ಅವರು ಮೇಲೆದ್ದು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತ ಆಶ್ಚರ್ಯದಲ್ಲಿ ಮುಳುಗಿದರು! (೫೧). ಮಹಾರಾಜ, 'ವಿಷದ ನೀರನ್ನು ಕುಡಿದು ಸತ್ತುಹೋದ ನಾವು ಮತ್ತೆ ಬದುಕಿದ್ದು ಹೇಗೆ? ಇದು ಶ್ರೀಕೃಷ್ಣನ ಅನುಗ್ರಹಪೂರ್ಣವಾದ ನೋಟದಿಂದಲೇ ಆಯಿತು' ಎಂದು ಅವರು ಊಹಿಸಿದರು (೫೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹದಿನೈದನೆಯ ಸರ್ಗ



## ಷೋಡಶಾಧ್ಯಾಯಃ

ಶ್ರೀಶುಕ ಉವಾಚ—

**ವಿಲೋಕ್ಯ ದೂಷಿತಾಂ ಕೃಷ್ಣಾಂ ಕೃಷ್ಣಃ ಕೃಷ್ಣಾಹಿನಾ ವಿಭುಃ ।**
**ತಸ್ಯಾ ವಿಶುದ್ಧಿಮನ್ವಿಚ್ಛನ್ ಸರ್ಪಂ ತಮುದವಾಸಯತ್ ॥ ೧**

ರಾಜೋವಾಚ—

**ಕಥಮಂತರ್ಜಲೇಽಗಾಧೇ ನ್ಯಗೃಹ್ಣಾದ್ ಭಗವಾನಹಿಮ್ ।**
**ಸ ವೈ ಬಹುಯುಗಾವಾಸಂ ಯಥಾಽಽಸೀದ್ ವಿಪ್ರ ಕಥ್ಯತಾಮ್ ॥ ೨**

**ಬ್ರಹ್ಮನ್ ಭಗವತಸ್ತಸ್ಯ ಭೂಮ್ನಃ ಸ್ವಚ್ಛಂದವರ್ತಿನಃ ।**
**ಗೋಪಾಲೋದಾರಚರಿತಂ ಕಸ್ತೃಪ್ಯೇತಾಮೃತಂ ಜುಷನ್ ॥ ೩**

ಶ್ರೀಶುಕ ಉವಾಚ—

**ಕಾಲಿಂದ್ಯಾಂ ಕಾಲಿಯಸ್ಯಾಸೀದ್ಧ್ರದಃ ಕಶ್ಚಿದ್ ವಿಷಾಗ್ನಿನಾ ।**
**ಶ್ರಪ್ಯಮಾಣಪಯಾ ಯಸ್ಮಿನ್ ಪತಂತ್ಯುಪರಿಗಾಃ ಖಗಾಃ ॥ ೪**

## ಅಧ್ಯಾಯ ೧೬

ಕಾಳಿಯಸರ್ಪದ ದಮನ. ಕಾಳಿಯನು ಮಡುವನ್ನು ತ್ಯಜಿಸಿ ಹೋಗುವುದು

ಶುಕಮಹರ್ಷಿಗಳು ಹೇಳಿದರು: ಸ್ವಾಮಿಯಾದ ಶ್ರೀಕೃಷ್ಣನಿಗೆ ಕಾಳಿಂದೀನದಿಯು ಒಂದು ಕೃಷ್ಣಸರ್ಪದಿಂದ ದೂಷಿತವಾಗಿದೆಯೆಂಬುದು ತಿಳಿಯಿತು. ನದಿಯನ್ನು ಸ್ವಚ್ಛಗೊಳಿಸಬೇಕೆಂಬ ಅಭಿಲಾಷೆಯಿಂದ ಆತನು ಕೃಷ್ಣಸರ್ಪವನ್ನು ಅಲ್ಲಿಂದ ಓಡಿಸಿದನು (೧). ಆಗ ಪರೀಕ್ಷಿತನು "ಮಹರ್ಷಿಗಳೆ, ಅಗಾಧವಾದ ನೀರಿನ ನಡುವೆ ಇದ್ದ ಸರ್ಪವನ್ನು ಭಗವಂತನು ದಂಡಿಸಿದ್ದು ಹೇಗೆ? ಆ ಸರ್ಪವಾದರೂ ಬಹುವರ್ಷಗಳಿಂದ ಅಲ್ಲಿ ನೆಲೆಸಿದ್ದ ಬಗೆಯೇನು? ಹೇಳೋಣವಾಗಲಿ (೨). ಭೂಮನೂ ಸ್ವತಂತ್ರನೂ ಆದ ಭಗವಂತನು ಗೋಪಾಲನಾಗಿ ನಡೆಸಿದ ಅದ್ಭುತಚರಿತೆ ಅಮೃತವೇ ಸರಿ. ಅಮೃತವನ್ನು ಎಷ್ಟು ಕುಡಿದರೂ ಯಾರಿಗೆ ತೃಪ್ತಿಯಾದೀತು?" ಎಂದನು (೩). ಶುಕಮಹರ್ಷಿಗಳು ಹೇಳಿದರು: ಪರೀಕ್ಷಿತಮಹಾರಾಜ, ಕಾಳಿಂದೀನದಿಯಲ್ಲಿ

ವಿಪ್ರುಷ್ಮತಾ ವಿಷೋದೋರ್ಮಿಮಾರುತೇನಾಭಿಮರ್ಶಿತಾಃ ।
ಮ್ರಿಯಂತೇ ತೀರಗಾ ಯಸ್ಯ ಪ್ರಾಣಿನಃ ಸ್ಥಿರಜಂಗಮಾಃ ॥ ೫

ತಂ ಚಂಡವೇಗವಿಷವೀರ್ಯಮವೇಕ್ಷ್ಯ ತೇನ
ದುಷ್ಟಾಂ ನದೀಂ ಚ ಖಲಸಂಯಮನಾವತಾರಃ ।
ಕೃಷ್ಣಃ ಕದಂಬಮಧಿರುಹ್ಯ ತತೋಽತಿತುಂಗ-
ಮಾಸ್ಫೋಟ್ಯ ಗಾಢರಶನೋ ನ್ಯಪತದ್ ವಿಷೋದೇ ॥

ಸರ್ಪಹ್ರದಃ ಪುರುಷಸಾರನಿಪಾತವೇಗ-
ಸಂಕ್ಷೋಭಿತೋರಗವಿಷೋಚ್ಛ್ವಸಿತಾಂಬುರಾಶಿಃ ।
ಪರ್ಯಕ್ಸ್ಲುತೋ ವಿಷಕಷಾಯವಿಭೀಷಣೋರ್ಮಿ-
ರ್ಧಾವನ್ ಧನುಃಶತಮನಂತಬಲಸ್ಯ ಕಿಂ ತತ್ ॥ ೭

ಕಾಳಿಯನೆಂಬ ಆ ಕೃಷ್ಣಸರ್ಪವು ವಾಸವಾಗಿದ್ದ ಒಂದು ಮಡು ಇದ್ದಿತು. ಸರ್ಪದ ವಿಷಾಗ್ನಿಯಿಂದ ನೀರು ಕುದಿಯುತ್ತಿತ್ತು. ಅದರ ಮೇಲೆ ಹಕ್ಕಿಗಳು ಹಾರಿದರೆ ವಿಷಾಗ್ನಿಯ ಬೇಗೆಯಿಂದ ಅವು ಮಡುವಿಗೆ ಬೀಳುತ್ತಿದ್ದವು! (೪). ವಿಷದ ಅಲೆಗಳಮೇಲೆ ಬೀಸುವ ಗಾಳಿಯು ತುಂತುರುಹನಿಗಳನ್ನು ಎರಚಿದಾಗ, ದಡದಲ್ಲಿದ್ದ ಪ್ರಾಣಿಗಳೂ ಗಿಡಮರಗಳೂ ಸತ್ತುಹೋಗುತ್ತಿದ್ದವು! (೫). ಕಾಳಿಯನು ಪ್ರಚಂಡವಾದ ತೀವ್ರವಿಷವುಳ್ಳವನೆಂಬುದನ್ನೂ ಆತನಿಂದ ನದಿಯು ಕಲುಷಿತವಾಗಿರುವುದನ್ನೂ ಭಗವಂತನು ಮನಗಂಡನು. ಖಳರನ್ನು ನಿಗ್ರಹಿಸುವುದಕ್ಕಾಗಿಯಲ್ಲವೆ ಅವನು ಅವತರಿಸಿದ್ದು? ಒಡನೆಯೇ ಶ್ರೀಕೃಷ್ಣನು ಎತ್ತರವಾದ ಒಂದು ಈಚಲುಮರವನ್ನು* ಹತ್ತಿದನು. ಅನಂತರ ಸೊಂಟದ ಪಟ್ಟಿಯನ್ನು ಬಿಗಿದುಕಟ್ಟಿ ಭುಜವನ್ನು ಚಪ್ಪರಿಸಿ ನದಿಯ ವಿಷಜಲದಲ್ಲಿ ಧುಮುಕಿದನು! (೬). ಆ ಪುರುಷೋತ್ತಮನು ಧುಮುಕಿದ ರಭಸಕ್ಕೆ ಸರ್ಪದ ಮಡು ಕಲಕಿ ಕ್ಷೋಭೆಗೊಂಡಿತು. ಅಲ್ಲಿದ್ದ ಸರ್ಪಗಳು ರೇಗಿ ವಿಷ

* ಈಚಲುಮರಕ್ಕೆ ಶ್ರೀಕೃಷ್ಣನ ಪಾದಸ್ಪರ್ಶದ ಭಾಗ್ಯವಿದ್ದುದರಿಂದ ಅದನ್ನು ನಾಶಗೊಳಿಸಲು ಕಾಳಿಯ ವಿಷಕ್ಕೆ ಆಗಲಿಲ್ಲ. ಗರುಡನು ಅಮೃತವನ್ನು ಒಯ್ಯುವಾಗ ಅಮೃತದ ಒಂದು ಹನಿ ಆ ಮರದಮೇಲೆ ಬಿದ್ದಿತ್ತು ಎಂದು ಪುರಾಣಾಂತರದಲ್ಲಿದೆ—ಶ್ರೀಧರಸ್ವಾಮಿಗಳ ವ್ಯಾಖ್ಯೆ.

ತಸ್ಯ ಹ್ರದೇ ವಿಹರತೋ ಭುಜದಂಡಘೂರ್ಣ-
ವಾರ್ಘೋಷಮಂಗ ವರವಾರಣವಿಕ್ರಮಸ್ಯ ।
ಆಶ್ರುತ್ಯ ತತ್ ಸ್ವಸದನಾಭಿಭವಂ ನಿರೀಕ್ಷ್ಯ
ಚಕ್ಷುಃಶ್ರವಾ ಸಮಸರತ್ತದಮೃಷ್ಯಮಾಣಃ ॥ ೮

ತಂ ಪ್ರೇಕ್ಷಣೀಯಸುಕುಮಾರಘನಾವದಾತಂ
ಶ್ರೀವತ್ಸಪೀತವಸನಂ ಸ್ಮಿತಸುಂದರಾಸ್ಯಮ್ ।
ಕ್ರೀಡಂತಮಪ್ರತಿಭಯಂ ಕಮಲೋದರಾಂಘ್ರಿಂ
ಸಂದಶ್ಯ ಮರ್ಮಸು ರುಷಾ ಭುಜಯಾ ಚಛಾದ ॥ ೯

ತಂ ನಾಗಭೋಗಪರಿವೀತಮದೃಷ್ಟಚೇಷ್ಟ-
ಮಾಲೋಕ್ಯ ತತ್ಪ್ರಿಯಸಖಾಃ ಪಶುಪಾ ಭೃಶಾರ್ತಾಃ ।
ಕೃಷ್ಣೇಽರ್ಪಿತಾತ್ಮಸುಹೃದರ್ಥಕಲತ್ರಕಾಮಾ
ದುಃಖಾನುಶೋಕಭಯಮೂಢಧಿಯೋ ನಿಪೇತುಃ ॥

---

ವನ್ನು ಕಕ್ಕಲಾಗಿ, ಜಲರಾಶಿಯು ಉಕ್ಕಿತು. ವಿಷಮಿಶ್ರವಾದ ನೀರಿನ ಭೀಕರ ಅಲೆಗಳು ಅಡ್ಡಲಾಗಿ ನಾನೂರು ಮೊಳದಷ್ಟು ದೂರ ಉಕ್ಕಿ ಹರಿದವು. ಅಮಿತಬಲಾಢ್ಯನಾದ ಭಗವಂತನ ವಿಷಯದಲ್ಲಿ ಅದೇನು ದೊಡ್ಡದು ? (೭). ಗಜರಾಜನಂತೆ ವಿಕ್ರಮಶಾಲಿಯಾದ ಶ್ರೀಕೃಷ್ಣನು ತನ್ನ ಭುಜದಂಡಗಳಿಂದ ನೀರನ್ನು ಒಡಿದು ಶಬ್ದಮಾಡುತ್ತ ಈಜಾಡಿದನು. ಆ ಶಬ್ದವನ್ನು ಕೇಳಿ ತನ್ನ ಮನೆಯ ಆಕ್ರಮಣವನ್ನು ಸಹಿಸಲಾರದೆ ಕಾಳಿಯಸರ್ಪನು ಎದ್ದುಬಂದನು (೮). ಸುಂದರಸುಕುಮಾರನೂ ಘನಶ್ಯಾಮನೂ ಶ್ರೀವತ್ಸಲಾಂಛನನೂ ಪೀತಾಂಬರಧಾರಿಯೂ ಕಮಲಕೋಮಲಚರಣನೂ ಆದ ಶ್ರೀಕೃಷ್ಣನು ನಿರ್ಭೀತಿಯಿಂದ ಕ್ರೀಡಿಸುತ್ತಿರುವುದನ್ನು ಕಾಳಿಯನು ಕಂಡನು. ಅವನು ರೋಷಾವಿಷ್ಟನಾಗಿ ಮರ್ಮಸ್ಥಳಗಳಲ್ಲಿ ಕಚ್ಚಿ ತನ್ನ ದೇಹದಿಂದ ಶ್ರೀಕೃಷ್ಣನನ್ನು ಸುತ್ತಿಬಿಗಿದನು (೯). ಸರ್ಪದೇಹದಿಂದ ಬಿಗಿಯಲ್ಪಟ್ಟ ಶ್ರೀಕೃಷ್ಣನು ನಿಶ್ಚೇಷ್ಟನಾದುದನ್ನು ಕಂಡು ಅವನ ಪ್ರಿಯಮಿತ್ರರಾದ ಗೋಪಾಲರು ಅತ್ಯಂತ ದುಃಖಿತರಾದರು. ಶ್ರೀಕೃಷ್ಣನಿಗಾಗಿ ಅವರು ತಮ್ಮನ್ನೇ ಅರ್ಪಿಸಿಕೊಂಡಿದ್ದರು. ಮಿತ್ರ, ಧನ, ಕಳತ್ರ, ಕಾಮನೆಗಳೆಲ್ಲವೂ ಅವನಿಗಾಗಿ ಮೀಸಲಾಗಿದ್ದವು.

ಗಾವೋ ವೃಷಾ ವತ್ಸತರ್ಯಃ ಕ್ರಂದಮಾನಾಃ ಸುದುಃಖಿತಾಃ ।
ಕೃಷ್ಣೇ ನ್ಯಸ್ತೇಕ್ಷಣಾ ಭೀತಾ ರುದತ್ಯ ಇವ ತಸ್ಥಿರೇ ॥ ೧೧

ಅಥ ವ್ರಜೇ ಮಹೋತ್ಪಾತಾಸ್ತ್ರಿವಿಧಾ ಹ್ಯತಿದಾರುಣಾಃ ।
ಉತ್ಪೇತುರ್ಭುವಿ ದಿವ್ಯಾತ್ಮನ್ಯಾಸನ್ನಭಯಶಂಸಿನಃ ॥ ೧೨

ತಾನಾಲಕ್ಷ್ಯ ಭಯೋದ್ವಿಗ್ನಾ ಗೋಪಾ ನಂದಪುರೋಗಮಾಃ ।
ವಿನಾ ರಾಮೇಣ ಗಾಃ ಕೃಷ್ಣಂ ಜ್ಞಾತ್ವಾ ಚಾರಯಿತುಂ ಗತಮ್ ॥ ೧೩

ತೈರ್ದುರ್ನಿಮಿತ್ತೈರ್ನಿಧನಂ ಮತ್ವಾ ಪ್ರಾಪ್ತಮತದ್ವಿದಃ ।
ತತ್ಪ್ರಾಣಾಸ್ತನ್ಮನಸ್ಕಾಸ್ತೇ ದುಃಖಶೋಕಭಯಾತುರಾಃ ॥ ೧೪

ಆಬಾಲವೃದ್ಧವನಿತಾಃ ಸರ್ವೇಽಂಗ ಪಶುವೃತ್ತಯಃ ।
ನಿರ್ಜಗ್ಮುರ್ಗೋಕುಲಾದ್ ದೀನಾಃ ಕೃಷ್ಣದರ್ಶನಲಾಲಸಾಃ ॥ ೧೫

---

ಆದ್ದರಿಂದ ಗೋಪಾಲರು ಶೋಕ ಪಶ್ಚಾತ್ತಾಪ ಭಯಗಳಿಂದ ದಿಙ್ಮೂಢರಾಗಿ ಕುಸಿದುಹೋದರು (೧೦). ಹಸುಗಳು, ಎತ್ತುಗಳು, ಕರುಗಳೂ ಸಹ ಹೆದರಿ ಶ್ರೀಕೃಷ್ಣನನ್ನೇ ನೋಡುತ್ತ 'ಅಂಬಾ' ಎಂದು ಕೂಗತೊಡಗಿದವು. ಅವೆಲ್ಲವೂ ಶೋಕದಿಂದ ಅಳುತ್ತಿರುವಂತೆ ಕಾಣಿಸಿತು (೧೧). ಆಗ ವ್ರಜ ಸ್ಥಾನದಲ್ಲಿ ಅತಿಭೀಕರವಾದ ಮೂರುಬಗೆಯ ಉತ್ಪಾತಗಳು ಕಾಣಿಸಿದವು : ನೆಲವು ನಡುಗಿತು, ಆಕಾಶದಲ್ಲಿ ಉಲ್ಕಾಪಾತವಾಯಿತು, ದೇಹದಲ್ಲಿ ಎಡಗಣ್ಣು ಹಾರುವುದೇ ಮುಂತಾದ ದುಃಶಕುನಗಳು ಉಂಟಾದವು. ಯಾವುದೋ ಭಯವು ಸಂಭವಿಸಿತೆಂದು ಅವು ಸೂಚಿಸಿದವು (೧೨). ಆ ಬಗೆಯ ಉತ್ಪಾತ ಗಳನ್ನು ಕಂಡು ನಂದಗೋಪಾದಿಗಳು ಭಯದಿಂದ ಸಂಭ್ರಾಂತರಾದರು. ಬಲರಾಮನನ್ನು ಬಿಟ್ಟು ಶ್ರೀಕೃಷ್ಣನು ಹಸುಗಳನ್ನು ಮೇಯಿಸಲು ಹೋಗಿದ್ದಾ ನೆಂಬುದು ಅವರಿಗೆ ತಿಳಿಯಿತು (೧೩). ಆ ದುಃಶಕುನಗಳನ್ನು ಕಂಡು, ಶ್ರೀಕೃಷ್ಣನ ಮಹಿಮೆಯನ್ನರಿಯದ ಆ ಜನರು ಅವನಿಗೆ ಮರಣ ಒದಗಿತೆಂದು ಶಂಕಿಸಿದರು. ಶ್ರೀಕೃಷ್ಣನಿಗಾಗಿ ಪ್ರಾಣವನ್ನೂ ಮನಸ್ಸನ್ನೂ ಅರ್ಪಿಸಿದ್ದ ಗೋಪಾಲರು ದುಃಖಶೋಕಭಯಗಳಿಂದ ಕಂಗಾಲಾದರು (೧೪). ಆಹಾ! ಏನು ಹೇಳಲಿ! ಹುಡುಗರು ಮುದುಕರು ಹೆಂಗಸರೆನ್ನದೆ ಸಕಲ ಗೋಪಾಲರೂ ದೀನವದನರಾಗಿ ಶ್ರೀಕೃಷ್ಣನನ್ನು ನೋಡಲು ಹಂಬಲಿಸುತ್ತ ಗೋಕುಲದಿಂದ

**ತಾಂಸ್ತಥಾ ಕಾತರಾನ್ ವೀಕ್ಷ್ಯ ಭಗವಾನ್ ಮಾಧವೋ ಬಲಃ ।**
**ಪ್ರಹಸ್ಯ ಕಿಂಚಿನ್ನೋವಾಚ ಪ್ರಭಾವಜ್ಞೋಽನುಜಸ್ಯ ಸಃ ॥ ೧೬**

**ತೇಽನ್ವೇಷಮಾಣಾ ದಯಿತಂ ಕೃಷ್ಣಂ ಸೂಚಿತಯಾ ಪದೈಃ ।**
**ಭಗವಲ್ಲಕ್ಷಣೈರ್ಜಗ್ಮುಃ ಪದವ್ಯಾ ಯಮುನಾತಟಮ್ ॥ ೧೭**

**ತೇ ತತ್ರ ತತ್ರಾಬ್ಜಯವಾಂಕುಶಾಶನಿ-**
**ಧ್ವಜೋಪಪನ್ನಾನಿ ಪದಾನಿ ವಿಶ್ಪತೇಃ ।**
**ಮಾರ್ಗೇ ಗವಾಮನ್ಯಪದಾಂತರಾಂತರೇ**
**ನಿರೀಕ್ಷಮಾಣಾ ಯಯುರಂಗ ಸತ್ವರಾಃ ॥ ೧೮**

**ಅಂತರ್ಹ್ರದೇ ಭುಜಗಭೋಗಪರೀತಮಾರಾತ್**
**ಕೃಷ್ಣಂ ನಿರೀಹಮುಪಲಭ್ಯ ಜಲಾಶಯಾಂತೇ ।**
**ಗೋಪಾಂಶ್ಚ ಮೂಢಧಿಷಣಾನ್ ಪರಿತಃ ಪಶೂಂಶ್ಚ**
**ಸಂಕ್ರಂದತಃ ಪರಮಕಶ್ಮಲಮಾಪುರಾರ್ತಾಃ ॥ ೧೯**

---

ಹೊರಟರು (೧೫). ಭಗವಾನ್ ಮಾಧವನಾದ ಬಲರಾಮನೊಬ್ಬನಿಗೆ ತನ್ನ ತಮ್ಮನ ಪ್ರಭಾವವೇನೆಂಬುದು ತಿಳಿದಿತ್ತು. ಕಳವಳಿಸುತ್ತಿದ್ದ ಗೊಲ್ಲರನ್ನು ನೋಡಿ ಅವನು ನಕ್ಕುಬಿಟ್ಟನು. ಏನನ್ನೂ ಹೇಳಲಿಲ್ಲ (೧೬). ಅವರೆಲ್ಲರೂ ದಯಿತನಾದ ಶ್ರೀಕೃಷ್ಣನನ್ನು ಹುಡುಕುತ್ತ ಭಗವಂತನ ಪಾದಚಿಹ್ನೆಗಳಿರುವ ದಾರಿಯನ್ನು ಹಿಡಿದು ಯಮುನೆಯ ದಡಕ್ಕೆ ಬಂದರು (೧೭). ವ್ರಜೇಶ್ವರ ನಾದ ಮುಕುಂದನ ಹೆಜ್ಜೆಯ ಗುರುತುಗಳು ಪದ್ಮ, ಯವ, ಅಂಕುಶ, ವಜ್ರಾಯುಧ, ಧ್ವಜಚಿಹ್ನೆಗಳಿಂದ ಕೂಡಿದ್ದವು. ಗೋವುಗಳು ಹೋದ ದಾರಿಯಲ್ಲಿ ಇತರ ಹೆಜ್ಜೆಗಳ ನಡುವೆ ಅಲ್ಲಲ್ಲಿ ಕಾಣಿಸಿದ ಹೆಜ್ಜೆಯ ಗುರುತು ಗಳನ್ನನುಸರಿಸಿ ಬೇಗಬೇಗನೆ ಬಂದರು * (೧೮). ಮಡುವಿನ ನಡುವೆ ಸರ್ಪ ದೇಹದಿಂದ ವೇಷ್ಟಿತನಾಗಿ ನಿಶ್ಚೇಷ್ಟನಾಗಿದ್ದ ಶ್ರೀಕೃಷ್ಣನನ್ನು ದೂರದಿಂದಲೇ

---

* ಮೂಲದಲ್ಲಿರುವ 'ಗೋ' ಪದಕ್ಕೆ ವೇದವೆಂದೂ ಅರ್ಥವಿದೆ. 'ವೇದಮಾರ್ಗ ದಲ್ಲಿ ಪರತತ್ತ್ವವನ್ನು ಹುಡುಕುತ್ತ ಹೊರಟ ಅಪ್ರಮತ್ತರಾದ ಯೋಗಿಗಳು ಇತರ ಉಪಾಧಿಗಳನ್ನು ಅಲ್ಲಗಳೆದು ಭಗವಂತನನ್ನು ಅನ್ವೇಷಿಸುವಂತೆ' ಎಂಬ ಅರ್ಥವು ಇಲ್ಲಿ ಧ್ವನಿತವಾಗುತ್ತದೆ.

ಗೋಪ್ಯೋಽನುರಕ್ತಮನಸೋ ಭಗವತ್ಯನಂತೇ
ತತ್ಸೌಹೃದಸ್ಮಿತವಿಲೋಕಗಿರಃ ಸ್ಮರಂತ್ಯಃ ।
ಗ್ರಸ್ತೇಽಹಿನಾ ಪ್ರಿಯತಮೇ ಭೃಶದುಃಖತಪ್ತಾಃ
ಶೂನ್ಯಂ ಪ್ರಿಯವ್ಯತಿಹೃತಂ ದದೃಶುಸ್ತ್ರಿಲೋಕಮ್ ॥ ೨೦

ತಾಃ ಕೃಷ್ಣಮಾತರಮಪತ್ಯಮನುಪ್ರವಿಷ್ಟಾಂ
ತುಲ್ಯವ್ಯಥಾಃ ಸಮನುಗೃಹ್ಯ ಶುಚಃ ಸ್ರವಂತ್ಯಃ ।
ತಾಸ್ತಾ ವ್ರಜಪ್ರಿಯಕಥಾಃ ಕಥಯಂತ್ಯ ಆಸನ್
ಕೃಷ್ಣಾನನೇಽರ್ಪಿತದೃಶೋ ಮೃತಕಪ್ರತೀಕಾಃ ॥ ೨೧

ಕೃಷ್ಣಪ್ರಾಣಾನ್ ನಿರ್ವಿಶತೋ ನಂದಾದೀನ್ ವೀಕ್ಷ್ಯ ತಂ ಹ್ರದಮ್ ।
ಪ್ರತ್ಯಷೇಧತ್ ಸ ಭಗವಾನ್ ರಾಮಃ ಕೃಷ್ಣಾನುಭಾವವಿತ್ ॥ ೨೨

ಇತ್ಥಂ ಸ್ವಗೋಕುಲಮನನ್ಯಗತಿಂ ನಿರೀಕ್ಷ್ಯ
ಸಸ್ತ್ರೀಕುಮಾರಮತಿದುಃಖಿತಮಾತ್ಮಹೇತೋಃ ।

---

ಕಂಡರು. ದಡದಲ್ಲಿ ದಿಙ್ಮೂಢರಾಗಿ ನಿಂತಿದ್ದ ಗೋಪರನ್ನೂ ಸುತ್ತಲೂ ಅರಚುತ್ತಿದ್ದ ಹಸುಗಳನ್ನೂ ನೋಡಿ ದೈನ್ಯದಿಂದ ಶೋಕಾವಿಷ್ಟರಾದರು (೧೯). ಅನಂತನಾದ ಭಗವಂತನಲ್ಲಿ ಅನುರಕ್ತರಾದ ಗೋಪಿಯರು ಆತನ ಗೆಳೆತನ, ಕಿರುನಗೆ, ನೋಟ, ನುಡಿಗಳನ್ನು ಸ್ಮರಿಸಿಕೊಳ್ಳುತ್ತ, ಪ್ರಿಯತಮನು ಸರ್ಪಗ್ರಸ್ತನಾದುದನ್ನು ಕಂಡು ಬಹಳ ವಿಷಣ್ಣರಾದರು. ಪ್ರಿಯನಿಲ್ಲದೆ ಮೂರುಲೋಕವೂ ಅವರಿಗೆ ಶೂನ್ಯವಾಗಿ ತೋರಿತು (೨೦). ಮಗನಿಗಾಗಿ ಹಂಬಲಿಸಿ ಗೋಳಾಡುತ್ತಿದ್ದ ಯಶೋದೆಯನ್ನು ನೋಡಿ ಗೋಪಿಯರಿಗೆ ಬಹಳ ಕನಿಕರವಾಯಿತು. ಅವಳಂತೆಯೇ ಖಿನ್ನರಾದ ಆ ಸ್ತ್ರೀಯರು ವ್ರಜವಾಸಿಗಳಿಗೆ ಪ್ರಿಯನಾದ ಶ್ರೀಕೃಷ್ಣನ ವಿವಿಧಕಥೆಗಳನ್ನು ಹೇಳಿಕೊಳ್ಳತೊಡಗಿದರು. ಕೃಷ್ಣನ ಮುಖವನ್ನೇ ನೋಡುತ್ತ ಸತ್ತಹೆಣಗಳಂತಾದರು (೨೧). ಕೃಷ್ಣನ ಪ್ರಾಣವನ್ನು ಉಳಿಸಬೇಕೆಂದು ನಂದಾದಿಗಳು ಮಡುವಿನಲ್ಲಿಳಿಯಲು ಹವಣಿಸಿದರು. ಆಗ ಶ್ರೀಕೃಷ್ಣನ ಮಹಿಮೆಯನ್ನರಿತಿದ್ದ ಬಲರಾಮನು ಅವರನ್ನು ತಡೆದನು (೨೨). ಹೆಂಗಸರು ಮಕ್ಕಳಾದಿಯಾಗಿ ಗೋಕುಲದವರೆಲ್ಲರೂ ತನ್ನನ್ನೇ ಗತಿಯಾಗಿ ನಂಬಿ ತನಗೋಸ್ಕರ ಈ ರೀತಿಯಲ್ಲಿ ದುಃಖಾರ್ತರಾಗಿರು

ಆಜ್ಞಾಯ ಮರ್ತ್ಯಪದವೀಮನುವರ್ತಮಾನಃ
ಸ್ಥಿತ್ವಾ ಮುಹೂರ್ತಮುದತಿಷ್ಠದುರಂಗಬಂಧಾತ್ ॥ ೨೩

ತತ್ಪ್ರಥ್ಯಮಾನವಪುಷಾ ವ್ಯಥಿತಾತ್ಮಭೋಗ-
ಸ್ತ್ಯಕ್ತ್ವೋನ್ನಮಯ್ಯ ಕುಪಿತಃ ಸ್ವಫಣಾನ್ ಭುಜಂಗಃ ।
ತಸ್ಥೌ ಶ್ವಸನ್ ಶ್ವಸನರಂಧ್ರವಿಷಾಂಬರೀಷ-
ಸ್ತಬ್ಧೇಕ್ಷಣೋಲ್ಮುಕಮುಖೋ ಹರಿಮೀಕ್ಷಮಾಣಃ ॥ ೨೪

ತಂ ಜಿಹ್ವಯಾ ದ್ವಿಶಿಖಯಾ ಪರಿಲೇಲಿಹಾನಂ
ದ್ವೇ ಸೃಕ್ಕಿಣೀ ಹ್ಯತಿಕರಾಲವಿಷಾಗ್ನಿದೃಷ್ಟಿಮ್ ।
ಕ್ರೀಡನ್ನಮುಂ ಪರಿಸಸಾರ ಯಥಾ ಖಗೇಂದ್ರೋ
ಬಭ್ರಾಮ ಸೋಽಪ್ಯವಸರಂ ಪ್ರಸಮೀಕ್ಷಮಾಣಃ ॥ ೨೫

ಏವಂ ಪರಿಭ್ರಮಹತೌಜಸಮುನ್ನತಾಂಸ-
ಮಾನಮ್ಯ ತತ್ಪೃಥುಶಿರಃಸ್ವಧಿರೂಢ ಆದ್ಯಃ ।

---

ವುದನ್ನು ಶ್ರೀಕೃಷ್ಣನು ವೀಕ್ಷಿಸಿದನು. ಮಾನುಷಲೀಲೆಯನ್ನನುಸರಿಸಿ ಸ್ವಲ್ಪಕಾಲ ನಿಶ್ಚೇಷ್ಟನಾಗಿದ್ದ ಆತನು ಸರ್ಪಬಂಧನವನ್ನು ಬಿಡಿಸಿಕೊಂಡು ಹೊರಬಂದನು (೨೩). ಶ್ರೀಕೃಷ್ಣನು ತನ್ನ ದೇಹವನ್ನು ಹಿಗ್ಗಿಸಲಾಗಿ ಕಾಳಿಯನಿಗೆ ಬಹಳ ಯಾತನೆಯಾಯಿತು. ಯಾತನೆಯನ್ನು ತಡೆಯಲಾರದೆ ಕಾಳಿಯನು ಶ್ರೀಕೃಷ್ಣನನ್ನು ತ್ಯಜಿಸಿ ಸರಿದು ನಿಂತು ಹೆಡೆಗಳನ್ನೆತ್ತಿ ರೋಷದಿಂದ ಫೂತ್ಕರಿಸುತ್ತ ಶ್ರೀಹರಿಯನ್ನು ನೋಡುತ್ತ ನಿಂತನು. ಫೂತ್ಕರಿಸುವಾಗ ನಾಸಾರಂಧ್ರದಿಂದ ವಿಷವು ಹೊಮ್ಮುತ್ತಿತ್ತು. ಅವನ ಕಣ್ಣುಗಳು ಕಾದ ಬಾಣಲೆಯಂತೆ ಕೆಂಡವಾಗಿ ಸ್ತಬ್ಧವಾಗಿದ್ದವು. ಮುಖವು ಉರಿಯುವ ಕೊಳ್ಳಿಯಾಗಿತ್ತು (೨೪). (ಒಂದೊಂದು ಬಾಯಲ್ಲಿಯೂ ಇರುವ) ಸೀಳುನಾಲಗೆಯಿಂದ ಕಾಳಿಯನು ಕಟವಾಯಿಗಳನ್ನು ಸವರಿಕೊಳ್ಳುತ್ತ ಅತಿಕರಾಳವಾದ ವಿಷಾಗ್ನಿಯಿಂದ ಕೂಡಿದ ದೃಷ್ಟಿಯಿಂದ ನೋಡುತ್ತಿದ್ದನು. ಶ್ರೀಕೃಷ್ಣನು ಆತನ ಸುತ್ತಲೂ ಗರುಡನಂತೆ ಕ್ರೀಡಿಸುತ್ತ ಸುತ್ತಲಾರಂಭಿಸಿದನು. ಕಾಳಿಯಸರ್ಪನೂ ಸಹ ಆಕ್ರಮಿಸಲು ಸಮಯವನ್ನು ಕಾಯುತ್ತ ಕೃಷ್ಣನಿಗೆ ಅಭಿಮುಖವಾಗಿ ತಿರುಗುತ್ತಿದ್ದನು (೨೫). ಹೀಗೆ ಹೆಗಲನ್ನೆತ್ತಿ ತಿರುಗಿ ತಿರುಗಿ ಕಾಳಿಯಸರ್ಪನು ಬಳಲಿದನು. ಆಗ ಆದಿಪುರುಷನು ಅವನ ಹೆಡೆಗಳು

ತನ್ಮೂರ್ಧರತ್ನನಿಕರಸ್ಪರ್ಶಾತಿತಾಮ್ರ-
ಪಾದಾಂಬುಜೋಽಖಿಲಕಲಾದಿಗುರುರ್ನನರ್ತ ॥ ೨೬

ತಂ ನರ್ತುಮುದ್ಯತಮವೇಕ್ಷ್ಯ ತದಾ ತದೀಯ-
ಗಂಧರ್ವಸಿದ್ಧಸುರಚಾರಣದೇವವಧ್ವಃ ।
ಪ್ರೀತ್ಯಾ ಮೃದಂಗಪಣವಾನಕವಾದ್ಯಗೀತ-
ಪುಷ್ಪೋಪಹಾರನುತಿಭಿಃ ಸಹಸೋಪಸೇದುಃ ॥ ೨೭

ಯದ್ ಯಚ್ಛಿರೋ ನ ನಮತೇಽಂಗ ಶತೈಕಶೀರ್ಷ್ಣ-
ಸ್ತತ್ತನ್ಮಮರ್ದ ಖರದಂಡಧರೋಽಂಘ್ರಿಪಾತೈಃ ।
ಕ್ಷೀಣಾಯುಷೋ ಭ್ರಮತ ಉಲ್ಬಣಮಾಸ್ಯತೋಽಸೃಜ್
ನಸ್ತೋ ವಮನ್ ಪರಮಕಶ್ಮಲಮಾಪ ನಾಗಃ ॥ ೨೮

ತಸ್ಯಾಕ್ಷಿಭಿರ್ಗರಲಮುದ್ವಮತಃ ಶಿರಸ್ಸು
ಯದ್ ಯತ್ ಸಮುನ್ನಮತಿ ನಿಃಶ್ವಸತೋ ರುಷೋಚ್ಚೈಃ

ಕುಸಿಯುವಂತೆ ಅವುಗಳಮೇಲೆ ಹತ್ತಿನಿಂತನು! ಕಾಳಿಯನ ಶಿರಸ್ಸುಗಳಲ್ಲಿದ್ದ ರತ್ನಗಳ ಕಾಂತಿಯಿಂದ ಶ್ರೀಕೃಷ್ಣನ ಪಾದಕಮಲಗಳು ಮತ್ತಷ್ಟು ಕೆಂಪಗೆ ಹೊಳೆಯುತ್ತಿದ್ದವು. ಸಕಲ ಕುಶಲಕಲೆಗಳಿಗೂ ಆದಿಗುರುವಾದ ಮುಕುಂದನು ಹೆಡೆಗಳಮೇಲೆ ಕುಣಿಯಲಾರಂಭಿಸಿದನು! (೨೬). ಹೀಗೆ ಶ್ರೀಕೃಷ್ಣನು ನರ್ತಿಸಲು ಉದ್ಯುಕ್ತನಾದುದನ್ನು ಕಂಡು ಗಂಧರ್ವ ಸಿದ್ಧ ಸುರ ಚಾರಣರೂ ಅಪ್ಸರೆಯರೂ ಆನಂದದಿಂದ ಮೃದಂಗ ಪಣವ ತಮಟೆ ಮುಂತಾದ ವಾದ್ಯಗಳನ್ನು ನುಡಿಸುತ್ತ, ಗೀತಗಳನ್ನು ಹಾಡುತ್ತ, ಪೂಜಾರ್ಥವಾದ ಹೂಗಳನ್ನು ಹಿಡಿದು, ಸ್ತುತಿಸುತ್ತ ತ್ವರೆಯಿಂದ ಅಲ್ಲಿಗೆ ಬಂದರು (೨೭). ನೂರು ತಲೆಗಳಿದ್ದ ಆ ಕಾಲಿಯನಾಗನ ಯಾವ ಯಾವ ತಲೆಯು ಬಾಗದೆ ಎದ್ದು ನಿಂತಿದ್ದಿತೋ ಅದನ್ನು ತೀಕ್ಷ್ಣದಂಡನಾದ ಶ್ರೀಕೃಷ್ಣನು ತುಳಿತುಳಿದು ಮರ್ದಿಸಿದನು. ಕ್ಷೀಣಾಯುವಾದರೂ ನಾಗನು ಇಲ್ಲಿಂದಲ್ಲಿಗೆ ಸುತ್ತುತ್ತಲೇ ಇದ್ದನು. ಕಡೆಗೆ ಆತನ ಮೂಗು ಬಾಯಿಗಳಿಂದ ರಕ್ತವು ಕೋಡಿಯಾಗಿ ಹರಿಯತೊಡಗಿತು. ಕಾಳಿಯನು ಖಿನ್ನನಾಗಿ ಬಳಲಿದನು (೨೮). ಅನಂತರ ಕಣ್ಣುಗಳಿಂದ ರಕ್ತವು ಸುರಿಯಿತು. ಆಗಲೂ ಕಾಳಿಯಸರ್ಪನು ಕ್ರೋಧ

ನೃತ್ಯನ್ ಪದಾನುನಮಯನ್ ದಮಯಾಂಬಭೂವ
ಪುಷ್ಪೈಃ ಪ್ರಪೂಜಿತ ಇವೇಹ ಪುಮಾನ್ ಪುರಾಣಃ ॥

ತಚ್ಚಿತ್ರತಾಂಡವವಿರುಗ್ಣಫಣಾತಪತ್ರೋ
ರಕ್ತಂ ಮುಖೈರುರು ವಮನ್ ನೃಪ ಭಗ್ನಗಾತ್ರಃ ।
ಸ್ಮೃತ್ವಾ ಚರಾಚರಗುರುಂ ಪುರುಷಂ ಪುರಾಣಂ
ನಾರಾಯಣಂ ತಮರಣಂ ಮನಸಾ ಜಗಾಮ ॥ ೩೦

ಕೃಷ್ಣಸ್ಯ ಗರ್ಭಜಗತೋಽತಿಭರಾವಸನ್ನಂ
ಪಾರ್ಷ್ಣಿಪ್ರಹಾರಪರಿರುಗ್ಣಫಣಾತಪತ್ರಮ್ ।

---

ದಿಂದ ಬುಸುಗುಟ್ಟುತ್ತ ಒಂದೊಂದು ಹೆಡೆಯನ್ನು ಮೇಲೆತ್ತುತ್ತಿದ್ದನು. ಎತ್ತಿದ ಹೆಡೆಯಮೇಲೆ ಶ್ರೀಕೃಷ್ಣನು ಕುಣಿಕುಣಿದು ಬಗ್ಗಿಸಿ ಅವನನ್ನು ಪಳಗಿಸಿದನು. ಆಗ ಶೇಷಾಧಿರೂಢನಾದ ಪುರಾಣಪುರುಷನನ್ನು ಪೂಜಿಸುವಂತೆ ಗಂಧರ್ವಾದಿಗಳು ಹೂಗಳಿಂದ ಗೋವಿಂದನನ್ನು ಪೂಜಿಸಿದರು* (೨೯). ಛತ್ರಗಳಂತಿದ್ದ ಕಾಳಿಯನ ಹೆಡೆಗಳು ಮುಕುಂದನ ವಿಚಿತ್ರ ತಾಂಡವನೃತ್ಯದಿಂದ ನುಗ್ಗಾದವು. ಅವನು ಭಗ್ನಗಾತ್ರನಾಗಿ ಮುಖಗಳಿಂದ ರಾಶಿರಾಶಿಯಾಗಿ ರಕ್ತವನ್ನು ಕಕ್ಕಿದನು. ಪರೀಕ್ಷಿತಮಹಾರಾಜ, ಆಗ ಕಾಳಿಯನಿಗೆ ಜ್ಞಾನೋದಯವಾಯಿತು. ನಿರ್ಸತಕ್ಕವನು ಚರಾಚರಗುರುವೂ ಪುರಾಣಪುರುಷನೂ ಆದ ಶ್ರೀಮನ್ನಾರಾಯಣನೆಂಬುದನ್ನರಿತು, ಮನಸ್ಸಿನಿಂದಲೇ ಅವನಿಗೆ ಶರಣಾದನು! (೩೦). ಜಗತ್ತನ್ನೇ ಗರ್ಭದಲ್ಲಿ ಅಡಗಿಸಿಕೊಂಡಿರುವ ಶ್ರೀಕೃಷ್ಣನ ಮಹಾಭಾರದಿಂದ

---

* 'ದಮಯಾಂಬಭೂವ ಪುಷ್ಪೈಃ ಪ್ರಪೂಜಿತ ಇವೇಹ ಪುಮಾನ್ ಪುರಾಣಃ'. ಇದಕ್ಕೆ ಶ್ರೀಧರೀಯವ್ಯಾಖ್ಯಾನದಲ್ಲಿ ಇನ್ನೂ ಎರಡು ಅರ್ಥಗಳನ್ನು ಹೇಳಿದ್ದಾರೆ: ೧. "ಗಂಧರ್ವಾದಿಗಳು ಹೂಗಳಿಂದ ಪೂಜಿಸಲಾಗಿ, ಗೋಪಾಲರಿಗೆ ಶ್ರೀಕೃಷ್ಣನು ಪುರಾಣಪುರುಷನಂತೆ ಗೋಚರಿಸಿದನು. ೨. ಹೂಗಳಿಂದ ಪೂಜಿಸಲ್ಪಟ್ಟವನಂತೆ ಶ್ರೀಕೃಷ್ಣನು ಪ್ರಸನ್ನನಾಗಿ ಕಾಳಿಯನನ್ನು ಪಳಗಿಸಿ ಹಿತವನ್ನೇ ಮಾಡಿದನು." ಇನ್ನೊಂದು ಅರ್ಥವನ್ನೂ ಹೇಳಬಹುದು: ಕಾಳಿಯನ ಹೆಡೆಗಳು ಹೂಗಳಂತೆ ಕಾಣುತ್ತಿದ್ದವು. 'ಪಾದಗಳಿಗೆ ಹೂಗಳನ್ನರ್ಪಿಸಿ ಪೂಜಿತನಾದಂತೆ ಶ್ರೀಕೃಷ್ಣನು ಗೋಚರಿಸಿದನು.'

ದೃಷ್ಟ್ವಾಹಿನಾದ್ಯಮುಪಸೇದುರಮುಷ್ಯ ಪತ್ನ್ಯಃ
ಆರ್ತಾಃ ಶ್ಲಥದ್ವಸನಭೂಷಣಕೇಶಬಂಧಾಃ ॥ ೩೧

ತಾಸ್ತಂ ಸುವಿಗ್ನಮನಸೋಽಥ ಪುರಸ್ಕೃತಾರ್ಭಾಃ
ಕಾಯಂ ನಿಧಾಯ ಭುವಿ ಭೂತಪತಿಂ ಪ್ರಣೇಮುಃ ।
ಸಾಧ್ವ್ಯಃ ಕೃತಾಂಜಲಿಪುಟಾಃ ಶಮಲಸ್ಯ ಭರ್ತುರ್-
ಮೋಕ್ಷೇಪ್ಸವಃ ಶರಣದಂ ಶರಣಂ ಪ್ರಪನ್ನಾಃ ॥ ೩೨

ನಾಗಪತ್ನ್ಯ ಊಚುಃ—

ನ್ಯಾಯ್ಯೋ ಹಿ ದಂಡಃ ಕೃತಕಿಲ್ಬಿಷೇಽಸ್ಮಿಂ-
ಸ್ತವಾವತಾರಃ ಖಲನಿಗ್ರಹಾಯ ।
ರಿಪೋಃ ಸುತಾನಾಮಪಿ ತುಲ್ಯದೃಷ್ಟೇ-
ರ್ಧತ್ಸೇ ದಮಂ ಫಲಮೇವಾನುಶಂಸನ್ ॥ ೩೩

ಅನುಗ್ರಹೋಽಯಂ ಭವತಃ ಕೃತೋ ಹಿ ನೋ
ದಂಡೋಽಸತಾಂ ತೇ ಖಲು ಕಲ್ಮಷಾಪಹಃ ।

---

ಕಾಳಿಯನು ಬಸವಳಿದು ಕುಸಿದುಹೋದುದನ್ನೂ ಅವನ ಹಿಮ್ಮಡಿಯ ತುಳಿತದಿಂದ ಹೆಡೆಗಳು ನುಚ್ಚುನುಗ್ಗಾದುದನ್ನೂ ಕಂಡು ಕಾಳಿಯನ ಪತ್ನಿಯರು ದುಃಖಾರ್ತರಾಗಿ ಶ್ರೀಕೃಷ್ಣನ ಬಳಿಗೆ ಓಡಿಬಂದರು. ಅವರ ವಸ್ತ್ರಗಳು ಜಾರುತ್ತಿದ್ದವು. ಒಡವೆಗಳೂ ಮುಡಿಗಳೂ ಸಡಿಲಿದ್ದವು (೩೧). ವಿಷಣ್ಣರಾದ ಆ ಸಾಧ್ವಿಯರು ತಮ್ಮ ಮಕ್ಕಳನ್ನೆತ್ತಿಕೊಂಡು ಬಂದು (ನದೀತೀರದ) ನೆಲದ ಮೇಲೆ ದೇಹವನ್ನು ನೀಡಿ ಅಡ್ಡಬಿದ್ದು ಭೂತೇಶ್ವರನಾದ ಶ್ರೀಕೃಷ್ಣನಿಗೆ ನಮಸ್ಕರಿಸಿದರು. ಅಪರಾಧಿಯಾದ ತಮ್ಮ ಪತಿಯನ್ನು ಬಿಡಿಸಿಕೊಳ್ಳಬೇಕೆಂದು, ಅಭಯದಾತನಾದ ಶ್ರೀಕೃಷ್ಣನಿಗೆ ಶರಣಾಗಿ ಕೈಮುಗಿದರು (೩೨). ನಾಗಪತ್ನಿಯರು ಹೀಗೆಂದರು : "ಹೇ ಭಗವನ್, ಪಾಪಕೃತ್ಯವನ್ನು ಮಾಡಿದ ಈತನನ್ನು ದಂಡಿಸುವುದು ಯುಕ್ತವಾದುದೇ ಸರಿ. ನಿನ್ನ ಅವತಾರವೇ ಪಾಪಿಗಳನ್ನು ನಿಗ್ರಹಿಸುವುದಕ್ಕಾಗಿ. ಶತ್ರುವನ್ನೂ ಮಕ್ಕಳನ್ನೂ ಸಮದೃಷ್ಟಿಯಿಂದ ಕಾಣತಕ್ಕವನು ನೀನು. ನಿಗ್ರಹವೂ ಅನುಗ್ರಹವೆಂದೇ ಆಲೋಚಿಸಿ ದಂಡಿಸುತ್ತೀಯೆ (೩೩). ನೀನು ಮಾಡಿರುವುದು ನಮಗೆ ಅನುಗ್ರಹವೇ ಸರಿ.

ಯದ್ ದಂದಶೂಕತ್ವಮಮುಷ್ಯ ದೇಹಿನಃ
ಕ್ರೋಧೋಽಪಿ ತೇಽನುಗ್ರಹ ಏವ ಸಂಮತಃ ॥ ೩೪

ತಪಃ ಸುತಪ್ತಂ ಕಿಮನೇನ ಪೂರ್ವಂ
ನಿರಸ್ತಮಾನೇನ ಚ ಮಾನದೇನ ।
ಧರ್ಮೋಽಥ ವಾ ಸರ್ವಜನಾನುಕಂಪಯಾ
ಯತೋ ಭವಾಂಸ್ತುಷ್ಯತಿ ಸರ್ವಜೀವಃ ॥ ೩೫

ಕಸ್ಯಾನುಭಾವೋಽಸ್ಯ ನ ದೇವ ವಿದ್ಮಹೇ
ತವಾಂಘ್ರಿರೇಣುಸ್ಪರ್ಶಾಧಿಕಾರಃ ।
ಯದ್ವಾಂಛಯಾ ಶ್ರೀರ್ಲಲನಾಽಽಚರತ್ತಪೋ
ವಿಹಾಯ ಕಾಮಾನ್ ಸುಚಿರಂ ಧೃತವ್ರತಾ ॥ ೩೬

ನ ನಾಕಪೃಷ್ಠಂ ನ ಚ ಸಾರ್ವಭೌಮಂ
ನ ಪಾರಮೇಷ್ಠ್ಯಂ ನ ರಸಾಧಿಪತ್ಯಮ್ ।

---

ದುಷ್ಟರನ್ನು ನೀನು ದಂಡಿಸುವುದರಿಂದ ಅವರ ಪಾಪವು ತೊಡೆದುಹೋಗುತ್ತದೆ. (ಪಾಪಕರ್ಮದಿಂದಲೇ) ಈತನಿಗೆ ಸರ್ಪಜನ್ಮವು ಬಂದಿದೆಯಲ್ಲವೆ? ಆದ್ದರಿಂದ ಜೀವಿಯ ಮೇಲೆ ನಿನಗೆ ಉಂಟಾಗುವ ಕ್ರೋಧವನ್ನು ಅನುಗ್ರಹವೆಂದೇ ತಿಳಿಯಬೇಕು (೩೪). ಪೂರ್ವಜನ್ಮದಲ್ಲಿ ಈತನು ಗರ್ವರಹಿತನಾಗಿ ಪರರಿಗೆ ಮಾನ್ಯತೆಯನ್ನೀಯುತ್ತಲಿದ್ದು ಯಾವ ತಪಸ್ಸನ್ನು ನಿಷ್ಠೆಯಿಂದ ಆಚರಿಸಿದನೋ! ಅಥವಾ ಸಕಲರಲ್ಲಿಯೂ ಅನುಕಂಪೆಯನ್ನಿಟ್ಟು ಯಾವ ಧರ್ಮಕಾರ್ಯವನ್ನು ಮಾಡಿದನೋ! ಅದರ ಫಲವಾಗಿ ಸರ್ವರಿಗೂ ಜೀವನಾಧಾರನಾದ ನೀನು ಪ್ರಸನ್ನನಾಗಿದ್ದೀಯೆ (೩೫). ಹೇ ದೇವ, ವಾಸ್ತವವಾಗಿ ಈ ಸರ್ಪನಿಗೆ ನಿನ್ನ ಪಾದಧೂಳಿಯನ್ನು ಸ್ಪರ್ಶಿಸುವ ಯೋಗ್ಯತೆಯು ಯಾವ ಪುಣ್ಯದ ಫಲವಾಗಿ ಒದಗಿತೋ ನಾವರಿಯೆವು! ನಿನ್ನ ಪಾದಧೂಳಿಯ ಬಯಕೆಯಿಂದ ಸ್ವಯಂ ಲಕ್ಷ್ಮೀದೇವಿಯೇ ಸಕಲಕಾಮನೆಗಳನ್ನೂ ಪರಿತ್ಯಜಿಸಿ ವ್ರತನಿಷ್ಠಳಾಗಿ ದೀರ್ಘಕಾಲದವರೆಗೆ ತಪಸ್ಸನ್ನಾಚರಿಸಿರುವಳು! (೩೬). ಹೇ ಸ್ವಾಮಿ, ನಿನ್ನ ಪಾದಧೂಳಿಯನ್ನು ಪಡೆದವರು ಸ್ವರ್ಗವನ್ನೂ ಬಯಸುವುದಿಲ್ಲ, ಸಾರ್ವಭೌಮ ಪದವಿಯನ್ನೂ ಬಯಸುವುದಿಲ್ಲ.

ನ ಯೋಗಸಿದ್ಧೀರಪುನರ್ಭವಂ ವಾ
ವಾಂಛಂತಿ ಯತ್ಪಾದರಜಃ ಪ್ರಪನ್ನಾಃ ॥ ೩೭

ತದೇಷ ನಾಥಾಪ ದುರಾಪಮನ್ಯೈ-
ಸ್ತಮೋಜನಿಃ ಕ್ರೋಧವಶೋಽಪ್ಯಹೀಶಃ ।
ಸಂಸಾರಚಕ್ರೇ ಭ್ರಮತಃ ಶರೀರಿಣೋ
ಯದಿಚ್ಛತಃ ಸ್ಯಾದ್ ವಿಭವಃ ಸಮಕ್ಷಃ ॥ ೩೮

ನಮಸ್ತುಭ್ಯಂ ಭಗವತೇ ಪುರುಷಾಯ ಮಹಾತ್ಮನೇ ।
ಭೂತಾವಾಸಾಯ ಭೂತಾಯ ಪರಾಯ ಪರಮಾತ್ಮನೇ ॥ ೩೯

ಜ್ಞಾನವಿಜ್ಞಾನನಿಧಯೇ ಬ್ರಹ್ಮಣೇಽನಂತಶಕ್ತಯೇ ।
ಅಗುಣಾಯಾವಿಕಾರಾಯ ನಮಸ್ತೇಽಪ್ರಾಕೃತಾಯ ಚ ॥ ೪೦

ಕಾಲಾಯ ಕಾಲನಾಭಾಯ ಕಾಲಾವಯವಸಾಕ್ಷಿಣೇ ।
ವಿಶ್ವಾಯ ತದುಪದ್ರಷ್ಟ್ರೇ ತತ್ಕರ್ತ್ರೇ ವಿಶ್ವಹೇತವೇ ॥ ೪೧

---

ಅವರಿಗೆ ಬ್ರಹ್ಮಪದವಿಯೂ ಬೇಡ, ವರುಣಪದವಿಯೂ ಬೇಡ. ಯೋಗಸಿದ್ಧಿಗಳನ್ನೂ ಬಯಸರು, ಮೋಕ್ಷವನ್ನೂ ಬಯಸರು (ಅವೆಲ್ಲವೂ ತುಚ್ಛವೆಂದು ಕಡೆಗಣಿಸುತ್ತಾರೆ) (೩೭). ಸಂಸಾರಚಕ್ರದಲ್ಲಿ ಸಿಕ್ಕಿ ಸುತ್ತುವ ದೇಹಿಗೆ ನಿನ್ನ ಪಾದಧೂಳಿಯನ್ನು ಬಯಸಿದ ಮಾತ್ರದಿಂದಲೇ ಸಂಪತ್ತು ಪ್ರತ್ಯಕ್ಷವಾಗಿ ದೊರೆಯುವುದು. ಹೇ ನಾಥ, ತಾಮಸಜನ್ಮವನ್ನು ಪಡೆದು ಕ್ರೋಧವಶನಾಗಿದ್ದರೂ ಈ ಸರ್ಪರಾಜನು ಅನ್ಯದುರ್ಲಭವಾದ ಅಂತಹ ಪಾದಧೂಳಿಯನ್ನು ಸಂಪಾದಿಸಿದನು (೩೮). ಅಚಿಂತ್ಯವೈಭವಶಾಲಿಯೂ ಅಂತರ್ಯಾಮಿಪುರುಷನೂ ಮಹಾತ್ಮನೂ ಆದ ನಿನಗೆ ನಮಸ್ಕಾರ. ಆಕಾಶಕ್ಕೆ ನೆಲೆಯಾಗಿ ಚಿರಂತನನೂ ಕಾರಣನೂ ಕಾರಣಾತೀತನೂ ಆದ ನಿನಗೆ ನಮಸ್ಕಾರ (೩೯). ಜ್ಞಾನಚಿಚ್ಛಕ್ತಿಗಳ ನಿಧಿಯೂ ಅನಂತಶಕ್ತಿಯುಳ್ಳ ಪರಬ್ರಹ್ಮವೂ ಆದ ನಿನಗೆ ನಮಸ್ಕಾರ. ನಿರ್ಗುಣನೂ ನಿರ್ವಿಕಾರನೂ ದಿವ್ಯಶಕ್ತಿಯೂ ಆದ ನಿನಗೆ ನಮಸ್ಕಾರ (೪೦). ಕಾಲಸ್ವರೂಪನೂ ಕಾಲಶಕ್ತಿಗೆ ಆಶ್ರಯನೂ ಕಾಲಾವಯವಗಳಾದ ಸೃಷ್ಟ್ಯಾದಿಗಳಿಗೆ ಸಾಕ್ಷಿಯೂ ಆದ ನಿನಗೆ ನಮಸ್ಕಾರ. ವಿಶ್ವರೂಪನೂ ವಿಶ್ವಸಾಕ್ಷಿಯೂ ವಿಶ್ವಕರ್ತನೂ ಸರ್ವಕಾರಣನೂ ಆದ ನಿನಗೆ ನಮಸ್ಕಾರ (೪೧).

ಭೂತಮಾತ್ರೇಂದ್ರಿಯಪ್ರಾಣಮನೋಬುದ್ಧ್ಯಾಶಯಾತ್ಮನೇ ।
ತ್ರಿಗುಣೇನಾಭಿಮಾನೇನ ಗೂಢಸ್ವಾತ್ಮಾನುಭೂತಯೇ ॥ ೪೨

ನಮೋಽನಂತಾಯ ಸೂಕ್ಷ್ಮಾಯ ಕೂಟಸ್ಥಾಯ ವಿಪಶ್ಚಿತೇ ।
ನಾನಾವಾದಾನುರೋಧಾಯ ವಾಚ್ಯವಾಚಕಶಕ್ತಯೇ ॥ ೪೩

ನಮಃ ಪ್ರಮಾಣಮೂಲಾಯ ಕವಯೇ ಶಾಸ್ತ್ರಯೋನಯೇ ।
ಪ್ರವೃತ್ತಾಯ ನಿವೃತ್ತಾಯ ನಿಗಮಾಯ ನಮೋ ನಮಃ ॥ ೪೪

ನಮಃ ಕೃಷ್ಣಾಯ ರಾಮಾಯ ವಸುದೇವಸುತಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ಸಾತ್ವತಾಂ ಪತಯೇ ನಮಃ ॥ ೪೫

ನಮೋ ಗುಣಪ್ರದೀಪಾಯ ಗುಣಾತ್ಮಚ್ಛಾದನಾಯ ಚ ।
ಗುಣವೃತ್ತ್ಯುಪಲಕ್ಷ್ಯಾಯ ಗುಣದ್ರಷ್ಟ್ರೇ ಸ್ವಸಂವಿದೇ ॥ ೪೬

---

(ಪಂಚ) ಭೂತಸ್ವರೂಪನೂ (ಶಬ್ದಾದಿ ಪಂಚ) ಮಾತ್ರಾಸ್ವರೂಪನೂ ಇಂದ್ರಿಯ ಪ್ರಾಣ ಮನೋಬುದ್ಧಿ ಚಿತ್ತಸ್ವರೂಪನೂ ಆದ ನಿನಗೆ ನಮಸ್ಕಾರ. ನಿನ್ನ ಅಂಶಭೂತರಾದ ಜೀವಾತ್ಮರ ಶುದ್ಧಜ್ಞಾನವನ್ನು ತ್ರಿಗುಣಾತ್ಮಕವಾದ ಅಹಂಕಾರದಿಂದ ಮರೆಮಾಚಿರುವ ನಿನಗೆ ನಮಸ್ಕಾರ (೪೨). ಅನಂತನೂ ಸೂಕ್ಷ್ಮನೂ ಕೂಟಸ್ಥನಿತ್ಯನೂ ಸರ್ವಜ್ಞನೂ ಆದ ನಿನಗೆ ನಮಸ್ಕಾರ. 'ಅಸ್ತಿ ನಾಸ್ತಿ....' ಮುಂತಾದ ವಿವಿಧವಾದಗಳಿಗೆ ವಿಷಯನಾಗಿಯೂ ವಾಚ್ಯವಾಚಕಶಕ್ತಿಯಾಗಿಯೂ ಇರುವ ನಿನಗೆ ನಮಸ್ಕಾರ (೪೩). ಪ್ರಮಾಣಗಳೆನಿಸಿದ ಶ್ರೋತ್ರಾದಿ ಇಂದ್ರಿಯಗಳಿಗೆ ಶ್ರೋತ್ರಾದಿ ಇಂದ್ರಿಯನಾಗಿಯೂ (ಇಂದ್ರಿಯಾಪೇಕ್ಷೆಯಿಲ್ಲದ) ಜ್ಞಾನಿಯಾಗಿಯೂ ವೇದಶಾಸ್ತ್ರಗಳಿಗೆ ಜನಕನಾಗಿಯೂ ಇರುವ ನಿನಗೆ ನಮಸ್ಕಾರ. ಸಕ್ರಿಯನೂ ನಿಷ್ಕ್ರಿಯನೂ ವೇದಸ್ವರೂಪನೂ ಆದ ನಿನಗೆ ನಮೋ ನಮಃ (೪೪). ಸಂಕರ್ಷಣನೂ ವಾಸುದೇವನೂ ಪ್ರದ್ಯುಮ್ನನೂ ಅನಿರುದ್ಧನೂ ಎನಿಸಿ (ಚತುರ್ವ್ಯೂಹನಾಗಿ) ಭಕ್ತರ ಪಾಲಕನಾದ ಶ್ರೀಕೃಷ್ಣಮೂರ್ತಿಗೆ ನಮೋ ನಮಃ (೪೫). ಗುಣಗಳಾದ ಚಿತ್ತಾದ್ಯಂತಃಕರಣಗಳಿಗೆ ಪ್ರಕಾಶಕನೂ ಆ ಗುಣಗಳಿಂದ

ಅವ್ಯಾಕೃತವಿಹಾರಾಯ ಸರ್ವವ್ಯಾಕೃತಸಿದ್ಧಯೇ ।
ಹೃಷೀಕೇಶ ನಮಸ್ತೇಽಸ್ತು ಮುನಯೇ ಮೌನಶೀಲಿನೇ ॥ ೪೭

ಪರಾವರಗತಿಜ್ಞಾಯ ಸರ್ವಾಧ್ಯಕ್ಷಾಯ ತೇ ನಮಃ ।
ಅವಿಶ್ವಾಯ ಚ ವಿಶ್ವಾಯ ತದ್ದ್ರಷ್ಟ್ರೇಽಸ್ಯ ಚ ಹೇತವೇ ॥ ೪೮

ತ್ವಂ ಹ್ಯಸ್ಯ ಜನ್ಮಸ್ಥಿತಿಸಂಯಮಾನ್ ಪ್ರಭೋ
ಗುಣೈರನೀಹೋಽಕೃತಕಾಲಶಕ್ತಿಧೃಕ್ ।

---

ತನ್ನನ್ನು ಆಚ್ಛಾದಿಸಿಕೊಂಡವನೂ ಗುಣವೃತ್ತಿಗಳಾದ ಚೇತನಾದಿಗಳಿಂದ* ಉಪಲಕ್ಷ್ಯನೂ ಅಂತಃಕರಣಗಳಿಗೆ ಸಾಕ್ಷಿಯೂ ಆತ್ಮಾನುಭೂತಿಸ್ವರೂಪನಾಗಿ (ಅಗೋಚರನೂ) ಆದ ನಿನಗೆ ನಮೋ ನಮಃ (೪೬). ಊಹಾತೀತವಾದ ಮಹಿಮೆಯುಳ್ಳವನೂ ಸರ್ವಕಾರ್ಯಗಳ ಉತ್ಪತ್ತಿಹೇತುವೂ ಇಂದ್ರಿಯ ಪ್ರಕಾಶಕನೂ ಆತ್ಮಾರಾಮನೂ ಆತ್ಮಾರಾಮತಾಶೀಲನೂ ಆದ ನಿನಗೆ ನಮೋ ನಮಃ (೪೭). ಸ್ಥೂಲಸೂಕ್ಷ್ಮವಸ್ತುಗಳ ಗತಿಯನ್ನರಿತವನೂ ಸರ್ವಾಂತರ್ಯಾಮಿಯೂ ಪ್ರಪಂಚರಹಿತನೂ ಪ್ರಪಂಚರೂಪನೂ ಅವೆರಡು (ಅಧ್ಯಾಸಾಪವಾದಗಳಿಗೆ) ಸಾಕ್ಷಿಯೂ ನಿಮಿತ್ತನೂ† ಆದ ನಿನಗೆ ನಮೋ ನಮಃ (೪೮). ಓ ಪ್ರಭುವೆ, ನೀನು ನಿಷ್ಕಾಮನಾದರೂ ಕಾಲಶಕ್ತಿಯನ್ನು ಧರಿಸಿ ಸತ್ತ್ವಾದಿಗುಣಗಳಿಂದ ಲೋಕದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುತ್ತಿರುವೆ. ನಿನ್ನ ಲೀಲೆ ಅಮೋಘವಾದುದು. ಪ್ರಾಣಿಗಳಲ್ಲಿ

---

* ಚಿತ್ತಕ್ಕೆ ಚೇತನವೂ (ಪ್ರಕಾಶ), ಬುದ್ಧಿಗೆ ನಿಶ್ಚಯವೂ, ಮನಸ್ಸಿಗೆ ಸಂಕಲ್ಪ ವಿಕಲ್ಪಗಳೂ, ಅಹಂಕಾರಕ್ಕೆ 'ಅಹಂ' ಎಂಬ ಜ್ಞಾನವೂ ವೃತ್ತಿಗಳು.

† ಭಗವಂತನು ಪ್ರಪಂಚದ ನಿಷೇಧಕ್ಕೆ ಅವಧಿಯಾದ್ದರಿಂದ ಪ್ರಪಂಚರಹಿತ–ಅವಿಶ್ವ. ಪ್ರಪಂಚವು ಅವನಲ್ಲಿ ಕಲ್ಪಿತವಾದ್ದರಿಂದ ವಿವರ್ತಕ್ಕೆ ಅಧಿಷ್ಠಾನವಾಗಿ ಪ್ರಪಂಚರೂಪ–ವಿಶ್ವ. ಅವನು ವಿಶ್ವನೆನಿಸುವುದು ಅಧ್ಯಾಸದಿಂದ. ಅವಿಶ್ವನೆನಿಸುವುದು ಅಪವಾದದಿಂದ. ಅವೆರಡಕ್ಕೂ ಆತನು ಸಾಕ್ಷಿ. ಅವಿದ್ಯೆಯಿಂದ ಅಧ್ಯಾಸ, ವಿದ್ಯೆಯಿಂದ ಅಪವಾದ. ಅವಿದ್ಯಾ, ವಿದ್ಯೆಗಳ ಮೂಲಕ ಅಧ್ಯಾಸಾಪವಾದಗಳಿಗೆ ಅವನು ನಿಮಿತ್ತ.

ಅವಿಶ್ವ = ವಿಶ್ವ ತೈಜಸ ಪ್ರಾಜ್ಞ ಎಂಬ ಅವಸ್ಥೆಗಳಿಲ್ಲದವನು. ವಿಶ್ವ = ಮಾಯೆಯಿಂದ ವಿಶ್ವಾದ್ಯವಸ್ಥೆಗಳುಳ್ಳವನು. ತದ್ದ್ರಷ್ಟೃ = ವಿಶ್ವಾದ್ಯವಸ್ಥೆಗಳ ಭಾವಾಭಾವಗಳಿಗೆ ಸಾಕ್ಷಿ—ಎಂಬ ಅರ್ಥಾಂತರವೂ ಉಂಟು.

ತತ್ತತ್ಸ್ವಭಾವಾನ್ ಪ್ರತಿಬೋಧಯನ್ ಸತಃ
ಸಮೀಕ್ಷಯಾಮೋಘವಿಹಾರ ಈಹಸೇ ॥ ೪೯

ತಸ್ಯೈವ ತೇಽಮೂಸ್ತನವಸ್ತ್ರಿಲೋಕ್ಯಾಂ
ಶಾಂತಾ ಅಶಾಂತಾ ಉತ ಮೂಢಯೋನಯಃ ।
ಶಾಂತಾಃ ಪ್ರಿಯಾಸ್ತೇ ಹ್ಯಧುನಾವಿತುಂ ಸತಾಂ
ಸ್ಥಾತುಶ್ಚ ತೇ ಧರ್ಮಪರೀಪ್ಸಯೇಹತಃ ॥ ೫೦

ಅಪರಾಧಃ ಸಕೃದ್ ಭರ್ತ್ರಾ ಸೋಢವ್ಯಃ ಸ್ವಪ್ರಜಾಕೃತಃ ।
ಕ್ಷಂತುಮರ್ಹಸಿ ಶಾಂತಾತ್ಮನ್ ಮೂಢಸ್ಯ ತ್ವಾಮಜಾನತಃ ॥ ೫೧

ಅನುಗೃಹ್ಣೀಷ್ವ ಭಗವನ್ ಪ್ರಾಣಾಂಸ್ತ್ಯಜತಿ ಪನ್ನಗಃ ।
ಸ್ತ್ರೀಣಾಂ ನಃ ಸಾಧುಶೋಚ್ಯಾನಾಂ ಪತಿಃ ಪ್ರಾಣಃ ಪ್ರದೀಯತಾಮ್

ವಿಧೇಹಿ ತೇ ಕಿಂಕರೀಣಾಮನುಷ್ಠೇಯಂ ತವಾಜ್ಞಯಾ ।
ಯಚ್ಛ್ರದ್ಧಯಾನುತಿಷ್ಠನ್ ವೈ ಮುಚ್ಯತೇ ಸರ್ವತೋಭಯಾತ್ ॥

---

ಸಂಸ್ಕಾರರೂಪವಾಗಿರುವ ಘೋರತ್ವಾದಿ ಸ್ವಭಾವಗಳನ್ನು ದೃಷ್ಟಿಮಾತ್ರದಿಂದಲೇ ಉದ್ಬೋಧನಗೊಳಿಸಿ ಕ್ರೀಡಿಸುತ್ತಿರುವೆ (೪೯). ಅಂತಹ ನಿನಗೆ ಶಾಂತ, ಅಶಾಂತ ಮತ್ತು ಮೂಢಯೋನಿಗಳೆನಿಸಿದ ಜೀವಿಗಳೆಲ್ಲರೂ ತನುಗಳಾಗಿ ಕ್ರೀಡಾಸಾಧನಗಳಾಗಿದ್ದಾರೆ. ಅವರಲ್ಲಿ ನಿನಗೆ ಈಗ ಶಾಂತಜೀವಿಗಳು ಪ್ರಿಯರಾಗಿದ್ದಾರೆ. ಏಕೆಂದರೆ, ಧರ್ಮಪಾಲನೆಯ ಇಚ್ಛೆಯಿಂದ ಶಾಂತರಾದ ಸಜ್ಜನರನ್ನು ಪಾಲಿಸುವುದಕ್ಕಾಗಿ ನೀನು ಉದ್ಯುಕ್ತನಾಗಿದ್ದೀಯೆ (೫೦). ತನ್ನ ಭೃತ್ಯನು ಮಾಡಿದ ಅಪರಾಧವನ್ನು ಒಡೆಯನು ಒಂದು ಸಲ ಮನ್ನಿಸಬೇಕು. ಓ ಶಾಂತಾತ್ಮನೆ, ಮೂಢನಾದ ಕಾಳಿಯನು ನಿನ್ನನ್ನು ಅರಿಯದೆ ಮಾಡಿದ ಅಪರಾಧವನ್ನು ಮನ್ನಿಸು (೫೧). ಹೇ ಭಗವನ್, ಅನುಗ್ರಹಿಸು. ಈ ಸರ್ಪನು ಸಾಯುವ ಸ್ಥಿತಿಯಲ್ಲಿದ್ದಾನೆ. ಹೆಂಗಸರಾದ ನಾವು ಅತ್ಯಂತ ಶೋಚನೀಯರಾಗಿದ್ದೇವೆ. ಹೆಂಗಸರಿಗೆ ಪತಿಯೇ ಪ್ರಾಣವಲ್ಲವೆ? ನಮ್ಮ ಪ್ರಾಣವನ್ನುಳಿಸು (೫೨). ನಿನ್ನ ದಾಸಿಯರಾದ ನಾವು ಏನು ಮಾಡಬೇಕೆಂಬುದನ್ನು ಆಜ್ಞಾಪಿಸು. ನಿನ್ನ ಆಜ್ಞೆಯನ್ನು ಭಕ್ತಿಯಿಂದ ಪಾಲಿಸತಕ್ಕವರಿಗೆ

ಶ್ರೀಶುಕ ಉವಾಚ—

**ಇತ್ಥಂ ಸ ನಾಗಪತ್ನೀಭಿರ್ಭಗವಾನ್ ಸಮಭಿಷ್ಟುತಃ ।**
**ಮೂರ್ಛಿತಂ ಭಗ್ನಶಿರಸಂ ವಿಸಸರ್ಜಾಂಘ್ರಿಕುಟ್ಟನೈಃ ॥ ೫೪**

**ಪ್ರತಿಲಬ್ಧೇಂದ್ರಿಯಪ್ರಾಣಃ ಕಾಲಿಯಃ ಶನಕೈರ್ಹರಿಮ್ ।**
**ಕೃಚ್ಛ್ರಾದ್ ಸಮುಚ್ಛ್ವಸನ್ ದೀನಃ ಕೃಷ್ಣಃ ಪ್ರಾಹ ಕೃತಾಂಜಲಿಃ ॥**

ಕಾಲಿಯ ಉವಾಚ—

**ವಯಂ ಖಲಾಃ ಸಹೋತ್ಪತ್ತ್ಯಾ ತಾಮಸಾ ದೀರ್ಘಮನ್ಯವಃ ।**
**ಸ್ವಭಾವೋ ದುಸ್ತ್ಯಜೋ ನಾಥ ಲೋಕಾನಾಂ ಯದಸದ್ಗ್ರಹಃ ॥ ೫೬**

**ತ್ವಯಾ ಸೃಷ್ಟಮಿದಂ ವಿಶ್ವಂ ಧಾತುರ್ಗುಣವಿಸರ್ಜನಮ್ ।**
**ನಾನಾಸ್ವಭಾವವೀರ್ಯೌಜೋಯೋನಿಬೀಜಾಶಯಾಕೃತಿ ॥ ೫೭**

**ವಯಂ ಚ ತತ್ರ ಭಗವನ್ ಸರ್ಪಾ ಜಾತ್ಯುರುಮನ್ಯವಃ ।**
**ಕಥಂ ತ್ಯಜಾಮಸ್ತ್ವನ್ಮಾಯಾಂ ದುಸ್ತ್ಯಜಾಂ ಮೋಹಿತಾಃ ಸ್ವಯಮ್॥**

---

ಯಾವ ಭಯವೂ ಇರುವುದಿಲ್ಲ" (೫೩). ಈ ಪ್ರಕಾರವಾಗಿ ನಾಗಪತ್ನಿಯರು ಸ್ತುತಿಸಲಾಗಿ ಭಗವಂತನು ತನ್ನ ಕಾಲ್ತುಳಿತಗಳಿಂದ ಭಗ್ನಶಿರಸ್ಕನೂ ಮೂರ್ಛಿತನೂ ಆದ ಕಾಳಿಯನಾಗನನ್ನು ತ್ಯಜಿಸಿದನು (೫೪). ಅನಂತರ ಕಾಳಿಯನು ಮೆಲ್ಲಗೆ ಚೇತರಿಸಿಕೊಂಡನು. ಇಂದ್ರಿಯಶಕ್ತಿಯೂ ಪ್ರಾಣ ಶಕ್ತಿಯೂ ಮರಳಿತು. ಅವನು ದೀನಮುಖನಾಗಿ ಕಷ್ಟದಿಂದ ಏದುತ್ತ ಕೈಮುಗಿದು ಶ್ರೀಕೃಷ್ಣನನ್ನು ಕುರಿತು ಹೀಗೆಂದನು (೫೫): "ಹೇ ಸ್ವಾಮಿ, ನಾವು ಜನ್ಮದಿಂದಲೇ ದುಷ್ಟರು ; ತಮೋಗುಣದವರು ; ದೀರ್ಘಕೋಪಿಗಳು. ಅಜ್ಞಾನದಿಂದ ಬರುವ ಕೆಟ್ಟ ಚಾಳಿಯನ್ನು ಬಿಡುವುದು ಜೀವಿಗಳಿಗೆ ಶಕ್ಯವಲ್ಲ (೫೬). ಹೇ ಸೃಷ್ಟಿಕರ್ತನೆ, ಸತ್ತ್ವಾದಿಗುಣಗಳಿಂದ ಸಂಮಿಶ್ರವಾದ ಈ ವಿಶ್ವವನ್ನು ನೀನೇ ನಿರ್ಮಿಸಿರುವೆ. ಇಲ್ಲಿರುವ ಜೀವಿಗಳ ಸ್ವಭಾವ, ಶಕ್ತಿ, ತೇಜಸ್ಸು, ಯೋನಿ, ಬೀಜ, ಅಂತಃಕರಣ, ಆಕೃತಿಗಳು ನಾನಾ ವಿಧವಾಗಿವೆ (೫೭). ಈ ವಿಶ್ವದಲ್ಲಿ ಸೇರಿದ ನಾವು ಸರ್ಪಜಾತಿಗಳು. ಜಾತಿಯಿಂದ ನಾವು ಅತ್ಯಂತ ಕೋಪಿಷ್ಠರು. ಮೂಢರಾದ ನಾವು ದುಸ್ತ್ಯಜವಾದ ನಿನ್ನ

**ಭವಾನ್ ಹಿ ಕಾರಣಂ ತತ್ರ ಸರ್ವಜ್ಞೋ ಜಗದೀಶ್ವರಃ ।**
**ಅನುಗ್ರಹಂ ನಿಗ್ರಹಂ ವಾ ಮನ್ಯಸೇ ತದ್ ವಿಧೇಹಿ ನಃ ॥ ೫೯**

**ಶ್ರೀಶುಕ ಉವಾಚ—**

**ಇತ್ಯಾಕರ್ಣ್ಯ ವಚಃ ಪ್ರಾಹ ಭಗವಾನ್ ಕಾರ್ಯಮಾನುಷಃ ।**
**ನಾತ್ರ ಸ್ಥೇಯಂ ತ್ವಯಾ ಸರ್ಪ ಸಮುದ್ರಂ ಯಾಹಿ ಮಾ ಚಿರಮ್ ।**
**ಸ್ವಜ್ಞಾತ್ಯಪತ್ಯದಾರಾಢ್ಯೋ ಗೋನೃಭಿರ್ಭುಜ್ಯತಾಂ ನದೀ ॥ ೬೦**

**ಯ ಏತತ್ ಸಂಸ್ಮರೇನ್ಮರ್ತ್ಯಸ್ತುಭ್ಯಂ ಮದನುಶಾಸನಮ್ ।**
**ಕೀರ್ತಯನ್ನುಭಯೋಃ ಸಂಧ್ಯೋರ್ನ ಯುಷ್ಮದ್ಭಯಮಾಪ್ನುಯಾತ್**

**ಯೋಽಸ್ಮಿನ್ ಸ್ನಾತ್ವಾ ಮದಾಕ್ರೀಡೇ ದೇವಾದೀಂಸ್ತರ್ಪಯೇಜ್ಜಲೈಃ।**
**ಉಪೋಷ್ಯ ಮಾಂ ಸ್ಮರನ್ನರ್ಚೇತ್ ಸರ್ವಪಾಪೈಃ ಪ್ರಮುಚ್ಯತೇ ॥ ೬೨**

---

ಮಾಯೆಯನ್ನು ಮೀರಿಹೋಗುವುದಾದರೂ ಹೇಗೆ? (೫೮). ನಿನ್ನ ಮಾಯೆಯನ್ನು ನಾವು ತ್ಯಜಿಸಬೇಕಾದರೆ ಸರ್ವಜ್ಞನೂ ಜಗದೀಶ್ವರನೂ ಆದ ನೀನೇ ಕಾರಣನಾಗಿರುವುದರಿಂದ ನಮ್ಮನ್ನು ಅನುಗ್ರಹಿಸು. ಇಲ್ಲವೇ ನಿಗ್ರಹಿಸು. ಹೇಗೆ ತೋರುವುದೋ ಹಾಗೆ ಮಾಡು" (೫೯). ಹೀಗೆ ಹೇಳಿದ ಕಾಳಿಯ ಸರ್ಪನ ನುಡಿಯನ್ನು ಕೇಳಿ ಮಾನುಷವೇಷಧಾರಿಯಾದ ಭಗವಂತನು "ಎಲೈ ಸರ್ಪ, ನೀನು ಈ ಮಡುವಿನಲ್ಲಿರಕೂಡದು. ನಿನ್ನ ಹೆಂಡತಿ ಮಕ್ಕಳು ಬಂಧುಗಳೊಡನೆ ಕೂಡಲೇ ಸಮುದ್ರಕ್ಕೆ ಹೊರಟುಹೋಗು! ಗೋವುಗಳೂ ಮನುಷ್ಯರೂ ಈ ನದಿಯನ್ನು ಉಪಯೋಗಿಸಲಿ (೬೦). ಈ ಪ್ರಕಾರವಾಗಿ ನಿನಗೆ ನಾನು ವಿಧಿಸಿದ ಆಜ್ಞೆಯನ್ನು ಯಾವ ಮಾನವನು ಸ್ಮರಿಸುವನೋ ಉಭಯಸಂಧ್ಯಾಕಾಲಗಳಲ್ಲಿಯೂ ಕೀರ್ತಿಸುವನೋ ಅವನಿಗೆ ನಿಮ್ಮ ಸರ್ಪ ಜಾತಿಯವರಿಂದ ಯಾವ ಭಯವೂ ಸಂಭವಿಸಕೂಡದು. ಇದು ನನ್ನ ಆಜ್ಞೆ (೬೧). ಅಲ್ಲದೆ ನಾನು ಕ್ರೀಡಿಸಿರುವ ಈ ನದೀಜಲದಲ್ಲಿ ಯಾರು ಸ್ನಾನ ಮಾಡಿ ದೇವಾದಿಗಳಿಗೆ ಜಲದಿಂದ ತರ್ಪಣವನ್ನೀಯುವರೋ ನನ್ನನ್ನು ಸ್ಮರಿಸುತ್ತ ಉಪವಾಸವಿದ್ದು ಅರ್ಚಿಸುವರೋ ಅವರು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ. (ನೀನಿದ್ದರೆ ಇದು ಸಾಧ್ಯವಿಲ್ಲವಾದ್ದರಿಂದಲೂ

ದ್ವೀಪಂ ರಮಣಕಂ ಹಿತ್ವಾ ಹ್ರದಮೇತಮುಪಾಶ್ರಿತಃ ।
ಯದ್ಭಯಾತ್ ಸ ಸುಪರ್ಣಸ್ತ್ವಾಂ ನಾದ್ಯಾನ್ಮತ್ಪಾದಲಾಂಛಿತಮ್ ॥

ಶ್ರೀಶುಕ ಉವಾಚ—

ಏವಮುಕ್ತೋ ಭಗವತಾ ಕೃಷ್ಣೇನಾದ್ಭುತಕರ್ಮಣಾ ।
ತಂ ಪೂಜಯಾಮಾಸ ಮುದಾ ನಾಗಪತ್ನ್ಯಶ್ಚ ಸಾದರಮ್ ॥ ೬೪

ದಿವ್ಯಾಂಬರಸ್ರಜ್‌ಮಣಿಭಿಃ ಪರಾರ್ಧ್ಯೈರಪಿ ಭೂಷಣೈಃ ।
ದಿವ್ಯಗಂಧಾನುಲೇಪೈಶ್ಚ ಮಹತ್ಯೋತ್ಪಲಮಾಲಯಾ ॥ ೬೫

ಪೂಜಯಿತ್ವಾ ಜಗನ್ನಾಥಂ ಪ್ರಸಾದ್ಯ ಗರುಡಧ್ವಜಮ್ ।
ತತಃ ಪ್ರೀತೋಽಭ್ಯನುಜ್ಞಾತಃ ಪರಿಕ್ರಮ್ಯಾಭಿವಂದ್ಯ ತಮ್ ॥ ೬೬

ಸಕಲತ್ರಸುಹೃತ್ಪುತ್ರೋ ದ್ವೀಪಮಬ್ಧೇರ್ಜಗಾಮ ಹ ।
ತದೈವ ಸಾಮೃತಜಲಾ ಯಮುನಾ ನಿರ್ವಿಷಾಭವತ್ ॥

---

ನೀನು ಇಲ್ಲಿಂದ ಹೊರಡಬೇಕು) (೬೨). ಗರುಡನ ಭಯದಿಂದ ನೀನು ರಮಣಕದ್ವೀಪವನ್ನು ತ್ಯಜಿಸಿ ಈ ಮಡುವಿಗೆ ಬಂದು ಸೇರಿಕೊಂಡಿದ್ದೀಯಲ್ಲವೆ? ನನ್ನ ಹೆಜ್ಜೆಯ ಗುರುತುಗಳಿರುವ ನಿನ್ನನ್ನು ಗರುಡನು ಎಂದಿಗೂ ಭಕ್ಷಿಸಲಾರನು" ಎಂದು ತಿಳಿಸಿದನು (೬೩). ಅದ್ಭುತಕರ್ಮನಾದ ಭಗವಾನ್ ಶ್ರೀಕೃಷ್ಣನು ಹೀಗೆ ತಿಳಿಸಲಾಗಿ, ಕಾಳಿಯನಾಗನೂ ನಾಗಪತ್ನಿಯರೂ ಸಂತುಷ್ಟರಾಗಿ ಭಕ್ತಿಯಿಂದ ಆತನನ್ನು ಪೂಜಿಸಿದರು (೬೪). ದಿವ್ಯವಾದ ವಸ್ತ್ರ ಹಾರ ರತ್ನಗಳಿಂದಲೂ ಅಮೂಲ್ಯಗಳಾದ ಭೂಷಣಗಳಿಂದಲೂ ದಿವ್ಯ ಗಂಧಾನುಲೇಪನಗಳಿಂದಲೂ ದೊಡ್ಡದಾದ ನೈದಿಲೆಗಳ ಮಾಲೆಯಿಂದಲೂ ಶ್ರೀಕೃಷ್ಣನನ್ನು ಅರ್ಚಿಸಿದರು (೬೫). ಕಾಳಿಯನು ಸಂತೋಷದಿಂದ ಜಗನ್ನಾಥನಾದ ಗರುಡಧ್ವಜನನ್ನು ಪೂಜಿಸಿ ಪ್ರಾರ್ಥಿಸಿ ಪ್ರಸನ್ನಗೊಳಿಸಿ ಅನುಮತಿಯನ್ನು ಪಡೆದು ಪ್ರದಕ್ಷಿಣೆಮಾಡಿ ವಂದಿಸಿದನು (೬೬). ಅನಂತರ ಪತ್ನೀಪುತ್ರಮಿತ್ರಪರಿವೃತನಾಗಿ ಸಮುದ್ರದ ಒಂದು ದ್ವೀಪಕ್ಕೆ ಹೊರಟುಹೋದನು. ಲೀಲಾಮಾನುಷವಿಗ್ರಹನಾದ ಭಗವಂತನ ಅನುಗ್ರಹದಿಂದ

**ಅನುಗ್ರಹಾದ್ ಭಗವತಃ ಕ್ರೀಡಾಮಾನುಷರೂಪಿಣಃ ॥ ೬೭**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷೋಡಶಾಧ್ಯಾಯಃ

---

## ಸಪ್ತದಶಾಧ್ಯಾಯಃ

ರಾಜೋವಾಚ—

**ನಾಗಾಲಯಂ ರಮಣಕಂ ಕಸ್ಮಾತ್ತತ್ಯಾಜ ಕಾಲಿಯಃ ।**
**ಕೃತಂ ಕಿಂ ವಾ ಸುಪರ್ಣಸ್ಯ ತೇನೈಕೇನಾಸಮಂಜಸಮ್ ॥ ೧**

ಶ್ರೀಶುಕ ಉವಾಚ—

**ಉಪಾಹಾರ್ಯೈಃ ಸರ್ಪಜನೈರ್ಮಾಸಿ ಮಾಸೀಹ ಯೋ ಬಲಿಃ ।**
**ವಾನಸ್ಪತ್ಯೋ ಮಹಾಬಾಹೋ ನಾಗಾನಾಂ ಪ್ರಾಙ್ನಿರೂಪಿತಃ ॥**

---

ಒಡನೆಯೇ ಯಮುನಾ ನದಿಯು ವಿಷರಹಿತವಾಯಿತು. ಜಲವು ಅಮೃತ ಸಮಾನವಾಯಿತು (೬೭).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹದಿನಾರನೆಯ ಅಧ್ಯಾಯ

---

## ಅಧ್ಯಾಯ ೧೭

ಕಾಳಿಯನು ಯಮುನಾನದಿಯ ಮಡುವಿನಲ್ಲಿ ನೆಲೆಸಿದ್ದಕ್ಕೆ ಕಾರಣ. ಶ್ರೀಕೃಷ್ಣನು ಕಾಳ್ಗಿಚ್ಚಿನಿಂದ ಗೋಪರನ್ನು ರಕ್ಷಿಸುವುದು

ಪರೀಕ್ಷಿತರಾಜನು ಹೇಳಿದನು "ಮುನಿಗಳೆ, ಸರ್ಪಗಳಿಗೆ ನಿವಾಸವಾದ ರಮಣಕದ್ವೀಪವನ್ನು ಕಾಳಿಯನು ತ್ಯಜಿಸಿ ಬಂದುದೇಕೆ? ಅವನೊಬ್ಬನಿಂದ ಗರುಡನಿಗಾದ ಅಪ್ರಿಯಕಾರ್ಯವಾದರೂ ಯಾವುದು?" (೧). ಶುಕಮಹರ್ಷಿಗಳು ಹೇಳಿದರು: ಮಹಾಬಾಹು–ಪರೀಕ್ಷಿತ, ಸರ್ಪಗಳಿಗೆ ಅಂಜುವ ಜನರು ತಿಂಗಳು ತಿಂಗಳೂ ಮರದ ಬುಡದಲ್ಲಿ ಸರ್ಪಗಳಿಗಾಗಿ

ಸ್ವಂ ಸ್ವಂ ಭಾಗಂ ಪ್ರಯಚ್ಛಂತಿ ನಾಗಾಃ ಪರ್ವಣಿ ಪರ್ವಣಿ ।
ಗೋಪೀಥಾಯಾತ್ಮನಃ ಸರ್ವೇ ಸುಪರ್ಣಾಯ ಮಹಾತ್ಮನೇ ॥ ೩

ವಿಷವೀರ್ಯಮದಾವಿಷ್ಟಃ ಕಾದ್ರವೇಯಸ್ತು ಕಾಲಿಯಃ ।
ಕದರ್ಥೀಕೃತ್ಯ ಗರುಡಂ ಸ್ವಯಂ ತಂ ಬುಭುಜೇ ಬಲಿಮ್ ॥ ೪

ತಚ್ಛ್ರುತ್ವಾ ಕುಪಿತೋ ರಾಜನ್ ಭಗವಾನ್ ಭಗವತ್ಪ್ರಿಯಃ ।
ವಿಜಿಘಾಂಸುರ್ಮಹಾವೇಗಃ ಕಾಲಿಯಂ ಸಮುಪಾದ್ರವತ್ ॥ ೫

ತಮಾಪತಂತಂ ತರಸಾ ವಿಷಾಯುಧಃ
ಪ್ರತ್ಯಭ್ಯಯಾದುಚ್ಛ್ರಿತನೈಕಮಸ್ತಕಃ ।
ದದ್ಭಿಃ ಸುಪರ್ಣಂ ವ್ಯದಶದ್ ದದಾಯುಧಃ
ಕರಾಲಜಿಹ್ವೋಚ್ಛ್ವಸಿತೋಗ್ರಲೋಚನಃ ॥ ೬

---

ಭಕ್ಷ್ಯಗಳಿಂದ ಮೊದಲು ಬಲಿಯನ್ನರ್ಪಿಸುವುದುಂಟು. ಅದರಲ್ಲಿ ತಮ್ಮ ತಮ್ಮ ಒಂದು ಭಾಗವನ್ನು ಎಲ್ಲ ಸರ್ಪಗಳೂ ತಮ್ಮನ್ನು ರಕ್ಷಿಸಲೆಂದು ಮಹಾತ್ಮನಾದ ಗರುಡನಿಗೆ ಪ್ರತಿಯೊಂದು ಪರ್ವಕಾಲದಲ್ಲಿಯೂ ಕೊಡುತ್ತಿದ್ದರು.* (೨-೩). ಘೋರವಿಷ, ಪರಾಕ್ರಮಗಳಿಂದ ಮದಿಸಿದ ಕಾಳಿಯಸರ್ಪನು ಗರುಡನನ್ನು ಅಲ್ಲಗಳೆದು ಆ ಬಲಿಯನ್ನು ತಾನೇ ತಿಂದುಬಿಡುತ್ತಿದ್ದನು! (೪). ಅದನ್ನು ಕೇಳಿ ಭಗವಂತನಿಗೆ ಪ್ರಿಯನೂ ಮಹಾತ್ಮನೂ ಆದ ಗರುಡನು ಕಾಳಿಯನನ್ನು ಕೊಲ್ಲಬೇಕೆಂದು ಮಹಾವೇಗದಿಂದ ನುಗ್ಗಿ ಬಂದನು. ಹಾಗೆ ಬರುತ್ತಿದ್ದ ಅವನನ್ನು ವಿಷಾಯುಧನಾದ ಕಾಳಿಯನು ರಭಸದಿಂದ ಎದುರಿಸಿದನು. ಅವನ ಹಲವಾರು ಹೆಡೆಗಳು ಸೆಟೆದು ನಿಂತವು. ಕರಾಳವಾದ ನಾಲಗೆಗಳು ಚಾಚಿ ಬುಸಗುಟ್ಟಿದವು. ಕಣ್ಣುಗಳು ಉಗ್ರವಾದವು. ದಂತಾಯುಧನಾದ ಕಾಳಿಯನು ಹಲ್ಲುಗಳಿಂದ ಸುಪರ್ಣನನ್ನು ಕಚ್ಚತೊಡಗಿ

---

* ಒಂದೊಂದು ಸರ್ಪವು ಸರದಿಯಂತೆ ಗರುಡನಿಗೆ ಆಹಾರವಾಗುತ್ತ ಹೋಗಬೇಕೆಂದು ಅವರಲ್ಲಿ ಒಪ್ಪಂದವಾಗಿತ್ತೆಂಬ ಕಥೆ ಇದೆ. ಅದನ್ನೂ ಇಲ್ಲಿ ಅನ್ವಯಿಸಿ ಅರ್ಥ ಹೇಳಬಹುದು.

*

ತಂ ತಾರ್ಕ್ಷ್ಯಪುತ್ರಃ ಸ ನಿರಸ್ಯ ಮನ್ಯುಮಾನ್
ಪ್ರಚಂಡವೇಗೋ ಮಧುಸೂದನಾಸನಃ ।
ಪಕ್ಷೇಣ ಸವ್ಯೇನ ಹಿರಣ್ಯರೋಚಿಷಾ
ಜಘಾನ ಕದ್ರೂಸುತಮುಗ್ರವಿಕ್ರಮಃ ॥ ೭

ಸುಪರ್ಣಪಕ್ಷಾಭಿಹತಃ ಕಾಲಿಯೋಽತೀವ ವಿಹ್ವಲಃ ।
ಹ್ರದಂ ವಿವೇಶ ಕಾಲಿಂದ್ಯಾಸ್ತದಗಮ್ಯಂ ದುರಾಸದಮ್ ॥ ೮

ತತ್ರೈಕದಾ ಜಲಚರಂ ಗರುಡೋ ಭಕ್ಷ್ಯಮೀಪ್ಸಿತಮ್ ।
ನಿವಾರಿತಃ ಸೌಭರಿಣಾ ಪ್ರಸಹ್ಯ ಕ್ಷುಧಿತೋಽಹರತ್ ॥ ೯

ಮೀನಾನ್ ಸುದುಃಖಿತಾನ್ ದೃಷ್ಟ್ವಾ ದೀನಾನ್ ಮೀನಪತೌ ಹತೇ ।
ಕೃಪಯಾ ಸೌಭರಿಃ ಪ್ರಾಹ ತತ್ರತ್ಯಕ್ಷೇಮಮಾಚರನ್ ॥ ೧೦

ಅತ್ರ ಪ್ರವಿಶ್ಯ ಗರುಡೋ ಯದಿ ಮತ್ಸ್ಯಾನ್ ಸ ಖಾದತಿ ।
ಸದ್ಯಃ ಪ್ರಾಣೈರ್ವಿಯುಜ್ಯೇತ ಸತ್ಯಮೇತದ್ ಬ್ರವೀಮ್ಯಹಮ್ ॥ ೧೧

---

ದನು (೫–೬). ಆಗ ತಾರ್ಕ್ಷ್ಯಪುತ್ರನೂ ವಿಷ್ಣುವಾಹನನೂ ಉಗ್ರ ಪರಾಕ್ರಮಿಯೂ ಆದ ಗರುಡನು ಬಂಗಾರದಂತೆ ಬೆಳಗುವ ಎಡರೆಕ್ಕೆಯಿಂದ ಕಾಳಿಯನನ್ನು ಅಪ್ಪಳಿಸಿದನು (೭). ಗರುಡನ ರೆಕ್ಕೆಯ ಬಡಿತವನ್ನು ತಿಂದ ಕಾಳಿಯನು ಅತ್ಯಂತ ವಿಹ್ವಲನಾಗಿ, ಗರುಡನಿಗೆ ·ಅಗಮ್ಯವೂ ಒಳಹೊಗಲಶಕ್ಯವೂ ಆದ ಕಾಳಿಂದಿಯ ಮಡುವಿಗೆ ಹೋಗಿ ಸೇರಿಕೊಂಡನು (೮). (ಏಕೆಂದರೆ) ಅಲ್ಲಿ ಒಮ್ಮೆ ಹಸಿದಿದ್ದ ಗರುಡನು ತನಗೆ ಪ್ರಿಯವಾದ ಮೀನನ್ನು, ಸೌಭರಿಯೆಂಬ ಮುನಿಯು ಬೇಡವೆಂದು ತಡೆದರೂ ಕೇಳದೆ, ಹಠದಿಂದ ಅಪಹರಿಸಿದ್ದನು. ಆಗ ಒಡೆಯನಾದ ಮೀನನ್ನು ಅಪಹರಿಸಿದ್ದರಿಂದ ಮಡುವಿನಲ್ಲಿದ್ದ ಮೀನುಗಳು ದೈನ್ಯದಿಂದ ದುಃಖಿಸಿದವು. ಅವುಗಳ ದುಃಖವನ್ನೂ ದೈನ್ಯವನ್ನೂ ಕಂಡು ಕಾರುಣ್ಯದಿಂದ ಸೌಭರಿಯು, ಅಲ್ಲಿರತಕ್ಕವರಿಗೆ ಕ್ಷೇಮವಾಗಲೆಂಬ ಉದ್ದೇಶದಿಂದ ಹೀಗೆ ಉಗ್ಗಡಿಸಿದನು (೯–೧೦). "ಆ ಗರುಡನು ಮತ್ತೆ ಇಲ್ಲಿಗೆ ಬಂದು ಮತ್ಸ್ಯಗಳನ್ನು ತಿಂದಲ್ಲಿ, ಕೂಡಲೆ

ತಂ ಕಾಲಿಯಃ ಪರಂ ವೇದ ನಾನ್ಯಃ ಕಶ್ಚನ ಲೇಲಿಹಃ ।
ಅವಾತ್ಸೀದ್ ಗರುಡಾದ್ ಭೀತಃ ಕೃಷ್ಣೇನ ಚ ವಿವಾಸಿತಃ ॥ ೧೨

ಕೃಷ್ಣಂ ಹ್ರದಾದ್ ವಿನಿಷ್ಕ್ರಾಂತಂ ದಿವ್ಯಸ್ರಗ್ಗಂಧವಾಸಸಮ್ ।
ಮಹಾಮಣಿಗಣಾಕೀರ್ಣಂ ಜಾಂಬೂನದಪರಿಷ್ಕೃತಮ್ ॥ ೧೩

ಉಪಲಭ್ಯೋತ್ಥಿತಾಃ ಸರ್ವೇ ಲಬ್ಧಪ್ರಾಣಾ ಇವಾಸವಃ ।
ಪ್ರಮೋದನಿಭೃತಾತ್ಮನೋ ಗೋಪಾಃ ಪ್ರೀತ್ಯಾಭಿರೇಭಿರೇ ॥ ೧೪

ಯಶೋದಾ ರೋಹಿಣೀ ನಂದೋ ಗೋಪ್ಯೋ ಗೋಪಾಶ್ಚ ಕೌರವ ।
ಕೃಷ್ಣಂ ಸಮೇತ್ಯ ಲಬ್ಧೇಹಾ ಆಸನ್ ಲಬ್ಧಮನೋರಥಾಃ ॥ ೧೫

ರಾಮಶ್ಚಾಚ್ಯುತಮಾಲಿಂಗ್ಯ ಜಹಾಸಾಸ್ಯಾನುಭಾವವಿತ್ ।
ನಗಾ ಗಾವೋ ವೃಷಾ ವತ್ಸಾ ಲೇಭಿರೇ ಪರಮಾಂ ಮುದಮ್ ॥ ೧೬

ನಂದಂ ವಿಪ್ರಾಃ ಸಮಾಗತ್ಯ ಗುರವಃ ಸಕಲತ್ರಕಾಃ ।
ಊಚುಸ್ತೇ ಕಾಲಿಯಗ್ರಸ್ತೋ ದಿಷ್ಟ್ಯಾ ಮುಕ್ತಸ್ತವಾತ್ಮಜಃ ॥ ೧೭

---

ಅವನ ಪ್ರಾಣವು ತೊಲಗಿಹೋಗಲಿ!" (೧೧). ಈ ವಿಷಯವು ಕಾಳಿಯನೊಬ್ಬನಿಗೆ ತಿಳಿದಿತ್ತು. ಇನ್ನು ಯಾವ ಸರ್ಪಕ್ಕೂ ತಿಳಿದಿರಲಿಲ್ಲ. ಆದ್ದರಿಂದ ಗರುಡನಿಗೆ ಹೆದರಿ ಅಲ್ಲಿ ನೆಲೆಸಿದ್ದನು. ಶ್ರೀಕೃಷ್ಣನು ಅವನನ್ನು ಓಡಿಸಿದನು (೧೨). ಅನಂತರ ಶ್ರೀಕೃಷ್ಣನು ದಿವ್ಯವಾದ ಪುಷ್ಪಮಾಲಾ ಗಂಧವಸ್ತ್ರಗಳನ್ನೂ ಶ್ರೇಷ್ಠರತ್ನಗಳನ್ನೂ ಧರಿಸಿ ಸುವರ್ಣಭೂಷಣ ಭೂಷಿತನಾಗಿ ಮಡುವಿನಿಂದ ಹೊರಗೆ ಬಂದನು (೧೩). ಒಡನೆಯೇ ಅಲ್ಲಿದ್ದ ಗೋಪಾಲರೆಲ್ಲರಿಗೂ, ಇಂದ್ರಿಯಗಳಿಗೆ ಪ್ರಾಣವು ಬಂದಂತಾಗಿ, ಎದ್ದುಬಂದು ಶ್ರೀಕೃಷ್ಣನನ್ನು ಅಪ್ಪಿಕೊಂಡರು. ಪರೀಕ್ಷಿತ, ಯಶೋದೆ ರೋಹಿಣಿ ನಂದಗೋಪ ಗೋಪಿಯರೆಲ್ಲರಿಗೂ ಪ್ರಾಣಬಂದಿತು. ಮನಸ್ಸಿಗೆ ಹರ್ಷವಾಯಿತು (೧೪–೧೫). ಅಚ್ಯುತನ ಮಹಿಮೆಯನ್ನರಿತಿದ್ದ ಬಲರಾಮನು ಅವನನ್ನು ಆಲಂಗಿಸಿಕೊಂಡು ನಕ್ಕನು. (ಬಾಡಿದ್ದ) ಮರಗಳೂ ನಳನಳಿಸಿದವು. ಹಸುಗಳಿಗೂ ಹೋರಿಗಳಿಗೂ ಕರುಗಳಿಗೂ ಪರಮಾನಂದವಾಯಿತು (೧೬). ಹಿರಿಯರಾದ ವಿಪ್ರರು ಪತ್ನೀಸಹಿತರಾಗಿ ಆಗಮಿಸಿ ನಂದನನ್ನು ಕುರಿತು

**ದೇಹಿ ದಾನಂ ದ್ವಿಜಾತೀನಾಂ ಕೃಷ್ಣನಿರ್ಮುಕ್ತಿಹೇತವೇ ।**
**ನಂದಃ ಪ್ರೀತಮನಾ ರಾಜನ್ ಗಾಃ ಸುವರ್ಣಂ ತದಾದಿಶತ್ ॥ ೧೮**

**ಯಶೋದಾಪಿ ಮಹಾಭಾಗಾ ನಷ್ಟಲಬ್ಧಪ್ರಜಾ ಸತೀ ।**
**ಪರಿಷ್ವಜ್ಯಾಂಕಮಾರೋಪ್ಯ ಮುಮೋಚಾಶ್ರುಕಲಾಂ ಮುಹುಃ ॥ ೧೯**

**ತಾಂ ರಾತ್ರಿಂ ತತ್ರ ರಾಜೇಂದ್ರ ಕ್ಷುತ್ತೃಡ್ಭ್ಯಾಂ ಶ್ರಮಕರ್ಶಿತಾಃ ।**
**ಊಷುರ್ವ್ರಜೌಕಸೋ ಗಾವಃ ಕಾಲಿಂದ್ಯಾ ಉಪಕೂಲತಃ ॥ ೨೦**

**ತದಾ ಶುಚಿವನೋದ್ಭೂತೋ ದಾವಾಗ್ನಿಃ ಸರ್ವತೋ ವ್ರಜಮ್ ।**
**ಸುಪ್ತಂ ನಿಶೀಥ ಆವೃತ್ಯ ಪ್ರದಗ್ಧುಮುಪಚಕ್ರಮೇ ॥ ೨೧**

**ತತ ಉತ್ಥಾಯ ಸಂಭ್ರಾಂತಾ ದಹ್ಯಮಾನಾ ವ್ರಜೌಕಸಃ ।**
**ಕೃಷ್ಣಂ ಯಯುಸ್ತೇ ಶರಣಂ ಮಾಯಾಮನುಜಮೀಶ್ವರಮ್ ॥ ೨೨**

**ಕೃಷ್ಣ ಕೃಷ್ಣ ಮಹಾಭಾಗ ಹೇ ರಾಮಾಮಿತವಿಕ್ರಮ ।**
**ಏಷ ಘೋರತಮೋ ವಹ್ನಿಸ್ತಾವಕಾನ್ ಗ್ರಸತೇ ಹಿ ನಃ ॥ ೨೩**

---

"ನಂದ, ಕಾಳಿಯ ಸರ್ಪಗ್ರಸ್ತನಾದ ನಿನ್ನ ಮಗನು ದೈವಬಲದಿಂದ ಬಿಡುಗಡೆಯಾದನು. ಅವನಿಗೆ ಮಂಗಳವಾಗಲೆಂದು ದ್ವಿಜರಿಗೆ ದಾನವನ್ನು ಮಾಡು" ಎಂದರು. ನಂದನು ಸಂತುಷ್ಟನಾಗಿ ಹಸುಗಳನ್ನೂ ಹಿರಣ್ಯವನ್ನೂ ದ್ವಿಜರಿಗೆ ದಾನಮಾಡಿದನು (೧೭–೧೮). ಗತಿಸಿಹೋದ ಮಗನು ಲಭಿಸಿದನೆಂದು ತಿಳಿದು ಸಾಧ್ವಿಯೂ ಭಾಗ್ಯಶಾಲಿನಿಯೂ ಆದ ಯಶೋದೆಯು ಕೃಷ್ಣನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮತ್ತೆಮತ್ತೆ ಕಣ್ಣೀರು ಸುರಿಸಿದಳು (೧೯). ಪರೀಕ್ಷಿತರಾಜ, ಹಸಿವು ಬಾಯಾರಿಕೆ ಬಳಲಿಕೆಗಳಿಂದ ಕಂಗೆಟ್ಟ ವ್ರಜವಾಸಿಗಳೂ ಗೋವುಗಳೂ ಆ ರಾತ್ರಿ ಯಮುನಾತೀರದಲ್ಲಿದ್ದರು. ಆಗ ಬೇಸಿಗೆಯ ಕಾಡಿನಲ್ಲಿದ್ದ ಕಾಳ್ಗಿಚ್ಚು ಸುತ್ತಲೂ ಪಸರಿಸಿ, ರಾತ್ರಿಯಲ್ಲಿ ಮಲಗಿದ್ದ ವ್ರಜವಾಸಿಗಳನ್ನು ಆವರಿಸಿ ಸುಡಲಾರಂಭಿಸಿತು (೨೦–೨೧). ಸುಟ್ಟು ಹೋಗುತ್ತಿದ್ದ ಅವರು ಗಾಬರಿಯಿಂದ ಎದ್ದು, ಮಾಯಾಮನುಜನೂ ಸರ್ವಸಮರ್ಥನೂ ಆದ ಶ್ರೀಕೃಷ್ಣನನ್ನು ಮರೆಹೊಕ್ಕರು. "ಹೇ ಕೃಷ್ಣ, ಕೃಷ್ಣ, ಮಹಾಭಾಗ! ಓ ಪರಾಕ್ರಮಿ, ರಾಮ! ಭೀಕರವಾದ ಈ ಕಾಳ್ಗಿಚ್ಚು ನಮ್ಮನ್ನು ನುಂಗಿಬಿಡುತ್ತಿದೆ. ನಾವು ನಿನ್ನವರು. ಇದು ದುಸ್ತರವಾದ

ಸುದುಸ್ತರಾನ್ನಃ ಸ್ವಾನ್ ಪಾಹಿ ಕಾಲಗ್ನೇಃ ಸುಹೃದಃ ಪ್ರಭೋ ।
ನ ಶಕ್ನುಮಸ್ತ್ವಚ್ಚರಣಂ ಸಂತ್ಯಕ್ತುಮಕುತೋಭಯಮ್ ॥ ೨೪

ಇತ್ಥಂ ಸ್ವಜನವೈಕ್ಲವ್ಯಂ ನಿರೀಕ್ಷ್ಯ ಜಗದೀಶ್ವರಃ ।
ತಮಗ್ನಿಮಪಿಬತ್ತೀವ್ರಮನಂತೋಽನಂತಶಕ್ತಿಧೃತ್ ॥ ೨೫

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತದಶಾಧ್ಯಾಯಃ



ಕಾಲಾಗ್ನಿಯೇ ಸರಿ. ನಿನ್ನವರೂ ಆಪ್ತರೂ ಆದ ನಮ್ಮನ್ನು ಇದರಿಂದ ಪಾರುಮಾಡು. ಓ ಪ್ರಭು, ನಿರ್ಭಯವಾದ ನಿನ್ನ ಪಾದವನ್ನು ಬಿಟ್ಟು ಹೋಗಲಾರೆವು" ಎಂದು ಹಲುಬಿದರು (೨೨–೨೪). ಈ ರೀತಿಯಾದ ತನ್ನವರ ಗೋಳಾಟವನ್ನು ಕಂಡು ಜಗದೀಶ್ವರನು ಘೋರವಾದ ಆ ಕಾಳ್ಗಿಚ್ಚನ್ನು ಹೀರಿದನು. ಅನಂತನು ಅನಂತಶಕ್ತಿಯುಳ್ಳವನು (೨೫).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹದಿನೇಳನೆಯ ಅಧ್ಯಾಯ



## ಅಷ್ಟಾದಶಾಧ್ಯಾಯಃ

ಶ್ರೀಶುಕ ಉವಾಚ—

**ಅಥ ಕೃಷ್ಣಃ ಪರಿವೃತೋ ಜ್ಞಾತಿಭಿರ್ಮುದಿತಾತ್ಮಭಿಃ ।**
**ಅನುಗೀಯಮಾನೋ ನ್ಯವಿಶದ್ ವ್ರಜಂ ಗೋಕುಲಮಂಡಿತಮ್ ॥ ೧**

**ವ್ರಜೇ ವಿಕ್ರೀಡತೋರೇವಂ ಗೋಪಾಲಚ್ಛದ್ಮಮಾಯಯಾ ।**
**ಗ್ರೀಷ್ಮೋ ನಾಮರ್ತುರಭವನ್ನಾತಿಪ್ರೇಯಾನ್ ಶರೀರಿಣಾಮ್ ॥ ೨**

**ಸ ಚ ವೃಂದಾವನಗುಣೈರ್ವಸಂತ ಇವ ಲಕ್ಷಿತಃ ।**
**ಯತ್ರಾಸ್ತೇ ಭಗವಾನ್ ಸಾಕ್ಷಾದ್ ರಾಮೇಣ ಸಹ ಕೇಶವಃ ॥ ೩**

**ಯತ್ರ ನಿರ್ಝರನಿರ್ಹ್ರಾದನಿವೃತ್ತಸ್ವನ ಝಿಲ್ಲಿಕಮ್ ।**
**ಶಶ್ವತ್ತಚ್ಛೀಕರರ್ಜೀಷದ್ರುಮಮಂಡಲಮಂಡಿತಮ್ ॥ ೪**

## ಅಧ್ಯಾಯ ೧೮

### ಬಲರಾಮನಿಂದ ಪ್ರಲಂಬಾಸುರನ ವಧೆ

ಶ್ರೀಶುಕಮಹರ್ಷಿಗಳು ಹೇಳಿದರು: ಅನಂತರ ಸಂತುಷ್ಟರಾದ ಜ್ಞಾನಿಗಳು ಸ್ತುತಿಸುತ್ತಿರಲು, ಶ್ರೀಕೃಷ್ಣನು ಗೋವುಗಳಿಂದ ಕಂಗೊಳಿಸುವ ವ್ರಜಕ್ಕೆ ಹೋದನು. ಹೀಗೆ ಗೋಪಾಲನೆಯೆಂಬ ನೆವದ ಮಾಯೆಯನ್ನವಲಂಬಿಸಿ ಶ್ರೀಕೃಷ್ಣಬಲರಾಮರು ಕ್ರೀಡಿಸುತ್ತಿರಲಾಗಿ, ಗ್ರೀಷ್ಮಋತು ಬಂದಿತು. ಜನರಿಗೆ ಅದು ಅಷ್ಟು ಪ್ರಿಯವಾದುದಲ್ಲ (೧–೨). ಆದರೆ ಬಲರಾಮನೊಡನೆ ಸಾಕ್ಷಾತ್ ಕೇಶವನು ಕ್ರೀಡಿಸುತ್ತ ಇರುವ ವೃಂದಾವನದಲ್ಲಿ, ಅದರ (ಮಹಿಮಾನ್ವಿತ) ಗುಣಗಳಿಂದ ಆ ಬೇಸಿಗೆ ವಸಂತಋತುವಿನಂತೆ ಗೋಚರಿಸಿತು! (೩). ಅಲ್ಲಿ ಬೇಸಿಗೆಯಲ್ಲಿಯೂ ಹರಿವ ಜರಿಗಳ ಕಲಕಲಧ್ವನಿಯಿಂದ ಜೀರುಂಡೆಗಳ ಕರ್ಕಶಧ್ವನಿ ಅಡಗಿರುತ್ತಿತ್ತು. ಸದಾ ಜರಿಗಳ ತುಂತುರು ಹನಿಗಳಿಂದ

ಸರಿತ್ಸರಃಪ್ರಸ್ರವಣೋರ್ಮಿವಾಯುನಾ
ಕಹ್ಲಾರಕಂಜೋತ್ಪಲರೇಣುಹಾರಿಣಾ ।
ನ ವಿದ್ಯತೇ ಯತ್ರ ವನೌಕಸಾಂ ದವೋ
ನಿದಾಘವಹ್ನ್ಯರ್ಕಭವೋಽತಿಶಾದ್ವಲೇ ॥ ೫

ಅಗಾಧತೋಯಹ್ರದಿನೀತಟೋರ್ಮಿಭಿ-
ರ್ದ್ರವತ್ಪುರೀಷ್ಯಾಃ ಪುಲಿನೈಃ ಸಮಂತತಃ ।
ನ ಯತ್ರ ಚಂಡಾಂಶುಕರಾ ವಿಷೋಲ್ಬಣಾ
ಭುವೋ ರಸಂ ಶಾದ್ವಲಿತಂ ಚ ಗೃಹ್ಣತೇ ॥ ೬

ವನಂ ಕುಸುಮಿತಂ ಶ್ರೀಮನ್ನದಚ್ಚಿತ್ರ ಮೃಗದ್ವಿಜಮ್ ।
ಗಾಯನ್ಮಯೂರಭ್ರಮರಂ ಕೂಜತ್ಕೋಕಿಲಸಾರಸಮ್ ॥ ೭

ಕ್ರೀಡಿಷ್ಯಮಾಣಸ್ತತ್ ಕೃಷ್ಣೋ ಭಗವಾನ್ ಬಲಸಂಯುತಃ ।
ವೇಣುಂ ವಿರಣಯನ್ ಗೋಪೈರ್ಗೋಧನೈಃ ಸಂವೃತೋಽವಿಶತ್ ॥

---

ಮರಗಳ ಗುಂಪು ಒದ್ದೆಯಾಗಿರುತ್ತಿತ್ತು (೪). ಬಿಳಿನೈದಿಲೆ ತಾವರೆ ಕನ್ನೈದಿಲೆಗಳ ರೇಣುಗಳನ್ನು ಹೊತ್ತು ಹೊಳೆಕೊಳಜರಿಗಳ ತೆರೆಗಳ ಮೇಲೆ ಬೀಸಿ ಬರುವ ತಂಗಾಳಿಯಿಂದ, ಹಸಿರುಹುಲ್ಲುಗಾವಲಿನಿಂದ ತುಂಬಿದ ಬೃಂದಾವನದಲ್ಲಿ ವ್ರಜವಾಸಿಗಳಿಗೆ ಬೇಸಿಗೆಯಲ್ಲೂ ಬೆಂಕಿಯಿಂದಾಗಲಿ ಸೂರ್ಯನಿಂದಾಗಲಿ ತಾಪವಿರಲಿಲ್ಲ (೫). ಆ ವೃಂದಾವನದಲ್ಲಿ ಅಲೆಗಳು ದಡಗಳಿಗೆ ತಾಗುವಂತೆ ತುಂಬಿದ ಹೊಳೆಗಳು ಹರಿಯುತ್ತಿದ್ದವು. ಅದರಿಂದ ಸುತ್ತಲಿರುವ ಮರಳುದಿಣ್ಣೆ ಒದ್ದೆಯಾಗಿ ನೆಲವು ಕೆಸರಾಗಿರುತ್ತಿತ್ತು. ಆದ್ದರಿಂದ ಹಸಿರು ನೆಲದ ರಸವನ್ನು, ವಿಷದಂತೆ ಉಲ್ಬಣವಾದ ಸೂರ್ಯಕಿರಣಗಳಿಗೂ ಹೀರಲಾಗುತ್ತಿರಲಿಲ್ಲ (೬). ಆ ವ್ರಜವನವು ಹೂವರಳಿ ಸೊಬಗುವಡೆದಿತ್ತು. ನಾನಾಬಣ್ಣದ ಮೃಗಗಳೂ ಹಕ್ಕಿಗಳೂ ಧ್ವನಿಗೈಯುತ್ತಿದ್ದವು. ಕೂಗುವ ನವಿಲು ಹಾಡುವ ದುಂಬಿಗಳಿಂದ ರಮ್ಯವಾಗಿತ್ತು. ಕೋಗಿಲೆ ಸಾರಸಗಳ ಕೂಜನದಿಂದ ಚೆಲುವು ಪಡೆದಿತ್ತು (೭). ಬಲರಾಮಸಹಿತನಾದ ಭಗವಾನ್ ಶ್ರೀಕೃಷ್ಣನು ಕೊಳಲನ್ನು ನುಡಿಸುತ್ತ, ಗೋಪರಿಂದಲೂ ಗೋಪಾಲರಿಂದಲೂ ಸಮೇತನಾಗಿ ಆ ವನವನ್ನು ಪ್ರವೇಶಿಸಿದನು. ಅಲ್ಲಿ ಬಲರಾಮ, ಕೃಷ್ಣ–ಮೊದಲಾದ ಎಲ್ಲ ಗೋಪಾಲರೂ ಚಿಗುರೆಲೆ

ಪ್ರವಾಲಬರ್ಹಸ್ತಬಕಸ್ರಗ್ಧಾತುಕೃತಭೂಷಣಾಃ ।
ರಾಮಕೃಷ್ಣಾದಯೋ ಗೋಪಾ ನನೃತುರ್ಯುಯುಧುರ್ಜಗುಃ ॥ ೯

ಕೃಷ್ಣಸ್ಯ ನೃತ್ಯತಃ ಕೇಚಿಜ್ಜಗುಃ ಕೇಚಿದವಾದಯನ್ ।
ವೇಣುಪಾಣಿತಲೈಃ ಶೃಂಗೈಃ ಪ್ರಶಶಂಸುರಥಾಪರೇ ॥ ೧೦

ಗೋಪಜಾತಿಪ್ರತಿಚ್ಛನ್ನಾ ದೇವಾ ಗೋಪಾಲರೂಪಿಣಃ ।
ಈಡಿರೇ ಕೃಷ್ಣರಾಮೌ ಚ ನಟಾ ಇವ ನಟಂ ನೃಪ ॥ ೧೧

ಭ್ರಾಮಣೈರ್ಲಂಘನೈಃ ಕ್ಷೇಪೈರಾಸ್ಫೋಟನವಿಕರ್ಷಣೈಃ ।
ಚಿಕ್ರೀಡತುರ್ನಿಯುದ್ಧೇನ ಕಾಕಪಕ್ಷಧರೌ ಕ್ವಚಿತ್ ॥ ೧೨

ಕ್ವಚಿನ್ನೃತ್ಯತ್ಸು ಚಾನ್ಯೇಷು ಗಾಯಕೌ ವಾದಕೌ ಸ್ವಯಮ್ ।
ಶಶಂಸತುರ್ಮಹಾರಾಜ ಸಾಧು ಸಾಧ್ವಿತಿ ವಾದಿನೌ ॥ ೧೩

ಕ್ವಚಿದ್ ಬಿಲ್ವೈಃ ಕ್ವಚಿತ್ ಕುಂಭೈಃ ಕ್ವ ಚಾಮಲಕಮುಷ್ಟಿಭಿಃ ।
ಅಸ್ಪೃಶ್ಯನೇತ್ರಬಂಧಾದ್ಯೈಃ ಕ್ವಚಿನ್ಮೃಗಖಗೇಹಯಾ ॥ ೧೪

ನವಿಲುಗರಿಗಳ ಗೊಂಚಲು—ಮಾಲೆಗಳಿಂದಲೂ ಗೈರಿಕಧಾತುಗಳಿಂದಲೂ ತಮ್ಮನ್ನು ಅಲಂಕರಿಸಿಕೊಂಡು ಕುಣಿದರು; ಕೈಮಾಡಿದರು; ಹಾಡಿದರು (೮–೯). ಕೃಷ್ಣನು ಕುಣಿಯುವಾಗ ಕೆಲವರು ಹಾಡುತ್ತಿದ್ದರು. ಕೆಲವರು ಕೊಳಲೂದುತ್ತಿದ್ದರು; ಕೈಬಡಿಯುತ್ತಿದ್ದರು; ಕೆಲವರು ಕೊಂಬುಗಳನ್ನೂದುತ್ತಿದ್ದರು. ಉಳಿದವರು ಹೊಗಳುತ್ತಿದ್ದರು (೧೦). ಪರೀಕ್ಷಿತರಾಜ, ಆ ಗೋಪಾಲರು ಯಾರು? ಗೊಲ್ಲರ ವೇಷದಿಂದ ಮರೆಸಿಕೊಂಡಿದ್ದ ದೇವತೆಗಳು. ನಟರು ಮುಖ್ಯನಟನನ್ನು ಹೊಗಳುವಂತೆ ಅವರು ಬಲರಾಮಕೃಷ್ಣರನ್ನು ಸ್ತುತಿಸುತ್ತಿದ್ದರು (೧೧). ತಲೆಯಲ್ಲಿ ಎಳೆಗೂದಲನ್ನು ಧರಿಸಿದ್ದ ರಾಮಕೃಷ್ಣರು ಕೆಲವು ವೇಳೆ ಸುತ್ತುವುದು, ಕುಪ್ಪಳಿಸುವುದು, ತಳ್ಳುವುದು, ಗುದ್ದುವುದು, ಎಳೆದಾಡುವುದು, ಕುಸ್ತಿಯಾಡುವುದು—ಈ ಬಗೆಯಿಂದ ಕ್ರೀಡಿಸುತ್ತಿದ್ದರು (೧೨). ಒಮ್ಮೊಮ್ಮೆ ಇತರ ಗೋಪಾಲರು ಕುಣಿಯುವಾಗ ಇವರಿಬ್ಬರು ತಾವೇ ಹಾಡುತ್ತ ಕೊಳಲು ನುಡಿಸುತ್ತ (ನಡುನಡುವೆ) ಭಲಾ! ಭಲಾ! ಎಂದು ಉಗ್ಗಡಿಸುತ್ತ ಇದ್ದರು (೧೩). ಒಂದೊಂದು ಸಲ ಬಿಲ್ವಪತ್ರೆಕಾಯಿ, ಕುಂಭಫಲ,* ನೆಲ್ಲಿಕಾಯಿಗಳಿಂದಲೂ ಮುಂಗೈಯಾಟಗಳಿಂದಲೂ ಕ್ರೀಡಿಸು

* ಕುಂಭಫಲ = ಕೆಂಪು ತಿಗಡೆಕಾಯಿ.

ಕ್ವಚಿಚ್ಚ ದರ್ದುರಪ್ಲಾವೈರ್ವಿವಿಧೈರುಪಹಾಸಕೈಃ ।
ಕದಾಚಿತ್ಸ್ಪಂದೋಲಿಕಯಾ ಕರ್ಹಿಚಿನ್ನೃಪಚೇಷ್ಟಯಾ ॥ ೧೫

ಏವಂ ತೌ ಲೋಕಸಿದ್ಧಾಭಿಃ ಕ್ರೀಡಾಭಿಶ್ಚೇರತುರ್ವನೇ ।
ನದ್ಯದ್ರಿದ್ರೋಣಿಕುಂಜೇಷು ಕಾನನೇಷು ಸರಸ್ಸು ಚ ॥ ೧೬

ಪಶೂಂಶ್ಚಾರಯತೋರ್ಗೋಪೈಸ್ತದ್ವನೇ ರಾಮಕೃಷ್ಣಯೋಃ ।
ಗೋಪರೂಪೀ ಪ್ರಲಂಬೋಽಗಾದಸುರಸ್ತಜ್ಜಿಹೀರ್ಷಯಾ ॥ ೧೭

ತಂ ವಿದ್ವಾನಪಿ ದಾಶಾರ್ಹೋ ಭಗವಾನ್ ಸರ್ವದರ್ಶನಃ ।
ಅನ್ವಮೋದತ ತತ್ಸಖ್ಯಂ ವಧಂ ತಸ್ಯ ವಿಚಿಂತಯನ್ ॥ ೧೮

ತತ್ರೋಪಾಹೂಯ ಗೋಪಾಲಾನ್ ಕೃಷ್ಣಃ ಪ್ರಾಹ ವಿಹಾರವಿತ್ ।
ಹೇ ಗೋಪಾ ವಿಹರಿಷ್ಯಾಮೋ ದ್ವಂದ್ವೀಭೂಯ ಯಥಾಯಥಮ್ ॥

ತತ್ರ ಚಕ್ರುಃ ಪರಿವೃಢೌ ಗೋಪಾ ರಾಮಜನಾರ್ದನೌ ।
ಕೃಷ್ಣಸಂಘಟ್ಟಿನಃ ಕೇಚಿದಾಸನ್ ರಾಮಸ್ಯ ಚಾಪರೇ ॥ ೨೦

---

ತ್ತಿದ್ದರು. ನನ್ನ ಮುಟ್ಟಬೇಡ, ಕಣ್ಣುಮುಚ್ಚಾಲೆ–ಮುಂತಾದ ಆಟಗಳನ್ನಾಡುತ್ತಿದ್ದರು. ಒಮ್ಮೊಮ್ಮೆ ಮೃಗಗಳಂತೆಯೂ ಹಕ್ಕಿಗಳಂತೆಯೂ ನಟಿಸುತ್ತ ಚೇಷ್ಟೆಮಾಡುತ್ತಿದ್ದರು (೧೪). ಒಮ್ಮೊಮ್ಮೆ ಕಪ್ಪೆಯಂತೆ ಕುಪ್ಪಳಿಸುತ್ತಿದ್ದರು! ವಿನೋದಕರವಾದ ಬಗೆಬಗೆಯ ಆಟಗಳನ್ನಾಡುತ್ತಿದ್ದರು. ಒಮ್ಮೆ ಉಯ್ಯಾಲೆಯಾಡುತ್ತ ಒಮ್ಮೆ ರಾಜನಂತೆ ನಟಿಸುತ್ತ ಇದ್ದರು (೧೫). ಹೀಗೆ ಅವರು ವೃಂದಾವನದ ಹೊಳೆ, ಬೆಟ್ಟಗಳ ಸಂದು, ಪೊದೆ, ಕಾಡು, ಕೊಳಗಳಲ್ಲಿ ಲೌಕಿಕವಾದ ಆಟಗಳಿಂದ ವಿಹರಿಸುತ್ತಿದ್ದರು. ಬಲರಾಮಕೃಷ್ಣರು ಗೊಲ್ಲರೊಡನೆ ಹಸುಗಳನ್ನು ಮೇಯಿಸುತ್ತಿರುವಾಗ, ಪ್ರಲಂಬಾಸುರನು ಅವರನ್ನು ಅಪಹರಿಸಬೇಕೆಂದು ಗೋಪವೇಷವನ್ನು ಧರಿಸಿ ಆ ವನಕ್ಕೆ ಬಂದನು (೧೬–೧೭). ಸರ್ವಜ್ಞನಾದ ಭಗವಾನ್ ಶ್ರೀಕೃಷ್ಣನಿಗೆ ಅದು ಗೊತ್ತಾದರೂ ಅಸುರನನ್ನು ಕೊಲ್ಲಬೇಕೆಂಬ ಉದ್ದೇಶದಿಂದ ಅವನ ಸ್ನೇಹಕ್ಕೆ ಸಂಮತಿಸಿದನು. ಆಟದಲ್ಲಿ ತಜ್ಞನಾದ ಕೃಷ್ಣನು ಗೋಪಾಲರನ್ನು ಕರೆದು “ಎಲೈ ಗೋಪರೆ, ಈಗ ನಾವು ಯಥಾಯೋಗ್ಯವಾಗಿ ಎರಡು ಗುಂಪುಗಳಾಗಿ ಆಡೋಣ” ಎಂದನು (೧೮–೧೯). ಆಗ ಗೋಪಾಲರು ಬಲರಾಮನನ್ನು ಒಂದು ಗುಂಪಿನ ನಾಯಕ

**ಆಚೇರುರ್ವಿವಿಧಾಃ ಕ್ರೀಡಾ ವಾಹ್ಯವಾಹಕಲಕ್ಷಣಾಃ ।**
**ಯತ್ರಾರೋಹಂತಿ ಜೇತಾರೋ ವಹಂತಿ ಚ ಪರಾಜಿತಾಃ ॥ ೨೧**

**ವಹಂತೋ ವಾಹ್ಯಮಾನಾಶ್ಚ ಚಾರಯಂತಶ್ಚ ಗೋಧನಮ್ ।**
**ಭಾಂಡೀರಕಂ ನಾಮ ವಟಂ ಜಗ್ಮುಃ ಕೃಷ್ಣಪುರೋಗಮಾಃ ॥ ೨೨**

**ರಾಮಸಂಘಟ್ಟಿನೋ ಯರ್ಹಿ ಶ್ರೀದಾಮವೃಷಭಾದಯಃ ।**
**ಕ್ರೀಡಾಯಾಂ ಜಯಿನಸ್ತಾಂಸ್ತಾನೂಹುಃ ಕೃಷ್ಣಾದಯೋ ನೃಪ ॥**

**ಉವಾಹ ಕೃಷ್ಣೋ ಭಗವಾನ್ ಶ್ರೀದಾಮಾನಂ ಪರಾಜಿತಃ ।**
**ವೃಷಭಂ ಭದ್ರಸೇನಸ್ತು ಪ್ರಲಂಬೋ ರೋಹಿಣೀಸುತಮ್ ॥ ೨೪**

**ಅವಿಷಹ್ಯಂ ಮನ್ಯಮಾನಃ ಕೃಷ್ಣಂ ದಾನವಪುಂಗವಃ ।**
**ವಹನ್ ದ್ರುತತರಂ ಪ್ರಾಗಾದವರೋಹಣತಃ ಪರಮ್ ॥ ೨೫**

---

ನನ್ನಾಗಿಯೂ ಕೃಷ್ಣನನ್ನು ಇನ್ನೊಂದು ಗುಂಪಿನ ನಾಯಕನನ್ನಾಗಿಯೂ ಮಾಡಿಕೊಂಡರು. ಕೆಲವರು ಕೃಷ್ಣನ ಪಕ್ಷಕ್ಕೆ ಸೇರಿದರು. ಕೆಲವರು ಬಲರಾಮನ ಪಕ್ಷಕ್ಕೆ ಹೋದರು (೨೦). ಆಮೇಲೆ ನಾನಾಬಗೆಯ ಆಟಗಳನ್ನಾಡಿದರು. ಆಟದಲ್ಲಿ ಗೆದ್ದವರು ಸೋತವರ ಬೆನ್ನಮೇಲೆ ಹತ್ತಿ ಕುಳಿತುಕೊಳ್ಳುತ್ತಿದ್ದರು! ಸೋತವರು ಅವರನ್ನು ಹೊತ್ತುಕೊಂಡು ತಿರುಗುತ್ತಿದ್ದರು! ಹೀಗೆ ಹೊರಬೇಕೆಂಬುದು ಆಟದ ನಿಯಮವಾಗಿತ್ತು! (೨೧). ಹೀಗೆ ಹೊರುತ್ತ ಹೊರಿಸಿಕೊಳ್ಳುತ್ತ ಹಸುಗಳನ್ನು ಮೇಯಿಸುತ್ತ ಶ್ರೀಕೃಷ್ಣಸಹಿತರಾಗಿ ಅವರು ಭಾಂಡೀರಕವೆಂಬ ಆಲದಮರದ ಬಳಿಗೆ ಹೋದರು (೨೨). ಪರೀಕ್ಷಿತರಾಜ, ಬಲರಾಮನ ಪಕ್ಷಕ್ಕೆ ಸೇರಿದ ಶ್ರೀದಾಮ, ವೃಷಭ ಮೊದಲಾದವರು ಆಟದಲ್ಲಿ ಗೆದ್ದರು. ಕೃಷ್ಣನೇ ಮೊದಲಾದವರು ಅವರನ್ನು ಹೊತ್ತುಕೊಂಡು ಹೋದರು (೨೩). ಭಗವಾನ್ ಕೃಷ್ಣನು ಸೋತುದರಿಂದ ಶ್ರೀದಾಮನನ್ನು ಹೊತ್ತನು. ಭದ್ರಸೇನನು ವೃಷಭನನ್ನೂ ಪ್ರಲಂಬಾಸುರನು ಬಲರಾಮನನ್ನೂ ಹೊತ್ತರು (೨೪). ಕೃಷ್ಣನನ್ನೆದುರಿಸುವುದು ಕಷ್ಟವೆಂದು ತಿಳಿದು ಆ ದಾನವನು ಬಲರಾಮನನ್ನು ಹೊತ್ತುಕೊಂಡು, (ಕೃಷ್ಣನ ಕಣ್ಣಿಗೆ ಕಾಣದಂತೆ) ಬೇಗಬೇಗನೆ ಗಡಿಯಿಂದಾಚೆಗೆ ನುಸುಳಿ ಹೋದನು (೨೫).

ತನುದ್ವಹನ್ ಧರಣಿಧರೇಂದ್ರಗೌರವಂ
ಮಹಾಸುರೋ ವಿಗತರಯೋ ನಿಜಂ ವಪುಃ ।
ಸ ಆಸ್ಥಿತಃ ಪುರಟಪರಿಚ್ಛದೋ ಬಭೌ
ತಡಿದ್ದ್ಯುಮಾನುಡುಪತಿವಾಡಿವಾಂಬುದಃ ॥ ೨೬

ನಿರೀಕ್ಷ್ಯ ತದ್ವಪುರಲಮಂಬರೇ ಚರತ್
ಪ್ರದೀಪ್ತದೃಗ್ ಭ್ರುಕುಟಿತಟೋಗ್ರದಂಷ್ಟ್ರಕಮ್ ।
ಜ್ವಲಚ್ಛಿಖಂ ಕಟಕಕಿರೀಟಕುಂಡಲ-
ತ್ವಿಷಾದ್ಭುತಂ ಹಲಧರ ಈಷದತ್ರಸತ್ ॥ ೨೭

ಅಥಾಗತಸ್ಮೃತಿರಭಯೋ ರಿಪುಂ ಬಲೋ
ವಿಹಾಯಸಾರ್ಥಮಿವ ಹರಂತಮಾತ್ಮನಃ ।
ರುಷಾಹನಚ್ಛಿರಸಿ ದೃಢೇನ ಮುಷ್ಟಿನಾ
ಸುರಾಧಿಪೋ ಗಿರಿಮಿವ ವಜ್ರರಂಹಸಾ ॥ ೨೮

---

ಅನಂತರ ಪ್ರಲಂಬಾಸುರನು ವೇಗದಿಂದ ಸಾಗುತ್ತಲೇ ಪರ್ವತಾಕಾರದ ನಿಜದೇಹವನ್ನು ತಳೆದನು. ಬಲರಾಮನನ್ನು ಹೊತ್ತುಕೊಂಡು ಸುವರ್ಣಾಲಂಕಾರಭೂಷಿತನಾದ ಆ ಮಹಾಸುರನು, ಮೇಲ್ಗಡೆ ಚಂದ್ರನನ್ನು ಧರಿಸಿ ಮಿಂಚುಗಳಿಂದ ಬೆಳಗುವ ಕಾಲಮೇಘದಂತೆ ಕಂಗೊಳಿಸಿದನು (೨೬). ಥಟ್ಟನೆ ಅಂಬರತಳವನ್ನಡರಿದ ಪ್ರಲಂಬಾಸುರನ ಕೆಂಡದ ಕಣ್ಣುಗಳನ್ನೂ ಕೊಂಕಿದ ಹುಬ್ಬುಗಂಟನ್ನೂ ಭೀಕರವಾದ ಕೋರೆದಾಡೆಗಳನ್ನೂ ಬಲರಾಮನು ಕಂಡನು. ಬೆಂಕಿಯಂತೆ ಬೆಳಗುವ ತಲೆಗೂದಲನ್ನೂ ಕಟಕಕಿರೀಟಕುಂಡಲಗಳ ಕಾಂತಿಯಿಂದ ಅದ್ಭುತವಾದ ದಾನವನ ದೇಹವನ್ನೂ ಕಂಡರೂ ಬಲರಾಮನಿಗೆ ಭಯವಾಗಲಿಲ್ಲ (೨೭). ನಿರ್ಭಯನಾದ ಬಲರಾಮನಿಗೆ ಪರಿಸ್ಥಿತಿಯ ಅರಿವಾಯಿತು. ತನ್ನನ್ನು ಆ ದಾನವನು ತನ್ನ ಸ್ವತ್ತೋ ಎಂಬಂತೆ ಆಕಾಶ ಮಾರ್ಗದಲ್ಲಿ ಒಯ್ಯುತ್ತಿರುವುದನ್ನು ನೋಡಿ ಕ್ರುದ್ಧನಾಗಿ, ದೇವೇಂದ್ರನು ವಜ್ರಾಯುಧದಿಂದ ಬೆಟ್ಟವನ್ನು ಬಡಿಯುವಂತೆ ದೃಢವಾದ ವಜ್ರಮುಷ್ಟಿಯಿಂದ ರಾಕ್ಷಸನ ತಲೆಯಮೇಲೆ ಗುದ್ದಿದನು (೨೮).

ಸ ಆಹತಃ ಸಪದಿ ವಿಶೀರ್ಣಮಸ್ತಕೋ
ಮುಖಾದ್ವಮನ್ ರುಧಿರಮಪಸ್ಮೃತೋಽಸುರಃ ।
ಮಹಾರವಂ ವ್ಯಸುರಪತತ್ ಸಮೀರಯನ್
ಗಿರಿರ್ಯಥಾ ಮಘವತ ಆಯುಧಾಹತಃ ॥ ೨೯

ದೃಷ್ಟ್ವಾ ಪ್ರಲಂಬಂ ನಿಹತಂ ಬಲೇನ ಬಲಶಾಲಿನಾ ।
ಗೋಪಾಃ ಸುವಿಸ್ಮಿತಾ ಆಸನ್ ಸಾಧು ಸಾಧ್ವಿತಿ ವಾದಿನಃ ॥ ೩೦

ಆಶಿಷೋಽಭಿಗೃಣಂತಸ್ತಂ ಪ್ರಶಶಂಸುಸ್ತದರ್ಹಣಮ್ ।
ಪ್ರೇತ್ಯಾಗತಮಿವಾಲಿಂಗ್ಯ ಪ್ರೇಮವಿಹ್ವಲಚೇತಸಃ ॥ ೩೧

ಪಾಪೇ ಪ್ರಲಂಬೇ ನಿಹತೇ ದೇವಾಃ ಪರಮನಿರ್ವೃತಾಃ ।
ಅಭ್ಯವರ್ಷನ್ ಬಲಂ ಮಾಲ್ಯೈಃ ಶಶಂಸುಃ ಸಾಧು ಸಾಧ್ವಿತಿ ॥ ೩೨

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಾದಶಾಧ್ಯಾಯಃ



ಗುದ್ದಿದೊಡನೆ ದಾನವನ ತಲೆ ಒಡೆಯಿತು. ಎಚ್ಚರದಪ್ಪಿತು. ಬಾಯಿಂದ ನೆತ್ತರು ಕಕ್ಕಿತು. ಇಂದ್ರನು ವಜ್ರಾಯುಧದಿಂದ ಪರ್ವತವನ್ನು ಅಪ್ಪಳಿಸಿ ದಂತಾಗಲು, ಪ್ರಲಂಬಾಸುರನು ಅಸುವನ್ನು ನೀಗಿ ಭಾರಿ ಶಬ್ದವನ್ನು ಮಾಡುತ್ತ ಧರೆಗೆ ಉರುಳಿದನು (೨೯). ಬಲಶಾಲಿಯಾದ ಬಲರಾಮನಿಂದ ಪ್ರಲಂಬನು ಹತನಾದುದನ್ನು ಕಂಡು ಗೋಪಾಲರು ವಿಸ್ಮಿತರಾಗಿ ಭಲಾ ಭೇಷ್ ಎಂದು ಕೂಗಾಡಿದರು (೩೦). ಪ್ರಶಂಸಾರ್ಹನಾದ ಬಲರಾಮನಿಗೆ ಶುಭವನ್ನು ಕೋರುತ್ತ ಹೊಗಳಿದರು. ಸತ್ತವನು ಬದುಕಿ ಬಂದನೋ ಎಂಬಂತೆ ಅವನನ್ನು ಆಲಿಂಗಿಸಿಕೊಂಡರು (೩೧). ಪಾಪಿಯಾದ ಪ್ರಲಂಬಾಸುರನು ಹತನಾಗಲು, ದೇವತೆಗಳು ಪರಮಾನಂದವನ್ನೈದಿ ಬಲರಾಮನ ಮೇಲೆ ಹೂಮಳೆಗರೆದು 'ಸಾಧು ಸಾಧು' ಎಂದು ಶ್ಲಾಘಿಸಿದರು (೩೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹದಿನೆಂಟನೆಯ ಅಧ್ಯಾಯ



# ಏಕೋನವಿಂಶಾಧ್ಯಾಯಃ

ಶ್ರೀಶುಕ ಉವಾಚ—

ಕ್ರೀಡಾಸಕ್ತೇಷು ಗೋಪೇಷು ತದ್ಗಾವೋ ದೂರಚಾರಿಣೀಃ ।
ಸ್ವೈರಂ ಚರಂತ್ಯೋ ವಿವಿಶುಸ್ತೃಣಲೋಭೇನ ಗಹ್ವರಮ್ ॥ ೧

ಅಜಾ ಗಾವೋ ಮಹಿಷ್ಯಶ್ಚ ನಿರ್ವಿಶಂತ್ಯೋ ವನಾದ್ ವನಮ್ ।
ಇಷೀಕಾಟವೀಂ ನಿರ್ವಿವಿಶುಃ ಕ್ರಂದಂತ್ಯೋ ದಾವತರ್ಷಿತಾಃ ॥ ೨

ತೇಽಪಶ್ಯಂತಃ ಪಶೂನ್ ಗೋಪಾಃ ಕೃಷ್ಣರಾಮಾದಯಸ್ತದಾ ।
ಜಾತಾನುತಾಪಾ ನ ವಿದುರ್ವಿಚಿನ್ವಂತೋ ಗವಾಂ ಗತಿಮ್ ॥ ೩

ತೃಣೈಸ್ತತ್ಖುರದಚ್ಛಿನ್ನೈರ್ಗೋಷ್ಪದೈರಂಕಿತೈರ್ಗವಾಮ್ ।
ಮಾರ್ಗಮನ್ವಗಮನ್ ಸರ್ವೇ ನಷ್ಟಾಜೀವ್ಯಾ ವಿಚೇತಸಃ ॥ ೪

## ಅಧ್ಯಾಯ ೧೯

ಶ್ರೀಕೃಷ್ಣನು ಕಾಳ್ಗಿಚ್ಚಿನಿಂದ ಗೊಲ್ಲರನ್ನು ರಕ್ಷಿಸುವುದು

ಶುಕಮುನಿಗಳು ಹೇಳಿದರು: ಗೋಪಾಲರು ಆಟದಲ್ಲಿ ತೊಡಗಿದ್ದಾಗ ಅವರ ಹಸುಗಳು ಸ್ವೇಚ್ಛೆಯಾಗಿ ಮೇಯುತ್ತ ದೂರ ಹೋಗಿ ಹುಲ್ಲಿನ ಆಸೆಯಿಂದ ಕಂದಕವನ್ನು ಹೊಕ್ಕವು (೧). ಮೇಕೆಗಳೂ ಹಸುಗಳೂ ಎಮ್ಮೆಗಳೂ ಕಾಡಿಂದ ಕಾಡಿಗೆ ಅಲೆಯುತ್ತ ಇರುವಾಗ, ಕಾಳ್ಗಿಚ್ಚಿನ ದೆಸೆಯಿಂದ ಬಾಯಾರಿ ಕೂಗುತ್ತ ಜಂಬುಹುಲ್ಲಿನ* ಕಾಡನ್ನು ಪ್ರವೇಶಿಸಿದವು (೨): ಆಗ ಕೃಷ್ಣ ಬಲರಾಮಾದಿ ಗೋಪಾಲರು ಕಳವಳಗೊಂಡು ಅವುಗಳನ್ನು ಅರಸ ತೊಡಗಿದರು. ಅವು ಎಲ್ಲಿಗೆ ಹೋದವೆಂಬುದು ತಿಳಿಯಲಿಲ್ಲ. ತಮ್ಮ ಬದುಕಿನ ಅವಲಂಬನವೇ ನಷ್ಟವಾದ್ದರಿಂದ ಅವರೆಲ್ಲರೂ ದಿಗ್ಭ್ರಾಂತರಾಗಿ, ಪಶುಗಳು ಗೊರಸುಗಳಿಂದ ತುಳಿದು ಹಲ್ಲುಗಳಿಂದ ಕಚ್ಚಿ ಹರಿದ ಹುಲ್ಲಿಂದಲೂ ಗೋವುಗಳ ಹೆಜ್ಜೆಯ ಗುರುತುಗಳಿಂದಲೂ ಚಿಹ್ನಿತವಾದ ದಾರಿಯನ್ನು ಹಿಡಿದು ಹುಡುಕುತ್ತ

---

* ಬಾಣವನ್ನು ಮಾಡಲು ಬಳಸುವ ಗಟ್ಟಿಜಾತಿಯ ಹುಲ್ಲು.

**ಮುಂಜಾಟವ್ಯಾಂ ಭ್ರಷ್ಟಮಾರ್ಗಂ ಕ್ರಂದಮಾನಂ ಸ್ವಗೋಧನಮ್ ।**
**ಸಂಪ್ರಾಪ್ಯ ತೃಷಿತಾಃ ಶ್ರಾಂತಾಸ್ತತಸ್ತೇ ಸಂನ್ಯವರ್ತಯನ್ ॥ ೫**

**ತಾ ಆಹೂತಾ ಭಗವತಾ ಮೇಘಗಂಭೀರಯಾ ಗಿರಾ ।**
**ಸ್ವನಾಮ್ನಾಂ ನಿನದಂ ಶ್ರುತ್ವಾ ಪ್ರತಿನೇದುಃ ಪ್ರಹರ್ಷಿತಾಃ ॥ ೬**

**ತತಃ ಸಮಂತಾದ್ ವನಧೂಮಕೇತು-**
**ರ್ಯದೃಚ್ಛಯಾಭೂತ್ ಕ್ಷಯಕೃದ್ ವನೌಕಸಾಮ್ ।**
**ಸಮೀರಿತಃ ಸಾರಥಿನೋಲ್ಬಣೋಲ್ಮುಕೈ-**
**ರ್ವಿಲೇಲಿಹಾನಃ ಸ್ಥಿರಜಂಗಮಾನ್ ಮಹಾನ್ ॥ ೭**

**ತಮಾಪತಂತಂ ಪರಿತೋ ದವಾಗ್ನಿಂ**
**ಗೋಪಾಶ್ಚ ಗಾವಃ ಪ್ರಸಮೀಕ್ಷ್ಯ ಭೀತಾಃ ।**
**ಊಚುಶ್ಚ ಕೃಷ್ಣಂ ಸಬಲಂ ಪ್ರಪನ್ನಾ**
**ಯಥಾ ಹರಿಂ ಮೃತ್ಯುಭಯಾರ್ದಿತಾ ಜನಾಃ ॥ ೮**

---

ಹೊರಟರು (೩–೪). ಜಂಬುಹುಲ್ಲಿನ ಕಾಡಿನಲ್ಲಿ ಸಿಕ್ಕಿಕೊಂಡ ಹಸುಗಳು ದಾರಿಗಾಣದೆ ಅರಚುತ್ತಿದ್ದವು. ಗೋಪಾಲರು ಅಲ್ಲಿಯವರೆಗೆ ಹೋಗಿ ಬಾಯಾರಿ ಬಳಲಿದವರಾಗಿ ಒಳಗೆ ಹೋಗದೆ ನಿಂತರು (೫). ಆಗ ಭಗವಾನ್ ಶ್ರೀಕೃಷ್ಣನು ಮೇಘಗಂಭೀರವಾದ ಧ್ವನಿಯಿಂದ ಗೋವುಗಳನ್ನು ಕರೆದನು. ತಮ್ಮ ಹೆಸರು ಹೇಳಿ ಕರೆಯುವುದನ್ನು ಕೇಳಿ ಗೋವುಗಳು ನಲಿಯುತ್ತ ಹುಂಭಾ ಎಂದು ಪ್ರತಿಧ್ವನಿಗೊಟ್ಟವು (೬). ಅಷ್ಟರಲ್ಲಿ ವನವಾಸಿಗಳಿಗೆ ಮಾರಕವಾದ ಕಾಳ್ಗಿಚ್ಚು ಯಥೇಷ್ಟವಾಗಿ ಹರಡಿತು. ಸಾರಥಿಯಾದ ವಾಯುವಿನಿಂದ ವಿಜೃಂಭಿಸಿತು. ಮಹತ್ತರವಾದ ಆ ದಾವಾಗ್ನಿಯು ಉಲ್ಬಣವಾದ ಕೊಳ್ಳಿಗಳಿಂದ ಪುಟಿದೆದ್ದು, ವೃಕ್ಷಲತೆಗಳನ್ನೂ ವನ್ಯಜಂತುಗಳನ್ನೂ ನೆಕ್ಕಿನೊಣೆಯುತ್ತ ವಿಸ್ತರಿಸಿತು (೭). ಸುತ್ತಲೂ ನುಗ್ಗಿಬರುವ ದಾವಾಗ್ನಿಯನ್ನು ಕಂಡು ಗೋಪಾಲರೂ ಗೋವುಗಳೂ ತಲ್ಲಣಿಸಿದರು. ಗೊಲ್ಲರು ಬಲರಾಮ ಸಹಿತನಾದ ಶ್ರೀಕೃಷ್ಣನನ್ನು, ಮರಣಭಯಾರ್ದಿತರಾದ ಜನರು ಶ್ರೀಹರಿಯನ್ನು ಶರಣುಹೋಗುವಂತೆ ಶರಣುಹೋಗಿ ಹೀಗೆಂದರು (೮) :

**ಕೃಷ್ಣ ಕೃಷ್ಣ ಮಹಾವೀರ ಹೇ ರಾಮಾಮಿತವಿಕ್ರಮ ।**
**ದಾವಾಗ್ನಿನಾ ದಹ್ಯಮಾನಾನ್ ಪ್ರಪನ್ನಾಂಸ್ತ್ರಾತುಮರ್ಹಥಃ ॥ ೯**

**ನೂನಂ ತ್ವದ್ಬಾಂಧವಾಃ ಕೃಷ್ಣ ನ ಚಾರ್ಹಂತ್ಯವಸೀದಿತುಮ್ ।**
**ವಯಂ ಹಿ ಸರ್ವಧರ್ಮಜ್ಞ ತ್ವನ್ನಾಥಾಸ್ತ್ವತ್ಪರಾಯಣಾಃ ॥ ೧೦**

ಶ್ರೀಶುಕ ಉವಾಚ—

**ವಚೋ ನಿಶಮ್ಯ ಕೃಪಣಂ ಬಂಧೂನಾಂ ಭಗವಾನ್ ಹರಿಃ ।**
**ನಿಮೀಲಯತ ಮಾ ಭೈಷ್ಟ ಲೋಚನಾನೀತ್ಯಭಾಷತ ॥ ೧೧**

**ತಥೇತಿ ಮೀಲಿತಾಕ್ಷೇಷು ಭಗವಾನಗ್ನಿಮುಲ್ಬಣಮ್ ।**
**ಪೀತ್ವಾ ಮುಖೇನ ತಾನ್ ಕೃಚ್ಛ್ರಾದ್ ಯೋಗಾಧೀಶೋ**
**ವ್ಯಮೋಚಯತ್ ॥ ೧೨**

**ತತಶ್ಚ ತೇಽಕ್ಷೀಣ್ಯುನ್ಮೀಲ್ಯ ಪುನರ್ಭಾಂಡೀರಮಾಪಿತಾಃ ।**
**ನಿಶಾಮ್ಯ ವಿಸ್ಮಿತಾ ಆಸನ್ನಾತ್ಮಾನಂ ಗಾಶ್ಚ ಮೋಚಿತಾಃ ॥ ೧೩**

---

"ಕೃಷ್ಣ, ಕೃಷ್ಣ, ಮಹಾವೀರನೆ! ಓ ರಾಮ, ಬಲಶಾಲಿಯೇ! ಕಾಳ್ಗಿಚ್ಚು ನಮ್ಮನ್ನು ಸುಡುತ್ತಿದೆ. ಶರಣಾಗತರಾದ ನಮ್ಮನ್ನು ನೀವು ಕಾಪಾಡಿರಿ (೯). ನಿನ್ನ ಬಂಧುಗಳು, ಓ ಕೃಷ್ಣ, ಹೀಗೆ ಸತ್ತುಹೋಗುವುದು ತರವಲ್ಲ. ಸಕಲ ಧರ್ಮರಹಸ್ಯವನ್ನೂ ಬಲ್ಲವನು ನೀನು. ನೀನೇ ನಮಗೆ ಒಡೆಯ. ನಿನ್ನನ್ನೇ ನಾವು ನಂಬಿದ್ದೇವೆ" ಎಂದರು (೧೦). ಈ ರೀತಿಯಾಗಿ ಆಶ್ರಿತರ ದೈನ್ಯವಚನವನ್ನು ಕೇಳಿ ಭಗವಾನ್ ಹರಿಯು "ಹೆದರಬೇಡಿರಿ, ಕಣ್ಣುಗಳನ್ನು ಮುಚ್ಚಿಕೊಳ್ಳಿರಿ" ಎಂದನು. ಹಾಗೆಯೇ ಆಗಲೆಂದು ಗೊಲ್ಲರು ಕಣ್ಣು ಮುಚ್ಚಿಕೊಳ್ಳಲಾಗಿ, ಆ ಯೋಗೇಶ್ವರನು ಉಲ್ಬಣವಾದ ದಾವಾಗ್ನಿಯನ್ನು ಬಾಯಿಂದ ಹೀರಿ, ಗೊಲ್ಲರನ್ನು ಕಷ್ಟದಿಂದ ಪಾರುಮಾಡಿದನು (೧೧–೧೨). ಅನಂತರ ಕಣ್ಣನ್ನು ತೆರೆಯಲಾಗಿ ಎಲ್ಲರೂ ಕ್ಷೇಮವಾಗಿ ಭಾಂಡೀರವನವನ್ನು ತಲುಪಿದ್ದರು! ಆಪತ್ತಿಗೆ ಸಿಕ್ಕಿದ್ದ ತಾವೂ ಗೋವುಗಳೂ ಪಾರಾದ್ದನ್ನು ನೋಡಿ ಗೊಲ್ಲರು ವಿಸ್ಮಿತರಾದರು (೧೩).

**ಕೃಷ್ಣಸ್ಯ ಯೋಗವೀರ್ಯಂ ತದ್ ಯೋಗಮಾಯಾನುಭಾವಿತಮ್ ।**
**ದಾವಾಗ್ನೇರಾತ್ಮನಃ ಕ್ಷೇಮಂ ವೀಕ್ಷ್ಯ ತೇ ಮೇನಿರೇಽಮರಮ್ ॥ ೧೪**

**ಗಾಃ ಸಂನಿವರ್ತ್ಯ ಸಾಯಾಹ್ನೇ ಸಹರಾಮೋ ಜನಾರ್ದನಃ ।**
**ವೇಣುಂ ವಿರಣಯನ್ ಗೋಷ್ಠಮಗಾದ್ ಗೋಪೈರಭಿಷ್ಟುತಃ ॥ ೧೫**

**ಗೋಪೀನಾಂ ಪರಮಾನಂದ ಆಸೀದ್ ಗೋವಿಂದದರ್ಶನೇ ।**
**ಕ್ಷಣಂ ಯುಗಶತಮಿವ ಯಾಸಾಂ ಯೇನ ವಿನಾಭವತ್ ॥ ೧೬**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕೋನವಿಂಶಾಧ್ಯಾಯಃ**



ಶ್ರೀಕೃಷ್ಣನ ಯೋಗಸಾಮರ್ಥ್ಯವನ್ನೂ ಯೋಗಮಾಯಾಬಲದಿಂದ ತಮಗೆ ದಾವಾಗ್ನಿಯ ದೆಸೆಯಿಂದಾದ ರಕ್ಷಣೆಯನ್ನೂ ಕಂಡು ಆತನು ದೇವತೆಯೆಂದೇ ಭಾವಿಸಿದರು (೧೪). ಸಂಜೆ ಶ್ರೀಕೃಷ್ಣನು ಬಲರಾಮನೊಡನೆ ಹಸುಗಳನ್ನು ಹೊಡೆದುಕೊಂಡು ಕೊಳಲನ್ನು ನುಡಿಸುತ್ತ ವ್ರಜಕ್ಕೆ ಹಿಂದಿರುಗಿದನು. ಗೊಲ್ಲರು ಅವನನ್ನು ಕೊಂಡಾಡುತ್ತಿದ್ದರು (೧೫). ಗೋವಿಂದನು ಗೋಚರಿಸಿದಾಗ ಗೋಪಿಯರಿಗೆ ಪರಮಾನಂದವಾಯಿತು. ಅವರಿಗೆ ಅವನಿಲ್ಲದಿದ್ದರೆ ಒಂದು ನಿಮಿಷವು ನೂರು ವರ್ಷಗಳಂತೆ ಆಗುತ್ತಿತ್ತು (೧೬).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಹತ್ತೊಂಬತ್ತನೆಯ ಅಧ್ಯಾಯ



## ವಿಂಶೋಽಧ್ಯಾಯಃ

ಶ್ರೀಶುಕ ಉವಾಚ—

ತಯೋಸ್ತದದ್ಭುತಂ ಕರ್ಮ ದಾವಾಗ್ನೇರ್ಮೋಕ್ಷಮಾತ್ಮನಃ ।
ಗೋಪಾಃ ಸ್ತ್ರೀಭ್ಯಃ ಸಮಾಚಖ್ಯುಃ ಪ್ರಲಂಬವಧಮೇವ ಚ ॥ ೧

ಗೋಪವೃದ್ಧಾಶ್ಚ ಗೋಪ್ಯಶ್ಚ ತದುಪಾಕರ್ಣ್ಯ ವಿಸ್ಮಿತಾಃ ।
ಮೇನಿರೇ ದೇವಪ್ರವರೌ ಕೃಷ್ಣರಾಮೌ ವ್ರಜಂ ಗತೌ ॥ ೨

ತತಃ ಪ್ರಾವರ್ತತ ಪ್ರಾವೃಟ್ ಸರ್ವಸತ್ತ್ವಸಮುದ್ಭವಾ ।
ವಿದ್ಯೋತಮಾನಪರಿಧಿರ್ವಿಸ್ಫೂರ್ಜಿತನಭಸ್ತಲಾ ॥ ೩

ಸಾಂದ್ರನೀಲಾಂಬುದೈರ್ವ್ಯೋಮ ಸವಿದ್ಯುತ್ಸ್ತನಯಿತ್ನುಭಿಃ ।
ಅಸ್ಪಷ್ಟಜ್ಯೋತಿರಾಚ್ಛನ್ನಂ ಬ್ರಹ್ಮೇವ ಸಗುಣಂ ಬಭೌ ॥ ೪

## ಅಧ್ಯಾಯ ೨೦

### ಮಳೆಗಾಲದ ಮತ್ತು ಶರತ್ಕಾಲದ ವರ್ಣನೆ

ಶ್ರೀಶುಕಮುನಿಗಳು ಹೇಳಿದರು: ಪರೀಕ್ಷಿತರಾಜ, ಶ್ರೀಕೃಷ್ಣನು ದಾವಾಗ್ನಿಯಿಂದ ತಮ್ಮನ್ನು ಉಳಿಸಿದ್ದು, ಬಲರಾಮನು ಪ್ರಲಂಬಾಸುರನನ್ನು ಸಂಹರಿಸಿದ್ದು—ಎಂಬ ಅವರಿಬ್ಬರ ಅದ್ಭುತಕಾರ್ಯಗಳನ್ನು ಗೋಪಾಲರು ಹೆಂಗಸರಿಗೆ ವರ್ಣಿಸಿ ಹೇಳಿದರು (೧). ಗೋಪವೃದ್ಧರೂ ಗೋಪಿಯರೂ ಅದನ್ನು ಕೇಳಿ ಆಶ್ಚರ್ಯಚಕಿತರಾಗಿ, ಕೃಷ್ಣರಾಮರು ಯಾರೋ ದೇವೋತ್ತಮರೆಂದೂ ವ್ರಜಕ್ಕೆ ಬಂದು ಸೇರಿಕೊಂಡಿದ್ದಾರೆಂದೂ ಭಾವಿಸಿದರು (೨). ಹೀಗಿರಲು ಸಕಲಪ್ರಾಣಿಗಳ ಉತ್ಪತ್ತಿಜೀವನಗಳಿಗೆ ಕಾರಣವಾದ ಮಳೆಗಾಲ ಬಂದಿತು. ದಿಕ್ಕುಗಳು ಮಿಂಚತೊಡಗಿದವು. ಗಗನದಲ್ಲಿ ಗುಡುಗುಸಿಡಿಲುಗಳು ತಲೆದೋರಿದವು (೩). ನಭಸ್ತಳವು ನಿಬಿಡವಾದ ಕಾರ್ಮೋಡ, ಮಿಂಚು, ಗುಡುಗುಗಳಿಂದ ವ್ಯಾಪ್ತವಾದ ಕಾರಣ ಅಸ್ಪಷ್ಟವಾದ ಜ್ಯೋತಿಯುಳ್ಳದ್ದಾಗಿ, ಸತ್ತ್ವರಜಸ್ತಮೋಗುಣಗಳಿಂದ ಆಚ್ಛಾದಿತವಾದ ಬ್ರಹ್ಮ (ಜೀವ) ದಂತೆ

*

**ಅಷ್ಟೌ ಮಾಸಾನ್ ನಿಪೀತಂ ಯದ್ ಭೂಮ್ಯಾಶ್ಚೋದಮಯಂ ವಸು**
**ಸ್ವಗೋಭಿರ್ಮೋಕ್ತುಮಾರೇಭೇ ಪರ್ಜನ್ಯಃ ಕಾಲ ಆಗತೇ ॥ ೫**

**ತಡಿತ್ವಂತೋ ಮಹಾಮೇಘಾಶ್ಚಂಡಶ್ವಸನವೇಪಿತಾಃ ।**
**ಪ್ರೀಣನಂ ಜೀವನಂ ಹ್ಯಸ್ಯ ಮುಮುಚುಃ ಕರುಣಾ ಇವ ॥ ೬**

**ತಪಃಕೃಶಾ ದೇವಮೀಢಾ ಆಸೀದ್ ವರ್ಷೀಯಸೀ ಮಹೀ ।**
**ಯಥೈವ ಕಾಮ್ಯತಪಸಸ್ತನುಃ ಸಂಪ್ರಾಪ್ಯ ತತ್ಫಲಮ್ ॥ ೭**

**ನಿಶಾಮುಖೇಷು ಖದ್ಯೋತಾಸ್ತಮಸಾ ಭಾಂತಿ ನ ಗ್ರಹಾಃ ।**
**ಯಥಾ ಪಾಪೇನ ಪಾಖಂಡಾ ನ ಹಿ ವೇದಾಃ ಕಲೌ ಯುಗೇ ॥ ೮**

---

ಕಾಣಿಸಿತು * (೪). ಸೂರ್ಯನು ಭೂಮಿಯ ಜಲರೂಪವಾದ ಧನವನ್ನು ತನ್ನ ಕಿರಣಗಳಿಂದ ಎಂಟು ತಿಂಗಳವರೆಗೆ ಹೀರಿದ್ದನು. ಅದರಿಂದ, ಈಗ ಉಚಿತಕಾಲವು ಪ್ರಾಪ್ತವಾಗಲು ಭೂಮಿಯನ್ನು ಪಾಲಿಸುವುದಕ್ಕೆ ಉದ್ಯುಕ್ತನಾದನು † (೫). ವಿದ್ಯುತ್ಸಹಿತವಾದ ಮಹಾಮೇಘಗಳು ಚಂಡಮಾರುತದಿಂದ ಚಲಿಸಿ ಜಗತ್ತಿಗೆ ಆಪ್ಯಾಯನಕರವಾದ ಜಲವನ್ನು ಕರುಣಾಳುಗಳಂತೆ ಸುರಿಸಿದವು (೬). ಬೇಸಿಗೆಯಿಂದ ಕೃಶಳಾಗಿದ್ದ ಭೂದೇವಿಯು ಪರ್ಜನ್ಯದೇವನಿಂದ ಅಭಿಷಿಕ್ತಳಾಗಿ, ಕಾಮನೆಯಿಂದ ತಪಸ್ಸುಮಾಡುವವನ ಶರೀರವು ಇಷ್ಟಾರ್ಥವನ್ನು ಪಡೆದಮೇಲೆ ಆಗುವಂತೆ ಹೃಷ್ಟಪುಷ್ಟಳಾದಳು (೭). ಪಾಪದಿಂದ ಆವೃತವಾದ ಕಲಿಯುಗದಲ್ಲಿ ಪಾಷಂಡಿಗಳು ಹೇಗೆ ವಿರಾಜಿಸುತ್ತಾರೋ, ವೇದಗಳು ವಿರಾಜಿಸುವುದಿಲ್ಲವೋ, ಹಾಗೆ ಕತ್ತಲುಮುಚ್ಚಿದ ರಾತ್ರಿಯಲ್ಲಿ ಮಿಂಚುಹುಳುಗಳು ಮಿನುಗುತ್ತಿದ್ದವು; (ಚಂದ್ರಾದಿ) ಗ್ರಹಗಳು

---

* ಮಿಂಚು–ಸತ್ತ್ವಗುಣಗಳಿಗೂ, ಗುಡುಗು–ರಜೋಗುಣಗಳಿಗೂ, ಕಾರ್ಮೋಡ–ತಮೋಗುಣಗಳಿಗೂ ಹೋಲಿಕೆ. ಗುಣತ್ರಯದಿಂದ ಆಚ್ಛಾದಿತವಾದ ಬ್ರಹ್ಮವಸ್ತು ಜೀವರೂಪದಲ್ಲಿದೆ. ಅದರಲ್ಲಿ ಪರಂಜ್ಯೋತಿಯ ಒಂದಂಶ ಅಸ್ಪಷ್ಟವಾಗಿ ಕಾಣುತ್ತದೆ ಎಂದು ಅಭಿಪ್ರಾಯ.

† ಪರ್ಜನ್ಯ=ಸೂರ್ಯ. ಭೋಕ್ತುಂ=ಪಾಲಿಸುವುದಕ್ಕೆ. ಜನರಿಂದ ಕಂದಾಯವನ್ನು ತೆಗೆದುಕೊಂಡು ಅವರನ್ನು ಪಾಲಿಸುವ ರಾಜನ ನಡೆ ಇಲ್ಲಿ ಸೂಚಿತವಾಗಿದೆ.

ಶ್ರುತ್ವಾ ಪರ್ಜನ್ಯನಿನದಂ ಮಂಡೂಕಾ ವ್ಯಸೃಜನ್ ಗಿರಃ ।
ತೂಷ್ಣೀಂ ಶಯಾನಾಃ ಪ್ರಾಗ್ ಯದ್ವದ್ ಬ್ರಾಹ್ಮಣಾ
ನಿಯಮಾತ್ಯಯೇ ॥ ೯

ಆಸನ್ನುತ್ಪಥವಾಹಿನ್ಯಃ ಕ್ಷುದ್ರನದ್ಯೋಽನುಶುಷ್ಯತೀಃ ।
ಪುಂಸೋ ಯಥಾ ಸ್ವತಂತ್ರಸ್ಯ ದೇಹದ್ರವಿಣಸಂಪದಃ ॥ ೧೦

ಹರಿತಾ ಹರಿಭಿಃ ಶಷ್ಪೈರಿಂದ್ರಗೋಪೈಶ್ಚ ಲೋಹಿತಾಃ ।
ಉಚ್ಛಿಲೀಂಧ್ರಕೃತಚ್ಛಾಯಾ ನೃಣಾಂ ಶ್ರೀರಿವ ಭೂರಭೂತ್ ॥ ೧೧

ಕ್ಷೇತ್ರಾಣಿ ಸಸ್ಯಸಂಪದ್ಭಿಃ ಕರ್ಷಕಾಣಾಂ ಮುದಂ ದದುಃ ।
ಧನಿನಾಮುಪತಾಪಂ ಚ ದೈವಾಧೀನಮಜಾನತಾಮ್ ॥ ೧೨

---

ಬೆಳಗುತ್ತಿರಲಿಲ್ಲ (೮). ನಿತ್ಯಕರ್ಮವು ಮುಗಿದಮೇಲೆ ಮೊದಲು ಸುಮ್ಮನೆ ವಿಶ್ರಮಿಸುವ ವೇದಾಧ್ಯಾಯಿಗಳಾದ ಶಿಷ್ಯರು ಗುರುವಿನ ಶಬ್ದವನ್ನು ಕೇಳಿದೊಡನೆ ಹೇಗೆ ವೇದಾಧ್ಯಯನವನ್ನಾರಂಭಿಸುವರೋ, ಹಾಗೆ ಮೋಡವು ಗುಡುಗುವುದನ್ನು ಕೇಳಿದೊಡನೆ ಕಪ್ಪೆಗಳು ವಟಗುಟ್ಟಲಾರಂಭಿಸಿದವು ! (೯). ಇಂದ್ರಿಯಲೋಲುಪನಾದ ಮನುಷ್ಯನ ದೇಹಸಂಪತ್ತು ಧನಸಂಪತ್ತುಗಳಂತೆ, ಒಣಗಿಹೋಗಿದ್ದ ಚಿಕ್ಕಹೊಳೆಗಳು ಮೇರೆದಪ್ಪಿ ಹುಚ್ಚುಹುಚ್ಚಾಗಿ ಉಕ್ಕಿ ಹರಿದವು ! (೧೦). ಹಸಿರುಹುಲ್ಲುಗಳಿಂದ ಹಸುರಾಗಿಯೂ ಇಂದ್ರಗೋಪಗಳೆಂಬ ಹುಳುಗಳಿಂದ ಕೆಂಪಾಗಿಯೂ ನಾಯಿಕೊಡೆಗಳ ಬಿಳುಪು ಕಾಂತಿಯಿಂದ ಕೂಡಿದ್ದಾಗಿಯೂ ಇರುವ ನೆಲವು ಜನರ ಸಂಪತ್ತಿನಂತೆ ಕಂಗೊಳಿಸಿತು* (೧೧). ದೈವಾಧೀನವಾಗಿ (ಮಳೆಯು ನಿಂತು) ಸಂತಾಪವಾದೀತೆಂಬುದನ್ನರಿಯದ ಧನಿಕರಾದ ರೈತರಿಗೆ, ಸಸ್ಯಸಂಪತ್ತುಗಳಿಂದ ತುಂಬಿದ ಹೊಲಗಳು

---

* ಮಳೆ ಬಿದ್ದ ನೆಲವೇ ಜನರ ಸಂಪತ್ತು ಎಂದು ಅಭಿಪ್ರಾಯ. ಮತ್ತು ಹಸಿರು ಕೆಂಪು ಬಿಳಿಯ ಬಣ್ಣಗಳು ಕ್ರಮವಾಗಿ ತಮಸ್ಸು ರಜಸ್ಸು ಸತ್ತ್ವಗುಣಗಳ ಸಂಕೇತ. ಜನರ ಸಂಪತ್ತು ಗುಣತ್ರಯಗಳಿಂದ ಆರ್ಜಿತವೆಂದೂ ಹೋಲಿಕೆಯನ್ನು ಕೊಡಬಹುದು. ಆದರೆ ಶ್ರೀಧರಸ್ವಾಮಿಗಳು ಜನರ ಸಂಪತ್ತು ಎಂಬುದಕ್ಕೆ (ನೃಣಾಂ ಶ್ರೀಃ) ರಾಜರ ಸೇನಾಸಂಪತ್ತು ಎಂದು ಅರ್ಥಮಾಡಿದ್ದಾರೆ.

ಜಲಸ್ಥಲೌಕಸಃ ಸರ್ವೇ ನವವಾರಿನಿಷೇವಯಾ ।
ಅಬಿಭ್ರದ್ ರುಚಿರಂ ರೂಪಂ ಯಥಾ ಹರಿನಿಷೇವಯಾ ॥ ೧೩

ಸರಿದ್ಭಿಃ ಸಂಗತಃ ಸಿಂಧುಶ್ಚುಕ್ಷುಭೇ ಶ್ವಸನೋರ್ಮಿಮಾನ್ ।
ಅಪಕ್ವಯೋಗಿನಶ್ಚಿತ್ತಂ ಕಾಮಾಕ್ತಂ ಗುಣಯುಗ್ ಯಥಾ ॥ ೧೪

ಗಿರಯೋ ವರ್ಷಧಾರಾಭಿರ್ಹನ್ಯಮಾನಾ ನ ವಿವ್ಯಥುಃ ।
ಅಭಿಭೂಯಮಾನಾ ವ್ಯಸನೈರ್ಯಥಾಧೋಕ್ಷಜಚೇತಸಃ ॥ ೧೫

ಮಾರ್ಗಾ ಬಭೂವುಃ ಸಂದಿಗ್ಧಾಸ್ತೃಣೈಶ್ಛನ್ನಾ ಹ್ಯಸಂಸ್ಕೃತಾಃ ।
ನಾಭ್ಯಸ್ಯಮಾನಾಃ ಶ್ರುತಯೋ ದ್ವಿಜೈಃ ಕಾಲಹತಾ ಇವ ॥ ೧೬

ಲೋಕಬಂಧುಷು ಮೇಘೇಷು ವಿದ್ಯುತಶ್ಚಲಸೌಹೃದಾಃ ।
ಸ್ಥೈರ್ಯಂ ನ ಚಕ್ರುಃ ಕಾಮಿನ್ಯಃ ಪುರುಷೇಷು ಗುಣಿಷ್ವಿವ ॥ ೧೭

---

ಸಂತೋಷವನ್ನಿತ್ತವು (೧೨). ಜಲದಲ್ಲಿಯೂ ನೆಲದಲ್ಲಿಯೂ ನೆಲೆಸಿದ ಸಕಲಸ್ಥಾವರಜಂಗಮಗಳೂ ಹೊಸನೀರಿನ ಸಂಸರ್ಗದಿಂದ, ಶ್ರೀಹರಿಸೇವೆಯಿಂದಾಗುವಂತೆ ಒಂದಾನೊಂದು ಸೌಂದರ್ಯವನ್ನು ಪಡೆದವು (೧೩). ಇನ್ನೂ ಪಳಗದಿರುವ ಯೋಗಿಯ ಚಿತ್ತವು ಭೋಗ್ಯವಸ್ತುಗಳ ಸಂಸರ್ಗದಿಂದ ಹೇಗೋ ಹಾಗೆ, ಹೊಳೆಗಳು ಹರಿದು ಬಂದು ಸೇರಿದ ಸಮುದ್ರವು ಗಾಳಿಯಿಂದಲೂ ತೆರೆಗಳಿಂದಲೂ ಯುಕ್ತವಾಗಿ ಕ್ಷೋಭೆಗೊಂಡಿತು (೧೪). ಕಷ್ಟಗಳು ಕಾಡಿದರೂ ವಿಚಲಿತರಾಗದ ಭಗವದ್ಭಕ್ತರಂತೆ, ವೃಷ್ಟಿಧಾರೆಗಳು ಅಪ್ಪಳಿಸಿದರೂ ಬೆಟ್ಟಗಳು ಅಲ್ಲಾಡಲಿಲ್ಲ! (೧೫). ಕಲಿಕಾಲದ ಹೊಡೆತಕ್ಕೆ ಸಿಕ್ಕಿ ದ್ವಿಜರು ಅಭ್ಯಾಸಮಾಡದಿರುವ ವೇದಗಳಂತೆ, ಹುಲ್ಲಿನಿಂದ ಮುಚ್ಚಿಹೋಗಿ ದಾರಿಗರು ತುಳಿಯದಿರುವ ಹಾದಿಗಳು (ಇವೆಯೋ ಇಲ್ಲವೋ ಹೇಗಿವೆಯೋ) ಎಂದು ಸಂದಿಗ್ಧವಾದವು! (೧೬). ಗುಣಶಾಲಿಗಳಾದ ಪುರುಷರಲ್ಲಿ ಜಾರಸ್ತ್ರೀಯರ ಸ್ನೇಹವು ಹೇಗೆ ಚಂಚಲವಾಗಿರುವುದೋ, ಅವರು ಹೇಗೆ ಸ್ಥಿರವಾಗಿ ನೆಲೆಸುವುದಿಲ್ಲವೋ, ಹಾಗೆ ಲೋಕೋಪಕಾರಿಗಳಾದ ಮೇಘಗಳಲ್ಲಿ ಮಿಂಚುಗಳ ಸಂಬಂಧವು ಕ್ಷಣಿಕವಾಗಿತ್ತು; ಅವು ಮೇಘಗಳಲ್ಲಿ

ಧನುರ್ವಿಯತಿ ಮಾಹೇಂದ್ರಂ ನಿರ್ಗುಣಂ ಚ ಗುಣಿನ್ಯಭಾತ್ ।
ವ್ಯಕ್ತೇ ಗುಣವ್ಯತಿಕರೇಽಗುಣವಾನ್ ಪುರುಷೋ ಯಥಾ ॥ ೧೮

ನ ರರಾಜೋಡುಪಶ್ಛನ್ನಃ ಸ್ವಜ್ಯೋತ್ಸ್ನಾರಾಜಿತೈರ್ಘನೈಃ ।
ಅಹಂಮತ್ಯಾ ಭಾಸಿತಯಾ ಸ್ವಭಾಸಾ ಪುರುಷೋ ಯಥಾ ॥ ೧೯

ಮೇಘಾಗಮೋತ್ಸವಾ ಹೃಷ್ಟಾಃ ಪ್ರತ್ಯನಂದನ್ ಶಿಖಂಡಿನಃ ।
ಗೃಹೇಷು ತಪ್ತಾ ನಿರ್ವಿಣ್ಣಾ ಯಥಾಚ್ಯುತಜನಾಗಮೇ ॥ ೨೦

ಪೀತ್ವಾಪಃ ಪಾದಪಾಃ ಪದ್ಭಿರಾಸನ್ನಾನಾತ್ಮಮೂರ್ತಯಃ ।
ಪ್ರಾಕ್ ಕ್ಷಾಮಾಸ್ತಪಸಾ ಶ್ರಾಂತಾ ಯಥಾ ಕಾಮಾನುಸೇವಯಾ ॥

ಸರಃಸ್ವಶಾಂತರೋಧಸ್ಸು ನ್ಯೂಷುರಂಗಾಪಿ ಸಾರಸಾಃ ।
ಗೃಹೇಷ್ವಶಾಂತಕೃತ್ಯೇಷು ಗ್ರಾಮ್ಯಾ ಇವ ದುರಾಶಯಾಃ ॥ ೨೨

---

ಸ್ಥಿರವಾಗಿ ಗೋಚರಿಸಲಿಲ್ಲ (೧೭). ತ್ರಿಗುಣಾತ್ಮಕವಾದ ಪ್ರಪಂಚದಲ್ಲಿ ನಿರ್ಗುಣನಾದ ಪುರುಷನು (ಗುಣಾತೀತನಾದ ಜ್ಞಾನಿಯು) ಶೋಭಿಸುವಂತೆ, ಗುಣಶಾಲಿಯಾದ (ಗುಡುಗೆಂಬ ಶಬ್ದಗುಣವುಳ್ಳ) ಗಗನದಲ್ಲಿ ನಿರ್ಗುಣವಾದ (ಹೆದೆಯಿಲ್ಲದ) ಇಂದ್ರಧನುಸ್ಸು (ಕಾಮನಬಿಲ್ಲು) ಶೋಭಿಸಿತು (೧೮). ತನ್ನ ಚೈತನ್ಯಜ್ಯೋತಿಯಿಂದಲೇ ಪ್ರಕಾಶಿತವಾದ ಅಹಂಕಾರಗುಣದಿಂದ ಆವೃತವಾದ ಜೀವಾತ್ಮನಂತೆ, ದ್ವಿಜರಾಜನಾದ ಚಂದ್ರನು ತನ್ನ ಬೆಳದಿಂಗಳಿಂದ ಬೆಳಗುವ ಮೋಡಗಳಿಂದ ಮುಚ್ಚಿಹೋದನು ! (೧೯). (ಸಂಸಾರಭಾರದಿಂದ) ತಪ್ತರಾಗಿ ನಿರ್ವಿಣ್ಣರಾದ ಜನರು ಮನೆಗೆ ಭಗವದ್ಭಕ್ತರು ಬಂದಾಗ ಹೃಷ್ಟರಾಗಿ ಸ್ವಾಗತಿಸುವಂತೆ, ಬಿಸಿಲಿನ ಬೇಗೆಯಿಂದ ಬಳಲಿದ ನವಿಲುಗಳು, ಮೋಡಗಳು ಬಂದಾಗ ಉತ್ಸವದಿಂದ ಉಬ್ಬಿ (ಕೇಕಾಧ್ವನಿಯಿಂದ) ಅವನ್ನು ಸ್ವಾಗತಿಸಿದವು (೨೦). ಮೊದಲು ತಪಸ್ಸಿನಿಂದ ಬಳಲಿ ಕೃಶರಾಗಿದ್ದ ತಪಸ್ವಿಗಳು ಅನಂತರ ಆಹಾರಸೇವನೆಯಿಂದ ಪುಷ್ಟರಾಗುವಂತೆ, ಕೃಶವಾಗಿದ್ದ ಮರಗಳು ಬೇರುಗಳಿಂದ ನೀರನ್ನು ಹೀರಿ ವಿಭಿನ್ನಾಕೃತಿಯ ಪುಷ್ಟರೂಪವನ್ನು ಪಡೆದವು (೨೧). ಅಶಾಂತಿಗೆ ನೆಲೆವೀಡಾದ ಮನೆಗಳಲ್ಲಿಯೂ ಮೋಹಾವಿಷ್ಟರಾದ ಗ್ರಾಮ್ಯಜನರು ವಾಸಮಾಡುವಂತೆ, ಅಬ್ಬ ! ಕೆಸರಿಂದ ರೊಚ್ಚೆಯಾದ

ಜಲೌಘೈರ್ನಿರಭಿದ್ಯಂತ ಸೇತವೋ ವರ್ಷತೀಶ್ವರೇ ।
ಪಾಖಂಡಿನಾಮಸದ್ವಾದೈರ್ವೇದಮಾರ್ಗಾಃ ಕಲೌ ಯಥಾ ॥ ೨೩

ವ್ಯಮುಂಚನ್ ವಾಯುಭಿರ್ನುನ್ನಾ ಭೂತೇಭ್ಯೋಽಥಾಮೃತಂ ಘನಾಃ
ಯಥಾಽಽಶಿಷೋ ವಿಶ್ಪತಯಃ ಕಾಲೇ ಕಾಲೇ ದ್ವಿಜೇರಿತಾಃ ॥ ೨೪

ಏವಂ ವನಂ ತದ್ ವರ್ಷಿಷ್ಠಂ ಪಕ್ವಖರ್ಜೂರಜಂಬುಮತ್ ।
ಗೋಗೋಪಾಲೈರ್ವೃತೋ ರಂತುಂ ಸಬಲಃ ಪ್ರಾವಿಶದ್ಧರಿಃ ॥ ೨೫

ಧೇನವೋ ಮಂದಗಾಮಿನ್ಯ ಊಧೋಭಾರೇಣ ಭೂಯಸಾ ।
ಯಯುರ್ಭಗವತಾಽಽಹೂತಾ ದ್ರುತಂ ಪ್ರೀತ್ಯಾ ಸ್ನುತಸ್ತನೀಃ ॥ ೨೬

ವನೌಕಸಃ ಪ್ರಮುದಿತಾ ವನರಾಜೀರ್ಮಧುಚ್ಯುತಃ ।
ಜಲಧಾರಾ ಗಿರೇರ್ನಾದಾನಾಸನ್ನಾ ದದೃಶೇ ಗುಹಾಃ ॥ ೨೭

ಕ್ವಚಿದ್ ವನಸ್ಪತಿಕ್ರೋಡೇ ಗುಹಾಯಾಂ ಚಾಭಿವರ್ಷತಿ ।
ನಿರ್ವಿಶ್ಯ ಭಗವಾನ್ ರೇಮೇ ಕಂದಮೂಲಫಲಾಶನಃ ॥ ೨೮

---

ದಡಗಳಿರುವ ಕೊಳಗಳಲ್ಲಿಯೂ ಸಾರಸಪಕ್ಷಿಗಳಿದ್ದವು! (೨೨). ಕಲಿಯುಗದಲ್ಲಿ ಪಾಖಂಡಿಗಳ ದುರ್ವಾದಗಳಿಂದ ವೇದಮಾರ್ಗಗಳು ಕುಸಿಯುವಂತೆ, ಇಂದ್ರನು ಮಳೆಗರೆಯುತ್ತಿರಲು ಜಲಪ್ರವಾಹಗಳಿಂದ ಅಡ್ಡಗಟ್ಟೆಗಳು ಕುಸಿದವು (೨೩). ಕಾಲಕಾಲದಲ್ಲಿ ದ್ವಿಜರಿಂದ ಪ್ರೇರಿತರಾದ ರಾಜರು ಪ್ರಜೆಗಳ ಇಷ್ಟಾರ್ಥಗಳನ್ನು ನಡೆಸಿಕೊಡುವಂತೆ, ವಾಯುಗಳಿಂದ ಪ್ರೇರಿತವಾದ ಮೋಡಗಳು ಪ್ರಾಣಿಗಳಿಗಾಗಿ ಅಮೃತವನ್ನು (ನೀರನ್ನು) ಸುರಿಸಿದವು (೨೪). ಈ ರೀತಿಯಲ್ಲಿ ಸಮೃದ್ಧಿಯಿಂದ ಕೂಡಿ ಮಾಗಿದ ಖರ್ಜೂರ ನೇರಿಳೆಹಣ್ಣುಗಳಿರುವ ಅರಣ್ಯಕ್ಕೆ, ಬಲರಾಮಸಹಿತನಾದ ಶ್ರೀಕೃಷ್ಣನು ಗೋವುಗಳಿಂದಲೂ ಗೋಪಾಲರಿಂದಲೂ ಪರಿವೃತನಾಗಿ ವಿಹರಿಸಲು ಹೋದನು (೨೫). ಕೆಚ್ಚಲಿನ ಭಾರದಿಂದ ಬಹು ಮೆಲ್ಲನೆ ಹೋಗುತ್ತಿದ್ದ ಹಸುಗಳು, ಭಗವಂತನು ಪ್ರೀತಿಯಿಂದ ಕರೆಯಲು ಹಾಲನ್ನು ತೊನೆಯುತ್ತ ಬೇಗಬೇಗನೆ ಹೋದವು (೨೬). ಅಲ್ಲಿ ಶ್ರೀಕೃಷ್ಣನು ಸಂತುಷ್ಟರಾದ ವನವಾಸಿಗಳನ್ನೂ ಜೇನುಸುರಿಸುವ ವನರಾಜಿಗಳನ್ನೂ ಬೆಟ್ಟದಿಂದ ಹರಿಯುವ ನೀರಿನ ತೊರೆಗಳನ್ನೂ ಅವುಗಳ ಕಲಕಲನಾದವನ್ನೂ ಬಳಿಯಲ್ಲಿರುವ ಗುಹೆಗಳನ್ನೂ ಕಂಡನು (೨೭). ಆಗ ಮಳೆ ಬರಲಾಗಿ ಗುಹೆಯೊಂದನ್ನು ಹೊಕ್ಕು ಬಂದಾನೊಂದು ಮರದ

**ದಧ್ಯೋದನಂ ಸಮಾನೀತಂ ಶಿಲಾಯಾಂ ಸಲಿಲಾಂತಿಕೇ ।**
**ಸಂಭೋಜನೀಯೈರ್ಬುಭುಜೇ ಗೋಪೈಃ ಸಂಕರ್ಷಣಾನ್ವಿತಃ ॥ ೨೯**

**ಶಾದ್ವಲೋಪರಿ ಸಂವಿಶ್ಯ ಚರ್ವತೋ ಮೀಲಿತೇಕ್ಷಣಾನ್ ।**
**ತೃಪ್ತಾನ್ ವೃಷಾನ್ ವತ್ಸತರಾನ್ ಗಾಶ್ಚ ಸ್ವೋಧೋಭರಶ್ರಮಾಃ ॥**

**ಪ್ರಾವೃಟ್ಶ್ರಿಯಂ ಚ ತಾಂ ವೀಕ್ಷ್ಯ ಸರ್ವಭೂತಮುದಾವಹಾಮ್ ।**
**ಭಗವಾನ್ ಪೂಜಯಾಂಚಕ್ರೇ ಆತ್ಮಶಕ್ತ್ಯುಪಬೃಂಹಿತಾಮ್ ॥ ೩೧**

**ಏವಂ ನಿವಸತೋಸ್ತಸ್ಮಿನ್ ರಾಮಕೇಶವಯೋರ್ವ್ರಜೇ ।**
**ಶರತ್ ಸಮಭವದ್ವ್ಯಭ್ರಾ ಸ್ವಚ್ಛಾಂಬ್ವಪರುಷಾನಿಲಾ ॥ ೩೨**

**ಶರದಾ ನೀರಜೋತ್ಪತ್ತ್ಯಾ ನೀರಾಣಿ ಪ್ರಕೃತಿಂ ಯಯುಃ ।**
**ಭ್ರಷ್ಟಾನಾಮಿವ ಚೇತಾಂಸಿ ಪುನರ್ಯೋಗನಿಷೇವಯಾ ॥ ೩೩**

**ವ್ಯೋಮ್ನೋಽಬ್ದಂ ಭೂತಶಾಬಲ್ಯಂ ಭುವಃ ಪಂಕಮಪಾಂ ಮಲಮ್ ।**
**ಶರಜ್ಜಹಾರಾಶ್ರಮಿಣಾಂ ಕೃಷ್ಣೇ ಭಕ್ತಿರ್ಯಥಾಶುಭಮ್ ॥ ೩೪**

---

ಬುಡದಲ್ಲಿ ಭಗವಂತನು ವಿಶ್ರಮಿಸಿಕೊಂಡು ಕಂದಮೂಲಫಲಗಳನ್ನು ತಿನ್ನುತ್ತ ವಿನೋದದಲ್ಲಿದ್ದನು (೨೮). ನೀರಿನ ಬಳಿ ಒಂದು ಶಿಲೆಯಮೇಲೆ ಬಲರಾಮ ಸಹಿತನಾಗಿ ಕುಳಿತು, ತಂದಿದ್ದ ಮೊಸರನ್ನವನ್ನು ಜೊತೆಗಾರರಾದ ಗೋಪ ರೊಡನೆ ತಿಂದನು (೨೯). ಮೇದು ತೃಪ್ತಿಗೊಂಡಿದ್ದ ಎತ್ತುಗಳೂ ಕರುಗಳೂ ಕೆಚ್ಚಲು ಭಾರದಿಂದ ಬಳುಕುವ ಹಸುಗಳೂ ಹಸಿರುಹುಲ್ಲುಗಾವಲಿನಲ್ಲಿ ಮಲಗಿ ಕಣ್ಣುಮುಚ್ಚಿ ಮೆಲುಕು ಹಾಕುತ್ತಿರುವುನ್ನೂ ಸರ್ವಮನೋಹರವಾದ ಮಳೆಗಾಲದ ಸೊಬಗನ್ನೂ ಭಗವಂತನು ವೀಕ್ಷಿಸಿದನು. ಆತ್ಮಶಕ್ತಿಯಿಂದ ವಿಸ್ತೃತವಾದ ಅವೆಲ್ಲವನ್ನೂ ವೀಕ್ಷಿಸಿ ಮೆಚ್ಚಿಕೊಂಡನು (೩೦–೩೧). ಈ ರೀತಿಯಲ್ಲಿ ರಾಮಕೇಶವರು ವ್ರಜದಲ್ಲಿ ಇರುತ್ತಿರಲಾಗಿ ಶರತ್ಕಾಲವು ಬಂದಿತು. ಮೋಡಗಳು ಅಡಗಿದವು. ನೀರು ತಿಳಿಯಾಯಿತು. ಒರಟಾಗಿ ಬೀಸುವ ಗಾಳಿ ಹಿಂಜರಿಯಿತು (೩೨). ಯೋಗಭ್ರಷ್ಟರಾಗಿದ್ದು ಮತ್ತೆ ಯೋಗಾಭ್ಯಾಸದಲ್ಲಿ ತೊಡಗಿದವರ ಮನಸ್ಸಿನಂತೆ, ತಾವರೆಗಳುದಿಸಿದ ಶರತ್ಕಾಲದಿಂದ ನೀರು ನಿಜವಾದ ತನ್ನ ಸ್ವಚ್ಛರೂಪವನ್ನು ಪಡೆಯಿತು (೩೩). ಶರತ್ಕಾಲವು ಆಕಾಶದ ಮೋಡವನ್ನೂ ವಾಯುಭೂತದ ಶಬಲವರ್ಣವನ್ನೂ

**ಸರ್ವಸ್ವಂ ಜಲದಾ ಹಿತ್ವಾ ವಿರೇಜುಃ ಶುಭ್ರವರ್ಚಸಃ ।**
**ಯಥಾ ತ್ಯಕ್ತೈಷಣಾಃ ಶಾಂತಾ ಮುನಯೋ ಮುಕ್ತಕಿಲ್ಬಿಷಾಃ ॥ ೩೫**

**ಗಿರಯೋ ಮುಮುಚುಸ್ತೋಯಂ ಕ್ವಚಿನ್ನ ಮುಮುಚುಃ ಶಿವಮ್ ।**
**ಯಥಾ ಜ್ಞಾನಾಮೃತಂ ಕಾಲೇ ಜ್ಞಾನಿನೋ ದದತೇ ನ ವಾ ॥ ೩೬**

**ನೈವಾವಿದನ್ ಕ್ಷೀಯಮಾಣಂ ಜಲಂ ಗಾಧಜಲೇಚರಾಃ ।**
**ಯಥಾಽಽಯುರನ್ವಹಂ ಕ್ಷಯ್ಯಂ ನರಾ ಮೂಢಾಃ ಕುಟುಂಬಿನಃ ॥**

**ಗಾಧವಾರಿಚರಾಸ್ತಾಪಮವಿಂದನ್ ಶರದರ್ಕಜಮ್ ।**
**ಯಥಾ ದರಿದ್ರಃ ಕೃಪಣಃ ಕುಟುಂಬ್ಯವಿಜಿತೇಂದ್ರಿಯಃ ॥ ೩೮**

---

ನೆಲದ ಕೆಸರನ್ನೂ ನೀರಿನ ಕೊಳೆಯನ್ನೂ ಸಹ, ಶ್ರೀಕೃಷ್ಣಭಕ್ತಿಯು ನಾಲ್ಕು ಆಶ್ರಮಿಗಳ ಕಷ್ಟವನ್ನು ಪರಿಹರಿಸುವಂತೆ ತೊಡೆದು ಹಾಕಿತು* (೩೪). ಮೋಡಗಳು ಸರ್ವಸ್ವವಾದ ನೀರನ್ನು ಸುರಿಸಿ, ಈಷಣಾತ್ರಯ (ಪುತ್ರೇಷಣಾ, ವಿತ್ತೇಷಣಾ, ಲೋಕೇಷಣಾ) ರಹಿತರೂ ಪಾಪವರ್ಜಿತರೂ ಆಗಿ ಶಾಂತರಾದ ಮುನಿಗಳ ಹಾಗೆ ಶುಭ್ರಕಾಂತಿಯುಳ್ಳವುಗಳಾದವು (೩೫). ಜ್ಞಾನಿಗಳು ಕಾಲೋಚಿತವಾಗಿ ತಮ್ಮ ಜ್ಞಾನಾಮೃತವನ್ನು ಕೆಲವೆಡೆ ನೀಡುವರು, ಕೆಲವೆಡೆ ನೀಡುವುದಿಲ್ಲ! ಹಾಗೆ ಗಿರಿಗಳು ನಿರ್ಮಲವಾದ ಜಲವನ್ನು ಕೆಲವೆಡೆ ಹರಿಸಿದವು, ಕೆಲವೆಡೆ ಹರಿಸಲಿಲ್ಲ (೩೬). ಸಂಸಾರಿಗಳಾದ ಮೂಢಜನರು ದಿನದಿನವೂ ಕ್ಷಯಿಸಿಹೋಗುವ ಆಯುಸ್ಸನ್ನು ಹೇಗೆ ಗಮನಿಸುವುದಿಲ್ಲವೋ, ಹಾಗೆ ಅಲ್ಪಜಲದಲ್ಲಿದ್ದ ಜಲಚರಪ್ರಾಣಿಗಳು ಕಡಿಮೆಯಾಗುತ್ತಿದ್ದ ನೀರನ್ನು ಗಮನಿಸಲೇ ಇಲ್ಲ! (೩೭). ದರಿದ್ರನೂ ಅವಿವೇಕಿಯೂ ಇಂದ್ರಿಯಗಳನ್ನು ಜಯಿಸಲಾರದವನೂ ಆದ ಕುಟುಂಬಿಯು ದುಃಖಕ್ಕೆ ಒಳಗಾಗುವಂತೆ, ಸ್ವಲ್ಪ

---

* ಮಳೆಗಾಲದಲ್ಲಿ ಆಕಾಶಾದಿ ನಾಲ್ಕು ಭೂತಗಳಿಗೆ (ಅಗ್ನಿಯನ್ನು ಬಿಟ್ಟು) ಒದಗಿದ್ದ ಮೋಡವೇ ಮೊದಲಾದ ಕೊಳೆಯನ್ನು ಶರತ್ಕಾಲವು ತೊಡೆದುಹಾಕಿತು. ಧೂಳಿ ಕಸ ಕಡ್ಡಿಗಳಿಂದ ತುಂಬಿದ ಬಿರುಗಾಳಿಗೆ ಶಬಲವರ್ಣವು (ಸಂಮಿಶ್ರ ಬಣ್ಣ) ಕೊಳೆ. 'ಭೂತಶಾಬಲ್ಯಂ' ಎಂಬಲ್ಲಿ ಭೂತವೆಂದರೆ ವಾಯುವೆಂದು ನನಗೆ ತೋರುತ್ತದೆ. ಶ್ರೀಧರಸ್ವಾಮಿಗಳು ಇಲ್ಲಿ 'ಪ್ರಾಣಿಗಳ ಸಾಂಕರ್ಯ–ಮಳೆಯ ಭಯದಿಂದ ಸಂಕುಚಿತವಾಗಿ ವಾಸಮಾಡುವುದು' ಎಂದು ಅರ್ಥ ಹೇಳಿದ್ದಾರೆ. 'ವಾತಶಾಬಲ್ಯಂ' ಎಂದು ಮೂಲದಲ್ಲಿ ಶುದ್ಧಪಾಠವಿದ್ದರೂ ಇರಬಹುದು.

ಶನೈಃ ಶನೈರ್ಜಹುಃ ಪಂಕಂ ಸ್ಥಲಾನ್ಯಾಮಂ ಚ ವೀರುಧಃ ।
ಯಥಾಹಂಮಮತಾಂ ಧೀರಾಃ ಶರೀರಾದಿಷ್ವನಾತ್ಮಸು ॥ ೩೯

ನಿಶ್ಚಲಾಂಬುರಭೂತ್ತೂಷ್ಣೀಂ ಸಮುದ್ರಃ ಶರದಾಗಮೇ ।
ಆತ್ಮನ್ಯುಪರತೇ ಸಮ್ಯಙ್ಮುನಿರ್ವ್ಯುಪರತಾಗಮಃ ॥ ೪೦

ಕೇದಾರೇಭ್ಯಸ್ತ್ವಪೋಽಗೃಹ್ಣನ್ ಕರ್ಷಕಾ ದೃಢಸೇತುಭಿಃ ।
ಯಥಾ ಪ್ರಾಣೈಃ ಸ್ರವಜ್ಜ್ಞಾನಂ ತನ್ನಿರೋಧೇನ ಯೋಗಿನಃ ॥ ೪೧

ಶರದರ್ಕಾಂಶುಜಾಂಸ್ತಾಪಾನ್ ಭೂತಾನಾಮುಡುಪೋಽಹರತ್ ।
ದೇಹಾಭಿಮಾನಜಂ ಬೋಧೋ ಮುಕುಂದೋ ವ್ರಜಯೋಷಿತಾಮ್

ಖಮಶೋಭತ ನಿರ್ಮೇಘಂ ಶರದ್ವಿಮಲತಾರಕಮ್ ।
ಸತ್ತ್ವಯುಕ್ತಂ ಯಥಾ ಚಿತ್ತಂ ಶಬ್ದಬ್ರಹ್ಮಾರ್ಥದರ್ಶನಮ್ ॥ ೪೩

---

ಜಲದಲ್ಲಿದ್ದ ಜಲಚರಗಳು ಶರತ್ಕಾಲದ ಸೂರ್ಯನ ತಾಪಕ್ಕೆ ಸಿಕ್ಕಿದವು (೩೮). ಪ್ರಾಜ್ಞರಾದವರು ಆತ್ಮವಲ್ಲದ ಶರೀರಾದಿಗಳಲ್ಲಿ 'ನಾನು-ನನ್ನದು' ಎಂಬುದನ್ನು ಕ್ರಮವಾಗಿ ಬಿಡುವಂತೆ, ನೆಲಗಳು ಕೆಸರನ್ನೂ ಬಳ್ಳಿಗಳು ಹಸಿಯಾದ ಆರ್ದ್ರತೆಯನ್ನೂ ಮೆಲ್ಲಮೆಲ್ಲಗೆ ತೊರೆದವು (೩೯). ಚಿತ್ತವು ಆತ್ಮನಲ್ಲಿ ಸಂಪೂರ್ಣವಾಗಿ ವಿಶ್ರಮಿಸಲು ಮುನಿಯು ಕಾರ್ಯಕಲಾಪಗಳನ್ನೂ ವೇದಘೋಷಾದಿಗಳನ್ನೂ ವರ್ಜಿಸಿ ಮೌನವಾಗಿರುವಂತೆ, ಶರತ್ಕಾಲವು ಬರಲಾಗಿ ನೀರು ಹೊಯ್ದಾಡದೆ ಸಮುದ್ರವು ಶಾಂತವಾಯಿತು (೪೦). ಇಂದ್ರಿಯಗಳ ಮೂಲಕ ಹೊರಗೆ ಸುಳಿಯುವ ಜ್ಞಾನವನ್ನು ಇಂದ್ರಿಯ ಸಂಯಮದಿಂದ ಯೋಗಿಗಳು ತಡೆಹಿಡಿಯುವ ಹಾಗೆ, ಹೊಲಗದ್ದೆಗಳಿಂದ ಹರಿದು ಹೋಗುವ ನೀರನ್ನು ಬಲವಾದ ಅಡ್ಡಗಟ್ಟೆ ಹಾಕಿ ರೈತರು ತಡೆದು ನಿಲ್ಲಿಸಿದರು (೪೧). ದೇಹಾಭಿಮಾನದಿಂದಾದ ತಾಪವನ್ನು ಆತ್ಮಬೋಧವೂ ವ್ರಜಸ್ತ್ರೀಯರ ತಾಪವನ್ನು ಮುಕುಂದನೂ ಪರಿಹರಿಸುವಂತೆ, ಶರತ್ಕಾಲದ ಸೂರ್ಯನ ಕಿರಣಗಳಿಂದಾದ ಪ್ರಾಣಿಗಳ ತಾಪವನ್ನು ಚಂದ್ರನು ಹೋಗಲಾಡಿಸಿದನು (೪೨). ಸತ್ತ್ವಗುಣಯುಕ್ತವಾದ ಚಿತ್ತವು ಶಬ್ದಬ್ರಹ್ಮವೆನಿಸಿದ ವೇದದ ಅರ್ಥವನ್ನರಿತು ಶೋಭಿಸುವಂತೆ, ಮೇಘರಹಿತವಾದ ಆಕಾಶವು ಶರತ್ಕಾಲದಿಂದ ವಿಮಲತಾರಕಾಪಂಕ್ತಿಯುಳ್ಳುದಾಗಿ ಶೋಭಿಸಿತು (೪೩).

**ಅಖಂಡಮಂಡಲೋ ವ್ಯೋಮ್ನಿ ರರಾಜೋಡುಗಣೈಃ ಶಶೀ ।**
**ಯಥಾ ಯದುಪತಿಃ ಕೃಷ್ಣೋ ವೃಷ್ಣಿಚಕ್ರಾವೃತೋ ಭುವಿ ॥ ೪೪**

**ಆಶ್ಲಿಷ್ಯ ಸಮಶೀತೋಷ್ಣಂ ಪ್ರಸೂನವನಮಾರುತಮ್ ।**
**ಜನಾಸ್ತಾಪಂ ಜಹುರ್ಗೋಪ್ಯೋ ನ ಕೃಷ್ಣಹೃತಚೇತಸಃ ॥ ೪೫**

**ಗಾವೋ ಮೃಗಾಃ ಖಗಾ ನಾರ್ಯಃ ಪುಷ್ಪಿಣ್ಯಃ ಶರದಾಭವನ್ ।**
**ಅನ್ವೀಯಮಾನಾಃ ಸ್ವವೃಷೈಃ ಫಲೈರೀಶಕ್ರಿಯಾ ಇವ ॥ ೪೬**

**ಉದಹೃಷ್ಯನ್ ವಾರಿಜಾನಿ ಸೂರ್ಯೋತ್ಥಾನೇ ಕುಮುದ್ ವಿನಾ ।**
**ರಾಜ್ಞಾ ತು ನಿರ್ಭಯಾ ಲೋಕಾ ಯಥಾ ದಸ್ಯೂನ್ ವಿನಾ ನೃಪ ॥**

**ಪುರಗ್ರಾಮೇಷ್ವಾಗ್ರಯಣೈರೈಂದ್ರಿಯೈಶ್ಚ ಮಹೋತ್ಸವೈಃ ।**
**ಬಭೌ ಭೂಃ ಪಕ್ವಸಸ್ಯಾಢ್ಯಾ ಕಲಾಭ್ಯಾಂ ನಿತರಾಂ ಹರೇಃ ॥ ೪೮**

---

ಯದುಪತಿಯಾದ ಶ್ರೀಕೃಷ್ಣನು ವೃಷ್ಣಿಗಳ ಗುಂಪಿನಿಂದ ಪರಿವೃತನಾಗಿ ಭೂಮಂಡಲದಲ್ಲಿ ಹೇಗೆ ವಿರಾಜಿಸಿದನೋ, ಹಾಗೆ ಪೂರ್ಣಮಂಡಲನಾದ ಚಂದ್ರನು ನಕ್ಷತ್ರಗಳಿಂದ ಪರಿವೃತನಾಗಿ ಗಗನಮಂಡದಲ್ಲಿ ಶೋಭಿಸಿದನು (೪೪). ಕೃಷ್ಣನಲ್ಲಿ ನೆಟ್ಟಮನಸ್ಸುಳ್ಳ ಗೋಪಿಯರಂತೆ, ಸಮಶೀತೋಷ್ಣವೂ ಹೂಗಳ ಮೇಲೆ ಬೀಸಿಬಂದುದೂ ಆದ ವನಮಾರುತವನ್ನಾಲಿಂಗಿಸಿದ ಜನರು ತಮ್ಮ ತಾಪವನ್ನು ಕಳೆದುಕೊಂಡರು * (೪೫). ಈಶ್ವರಾರಾಧನೆಯ ಕಾರ್ಯಗಳು, ಫಲಯುಕ್ತವಾಗುವಂತೆ, ಶರತ್ಕಾಲದ ಮಹಿಮೆಯಿಂದ ತಮ್ಮ ಪತಿಯರೊಡನೆ ಸೇರಿದ ಹಸು, ಪಶು, ಹಕ್ಕಿ, ಹೆಂಗಸರು ಗರ್ಭವನ್ನು ಧರಿಸಿದರು (೪೬). ಪರೀಕ್ಷಿತರಾಜ, ಕಳ್ಳಕಾಕರನ್ನು ಬಿಟ್ಟು ಉಳಿದ ಜನರು ರಾಜನಿಂದ ನಿರ್ಭಯರಾಗಿ ಹರ್ಷಿಸುವಂತೆ, ಕುಮುದಗಳ ಹೊರತಾಗಿ ತಾವರೆಗಳೇ ಮೊದಲಾದ ಜಲಪುಷ್ಪಗಳು ಸೂರ್ಯೋದಯದಿಂದ ನಳನಳಿಸಿದವು (೪೭). ಮಾಗಿ ನಿಂತಿದ್ದ ಬೆಳೆಗಳಿಂದ ಯುಕ್ತವಾದ ಭೂಮಿಯು ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ನಡೆಯುವ ಆಗ್ರಯಣಾದಿ ವೈದಿಕೋತ್ಸವಗಳಿಂದಲೂ ಇಂದ್ರಿಯಪ್ರೀತ್ಯರ್ಥವಾದ ಲೌಕಿಕ ಹಬ್ಬಗಳಿಂದಲೂ

---

* ಮೂಲದಲ್ಲಿರುವ 'ನ' ಶಬ್ದವು ಇಲ್ಲಿ ಉಪಮಾರ್ಥಕ. 'ಗೋಪಿಯರು ಮಾತ್ರ ತಾಪವನ್ನು ಕಳೆದುಕೊಳ್ಳಲಿಲ್ಲ' ಎಂದು ನಿಷೇಧಾರ್ಥಕವಾಗಿಯೂ ಹೇಳಬಹುದು.

ವಣಿಜ್ಮುನಿನೃಪಸ್ನಾತಾ ನಿರ್ಗಮ್ಯಾರ್ಥಾನ್ ಪ್ರಪೇದಿರೇ ।
ವರ್ಷರುದ್ಧಾ ಯಥಾ ಸಿದ್ಧಾಃ ಸ್ವಪಿಂಡಾನ್ ಕಾಲ ಆಗತೇ ॥ ೪೯

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ವಿಂಶಾಧ್ಯಾಯಃ

---

## ಏಕವಿಂಶಾಧ್ಯಾಯಃ

ಶ್ರೀಶುಕ ಉವಾಚ—

ಇತ್ಥಂ ಶರತ್ಸ್ವಚ್ಛಜಲಂ ಪದ್ಮಾಕರಸುಗಂಧಿನಾ ।
ನ್ಯವಿಶದ್ ವಾಯುನಾ ವಾತಂ ಸಗೋಗೋಪಾಲಕೋಽಚ್ಯುತಃ ॥ ೧

---

ಶೋಭಿಸಿತು. ಶ್ರೀಮನ್ನಾರಾಯಣನ ಅಂಶಗಳಾದ ಶ್ರೀಕೃಷ್ಣಬಲರಾಮರಿಂದ ಇನ್ನೂ ಅತಿಶಯವಾಗಿ ವಿರಾಜಿಸಿತು (೪೮). ಮಳೆಗಾಲದಿಂದ ತಡೆಯಲ್ಪಟ್ಟದ್ದ ವಣಿಜರೂ ಸಂನ್ಯಾಸಿಗಳೂ ರಾಜರೂ ಸ್ನಾತಕರೂ ತಮ್ಮ ತಮ್ಮ ಸ್ಥಳಗಳಿಂದ ಹೊರಟು, ಸಿದ್ಧಪುರುಷರು ಸಕಾಲದಲ್ಲಿ ತಮ್ಮ ದಿವ್ಯದೇಹಗಳನ್ನು ಪಡೆಯುವಂತೆ, ತಮ್ಮ ಇಷ್ಟಾರ್ಥಗಳನ್ನು ಪಡೆದರು (೪೯).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತನೆಯ ಅಧ್ಯಾಯ

---

## ಅಧ್ಯಾಯ ೨೧

ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ಮುಗ್ಧರಾದ ಗೋಪಿಯರ ನುಡಿ

ಈ ರೀತಿಯಲ್ಲಿ ಶರತ್ಕಾಲದಿಂದ ತಿಳಿಯಾದ ನೀರಿರುವ ಮತ್ತು ತಾವರೆಗೊಳದ ಮೇಲೆ ಬೀಸಿ ಸುಗಂಧಿಯಾದ ಗಾಳಿಯಿಂದ ಕೂಡಿದ ವನವನ್ನು ಗೋಗಳಿಂದಲೂ ಗೋಪಾಲಕರಿಂದಲೂ ಸಮೇತನಾಗಿ ಅಚ್ಯುತನು

ಕುಸುಮಿತವನರಾಜಿಶುಷ್ಮಿಭೃಂಗ-
ದ್ವಿಜಕುಲಘುಷ್ಟಸರಃಸರಿನ್ಮಹೀಧ್ರಮ್ ।
ಮಧುಪತಿರವಗಾಹ್ಯ ಚಾರಯನ್ ಗಾಃ
ಸಹಪಶುಪಾಲಬಲಶ್ಚುಕೂಜ ವೇಣುಮ್ ॥ ೨

ತದ್ ವ್ರಜಸ್ತ್ರಿಯ ಆಶ್ರುತ್ಯ ವೇಣುಗೀತಂ ಸ್ಮರೋದಯಮ್ ।
ಕಾಶ್ಚಿತ್ ಪರೋಕ್ಷಂ ಕೃಷ್ಣಸ್ಯ ಸ್ವಸಖೀಭ್ಯೋಽನ್ವವರ್ಣಯನ್ ॥ ೩

ತದ್ವರ್ಣಯಿತುಮಾರಬ್ಧಾಃ ಸ್ಮರಂತ್ಯಃ ಕೃಷ್ಣಚೇಷ್ಟಿತಮ್ ।
ನಾಶಕನ್ ಸ್ಮರವೇಗೇನ ವಿಕ್ಷಿಪ್ತಮನಸೋ ನೃಪ ॥ ೪

ಬರ್ಹಾಪೀಡಂ ನಟವರವಪುಃ ಕರ್ಣಯೋಃ ಕರ್ಣಿಕಾರಂ
ಬಿಭ್ರದ್ ವಾಸಃ ಕನಕಕಪಿಶಂ ವೈಜಯಂತೀಂ ಚ ಮಾಲಾಮ್ ।
ರಂಧ್ರಾನ್ ವೇಣೋರಧರಸುಧಯಾ ಪೂರಯನ್ ಗೋಪವೃಂದೈ-
ರ್ವೃಂದಾರಣ್ಯಂ ಸ್ವಪದರಮಣಂ ಪ್ರಾವಿಶದ್ ಗೀತಕೀರ್ತಿಃ ॥ ೫

---

ಪ್ರವೇಶಿಸಿದನು (೧). ಹೂವರಳಿದ ವನರಾಜಿಯಲ್ಲಿದ್ದ ಕೊಳ ಹೊಳೆ ಬೆಟ್ಟಗಳಲ್ಲಿ ಮದಿಸಿದ ದುಂಬಿಗಳು ಝೇಂಕರಿಸುತ್ತಿದ್ದವು. ಹಕ್ಕಿಗಳು ಕಲಕಲ ಎಂದು ಕೂಗುತ್ತಿದ್ದವು. ಮಾಧವನು ಗೋಪಾಲ ಬಲರಾಮರೊಡನೆ ಆ ವನವನ್ನು ಪ್ರವೇಶಿಸಿ ಹಸುಗಳನ್ನು ಮೇಯಿಸುತ್ತ ಕೊಳಲನ್ನು ಊದಿದನು (೨). ವ್ರಜದಲ್ಲಿದ್ದ ಕೆಲವು ಗೋಪಿಕಾಸ್ತ್ರೀಯರು ಕಾಮೋದಯವನ್ನುಂಟು ಮಾಡುವ ಆ ವೇಣುನಾದವನ್ನು ಕೇಳಿ ಕೃಷ್ಣನ ಪರೋಕ್ಷದಲ್ಲಿ ತಮ್ಮ ಗೆಳತಿಯರಿಗೆ ಅದರ ಸೊಬಗನ್ನು ವರ್ಣಿಸಲು ಉದ್ದೇಶಿಸಿದರು (೩). ಪರೀಕ್ಷಿತರಾಜ, ವರ್ಣಿಸಲಾರಂಭಿಸಿದಾಗ ಆ ಸ್ತ್ರೀಯರು ಕೃಷ್ಣನ ನಡೆನುಡಿಗಳನ್ನು ಸ್ಮರಿಸಿಕೊಂಡು ಕಾಮಾವೇಶದಿಂದ ವಿಕ್ಷಿಪ್ತಚಿತ್ತರಾಗಿ ಅದನ್ನು ವರ್ಣಿಸಲಾರದೆ ಹೋದರು! (೪) (ಅವರು ಸ್ಮರಿಸಿಕೊಂಡ ಕೃಷ್ಣನು ಹೇಗಿದ್ದನೆಂದರೆ) ತಲೆಯಲ್ಲಿ ನವಿಲುಗರಿಯನ್ನೂ ಕಿವಿಗಳಲ್ಲಿ ಕಣಿಗಿಲೆಹೂಗಳನ್ನು ಸಿಕ್ಕಿಸಿಕೊಂಡಿದ್ದ ಕೃಷ್ಣನು ಸುಂದರ ನಟ ವೇಷದಲ್ಲಿದ್ದನು. ಹೊಂಬಣ್ಣದ ವಸ್ತ್ರವನ್ನುಟ್ಟು ವೈಜಯಂತೀಮಾಲೆಯನ್ನು ಧರಿಸಿದ್ದನು. ಗೋಪಬಾಲಕರು ಹೊಗಳಿ ಹಾಡುತ್ತಿರಲು ತನ್ನ ಅಧರಾಮೃತದಿಂದ ಕೊಳಲಿನ ರಂಧ್ರಗಳನ್ನು

ಇತಿ ವೇಣುರವಂ ರಾಜನ್ ಸರ್ವಭೂತಮನೋಹರಮ್ ।
ಶ್ರುತ್ವಾ ವ್ರಜಸ್ತ್ರಿಯಃ ಸರ್ವಾ ವರ್ಣಯಂತ್ಯೋಽಭಿರೇಭಿರೇ ॥ ೬

ಗೋಪ್ಯ ಊಚುಃ—

ಅಕ್ಷಣ್ವತಾಂ ಫಲಮಿದಂ ನ ಪರಂ ವಿದಾಮಃ
ಸಖ್ಯಃ ಪಶೂನನು ವಿವೇಶಯತೋರ್ವಯಸ್ಯೈಃ ।
ವಕ್ತ್ರಂ ವ್ರಜೇಶಸುತಯೋರನುವೇಣು ಜುಷ್ಟಂ
ಯೈರ್ವಾ ನಿಪೀತಮನುರಕ್ತಕಟಾಕ್ಷಮೋಕ್ಷಮ್ ॥ ೭

ಚೂತಪ್ರವಾಲಬರ್ಹಸ್ತಬಕೋತ್ಪಲಾಬ್ಜ-
ಮಾಲಾನುಪೃಕ್ತಪರಿಧಾನವಿಚಿತ್ರವೇಷೌ ।
ಮಧ್ಯೇ ವಿರೇಜತುರಲಂ ಪಶುಪಾಲಗೋಷ್ಠ್ಯಾಂ
ರಂಗೇ ಯಥಾ ನಟವರೌ ಕ್ವ ಚ ಗಾಯಮಾನೌ ॥ ೮

---

ಪ್ರೂರೈಸುತ್ತ ತಾನು ಹೆಜ್ಜೆಯಿಡುವುದರಿಂದಲೇ ರಮಣೀಯವಾಗಿ ತೋರುವ ವೃಂದಾರಣ್ಯವನ್ನು ಪ್ರವೇಶಿಸುತ್ತಿದ್ದನು! (೫). ಪರೀಕ್ಷಿತರಾಜ, ಸಕಲ ಜೀವಿಗಳಿಗೂ ಮನೋಹರವಾಗಿದ್ದ ಈ ಪ್ರಕಾರದ ವೇಣುನಾದವನ್ನು ಕೇಳಿ ಎಲ್ಲ ಗೋಪಿಕೆಯರೂ ಅದನ್ನೇ ವರ್ಣಿಸುತ್ತ ಆನಂದದಲ್ಲಿ ಮುಳುಗಿದರು (೬). ಗೋಪಿಯರು ಹೇಳಿದರು: ಗೆಳತಿಯರೆ, ನಮ್ಮ ವ್ರಜರಾಜನ ಮಕ್ಕಳು (ಶ್ರೀಕೃಷ್ಣ–ಬಲರಾಮರು) ಗೆಳೆಯರೊಡನೆ ಹಸುಗಳನ್ನು ಮೇಯಿಸಲು ಹೊರಟಾಗ, ಕೊಳಲನ್ನು ನುಡಿಸುವ ಅವರ ಮುಖವನ್ನು ಯಾರು ನೋಡುವರೋ, ಅನುರಾಗಯುಕ್ತವಾದ ಆ ಕಟಾಕ್ಷವೀಕ್ಷಣವನ್ನಾದರೂ ಯಾರು ಸವಿಯುವರೋ ಅವರಿಗೆ ಕಣ್ಣಿದ್ದುದಕ್ಕೆ ಅದೇ ಫಲ! ಅದಕ್ಕಿಂತ ಹೆಚ್ಚಿನ ಫಲ ನಮಗೆ ತಿಳಿಯದು! (೭). ಮಾವಿನ ಚಿಗುರೆಲೆ ನವಿಲುಗರಿಗಳ ಗೊಂಚಲನ್ನು ಮುಡಿದು, ನೈದಿಲೆ ತಾವರೆಗಳ ಮಾಲೆಯನ್ನು ಧರಿಸಿ, ಬಣ್ಣಬಣ್ಣದ ವಸ್ತ್ರವನ್ನುಟ್ಟು, ಗೋಪಾಲರ ಗೋಷ್ಠಿಯ ನಡುವೆ ನಿಂತು ಹಾಡುತ್ತಲಿದ್ದ ಅವರಿಬ್ಬರು, ರಂಗಸ್ಥಳದಲ್ಲಿರುವ ನಟರಂತೆ, ಅದೇನು ಸೊಗಯಿಸಿದರೊ! (೮).

ಗೋಪ್ಯಃ ಕಿಮಾಚರದಯಂ ಕುಶಲಂ ಸ್ಮ ವೇಣು-
ರ್ದಾಮೋದರಾಧರಸುಧಾಮಪಿ ಗೋಪಿಕಾನಾಮ್ ।
ಭುಂಕ್ತೇ ಸ್ವಯಂ ಯದವಶಿಷ್ಟರಸಂ ಹ್ರದಿನ್ಯೋ
ಹೃಷ್ಯತ್ತ್ವಚೋಽಶ್ರು ಮುಮುಚುಸ್ತರವೋ
ಯಥಾಽಽರ್ಯಾಃ ॥ ೯

ವೃಂದಾವನಂ ಸಖಿ ಭುವೋ ವಿತನೋತಿ ಕೀರ್ತಿಂ
ಯದ್ದೇವಕೀಸುತಪದಾಂಬುಜಲಬ್ಧಲಕ್ಷ್ಮಿ ।
ಗೋವಿಂದವೇಣುಮನು ಮತ್ತಮಯೂರನೃತ್ಯಂ
ಪ್ರೇಕ್ಷ್ಯಾದ್ರಿಸಾನ್ವಪರತಾನ್ಯಸಮಸ್ತಸತ್ತ್ವಮ್ ॥ ೧೦

ಧನ್ಯಾಃ ಸ್ಮ ಮೂಢಮತಯೋಽಪಿ ಹರಿಣ್ಯ ಏತಾ
ಯಾ ನಂದನಂದನಮುಪಾತ್ತವಿಚಿತ್ರವೇಷಮ್ ।

---

ಗೋಪಿಯರೆ, ಆ ಕೊಳಲು ಯಾವ ಪುಣ್ಯವನ್ನು ಮಾಡಿರಬಹುದು! ಗೋಪಿಯರಿಗೆ ದೊರಕಬೇಕಾದ ಅಧರಾಮೃತವನ್ನು ಹೊರಗೆ ಸೂಸುತ್ತ, ತಾನೇ ಅದು ಕುಡಿದುಬಿಡುವುದಲ್ಲ! ನೋಡಿ, ಹಿರಿಯ ಜನರಂತೆ ಹೊಳೆಗಳು ರೋಮಾಂಚಗೊಂಡವು! ಮರಗಳು ಆನಂದಬಾಷ್ಪಗಳನ್ನು ದುರಿಸಿದವು! * (೯). ಎಲೌ ಗೆಳತಿ, ವೃಂದಾವನವು ಕೃಷ್ಣನ ಪಾದಕಮಲಸ್ಪರ್ಶದಿಂದ ಒಂದು ಶೋಭೆಯನ್ನು ಪಡೆಯಿತು. ಗೋವಿಂದನ ಕೊಳಲಿನ ಇಂಚರವನ್ನು ಕೇಳಿ ಮದಿಸಿದ ಮಯೂರಗಳು ನರ್ತಿಸುತ್ತಿವೆ; ಬೆಟ್ಟದ ತೊಪ್ಪಲಲ್ಲಿ ಎಲ್ಲ ಪ್ರಾಣಿಗಳು ಚಲಿಸದೆ ನಿಂತು ಆದನ್ನಾಲಿಸುತ್ತಿವೆ. ಆಹಾ! ವೃಂದಾವನವು ಭೂಲೋಕಕ್ಕೇ ಕೀರ್ತಿಯನ್ನು ತಂದಿದೆ (೧೦). ಚಿತ್ರಮನೋಹರಗಾನವ ವೇಣುನಾದವನ್ನು ಆಲಿಸಿ, ಪಶುಗಳಾದರೂ ಈ ಹರಿಣಿಗಳು ಹರಿಣಗಳೊಡನೆ

---

* ತಮ್ಮ ವಂಶದಲ್ಲಿ ಪುಣ್ಯವಂತನು ಹುಟ್ಟಿದರೆ ಹಿರಿಯರಾದ ತಾಯಿ ತಂದೆಯರು ಆನಂದಿಸುವರು. ಹಾಗೆ ಕೊಳಲಿಗೆ–ಬಿದುರಿಗೆ ತಾಯಿತಂದೆಗಳಂತಿರುವ ಹೊಳೆಗಳೂ ಮರಗಳೂ ಕೊಳಲಿನ ಭಾಗ್ಯವನ್ನು ಕಂಡು ಆನಂದಿಸಿದವೆಂದು ಅಭಿಪ್ರಾಯ. ಶರತ್ಕಾಲ ದಲ್ಲಿ ತಾವರೆಗಳು ಅರಳಿದ್ದರಿಂದ ಹೊಳೆಗಳು ರೋಮಂಚಗೊಂಡಂತಾಯಿತು. ನೀರುಹನಿ ಗಳು ಉದುರಿದ್ದರಿಂದ ಮರಗಳು ಆನಂದಬಾಷ್ಪವನ್ನು ಸುರಿಸಿದಂತಾಯಿತು.

ಆಕರ್ಣ್ಯ ವೇಣುರಣಿತಂ ಸಹಕೃಷ್ಣಸಾರಾಃ
ಪೂಜಾಂ ದಧುರ್ವಿರಚಿತಾಂ ಪ್ರಣಯಾವಲೋಕೈಃ ||
ಕೃಷ್ಣಂ ನಿರೀಕ್ಷ್ಯ ವನಿತೋತ್ಸವರೂಪಶೀಲಂ
ಶ್ರುತ್ವಾ ಚ ತತ್ಕ್ವಣಿತವೇಣುವಿಚಿತ್ರಗೀತಮ್ |
ದೇವ್ಯೋ ವಿಮಾನಗತಯಃ ಸ್ಮರನುನ್ನಸಾರಾಃ
ಭ್ರಶ್ಯತ್ಪ್ರಸೂನಕಬರಾ ಮುಮುಹುರ್ವಿನೀವ್ಯಃ || ೧೨
ಗಾವಶ್ಚ ಕೃಷ್ಣಮುಖನಿರ್ಗತವೇಣುಗೀತ-
ಪೀಯೂಷಮುತ್ತಭಿತಕರ್ಣಪುಟೈಃ ಪಿಬಂತ್ಯಃ |
ಶಾವಾಃ ಸ್ನುತಸ್ತನಪಯಃಕವಲಾಃ ಸ್ಮ ತಸ್ಥು-
ರ್ಗೋವಿಂದಮಾತ್ಮನಿ ದೃಶಾಶ್ರುಕಲಾಃ ಸ್ಪೃಶಂತ್ಯಃ ||
ಪ್ರಾಯೋ ಬತಾಂಬ ವಿಹಗಾ ಮುನಯೋ ವನೇಽಸ್ಮಿನ್
ಕೃಷ್ಣೇಕ್ಷಿತಂ ತದುದಿತಂ ಕಲವೇಣುಗೀತಮ್ |
ಆರುಹ್ಯ ಯೇ ದ್ರುಮಭುಜಾನ್ ರುಚಿರಪ್ರವಾಲಾನ್
ಶೃಣ್ವಂತ್ಯಮೀಲಿತದೃಶೋ ವಿಗತಾನ್ಯವಾಚಃ || ೧೪

---

ನಿಂತು ನಂದನಂದನನ ಮೇಲೆ ಪ್ರಣಯದೃಷ್ಟಿಗಳನ್ನು ಬೀರಿ ಅವನನ್ನು ಸಂಮಾನಿಸಿದವು! ಓ ಸಖಿಯರೆ, ಈ ಹರಿಣಿಗಳೇ ಪುಣ್ಯಶಾಲಿಗಳು (೧೧). ವನಿತೆಯರಿಗೆ ಹಬ್ಬವನ್ನುಂಟುಮಾಡುವ ರೂಪಶೀಲಗಳಿರುವ ಕೃಷ್ಣನನ್ನು ನೋಡಿ, ಅವನು ನುಡಿಸುವ ಮಧುರವಾದ ವೇಣುನಾದವನ್ನು ಕೇಳಿ, ವಿಮಾನ ದಲ್ಲಿ ಹೋಗುತ್ತಿದ್ದ ಅಪ್ಸರೆಯರು ಕಾಮುವಶರಾಗಿ ಧೈರ್ಯಗೆಟ್ಟರು. ಅವರ ಮುಡಿಗಳಿಂದ ಹೂಗಳು ಉದುರಿದವು. ಅಪ್ಸರೆಯರ ಸೀರೆಯ ಗಂಟು ಸಡಿಲಿತು.! ಅವರು ಮೈ ಮರೆತರು! (ಸಖಿಯರೆ, ಈ ಆಶ್ಚರ್ಯವನ್ನು ಕೇಳಿರಿ!) (೧೨). ಹಸುಗಳು ಕೃಷ್ಣನ ಮುಖದಿಂದ ಹೊರಡುವ ವೇಣು ನಾದಾಮೃತವನ್ನು ನಿಮಿರಿಸಿದ ಕಿವಿಗಳಿಂದ ಹೀರುತ್ತಿವೆ! ಮೊಲೆಕುಡಿಯು ತ್ತಿದ್ದ ಕರುಗಳು ಕಟವಾಯಿಯಿಂದ ಹಾಲನ್ನು ಹರಿಸುತ್ತ ಸುಮ್ಮನೆ ನಿಂತುಬಿಟ್ಟವೆ! ಕಣ್ಣಲ್ಲಿ ನೀರು ತುಂಬಿಕೊಂಡು ಮನಸ್ಸಿನಲ್ಲೇ ಗೋವಿಂದ ನನ್ನು ಆಲಿಂಗಿಸುತ್ತಿವೆ! (೧೩). ಓ ತಾಯಿ! ಈ ಕಾಡಿನಲ್ಲಿರುವ ಹಕ್ಕಿಗಳು ಋಷಿಗಳೇ ಸರಿ! ಇವು ಚಿಗುರೆಲೆಗಳಿಂದ ಮನೋಹರವಾದ ಮರದ

ನದ್ಯಸ್ತದಾ ತದುಪಧಾರ್ಯ ಮುಕುಂದಗೀತ-
ಮಾವರ್ತಲಕ್ಷಿತಮನೋಭವಭಗ್ನವೇಗಾಃ ।
ಆಲಿಂಗನಸ್ಥಗಿತಮೂರ್ಮಿಭುಜೈರ್ಮುರಾರೇ-
ರ್ಗೃಹ್ಣಂತಿ ಪಾದಯುಗಲಂ ಕಮಲೋಪಹಾರಾಃ ॥ ೧೫

ದೃಷ್ಟ್ವಾಽಽತಪೇ ವ್ರಜಪಶೂನ್ ಸಹ ರಾಮಗೋಪೈಃ
ಸಂಚಾರಯಂತಮನು ವೇಣುಮುದೀರಯಂತಮ್ ।
ಪ್ರೇಮಪ್ರವೃದ್ಧ ಉದಿತಃ ಕುಸುಮಾವಲೀಭಿಃ
ಸಖ್ಯುರ್ವ್ಯಧಾತ್ ಸ್ವವಪುಷಾಂಬುದ ಆತಪತ್ರಮ್ ॥ ೧೬

ಪೂರ್ಣಾಃ ಪುಲಿಂದ್ಯ ಉರುಗಾಯಪದಾಬ್ಜರಾಗ-
ಶ್ರೀಕುಂಕುಮೇನ ದಯಿತಾಸ್ತನಮಂಡಿತೇನ ।
ತದ್ದರ್ಶನಸ್ಮರರುಜಸ್ತೃಣರೂಷಿತೇನ
ಲಿಂಪಂತ್ಯ ಆನನಕುಚೇಷು ಜಹುಸ್ತದಾಧಿಮ್ ॥ ೧೭

---

ಕೊಂಬೆಗಳ ಮೇಲೆ ಕೃಷ್ಣನು ನೋಡುವಂತೆ ಕುಳಿತು ಕಣ್ಣರಳಿಸಿ ಕಲಕಿಲ ಎನ್ನದೆ, ಅವನ ಮಂಜುಳವೇಣುಗಾನವನ್ನು ಕೇಳುತ್ತಿವೆ! * (೧೪). ನದಿಗಳೂ ಸಹ ಮುಕುಂದನ ಕೊಳಲಿನ ನಾದವನ್ನಾಲಿಸಿ ಹರಿಯುವ ವೇಗವನ್ನು ಕಡಿಮೆ ಮಾಡಿವೆ. ಸುಳಿಗಳು ಹೊರಳುವುದರಿಂದ ಅದು ಗೊತ್ತಾಗುತ್ತದೆ! ತೆರೆಗಳೆಂಬ ತೋಳುಗಳಿಂದ ತಾವರೆಗಳನ್ನರ್ಪಿಸಿ ಅವನ ಪಾದಯುಗಳವನ್ನಾಲಿಂಗಿಸಲು ಯತ್ನಿಸುತ್ತಿವೆ! (೧೫). ಕೊಳಲೂದುತ್ತ ಬಲರಾಮ ಗೋಪಾಲರೊಡನೆ ವ್ರಜದ ಪಶುಗಳನ್ನು ಮೇಯಿಸುತ್ತ ಬಿಸಿಲಲ್ಲಿ ಬಳಲುವ ಕೃಷ್ಣನನ್ನು ಮೇಘರಾಜನು ಕಂಡನು. ಒಡನೆಯೇ ಸ್ನೇಹಿತನ ಮೇಲೆ ಅವನ ಪ್ರೇಮವು ಉಕ್ಕಿತು. ಹೂಗಳನ್ನುದುರಿಸುತ್ತ ಮೇಘರಾಜನು ಕೃಷ್ಣನಿಗೆ ತನ್ನನ್ನೇ ಕೊಡೆಯನ್ನಾಗಿ ಒಡ್ಡಿರುವನು! (೧೬). ದಯಿತೆಯರ ಸ್ತನಗಳನ್ನು ಅಲಂಕರಿಸಿದ ಕುಂಕುಮವು ಮತ್ತೆ ಶ್ರೀಕೃಷ್ಣನ ಪಾದಕಮಲ

---

* ಋಷಿಗಳು ವೇದಶಾಖೆಗಳನ್ನೇರಿ ಚಿಗುರೆಲೆಯಂತಹ ಪರಿಶುದ್ಧಕರ್ಮವನ್ನು ಆಚರಿಸುತ್ತ ಶ್ರೀಕೃಷ್ಣಗೀತೆಯನ್ನು ಆಲಿಸುತ್ತ ಅವನ ಕೃಪಾವಲೋಕನಕ್ಕಾಗಿ ಕಾದಿರುತ್ತಾರೆ.

ಹಂತಾಯಮದ್ರಿರಬಲಾ ಹರಿದಾಸವರ್ಯೋ
ಯದ್ ರಾಮಕೃಷ್ಣಚರಣಸ್ಪರ್ಶಪ್ರಮೋದಃ ।
ಮಾನಂ ತನೋತಿ ಸಹಗೋಗಣಯೋಸ್ತಯೋರ್ಯತ್
ಪಾನೀಯಸೂಯವಸಕಂದರಕಂದಮೂಲೈಃ ॥ ೧೮

ಗಾ ಗೋಪಕೈರನುವನಂ ನಯತೋರುದಾರ-
ವೇಣುಸ್ವನೈಃ ಕಲಪದೈಸ್ತನುಭೃತ್ಸು ಸಖ್ಯಃ ।
ಅಸ್ಪಂದನಂ ಗತಿಮತಾಂ ಪುಲಕಸ್ತರೂಣಾಂ
ನಿರ್ಯೋಗಪಾಶಕೃತಲಕ್ಷಣಯೋರ್ವಿಚಿತ್ರಮ್ ॥ ೧೯

ಏವಂವಿಧಾ ಭಗವತೋ ಯಾ ವೃಂದಾವನಚಾರಿಣಃ ।
ವರ್ಣಯಂತ್ಯೋ ಮಿಥೋ ಗೋಪ್ಯಃ ಕ್ರೀಡಾಸ್ತನ್ಮಯತಾಂ ಯಯುಃ

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕವಿಂಶಾಧ್ಯಾಯಃ

---

ಗಳಿಗೆ ಲಿಪ್ತವಾಗಿ ಪಾದಕಾಂತಿಯಿಂದ ರಮ್ಯವಾಗಿತ್ತು. ಕೃಷ್ಣನು ತಿರುಗಾಡು ವಾಗ ನೆಲದಲ್ಲಿರುವ ಹುಲ್ಲಿಗೆ ಅದು ಅಂಟಿಕೊಂಡಿತ್ತು. ಅವನ ದರ್ಶನದಿಂದ ಕಾಮಬಾಧೆಗೊಳಗಾದ ಶಬರಸ್ತ್ರೀಯರು ಆ ಕುಂಕುಮವನ್ನು ತಮ್ಮ ಮುಖಕ್ಕೆ ಹಚ್ಚಿ, ಸ್ತನಗಳಿಗೆ ಬಳಿದುಕೊಂಡು ಕಾಮಬಾಧೆಯನ್ನು ಪರಿಹರಿಸಿಕೊಂಡರು. ಆ ಶಬರಸ್ತ್ರೀಯರೇ ಧನ್ಯರು! (೧೭). ಆಹಾ! ಗೆಳತಿಯರೆ, ಈ ಗೋವರ್ಧನ ಗಿರಿಯು ಹರಿದಾಸರಲ್ಲಿ ಅಗ್ರಗಣ್ಯ! ಏಕೆಂದರೆ, ರಾಮಕೃಷ್ಣರ ಚರಣಸ್ಪರ್ಶ ದಿಂದ ಇವನಿಗೆ ಪರಮಾನಂದವಾಗಿದೆ. ಗೋವುಗಳೊಡನೆ ಅವರಿಬ್ಬರು ಬಂದಿರುವಾಗ (ಅವರನ್ನು ಉಪಚರಿಸುವುದಕ್ಕೆ) ತನ್ನಲ್ಲಿ ನೀರಿನ ಚಿಲುಮೆ, ಹುಲ್ಲು, ದರಿ, ಕಂದಮೂಲಗಳಿವೆಯೆಂದು ಈ ಗಿರಿರಾಜನು ಹೆಮ್ಮೆಪಡು ತ್ತಿದ್ದಾನೆ! (೧೮). ಈ ರಾಮಕೃಷ್ಣರು ಹಗ್ಗ, ಕಣ್ಣಿಗಳನ್ನು ಹೊತ್ತುಕೊಂಡು ಮಂಜುಳವಾಗಿ ಕೊಳಲೂದುತ್ತ ಗೊಲ್ಲರೊಡನೆ ಕಾಡಿನಲ್ಲಿ ಹಸುಗಳನ್ನು ಮೇಯಿಸುತ್ತಿದ್ದಾರೆ. ಓ ಗೆಳತಿಯರೆ, ಈ ಅಚ್ಚರಿಯನ್ನು ನೋಡಿರಿ! ಜಂಗಮ ಪ್ರಾಣಿಗಳು ಅಲ್ಲಾಡದೆ ಸ್ಥಾವರಗಳಂತೆ ನಿಂತಿವೆ! ಸ್ಥಾವರಗಳಾದ ಮರಗಳು (ಮನುಷ್ಯರಂತೆ) ರೋಮಾಂಚಗೊಂಡಿವೆ!" (೧೯). ಈ ರೀತಿಯಾಗಿ ಗೋಪಿಯರು ವೃಂದಾವನದಲ್ಲಿ ಸಂಚರಿಸುತ್ತಿದ್ದ ಭಗವಂತನ ಲೀಲೆಗಳನ್ನು ಅನ್ಯೋನ್ಯವಾಗಿ ವರ್ಣಿಸಿ ಹೇಳುತ್ತ ತನ್ಮಯರಾಗಿಬಿಟ್ಟರು (೨೦).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ *

## ದ್ವಾವಿಂಶಾಧ್ಯಾಯಃ

ಶ್ರೀಶುಕ ಉವಾಚ—

ಹೇಮಂತೇ ಪ್ರಥಮೇ ಮಾಸಿ ನಂದವ್ರಜಕುಮಾರಿಕಾಃ ।
ಚೇರುರ್ಹವಿಷ್ಯಂ ಭುಂಜಾನಾಃ ಕಾತ್ಯಾಯನ್ಯರ್ಚನವ್ರತಮ್ ॥ ೧

ಆಪ್ಲುತ್ಯಾಂಭಸಿ ಕಾಲಿಂದ್ಯಾ ಜಲಾಂತೇ ಚೋದಿತೇಽರುಣೇ ।
ಕೃತ್ವಾ ಪ್ರತಿಕೃತಿಂ ದೇವೀಮಾನರ್ಚುರ್ನೃಪ ಸೈಕತೀಮ್ ॥ ೨

ಗಂಧೈರ್ಮಾಲ್ಯೈಃ ಸುರಭಿಭಿರ್ಬಲಿಭಿರ್ಧೂಪದೀಪಕೈಃ ।
ಉಚ್ಚಾವಚೈಶ್ಚೋಪಹಾರೈಃ ಪ್ರವಾಲಫಲತಂಡುಲೈಃ ॥ ೩

ಕಾತ್ಯಾಯನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರಿ ।
ನಂದಗೋಪಸುತಂ ದೇವಿ ಪತಿಂ ಮೇ ಕುರು ತೇ ನಮಃ ।
ಇತಿ ಮಂತ್ರಂ ಜಪಂತ್ಯಸ್ತಾಃ ಪೂಜಾಂ ಚಕ್ರುಃ ಕುಮಾರಿಕಾಃ ॥ ೪

## ಅಧ್ಯಾಯ ೨೨

### ಗೋಪೀವಸ್ತ್ರಾಪಹರಣ

ಶ್ರೀಶುಕಮುನಿಗಳು ಹೇಳಿದರು: ಒಂದು ಸಲ ಹೇಮಂತಋತುವಿನ ಮೊದಲನೇ ಮಾಸವಾದ ಮಾರ್ಗಶೀರ್ಷದಲ್ಲಿ, ನಂದವ್ರಜದಲ್ಲಿದ್ದ ಕನ್ಯೆಯರು ಹವಿಷ್ಯಾನ್ನವನ್ನು ಭುಂಜಿಸುತ್ತ ಕಾತ್ಯಾಯನೀದೇವಿಯ ಪೂಜಾವ್ರತವನ್ನಾಚರಿಸಿದರು (೧). ಅರುಣೋದಯವಾದೊಡನೆ ಯಮುನಾನದಿಯ ಜಲದಲ್ಲಿ ಅವಗಾಹನಸ್ನಾನಮಾಡುತ್ತಿದ್ದರು. ಅನಂತರ, ಪರೀಕ್ಷಿತರಾಜ, ಮರಳಿನಿಂದ, ದೇವಿಯ ಪ್ರತಿಮೆಯನ್ನು ಚಿತ್ರಿಸಿ ಪೂಜಿಸುತ್ತಿದ್ದರು (೨). ಪರಿಮಳವನ್ನು ಬೀರುವ ಗಂಧಮಾಲ್ಯಗಳು, ಧೂಪದೀಪಗಳು, ಚಿಗುರೆಲೆ, ಹಣ್ಣು, ಅಕ್ಕಿ, ನಾನಾಬಗೆಯ ನೈವೇದ್ಯದ್ರವ್ಯಗಳು—ಮೊದಲಾದ ಪೂಜಾ ಸಾಮಗ್ರಿಗಳಿಂದ ದೇವಿಯನ್ನರ್ಚಿಸುತ್ತಿದ್ದರು (೩). ಆಮೇಲೆ "ಹೇ ಕಾತ್ಯಾಯನಿ, ಮಹಾಮಾಯೆ, ಮಹಾಯೋಗಿನಿ, ಅಧೀಶ್ವರಿ, ದೇವಿ,

ಏವಂ ಮಾಸಂ ವ್ರತಂ ಚೇರುಃ ಕುಮಾರ್ಯಃ ಕೃಷ್ಣಚೇತಸಃ ।
ಭದ್ರಕಾಲೀಂ ಸಮಾನರ್ಚುರ್ಭೂಯಾನ್ನಂದಸುತಃ ಪತಿಃ ॥ ೫

ಉಷಸ್ಯುತ್ಥಾಯ ಗೋತ್ರೈಃ ಸ್ವೈರನ್ಯೋನ್ಯಾಬದ್ಧಬಾಹವಃ ।
ಕೃಷ್ಣಮುಚ್ಚೈರ್ಜಗುರ್ಯಾಂತ್ಯಃ ಕಾಲಿಂದ್ಯಾಂ ಸ್ನಾತುಮನ್ವಹಮ್ ॥

ನದ್ಯಾಂ ಕದಾಚಿದಾಗತ್ಯ ತೀರೇ ನಿಕ್ಷಿಪ್ಯ ಪೂರ್ವವತ್ ।
ವಾಸಾಂಸಿ ಕೃಷ್ಣಂ ಗಾಯಂತ್ಯೋ ವಿಜಹ್ರುಃ ಸಲಿಲೇ ಮುದಾ ॥ ೭

ಭಗವಾಂಸ್ತದಭಿಪ್ರೇತ್ಯ ಕೃಷ್ಣೋ ಯೋಗೇಶ್ವರೇಶ್ವರಃ ।
ವಯಸ್ಯೈರಾವೃತಸ್ತತ್ರ ಗತಸ್ತತ್ಕರ್ಮಸಿದ್ಧಯೇ ॥ ೮

ತಾಸಾಂ ವಾಸಾಂಸ್ಯುಪಾದಾಯ ನೀಪಮಾರುಹ್ಯ ಸತ್ವರಃ ।
ಹಸದ್ಭಿಃ ಪ್ರಹಸನ್ ಬಾಲೈಃ ಪರಿಹಾಸಮುವಾಚ ಹ ॥ ೯

---

ನಂದಗೋಪಸುತನಾದ ಕೃಷ್ಣನನ್ನು ನನಗೆ ಪತಿಯನ್ನಾಗಿ ಕರುಣಿಸು. ನಿನಗೆ ನಮಸ್ಕಾರ" ಎಂಬ ಮಂತ್ರವನ್ನು ಜಪಿಸುತ್ತ ಆ ಕುಮಾರಿಕೆಯರು ಪೂಜಿಸುತ್ತಿದ್ದರು (೪). ಹೀಗೆ ಆ ಕುಮಾರಿಯರು ಕೃಷ್ಣನಲ್ಲಿಯೇ ಮನಸ್ಸಿಟ್ಟು ಒಂದು ತಿಂಗಳವರೆಗೆ ವ್ರತನಿಯಮದಲ್ಲಿದ್ದು, ನಂದನಂದನನು ಪತಿಯಾಗಲೆಂದು ಭದ್ರಕಾಳಿಯನ್ನರ್ಚಿಸಿದರು (೫). ಪ್ರತಿದಿನವೂ ಉಷಃಕಾಲದಲ್ಲೆದ್ದು ತಮ್ಮ ತಮ್ಮ ಹೆಸರುಗಳನ್ನು ಹೇಳಿ ಒಬ್ಬರ ತೋಳನ್ನೊಬ್ಬರು ಹಿಡಿದುಕೊಂಡು, ಶ್ರೀಕೃಷ್ಣನ ಮೇಲಿನ ಹಾಡನ್ನು ಗಟ್ಟಿಯಾಗಿ ಹಾಡುತ್ತ ಸ್ನಾನಕ್ಕಾಗಿ ಯಮುನಾನದಿಗೆ ತೆರಳುತ್ತಿದ್ದರು (೬). ಹೀಗಿರಲು ಒಂದು ದಿನ ಎಂದಿನಂತೆ ನದಿಗೆ ಬಂದು ದಡದಲ್ಲಿ ವಸ್ತ್ರಗಳನ್ನು ಕಳಚಿಟ್ಟು ಶ್ರೀಕೃಷ್ಣನನ್ನು ಕುರಿತು ಹಾಡುತ್ತ ಸಂತೋಷದಿಂದ ನೀರಲ್ಲಿ ಕ್ರೀಡಿಸಿದರು (೭). ಅಂದು ಯೋಗೇಶ್ವರೇಶ್ವರನಾದ ಶ್ರೀಕೃಷ್ಣನು ಆ ಕುಮಾರಿಯರ ಅಭೀಷ್ಟವನ್ನು ಸಲ್ಲಿಸುವ ಉದ್ದೇಶದಿಂದ ತನ್ನ ಗೆಳೆಯರೊಡನೆ ಅಲ್ಲಿಗೆ ಹೋದನು (೮). ಅವನು ಆ ಕನ್ಯೆಯರ ವಸ್ತ್ರಗಳನ್ನು ತೆಗೆದುಕೊಂಡು ಬೇಗಬೇಗನೆ ಒಂದು ಕದಂಬವೃಕ್ಷವನ್ನೇರಿ, ನಗುತ್ತಿದ್ದ ಆ ಬಾಲಕರೊಡನೆ ನಗುತ್ತ ಹಾಸ್ಯಮಾಡುತ್ತ

ಅತ್ರಾಗತ್ಯಾಬಲಾಃ ಕಾಮಂ ಸ್ವಂ ಸ್ವಂ ವಾಸಃ ಪ್ರಗೃಹ್ಯತಾಮ್ ।
ಸತ್ಯಂ ಬ್ರವಾಣಿ ನೋ ನರ್ಮ ಯದ್ ಯೂಯಂ ವ್ರತಕರ್ಶಿತಾಃ ॥

ನ ಮಯೋದಿತಪೂರ್ವಂ ವಾ ಅನೃತಂ ತದಿಮೇ ವಿದುಃ ।
ಏಕೈಕಶಃ ಪ್ರತೀಚ್ಛಧ್ವಂ ಸಹೈವೇತ ಸುಮಧ್ಯಮಾಃ ॥ ೧೧

ತಸ್ಯ ತತ್ ಕ್ಷ್ವೇಲಿತಂ ದೃಷ್ಟ್ವಾ ಗೋಪ್ಯಃ ಪ್ರೇಮಪರಿಪ್ಲುತಾಃ ।
ವ್ರೀಡಿತಾಃ ಪ್ರೇಕ್ಷ್ಯ ಚಾನ್ಯೋನ್ಯಂ ಜಾತಹಾಸಾ ನ ನಿರ್ಯಯುಃ ॥

ಏವಂ ಬ್ರುವತಿ ಗೋವಿಂದೇ ನರ್ಮಣಾಽಽಕ್ಷಿಪ್ತಚೇತಸಃ ।
ಆಕಂಠಮಗ್ನಾಃ ಶೀತೋದೇ ವೇಪಮಾನಾಸ್ತಮಬ್ರುವನ್ ॥ ೧೩

ಮಾಽನಯಂ ಭೋಃ ಕೃಥಾಸ್ತ್ವಾಂ ತು ನಂದಗೋಪಸುತಂ ಪ್ರಿಯಮ್
ಜಾನೀಮೋಽಂಗ ವ್ರಜಶ್ಲಾಘ್ಯಂ ದೇಹಿ ವಾಸಾಂಸಿ ವೇಪಿತಾಃ ॥ ೧೪

---

ಹೀಗೆಂದನು (೯): "ಎಲೌ ಹುಡುಗಿಯರೆ, ಇಲ್ಲಿಗೆ ಬಂದು ಬೇಕಾದಂತೆ ನಿಮ್ಮ ನಿಮ್ಮ ಸೀರೆಯನ್ನು ತೆಗೆದುಕೊಳ್ಳಬಹುದು. ಸತ್ಯವನ್ನೇ ಹೇಳುತ್ತಿದ್ದೇನೆ, ತಮಾಷೆಯನ್ನಲ್ಲ! ಏಕೆಂದರೆ, ನೀವು ವ್ರತವನ್ನಾಚರಿಸಿ ಬಳಲಿದ್ದೀರಿ! (೧೦). ನಾನು ಎಂದೂ ಸುಳ್ಳು ಹೇಳಿದವನಲ್ಲ. ಈ ಗೆಳೆಯರಿಗೆ ಅದು ಗೊತ್ತಿದೆ. ಎಲೌ ಸುಂದರಿಯರೆ, ನೀವು ಒಬ್ಬೊಬ್ಬರಾಗಿ ಬಂದು ತೆಗೆದುಕೊಳ್ಳಬಹುದು. ಅಥವಾ ಒಟ್ಟಿಗೆ ಬರಬಹುದು!" (೧೧). ಪ್ರೇಮದಲ್ಲಿ ಮುಳುಗಿದ್ದ ಆ ಗೋಪಕನ್ಯೆಯರು ನಾಚಿಕೊಂಡು ಒಬ್ಬರನ್ನೊಬ್ಬರು ನೋಡುತ್ತ ನಗುತ್ತಿದ್ದರೇ ಹೊರತು ನೀರಿನಿಂದ ಹೊರಗೆ ಬರಲಿಲ್ಲ! (೧೨). ಗೋವಿಂದನು ವಿನೋದಕ್ಕಾಗಿ ಹೀಗೆಯೇ ಹೇಳುತ್ತಿರಲು, ತಣ್ಣೀರಿನಲ್ಲಿ ಕತ್ತಿನವರೆಗೆ ಮುಳುಗಿಕೊಂಡಿದ್ದ ಗೋಪಿಯರು ನಡುಗುತ್ತ ವ್ಯಾಕುಲಚಿತ್ತರಾದರು. ಅವರು ಹೀಗೆಂದರು (೧೩): "ಎಲೊ, ಅನ್ಯಾಯವನ್ನು ಮಾಡಬೇಡ. ನೀನು ನಂದಗೋಪನ ಮುದ್ದುಮಗನೆಂಬುದನ್ನೂ ವ್ರಜದಲ್ಲಿ ಶ್ಲಾಘ್ಯನೆಂಬುದನ್ನೂ ನಾವು ಬಲ್ಲೆವು. ಚಳಿಯಿಂದ ನಡುಗುತ್ತಿದ್ದೇವೆ. ನಮ್ಮ ಬಟ್ಟೆಗಳನ್ನು ಕೊಡು (೧೪).

ಶ್ಯಾಮಸುಂದರ ತೇ ದಾಸ್ಯಃ ಕರವಾಮ ತವೋದಿತಮ್ ।
ದೇಹಿ ವಾಸಾಂಸಿ ಧರ್ಮಜ್ಞ ನೋ ಚೇದ್ ರಾಜ್ಞೇ ಬ್ರುವಾಮಹೇ ॥

ಶ್ರೀಭಗವಾನುವಾಚ—

ಭವತ್ಯೋ ಯದಿ ಮೇ ದಾಸ್ಯೋ ಮಯೋಕ್ತಂ ವಾ ಕರಿಷ್ಯಥ ।
ಅತ್ರಾಗತ್ಯ ಸ್ವವಾಸಾಂಸಿ ಪ್ರತೀಚ್ಛಂತು ಶುಚಿಸ್ಮಿತಾಃ ॥ ೧೬

ತತೋ ಜಲಾಶಯಾತ್ ಸರ್ವಾ ದಾರಿಕಾಃ ಶೀತವೇಪಿತಾಃ ।
ಪಾಣಿಭ್ಯಾಂ ಯೋನಿಮಾಚ್ಛಾದ್ಯ ಪ್ರೋತ್ತೇರುಃ ಶೀತಕರ್ಶಿತಾಃ ॥

ಭಗವಾನಾಹ ತಾ ವೀಕ್ಷ್ಯ ಶುದ್ಧಭಾವಪ್ರಸಾದಿತಃ ।
ಸ್ಕಂಧೇ ನಿಧಾಯ ವಾಸಾಂಸಿ ಪ್ರೀತಃ ಪ್ರೋವಾಚ ಸಸ್ಮಿತಮ್ ॥ ೧೮

ಯೂಯಂ ವಿವಸ್ತ್ರಾ ಯದಪೋ ಧೃತವ್ರತಾ
ವ್ಯಗಾಹತೈತತ್ತದು ದೇವಹೇಲನಮ್ ।
ಬದ್ಧ್ವಾಂಜಲಿಂ ಮೂರ್ಧ್ನ್ಯಪನುತ್ತಯೇಽಂಹಸಃ
ಕೃತ್ವಾ ನಮೋಽಧೋ ವಸನಂ ಪ್ರಗೃಹ್ಯತಾಮ್ ॥ ೧೯

---

ಹೇ ಶ್ಯಾಮಸುಂದರ, ನಾವು ನಿನ್ನ ದಾಸಿಯರು. ನೀನು ಇನ್ನೇನು ಹೇಳಿದರೂ ಮಾಡುತ್ತೇವೆ. ನೀನು ಧರ್ಮಜ್ಞ. ನಮ್ಮ ಬಟ್ಟೆಗಳನ್ನು ಕೊಡು. ಇಲ್ಲದಿದ್ದರೆ ರಾಜನಾದ ನಂದಗೋಪನಿಗೆ ತಿಳಿಸಿಬಿಡುತ್ತೇವೆ" (೧೫). ಆಗ ಶ್ರೀಕೃಷ್ಣನು ಹೀಗೆಂದನು: "ಎಲೌ ಸುಂದರಿಯರೆ, ನೀವು ನನ್ನ ದಾಸಿಯರಾದರೆ ನಾನು ಹೇಳಿದ್ದನ್ನು ಮಾಡತಕ್ಕವರಾದರೆ, ಇಲ್ಲಿ ಬಂದು ನಿಮ್ಮ ಸೀರೆಗಳನ್ನು ತೆಗೆದುಕೊಳ್ಳಿರಿ!" (೧೬). ಆಮೇಲೆ ಚಳಿಯಿಂದ ನಡುಗುತ್ತಿದ್ದ ಆ ಬಾಲಿಕೆಯರೆಲ್ಲರೂ ಚಳಿಯನ್ನು ತಡೆಯಲಾರದೆ, ತಮ್ಮ ಕೈಗಳಿಂದ ಮರ್ಮಸ್ಥಳವನ್ನು ಮುಚ್ಚಿಕೊಂಡು ಹೊಳೆಯಿಂದ ಹೊರಬಂದರು (೧೭). ಆಗ ಅವರ ಪರಿಶುದ್ಧಭಾವದಿಂದ ಪ್ರಸನ್ನನಾದ ಶ್ರೀಕೃಷ್ಣನು ಪ್ರೀತನಾಗಿ ಆ ವಸ್ತ್ರಗಳನ್ನು ತನ್ನ ಹೆಗಲಮೇಲಿಟ್ಟುಕೊಂಡು ನಗುತ್ತ "ನೀವು ವ್ರತನಿಷ್ಠರಾಗಿದ್ದರೂ ಬತ್ತಲೆಯಾಗಿ ನದೀಜಲದಲ್ಲಿ ಇಳಿದಿದ್ದೀರಿ. ಇದು ದೇವತೆಗೆ ಮಾಡಿದ ಅಪರಾಧವೇ ಸರಿ. ಈ ಪಾಪದ ಪರಿಹಾರಕ್ಕಾಗಿ ನೀವು ತಲೆಯ ಮೇಲೆ ಎರಡು ಕೈಗಳನ್ನಿಟ್ಟು ಕೆಳಗೆ ಬಾಗಿ ನಮಸ್ಕರಿಸತಕ್ಕದ್ದು. ಆಮೇಲೆ

ಇತ್ಯಚ್ಯುತೇನಾಭಿಹಿತಾ ವ್ರಜಾಬಲಾ
ಮತ್ವಾ ವಿವಸ್ತ್ರಾಪ್ಲವನಂ ವ್ರತಚ್ಯುತಿಮ್ ।
ತತ್ಪೂರ್ತಿಕಾಮಾಸ್ತದಶೇಷಕರ್ಮಣಾಂ
ಸಾಕ್ಷಾತ್ಕೃತಂ ನೇಮುರವದ್ಯಮೃಗ್ ಯತಃ ॥ ೨೦

ತಾಸ್ತಥಾವನತಾ ದೃಷ್ಟ್ವಾ ಭಗವಾನ್ ದೇವಕೀಸುತಃ ।
ವಾಸಾಂಸಿ ತಾಭ್ಯಃ ಪ್ರಾಯಚ್ಛತ್ ಕರುಣಸ್ತೇನ ತೋಷಿತಃ ॥ ೨೧

ದೃಢಂ ಪ್ರಲಬ್ಧಾಸ್ತ್ರಪಯಾ ಚ ಹಾಪಿತಾಃ
ಪ್ರಸ್ತೋಭಿತಾಃ ಕ್ರೀಡನವಚ್ಚ ಕಾರಿತಾಃ ।
ವಸ್ತ್ರಾಣಿ ಚೈವಾಪಹೃತಾನ್ಯಥಾಪ್ಯಮುಂ
ತಾ ನಾಭ್ಯಸೂಯನ್ ಪ್ರಿಯಸಂಗನಿರ್ವೃತಾಃ ॥ ೨೨

ಪರಿಧಾಯ ಸ್ವವಾಸಾಂಸಿ ಪ್ರೇಷ್ಠಸಂಗಮಸಜ್ಜಿತಾಃ ।
ಗೃಹೀತಚಿತ್ತಾ ನೋ ಚೇಲುಸ್ತಸ್ಮಿನ್ ಲಜ್ಜಾಯಿತೇಕ್ಷಣಾಃ ॥ ೨೩

---

ವಸ್ತ್ರವನ್ನು ತೆಗೆದುಕೊಳ್ಳಿರಿ!" ಎಂದನು (೧೮–೧೯). ಅಚ್ಯುತನ ನುಡಿಯನ್ನು ಕೇಳಿದ ಆ ವ್ರಜಕನ್ಯೆಯರಿಗೆ ಬತ್ತಲೆಯಾಗಿ ಸ್ನಾನಮಾಡಿದ್ದು ವ್ರತಲೋಪವೆಂದು ಅರಿವಾಯಿತು. ಅದರ ಪರಿಹಾರಕ್ಕಾಗಿ ಅವರು ಸಕಲ ಕರ್ಮಗಳಿಗೂ ಫಲಸ್ವರೂಪನಾದ ಭಗವಂತನನ್ನೇ ಹಾಗೆ ನಮಸ್ಕರಿಸಿದರು. ಅವನು ಪಾಪಗಳನ್ನು ತೊಳೆಯತಕ್ಕವನಲ್ಲವೆ? (೨೦). ಆ ಪ್ರಕಾರದಲ್ಲಿ ನಮಸ್ಕರಿಸಿದ ಗೋಪಿಯರನ್ನು ನೋಡಿ ದಯಾಮಯನಾದ ಭಗವಾನ್ ದೇವಕೀಸುತನು ಸಂಪ್ರೀತನಾಗಿ ಅವರಿಗೆ ವಸ್ತ್ರಗಳನ್ನು ಕೊಟ್ಟನು (೨೧). ಹೀಗೆ ಗೋಪಿಯರು ಕೃಷ್ಣನಿಂದ ದೊಡ್ಡ ವಂಚನೆಗೆ ಒಳಗಾದರೂ, ಲಜ್ಜೆಯನ್ನು ತೊರೆಯಬೇಕಾಗಿ ಬಂದರೂ, ಅಪಹಾಸ್ಯಕ್ಕೆ ಈಡಾದರೂ, ಆಟದ ಗೊಂಬೆಯಂತೆ ನಡೆದುಕೊಳ್ಳಬೇಕಾಗಿ ಬಂದರೂ ಅವನಲ್ಲಿ ಅಸಮಾಧಾನಗೊಳ್ಳಲಿಲ್ಲ. ಏಕೆಂದರೆ, ಪ್ರಿಯನ ಸಹವಾಸ ದೊರಕಿತೆಂದು ಅವರಿಗೆ ಸಂತೋಷವಾಗಿತ್ತು (೨೨). ಆ ಕನ್ಯೆಯರು ಸೀರೆಗಳನ್ನುಟ್ಟುಕೊಂಡಮೇಲೂ ಕಾಂತಪ್ರಾಪ್ತಿಯಿಂದ ವಶೀಕೃತಚಿತ್ತರಾಗಿ ಅಲ್ಲಿಂದ ಚಲಿಸಲಿಲ್ಲ. ಕಣ್ಣಲ್ಲಿ

ತಾಸಾಂ ವಿಜ್ಞಾಯ ಭಗವಾನ್ ಸ್ವಪಾದಸ್ಪರ್ಶಕಾಮ್ಯಯಾ ।
ಧೃತವ್ರತಾನಾಂ ಸಂಕಲ್ಪಮಾಹ ದಾಮೋದರೋಽಬಲಾಃ ॥ ೨೪

ಸಂಕಲ್ಪೋ ವಿದಿತಃ ಸಾಧ್ವ್ಯೋ ಭವತೀನಾಂ ಮದರ್ಚನಮ್ ।
ಮಯಾನುಮೋದಿತಃ ಸೋಽಸೌ ಸತ್ಯೋ ಭವಿತುಮರ್ಹತಿ ॥ ೨೫

ನ ಮಯ್ಯಾವೇಶಿತಧಿಯಾಂ ಕಾಮಃ ಕಾಮಾಯ ಕಲ್ಪತೇ ।
ಭರ್ಜಿತಾ ಕ್ವಥಿತಾ ಧಾನಾ ಪ್ರಾಯೋ ಬೀಜಾಯ ನೇಷ್ಯತೇ ॥ ೨೬

ಯಾತಾಬಲಾ ವ್ರಜಂ ಸಿದ್ಧಾ ಮಯೇಮಾ ರಂಸ್ಯಥ ಕ್ಷಪಾಃ ।
ಯದುದ್ದಿಶ್ಯ ವ್ರತಮಿದಂ ಚೇರುರಾರ್ಯಾರ್ಚನಂ ಸತೀಃ ॥ ೨೭

ಶ್ರೀಶುಕ ಉವಾಚ—
ಇತ್ಯಾದಿಷ್ಟಾ ಭಗವತಾ ಲಬ್ಧಕಾಮಾಃ ಕುಮಾರಿಕಾಃ ।
ಧ್ಯಾಯಂತ್ಯಸ್ತತ್ಪದಾಂಭೋಜಂ ಕೃಚ್ಛ್ರಾನ್ನಿರ್ವಿವಿಶುರ್ವ್ರಜಮ್ ॥

---

ನಾಚಿಕೆಯನ್ನು ವ್ಯಕ್ತಪಡಿಸುತ್ತ ನಿಂತರು (೨೩). ಭಗವಾನ್ ದಾಮೋದರನು ತನ್ನ ಪಾದಸ್ಪರ್ಶಾಭಿಲಾಷೆಯಿಂದ ವ್ರತವನ್ನು ಕೈಗೊಂಡಿದ್ದ ಆ ಅಬಲೆಯರ ಭಾವವನ್ನರಿತು ಹೀಗೆಂದನು: "ಎಲೌ ಸಾಧ್ವಿಯರೆ, ನನ್ನನ್ನು ಅರ್ಚಿಸಬೇಕೆಂಬ ನಿಮ್ಮ ಸಂಕಲ್ಪವು ತಿಳಿಯಿತು. ಅದಕ್ಕೆ ನಾನು ಸಂಮತಿಸಿದ್ದೇನೆ. ಅದು ಸತ್ಯವಾಗುವುದು (೨೪—೨೫). ನನ್ನಲ್ಲಿ ಯಾರ ಚಿತ್ತವು ಆಸಕ್ತವಾಗಿದೆಯೋ ಅವರ ಕಾಮವು ಮತ್ತೊಮ್ಮೆ ಕಾಮಭೋಗಕ್ಕೆ ಸಮರ್ಥವಾಗದು.* ಕಾಳನ್ನು ಹುರಿದರೆ ಅಥವಾ ಬೇಯಿಸಿದರೆ ಸಾಮಾನ್ಯವಾಗಿ ಅದು ಮತ್ತೆ ಮೊಳಕೆಯಾಗಬಲ್ಲ ಬೀಜವಾಗಿ ಉಳಿಯದು (೨೬). ಆದ್ದರಿಂದ, ಅಬಲೆಯರೆ, ವ್ರಜಕ್ಕೆ ತೆರಳಿರಿ. ನಿಮ್ಮ ಮನೋರಥವು ಸಿದ್ಧಿಸಿದೆ. ಮುಂದಿನ ರಾತ್ರಿಗಳಲ್ಲಿ ನನ್ನೊಡನೆ ರಮಿಸುವಿರಿ. ಅದಕ್ಕಾಗಿಯೇ ಸದ್ಭಾವನೆಯಿಂದ ನೀವು ಕಾತ್ಯಾಯನೀಪೂಜೆಯೆಂಬ ಈ ವ್ರತವನ್ನು ಆಚರಿಸಿದ್ದೀರಿ" (೨೭). ಈ ರೀತಿಯಲ್ಲಿ ಭಗವಂತನಿಂದ ಆಜ್ಞಪ್ತರಾದ ಆ ಕನ್ಯೆಯರು ಇಷ್ಟಾರ್ಥವನ್ನು ಪಡೆದವರಾಗಿ, ಆತನ ಪಾದಕಮಲವನ್ನು ಧ್ಯಾನಿಸುತ್ತ ಮನಸ್ಸಿಲ್ಲದೆ ಕಷ್ಟ

---

* ಅವರ ಭೋಗಾಭಿಲಾಷೆಯಳಿದು ವಿರಕ್ತರಾಗುವರು ಎಂದು ಅಭಿಪ್ರಾಯ.

**ಅಥ ಗೋಪೈಃ ಪರಿವೃತೋ ಭಗವಾನ್ ದೇವಕೀಸುತಃ ।**
**ವೃಂದಾವನಾದ್ ಗತೋ ದೂರಂ ಚಾರಯನ್ ಗಾಃ ಸಹಾಗ್ರಜಃ ॥**

**ನಿದಾಘಾರ್ಕಾತಪೇ ತಿಗ್ಮೇ ಛಾಯಾಭಿಃ ಸ್ವಾಭಿರಾತ್ಮನಃ ।**
**ಆತಪತ್ರಾಯಿತಾನ್ ವೀಕ್ಷ್ಯ ದ್ರುಮಾನಾಹ ವ್ರಜೌಕಸಃ ॥ ೩೦**

**ಹೇ ಸ್ತೋಕಕೃಷ್ಣ ಹೇ ಅಂಶೋ ಶ್ರೀದಾಮನ್ ಸುಬಲಾರ್ಜುನ ।**
**ವಿಶಾಲರ್ಷಭ ತೇಜಸ್ವಿನ್ ದೇವಪ್ರಸ್ಥ ವರೂಥಪ ॥ ೩೧**

**ಪಶ್ಯತೈತಾನ್ ಮಹಾಭಾಗಾನ್ ಪರಾರ್ಥೈಕಾಂತಜೀವಿತಾನ್ ।**
**ವಾತವರ್ಷಾತಪಹಿಮಾನ್ ಸಹಂತೋ ವಾರಯಂತಿ ನಃ ॥ ೩೨**

**ಅಹೋ ಏಷಾಂ ವರಂ ಜನ್ಮ ಸರ್ವಪ್ರಾಣ್ಯುಪಜೀವನಮ್ ।**
**ಸುಜನಸ್ಯೇವ ಯೇಷಾಂ ವೈ ವಿಮುಖಾ ಯಾಂತಿ ನಾರ್ಥಿನಃ ॥ ೩೩**

**ಪತ್ರಪುಷ್ಪಫಲಚ್ಛಾಯಾಮೂಲವಲ್ಕಲದಾರುಭಿಃ ।**
**ಗಂಧನಿರ್ಯಾಸಭಸ್ಮಾಸ್ಥಿತೋಕ್ಮೈಃ ಕಾಮಾನ್ ವಿತನ್ವತೇ ॥ ೩೪**

---

ದಿಂದಲೇ ವ್ರಜಕ್ಕೆ ನಿರ್ಗಮಿಸಿದರು (೨೮) ಅನಂತರ ಭಗವಾನ್ ದೇವಕೀ ಪುತ್ರನು ಗೊಲ್ಲರಿಂದ ಪರಿವೃತನಾಗಿ ಗೋವುಗಳನ್ನು ಮೇಯಿಸುತ್ತ ಅಣ್ಣ ನೊಡನೆ ವೃಂದಾವನದಿಂದ ದೂರಹೋದನು (೨೯). ಉರಿಬಿಸಿಲಿನ ಬೇಗೆ ಯಲ್ಲಿ ಛತ್ರಿಗಳಂತೆ ತಮ್ಮ ನೆರಳುಗಳಿಂದ ಉಪಕರಿಸುತ್ತಿದ್ದ ಮರಗಳನ್ನು ನೋಡಿ ಶ್ರೀಕೃಷ್ಣನು ಗೋಪಾಲರನ್ನು ಕುರಿತು ಹೀಗೆಂದನು (೩೦): "ಏ ಸ್ತೋಕಕೃಷ್ಣ, ಏ ಅಂಶು, ಶ್ರೀದಾಮ, ಸುಬಲ, ಅರ್ಜುನ, ವಿಶಾಲ, ಋಷಭ, ಓ ತೇಜಸ್ವಿ, ದೇವಪ್ರಸ್ಥ, ವರೂಥಪ–ಈ ಮಹಾತ್ಮರಾದ ವೃಕ್ಷ ಗಳನ್ನು ನೋಡಿರಿ! ಇವು ಪರೋಪಕಾರಕ್ಕಾಗಿ ತಮ್ಮ ಜೀವಿತವನ್ನು ಮುಡುಪಾಗಿ ಇಟ್ಟಿವೆ. ಗಾಳಿ ಮಳೆ ಬಿಸಿಲು ಹಿಮಗಳನ್ನು ತಾವು ಸಹಿಸಿ ಕೊಳ್ಳುತ್ತ ಅವುಗಳಿಂದ ನಮಗೆ ಬಾಧೆಯಾಗದಂತೆ ನೋಡಿಕೊಳ್ಳುತ್ತವೆ (೩೧–೩೨). ಆಹಾ! ಸರ್ವಪ್ರಾಣಿಗಳ ಜೀವನಕ್ಕೂ ಆಶ್ರಯವನ್ನೀಯುವ ಈ ವೃಕ್ಷಗಳ ಜನ್ಮ ಪ್ರಶಸ್ತವಾದುದು. ಸತ್ಪುರುಷನ ಬಳಿಗೆ ಬಂದರೆ ಹೇಗೋ ಹಾಗೆ ಈ ಮರಗಳ ಬಳಿಗೆ ಬಂದರೂ ಯಾಚಕರು ನಿರಾಶರಾಗಿ ಹಿಂದಿರುಗುವುದಿಲ್ಲ (೩೩). ಎಲೆ, ಹೂ, ಹಣ್ಣು, ನೆರಳು, ಬೇರು,

ಏತಾವಜ್ಜನ್ಮಸಾಫಲ್ಯಂ ದೇಹಿನಾಮಿಹ ದೇಹಿಷು ।
ಪ್ರಾಣೈರರ್ಥೈರ್ಧಿಯಾ ವಾಚಾ ಶ್ರೇಯ ಏವಾಚರೇತ್ ಸದಾ ॥ ೩೫
ಇತಿ ಪ್ರವಾಲಸ್ತಬಕಫಲಪುಷ್ಪದಲೋತ್ಕರೈಃ ।
ತರೂಣಾಂ ನಮ್ರಶಾಖಾನಾಂ ಮಧ್ಯೇನ ಯಮುನಾಂ ಗತಃ ॥ ೩೬
ತತ್ರ ಗಾಃ ಪಾಯಯಿತ್ವಾಪಃ ಸುಮೃಷ್ಟಾಃ ಶೀತಲಾಃ ಶಿವಾಃ ।
ತತೋ ನೃಪ ಸ್ವಯಂ ಗೋಪಾಃ ಕಾಮಂ ಸ್ವಾದು ಪಪುರ್ಜಲಮ್ ॥
ತಸ್ಯಾ ಉಪವನೇ ಕಾಮಂ ಚಾರಯಂತಃ ಪಶೂನ್ ನೃಪ ।
ಕೃಷ್ಣರಾಮಾವುಪಾಗಮ್ಯ ಕ್ಷುಧಾರ್ತಾ ಇದಮಬ್ರುವನ್ ॥ ೩೮

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಾವಿಂಶಾಧ್ಯಾಯಃ



ತೊಗಟೆ, ಕಟ್ಟಿಗೆ, ಸುಗಂಧ, ರಸ, ಬೂದಿ, ದಿಂಡು, ಚಿಗುರು—ಇವುಗಳಿಂದ ಜನರ ಅಪೇಕ್ಷೆಗಳನ್ನು ಪೂರೈಸುತ್ತವೆ (೩೪). ಮನುಷ್ಯರು ತಮ್ಮ ಪ್ರಾಣದಿಂದ, ಹಣದಿಂದ, ಬುದ್ಧಿಶಕ್ತಿಯಿಂದ, ಕಡೆಗೆ ಮಾತಿನಿಂದಾದರೂ ಜನರಿಗೆ ಸದಾ ಶ್ರೇಯಸ್ಸಾಗುವಂತೆ ನಡೆದುಕೊಳ್ಳಬೇಕು. ಇದರಿಂದಲೇ ಜನ್ಮ ಸಾಫಲ್ಯ" (೩೫). ಹೀಗೆ ನುಡಿಯುತ್ತ ಶ್ರೀಕೃಷ್ಣನು ಚಿಗುರು, ಗೊಂಚಲು, ಹಣ್ಣು, ಹೂ, ಎಲೆಗಳ ಭಾರದಿಂದ ಬಳಕುವ ಕೊಂಬೆಗಳುಳ್ಳ ಮರಗಳ ನಡುವೆ ಸಾಗುತ್ತ ಯಮುನಾನದಿಯ ಬಳಿಗೆ ಹೋದನು (೩೬). ಪರೀಕ್ಷಿತ, ಅಲ್ಲಿ ಗೋಪಾಲರು ಸ್ವಚ್ಛವೂ ಶೀತಳವೂ ಆರೋಗ್ಯಕರವೂ ಆದ ನೀರನ್ನು ಹಸುಗಳಿಗೆ ಮೊದಲು ಕುಡಿಸಿ, ಅನಂತರ ರುಚಿಕರವಾದ ಆ ನೀರನ್ನು ತಾವೂ ಯಥೇಷ್ಟವಾಗಿ ಕುಡಿದರು (೩೭). ಆಮೇಲೆ ನದೀತೀರದಲ್ಲಿ ಗೋಪಾಲರು ಹಸುಗಳನ್ನು ಮೇಯಿಸಿದರು. ಅವರಿಗೆ ಹಸಿವಾಗಲು, ಪರೀಕ್ಷಿತರಾಜ, ರಾಮಕೃಷ್ಣರ ಸಮೀಪಕ್ಕೆ ಬಂದು ಇಂತೆಂದರು (೩೮).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ



# ತ್ರಯೋವಿಂಶಾಧ್ಯಾಯಃ

ಗೋಪಾ ಊಚುಃ—

**ರಾಮ ರಾಮ ಮಹಾವೀರ್ಯ ಕೃಷ್ಣ ದುಷ್ಟನಿಬರ್ಹಣ ।**
**ಏಷಾ ವೈ ಬಾಧತೇ ಕ್ಷುನ್ನಸ್ತಚ್ಛಾಂತಿಂ ಕರ್ತುಮರ್ಹಥಃ ॥ ೧**

ಶ್ರೀಶುಕ ಉವಾಚ—

**ಇತಿ ವಿಜ್ಞಾಪಿತೋ ಗೋಪೈರ್ಭಗವಾನ್ ದೇವಕೀಸುತಃ ।**
**ಭಕ್ತಾಯಾ ವಿಪ್ರಭಾರ್ಯಾಯಾಃ ಪ್ರಸೀದನ್ನಿದಮಬ್ರವೀತ್ ॥ ೨**

**ಪ್ರಯಾತ ದೇವಯಜನಂ ಬ್ರಾಹ್ಮಣಾ ಬ್ರಹ್ಮವಾದಿನಃ ।**
**ಸತ್ರಮಾಂಗಿರಸಂ ನಾಮ ಹ್ಯಾಸತೇ ಸ್ವರ್ಗಕಾಮ್ಯಯಾ ॥ ೩**

**ತತ್ರ ಗತ್ವೌದನಂ ಗೋಪಾ ಯಾಚತಾಸ್ಮದ್ವಿಸರ್ಜಿತಾಃ ।**
**ಕೀರ್ತಯಂತೋ ಭಗವತ ಆರ್ಯಸ್ಯ ಮಮ ಚಾಭಿಧಾಮ್ ॥ ೪**

## ಅಧ್ಯಾಯ ೨೩

### ವಿಪ್ರಪತ್ನಿಯರನ್ನು ಅನುಗ್ರಹಿಸುವುದು

ಗೋಪಾಲರು ಹೇಳಿದರು: "ರಾಮ ರಾಮ ಮಹಾಬಾಹು, ಕೃಷ್ಣ ದುಷ್ಟನಿಬರ್ಹಣ, ಹಸಿವು ನಮ್ಮನ್ನು ಬಾಧಿಸುತ್ತಿದೆ. ಇದಕ್ಕೆ ಶಾಂತಿಯನ್ನು ಮಾಡಿರಿ!" (೧). ಆಗ ಭಗವಾನ್ ಶ್ರೀಕೃಷ್ಣನು ಬ್ರಾಹ್ಮಣನ ಪತ್ನಿಯಾದ ಭಕ್ತಳನ್ನು* ಅನುಗ್ರಹಿಸುವ ಇಚ್ಛೆಯಿಂದ "ಗೋಪರೆ, ಯಜ್ಞಮಾಡುತ್ತಿರುವ ಆ ಪ್ರದೇಶಕ್ಕೆ ಹೋಗಿರಿ. ಅಲ್ಲಿ ಬ್ರಹ್ಮವಾದಿಗಳಾದ ಬ್ರಾಹ್ಮಣರು ಸ್ವರ್ಗಾಪೇಕ್ಷೆಯಿಂದ ಆಂಗಿರಸವೆಂಬ ಯಾಗವನ್ನು ಮಾಡುತ್ತಿದ್ದಾರೆ (೨–೩). ಪೂಜ್ಯನಾದ ನನ್ನ ಅಣ್ಣನ ಮತ್ತು ನನ್ನ ಹೆಸರನ್ನು ಹೇಳಿರಿ. ನಾವು

---

* ಮುಂದೆ ಮುಕ್ತಳಾಗುವ ಒಬ್ಬ ಭಕ್ತಳನ್ನು ಗಮನಿಸಿ ಏಕವಚನವನ್ನು ಪ್ರಯೋಗಿಸಲಾಗಿದೆ.

ಇತ್ಯಾದಿಷ್ಟಾ ಭಗವತಾ ಗತ್ವಾಯಾಚಂತ ತೇ ತಥಾ ।
ಕೃತಾಂಜಲಿಪುಟಾ ವಿಪ್ರಾನ್ ದಂಡವತ್ ಪತಿತಾ ಭುವಿ ॥ ೫

ಹೇ ಭೂಮಿದೇವಾಃ ಶೃಣುತ ಕೃಷ್ಣಸ್ಯಾದೇಶಕಾರಿಣಃ ।
ಪ್ರಾಪ್ತಾನ್ ಜಾನೀತ ಭದ್ರಂ ವೋ ಗೋಪಾನ್ ನೋ
ರಾಮಚೋದಿತಾನ್ ॥ ೬

ಗಾಶ್ಚಾರಯಂತಾವವಿದೂರ ಓದನಂ
ರಾಮಾಚ್ಯುತೌ ವೋ ಲಷತೋ ಬುಭುಕ್ಷಿತೌ ।
ತಯೋರ್ದ್ವಿಜಾ ಓದನಮರ್ಥಿನೋರ್ಯದಿ
ಶ್ರದ್ಧಾ ಚ ವೋ ಯಚ್ಛತ ಧರ್ಮವಿತ್ತಮಾಃ ॥ ೭

ದೀಕ್ಷಾಯಾಃ ಪಶುಸಂಸ್ಥಾಯಾಃ ಸೌತ್ರಾಮಣ್ಯಾಶ್ಚ ಸತ್ತಮಾಃ ।
ಅನ್ಯತ್ರ ದೀಕ್ಷಿತಸ್ಯಾಪಿ ನಾನ್ನಮಶ್ನನ್ ಹಿ ದುಷ್ಯತಿ ॥ ೮

---

ಕಳಿಸಿದ್ದೇವೆಂದು ತಿಳಿಸಿ ಅನ್ನವನ್ನು ಬೇಡಿರಿ" ಎಂದನು (೪). ಹೀಗೆ ಶ್ರೀಕೃಷ್ಣನು ಹೇಳಲಾಗಿ ಆ ಗೊಲ್ಲರು ಬ್ರಾಹ್ಮಣರ ಬಳಿಗೆ ಹೋಗಿ ನೆಲದ ಮೇಲೆ ಅಡ್ಡಬಿದ್ದು ದಂಡಪ್ರಣಾಮವನ್ನು ಮಾಡಿ ಕೈಮುಗಿದು ಬೇಡಿಕೊಂಡರು (೫). "ಪೂಜ್ಯರಾದ ಬ್ರಾಹ್ಮಣರೆ, ಕೇಳಿರಿ. ನಾವು ಕೃಷ್ಣನ ಆದೇಶದಂತೆ ಬಂದಿದ್ದೇವೆ. ಬಲರಾಮನೂ ಸಹ ನಮ್ಮನ್ನು ಕಳಿಸಿದ್ದಾನೆ. ನಿಮಗೆ ಶುಭವಾಗಲಿ! ರಾಮ ಕೃಷ್ಣರು ಹಸುಗಳನ್ನು ಮೇಯಿಸುತ್ತ ಸಮೀಪದಲ್ಲಿದ್ದಾರೆ. ಹಸಿವಾಗಿರುವುದರಿಂದ ಅವರು ಅನ್ನವನ್ನು ಬಯಸುತ್ತಿದ್ದಾರೆ. ಓ ಧರ್ಮಜ್ಞರೆ, ನಿಮ್ಮ ಬಳಿ ಅನ್ನವಿದ್ದರೆ, ಶ್ರದ್ಧೆ ಇದ್ದರೆ, ಕೊಡಿರಿ (೬–೭). ಹೇ ವಿದ್ವಾಂಸರೆ, ಯಾಗದಲ್ಲಿ ದೀಕ್ಷೆಯಾದ ಮೇಲೆ ಅಗ್ನೀಷೋಮೀಯ ಪಶ್ವಾಲಂಭನವಾಗುವವರೆಗೆ ಮತ್ತು ಸೌತ್ರಾಮಣೀಯಾಗದಲ್ಲಿ ದೀಕ್ಷಿತನ ಅನ್ನವನ್ನು ಇತರರು ಭುಂಜಿಸಬಾರದು. ಉಳಿದ ಸಂದರ್ಭದಲ್ಲಿ ಇತರರು ಭುಂಜಿಸಿದರೂ ದೋಷವಿಲ್ಲ, ಅಲ್ಲವೆ?" ಎಂದರು (೮).

ಇತಿ ತೇ ಭಗವದ್ಯಾಚ್ಞಾಂ ಶೃಣ್ವಂತೋಽಪಿ ನ ಶುಶ್ರುವುಃ ।
ಕ್ಷುದ್ರಾಶಾ ಭೂರಿಕರ್ಮಾಣೋ ಬಾಲಿಶಾ ವೃದ್ಧಮಾನಿನಃ ॥ ೯

ದೇಶಃ ಕಾಲಃ ಪೃಥಗ್ ದ್ರವ್ಯಂ ಮಂತ್ರತಂತ್ರರ್ತ್ವಿಜೋಽಗ್ನಯಃ ।
ದೇವತಾ ಯಜಮಾನಶ್ಚ ಕ್ರತುರ್ಧರ್ಮಶ್ಚ ಯನ್ಮಯಃ ॥ ೧೦

ತಂ ಬ್ರಹ್ಮ ಪರಮಂ ಸಾಕ್ಷಾದ್ ಭಗವಂತಮಧೋಕ್ಷಜಮ್ ।
ಮನುಷ್ಯದೃಷ್ಟ್ಯಾ ದುಷ್ಪ್ರಜ್ಞಾ ಮರ್ತ್ಯಾತ್ಮಾನೋ ನ ಮೇನಿರೇ ॥ ೧೧

ನ ತೇ ಯದೋಮಿತಿ ಪ್ರೋಚುರ್ನ ನೇತಿ ಚ ಪರಂತಪ ।
ಗೋಪಾ ನಿರಾಶಾಃ ಪ್ರತ್ಯೇತ್ಯ ತಥೋಚುಃ ಕೃಷ್ಣರಾಮಯೋಃ ॥ ೧೨

ತದುಪಾಕರ್ಣ್ಯ ಭಗವಾನ್ ಪ್ರಹಸ್ಯ ಜಗದೀಶ್ವರಃ ।
ವ್ಯಾಜಹಾರ ಪುನರ್ಗೋಪಾನ್ ದರ್ಶಯನ್ ಲೌಕಿಕೀಂ ಗತಿಮ್ ॥

---

ಈ ಪ್ರಕಾರವಾಗಿ ಸ್ವತಃ ಭಗವಂತನ ಪ್ರಾರ್ಥನೆಯನ್ನು ಕೇಳಿದರೂ ಸಹ ಅವಿವೇಕಿಗಳಾದ ಆ ಬ್ರಾಹ್ಮಣರು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ! ತಾವೇ ಬಲ್ಲವರೆಂದು ತಿಳಿದುಕೊಂಡಿದ್ದರು. ಕ್ಷುದ್ರವಾದ ಸ್ವರ್ಗಫಲದಲ್ಲಿ ಆಸೆಯನ್ನಿಟ್ಟು ಆಯಾಸಕರವಾದ ಯಾಗಕಾರ್ಯದಲ್ಲಿ ತೊಡಗಿದ್ದರು (೯). ದೇಶ, ಕಾಲ, ಪುರೋಡಾಶಾದಿದ್ರವ್ಯ, ಮಂತ್ರ, ತಂತ್ರ, ಋತ್ವಿಜರು, ಅಗ್ನಿಗಳು, ದೇವತೆಗಳು, ಯಜಮಾನ, ಯಾಗ, ಯಾಗದಿಂದಾಗುವ ಧರ್ಮ—ಇವೆಲ್ಲವೂ ಯಾವಾತನ ಸ್ವರೂಪವೇ ಆಗಿದೆಯೋ ಅಂತಹ ಭಗವಂತನೂ ಶ್ರೀಮನ್ನಾರಾಯಣನೂ ಆದ ಪರಬ್ರಹ್ಮವೇ ಪ್ರತ್ಯಕ್ಷವಾಗಿ ಬಂದಿದ್ದರೂ ಆ ಬುದ್ಧಿಗೇಡಿಗಳು ಅರಿಯಲಾರದೆ ಹೋದರು! ಮನುಷ್ಯಮಾತ್ರರಾದ ಅವರು ಶ್ರೀಕೃಷ್ಣನೂ ಒಬ್ಬ ಮನುಷ್ಯನೆಂದೇ ತಿಳಿದರು (೧೧). ಪರೀಕ್ಷಿತರಾಜ, ಆ ಬ್ರಾಹ್ಮಣರು 'ಹೂ' ಎಂದೂ ಹೇಳಲಿಲ್ಲ. 'ಇಲ್ಲ' ವೆಂದೂ ಹೇಳಲಿಲ್ಲ. ಆಗ ಗೊಲ್ಲರು ನಿರಾಶರಾಗಿ ಹೊರಟುಬಂದು ಆ ವಿಷಯವನ್ನು ಬಲರಾಮ ಕೃಷ್ಣರಿಗೆ ತಿಳಿಸಿದರು (೧೨). ಅದನ್ನು ಕೇಳಿ ಜಗದೀಶ್ವರನು ನಕ್ಕು "ಲೋಕಸ್ಥಿತಿಯೇ ಹೀಗೆ" ಎನ್ನುತ್ತ ಗೋಪರನ್ನು ಕುರಿತು "ಮಿತ್ರರೆ, ನೀವು ಮತ್ತೆ ಹೋಗಿ ಆ ಬ್ರಾಹ್ಮಣರ ಪತ್ನಿಯರಿಗೆ ನನ್ನನ್ನು ಜ್ಞಾಪಿಸಿರಿ.

ನಾಂ ಜ್ಞಾಪಯತ ಪತ್ನೀಭ್ಯಃ ಸಸಂಕರ್ಷಣಮಾಗತಮ್ ।
ದಾಸ್ಯಂತಿ ಕಾಮಮನ್ನಂ ವಃ ಸ್ನಿಗ್ಧಾ ಮಯ್ಯುಷಿತಾ ಧಿಯಾ ॥ ೧೪

ಗತ್ವಾಥ ಪತ್ನೀಶಾಲಾಯಾಂ ದೃಷ್ಟ್ವಾಽಽಸೀನಾಃ ಸ್ವಲಂಕೃತಾಃ ।
ನತ್ವಾ ದ್ವಿಜಸತೀರ್ಗೋಪಾಃ ಪ್ರಶ್ರಿತಾ ಇದಮಬ್ರುವನ್ ॥ ೧೫

ನಮೋ ವೋ ವಿಪ್ರಪತ್ನೀಭ್ಯೋ ನಿಬೋಧತ ವಚಾಂಸಿ ನಃ ।
ಇತೋಽವಿದೂರೇ ಚರತಾ ಕೃಷ್ಣೇನೇಹೇಷಿತಾ ವಯಮ್ ॥ ೧೬

ಗಾಶ್ಚಾರಯನ್ ಸ ಗೋಪಾಲೈಃ ಸರಾಮೋ ದೂರಮಾಗತಃ ।
ಬುಭುಕ್ಷಿತಸ್ಯ ತಸ್ಯಾನ್ನಂ ಸಾನುಗಸ್ಯ ಪ್ರದೀಯತಾಮ್ ॥ ೧೭

ಶ್ರುತ್ವಾಚ್ಯುತಮುಪಾಯಾತಂ ನಿತ್ಯಂ ತದ್ದರ್ಶನೋತ್ಸುಕಾಃ ।
ತತ್ಕಥಾಕ್ಷಿಪ್ತಮನಸೋ ಬಭೂವುರ್ಜಾತಸಂಭ್ರಮಾಃ ॥ ೧೮

ಚತುರ್ವಿಧಂ ಬಹುಗುಣಮನ್ನಮಾದಾಯ ಭಾಜನೈಃ ।
ಅಭಿಸಸ್ರುಃ ಪ್ರಿಯಂ ಸರ್ವಾಃ ಸಮುದ್ರಮಿವ ನಿಮ್ನಗಾಃ ॥ ೧೯

---

ಬಲರಾಮನೊಡನೆ ಬಂದಿದ್ದೇನೆಂದು ತಿಳಿಸಿರಿ. ಸ್ನೇಹಶೀಲೆಯರಾದ ಅವರು ಮನಸ್ಸಿನಿಂದ ನನ್ನಲ್ಲಿಯೇ ನೆಲೆಸಿದ್ದಾರೆ. ನಿಮಗೆ ಬೇಕಾದಷ್ಟು ಭೋಜನ ಸಾಮಗ್ರಿಯನ್ನು ನೀಡುವರು" ಎಂದನು (೧೩–೧೪). ಅಂತೆಯೇ ಗೋಪಾಲರು ಬ್ರಾಹ್ಮಣಪತ್ನಿಯರಿರುವ ಬಿಡಾರಕ್ಕೆ ಹೋದರು. ಅಲಂಕರಿಸಿಕೊಂಡು ಕುಳಿತಿದ್ದ ಅವರನ್ನು ನೋಡಿ ವಿನಯದಿಂದ "ದ್ವಿಜಪತ್ನಿಯರೆ, ನಮಸ್ಕಾರ. ನಮ್ಮ ಮಾತನ್ನಾಲಿಸಿರಿ. ಇಲ್ಲಿಗೆ ಸಮೀಪದಲ್ಲಿ ತಿರುಗಾಡುತ್ತಿರುವ ಕೃಷ್ಣನು ನಮ್ಮನ್ನು ಕಳಿಸಿದ್ದಾನೆ (೧೫–೧೬). ಅವನು ಗೊಲ್ಲರೊಡನೆ ಹಸುಗಳನ್ನು ಮೇಯಿಸುತ್ತ ಬಲರಾಮನೊಡನೆ ಇದ್ದಾನೆ. ವೃಂದಾವನಕ್ಕೆ ಬಹುದೂರ ಬಂದು ಹಸಿದಿದ್ದಾನೆ. ಪರಿವಾರ ಸಹಿತನಾಗಿರುವ ಆತನಿಗೆ ಅನ್ನವನ್ನು ನೀಡಿರಿ" ಎಂದರು (೧೭). ಆ ಬ್ರಾಹ್ಮಣಸ್ತ್ರೀಯರು ಕೃಷ್ಣನನ್ನು ನೋಡಬೇಕೆಂದು ಸದಾ ಉತ್ಸುಕರಾಗಿದ್ದರು. ಆತನ ಕಥೆ ಅವರ ಮನಸ್ಸನ್ನು ಸೆರೆಹಿಡಿದಿತ್ತು. ಕೃಷ್ಣನು ಬಂದಿರುವನೆಂಬುದನ್ನು ಕೇಳಿದ ಕೂಡಲೆ ಅವರು ಸಂಭ್ರಮಗೊಂಡರು (೧೮). ಒಡನೆಯೇ ನಾನಾ ವಿಧದಲ್ಲಿ ಸಜ್ಜುಗೊಳಿಸಿದ್ದ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯಗಳೆಂಬ

ನಿಷಿಧ್ಯಮಾನಾಃ ಪತಿಭಿರ್ಭ್ರಾತೃಭಿರ್ಬಂಧುಭಿಃ ಸುತೈಃ ।
ಭಗವತ್ಯುತ್ತಮಶ್ಲೋಕೇ ದೀರ್ಘಶ್ರುತಧೃತಾಶಯಾಃ ॥ ೨೦

ಯಮುನೋಪವನೇಽಶೋಕನವಪಲ್ಲವಮಂಡಿತೇ ।
ವಿಚರಂತಂ ವೃತಂ ಗೋಪೈಃ ಸಾಗ್ರಜಂ ದದೃಶುಃ ಸ್ತ್ರಿಯಃ ॥ ೨೧

ಶ್ಯಾಮಂ ಹಿರಣ್ಯಪರಿಧಿಂ ವನಮಾಲ್ಯಬರ್ಹ-
ಧಾತುಪ್ರವಾಲನಟವೇಷಮನುವ್ರತಾಂಸೇ ।
ವಿನ್ಯಸ್ತಹಸ್ತಮಿತರೇಣ ಧುನಾನಮಬ್ಜಂ
ಕರ್ಣೋತ್ಪಲಾಲಕಕಪೋಲಮುಖಾಬ್ಜಹಾಸಮ್ ॥ ೨೨

ಪ್ರಾಯಃಶ್ರುತಪ್ರಿಯತಮೋದಯಕರ್ಣಪೂರೈ-
ರ್ಯಸ್ಮಿನ್ ನಿಮಗ್ನಮನಸಸ್ತಮಥಾಕ್ಷಿರಂಧ್ರೈಃ ।

---

ಭೋಜನವಸ್ತುಗಳನ್ನು ಎಲ್ಲರೂ ಪಾತ್ರೆಗಳಲ್ಲಿ ತುಂಬಿ ತುಂಬಿ ತಂದು ಸುರಿದರು. ನದಿಗಳು ಸಮುದ್ರವನ್ನು ತುಂಬುವಂತೆ, ಪ್ರಿಯನಾದ ಶ್ರೀಕೃಷ್ಣನಿಗಾಗಿ ಭೋಜ್ಯವಸ್ತುಗಳನ್ನು ಸುರಿದರು (೧೯). ಗಂಡಂದಿರು, ಸೋದರರು, ಬಂಧುಗಳು, ಮಕ್ಕಳು ಬೇಡವೆಂದು ತಡೆದರೂ ಆ ಸ್ತ್ರೀಯರು ಕೇಳಲಿಲ್ಲ. ಶ್ರೀಕೃಷ್ಣನ ವಿಚಾರವನ್ನು ಬಹುಕಾಲ ಕೇಳಿದ್ದರಿಂದ ಕೀರ್ತಿಶಾಲಿಯಾದ ಭಗವಂತನಲ್ಲಿ ಅವರ ಭಕ್ತಿಯು ಅಷ್ಟು ದೃಢವಾಗಿತ್ತು (೨೦). ಅಶೋಕ ವೃಕ್ಷಗಳ ಹೊಸಚಿಗುರುಗಳಿಂದ ಮನೋಹರವಾಗಿದ್ದ ಯಮುನೆಯ ಉಪವನದಲ್ಲಿ ಗೊಲ್ಲರೊಡನೆ ಬಲರಾಮ ಸಹಿತನಾಗಿ ಸಂಚರಿಸುತ್ತಿದ್ದ ಕೃಷ್ಣನನ್ನು ಆ ಸ್ತ್ರೀಯರು ಹೋಗಿ ಕಂಡರು (೨೧). ಶ್ಯಾಮಲಾಂಗನಾದ ಶ್ರೀಕೃಷ್ಣನು ಬಂಗಾರದ ಬಣ್ಣದ ಪೀತಾಂಬರವನ್ನುಟ್ಟಿದ್ದನು. ವನಕುಸುಮ, ನವಿಲುಗರಿ, ಚಿಗುರೆಲೆಗಳನ್ನು ಮುಡಿದು ಗೈರಿಕಧಾತುವಿನ ಬಣ್ಣದಿಂದ ಅಲಂಕರಿಸಿಕೊಂಡು ನಟವೇಷದಲ್ಲಿದ್ದನು. ಗೆಳೆಯನ ಹೆಗಲಿನಮೇಲೆ ಒಂದು ಕೈಯನ್ನಿಟ್ಟು ಇನ್ನೊಂದು ಕೈಯಿಂದ ತಾವರೆಯಹೂವನ್ನು ಆಡಿಸುತ್ತಿದ್ದನು. ಕಿವಿಯಲ್ಲಿ ಕನ್ನೈದಿಲೆಯ ಹೂವಿರಲು, ಹಣೆಯಲ್ಲಿ ಮುಂಗುರುಳು ಹರಡಿರಲು, ಮುಖಕಮಲದಲ್ಲಿ ಮುಗುಳ್ನಗೆಯನ್ನು ಸೂಸುತ್ತಿದ್ದನು. ಆ ಗೋವಿಂದನನ್ನು ವಿಪ್ರಸ್ತ್ರೀಯರು ಕಂಡರು (೨೨). ಬಹಳ ಸಲ ಕೇಳಿದ ಪ್ರಿಯತಮನಾದ ಶ್ರೀಕೃಷ್ಣನ ಯಶೋವಾರ್ತೆಗಳು ಅವರಿಗೆ ಕರ್ಣಾಭರಣಗಳಾಗಿದ್ದವು.

ಅಂತಃ ಪ್ರವೇಶ್ಯ ಸುಚಿರಂ ಪರಿರಭ್ಯ ತಾಪಂ
ಪ್ರಾಜ್ಞಂ ಯಥಾಭಿಮತಯೋ ವಿಜಹುರ್ನರೇಂದ್ರ ॥ ೨೩

ತಾಸ್ತಥಾ ತ್ಯಕ್ತಸರ್ವಾಶಾಃ ಪ್ರಾಪ್ತಾ ಆತ್ಮದಿದೃಕ್ಷಯಾ ।
ವಿಜ್ಞಾಯಾಖಿಲದೃಗ್ದ್ರಷ್ಟಾ ಪ್ರಾಹ ಪ್ರಹಸಿತಾನನಃ ॥ ೨೪

ಸ್ವಾಗತಂ ವೋ ಮಹಾಭಾಗಾ ಆಸ್ಯತಾಂ ಕರವಾಮ ಕಿಮ್ ।
ಯನ್ನೋ ದಿದೃಕ್ಷಯಾ ಪ್ರಾಪ್ತಾ ಉಪಪನ್ನಮಿದಂ ಹಿ ವಃ ॥ ೨೫

ನನ್ವದ್ಧಾ ಮಯಿ ಕುರ್ವಂತಿ ಕುಶಲಾಃ ಸ್ವಾರ್ಥದರ್ಶನಾಃ ।
ಅಹೈತುಕ್ಯವ್ಯವಹಿತಾಂ ಭಕ್ತಿಮಾತ್ಮಪ್ರಿಯೇ ಯಥಾ ॥ ೨೬

ಪ್ರಾಣಬುದ್ಧಿಮನಃಸ್ವಾತ್ಮದಾರಾಪತ್ಯಧನಾದಯಃ ।
ಯತ್ಸಂಪರ್ಕಾತ್ ಪ್ರಿಯಾ ಆಸಂಸ್ತತಃ ಕೋ ನ್ವಪರಃ ಪ್ರಿಯಃ ॥ ೨೭

---

ಅದರಿಂದ ಅವರ ಮನಸ್ಸು ಆತನಲ್ಲಿ ದೃಢವಾಗಿ ನೆಟ್ಟುಹೋಗಿತ್ತು. ಪರೀಕ್ಷಿತರಾಜ, ಮನುಷ್ಯನ ಅಹಂವೃತ್ತಿಗಳು (ನಿದ್ರಾಸಮಯದಲ್ಲಿ ಸುಷುಪ್ತಿ ಸಾಕ್ಷಿಯಾದ) ಪ್ರಾಜ್ಞನನ್ನಾಲಂಗಿಸಿ ತಮ್ಮ ತಾಪಗಳನ್ನು ಕಳೆದುಕೊಂಡು ಹೇಗೆ ಲೀನವಾಗಿಬಿಡುವುವೋ, ಹಾಗೆ ಆ ವಿಪ್ರಸ್ತ್ರೀಯರು ತಮ್ಮ ನೇತ್ರ ರಂಧ್ರಗಳಿಂದ ಶ್ರೀಕೃಷ್ಣನನ್ನು ತಮ್ಮೊಳಗೆ ಹೊಗಿಸಿ ಬಹುಕಾಲ ಆಲಂಗಿಸಿ ತಮ್ಮ ಸಂಕಷ್ಟಗಳನ್ನು ಪರಿಹರಿಸಿಕೊಂಡರು (೨೩). ಸಕಲ ಆಸೆಗಳನ್ನೂ ತೊರೆದು ಕೇವಲ ತನ್ನನ್ನು ನೋಡುವ ಬಯಕೆಯಿಂದ ಆ ಸ್ತ್ರೀಯರು ಬಂದಿರುವುದನ್ನು ಸರ್ವಬುದ್ಧಿಸಾಕ್ಷಿಯಾದ ಭಗವಂತನು ಅರಿತು ನಗುತ್ತ ಹೀಗೆಂದನು (೨೪): "ಎಲೌ ಭಾಗ್ಯಶಾಲಿನಿಯರೆ, ನಿಮಗೆ ಸ್ವಾಗತ. ಕುಳಿತುಕೊಳ್ಳಿರಿ. ನಿಮಗಾಗಿ ನಾವು ಏನನ್ನಾದರೂ ಮಾಡಬೇಕಾದ್ದಿದೆಯೆ? ನಮ್ಮನ್ನು ನೋಡುವುದಕ್ಕಾಗಿ ಬಂದಿದ್ದೀರಲ್ಲವೆ? ಇದು ನಿಮಗೆ ಯುಕ್ತವೇ ಸರಿ (೨೫). ಆತ್ಮಹಿತವನ್ನು ಬಯಸುವ ಬುದ್ಧಿಶಾಲಿಗಳು ಆತ್ಮನೂ ಪ್ರಿಯನೂ ಆದ ನನ್ನಲ್ಲಿ ಫಲಾಪೇಕ್ಷೆಯಿಲ್ಲದ ನಿರಂತರವಾದ ಭಕ್ತಿಯನ್ನು ನೇರವಾಗಿಯೂ ಯಥಾವತ್ತಾಗಿಯೂ ಇಟ್ಟಿರುತ್ತಾರಲ್ಲವೆ? (೨೬). ಪ್ರಾಣ, ಬುದ್ಧಿ, ಮನಸ್ಸು, ತನ್ನ ದೇಹ, ಹೆಂಡತಿ, ಮಕ್ಕಳು, ಹಣ ಮೊದಲಾದವು ಯಾವ

**ತದ್ ಯಾತ ದೇವಯಜನಂ ಪತಯೋ ವೋ ದ್ವಿಜಾತಯಃ ।**
**ಸ್ವಸತ್ರಂ ಪಾರಯಿಷ್ಯಂತಿ ಯುಷ್ಮಾಭಿರ್ಗೃಹಮೇಧಿನಃ ॥ ೨೮**

**ಪತ್ನ್ಯ ಊಚುಃ—**

**ಮೈವಂ ವಿಭೋಽರ್ಹತಿ ಭವಾನ್ ಗದಿತುಂ ನೃಶಂಸಂ**
**ಸತ್ಯಂ ಕುರುಷ್ವ ನಿಗಮಂ ತವ ಪಾದಮೂಲಮ್ ।**
**ಪ್ರಾಪ್ತಾ ವಯಂ ತುಲಸಿದಾಮ ಪದಾವಸೃಷ್ಟಂ**
**ಕೇಶೈರ್ನಿವೋಢುಮತಿಲಂಘ್ಯ ಸಮಸ್ತಬಂಧೂನ್ ॥ ೨೯**

**ಗೃಹ್ಣಂತಿ ನೋ ನ ಪತಯಃ ಪಿತರೌ ಸುತಾ ವಾ**
**ನ ಭ್ರಾತೃಬಂಧುಸುಹೃದಃ ಕುತ ಏವ ಚಾನ್ಯೇ ।**
**ತಸ್ಮಾದ್ ಭವತ್ಪ್ರಪದಯೋಃ ಪತಿತಾತ್ಮನಾಂ ನೋ**
**ನಾನ್ಯಾ ಭವೇದ್ ಗತಿರರಿಂದಮ ತದ್ ವಿಧೇಹಿ ॥ ೩೦**

---

ಆತ್ಮನ ಸಂಪರ್ಕದಿಂದ* ಪ್ರಿಯವಾಗುತ್ತವೆಯೋ ಅಂತಹ ಆತ್ಮನಿಗಿಂತ ಪ್ರಿಯವಾದ ಇನ್ನೊಂದು ವಸ್ತು ಯಾವುದುಂಟು? (೨೭). (ನೀವು ಕೃತಾರ್ಥರಾದಿರಿ) ಆದ್ದರಿಂದ ಯಜ್ಞಶಾಲೆಗೆ ಹಿಂದಿರುಗಿ ಹೋಗಿರಿ. ನಿಮ್ಮ ಪತಿಗಳಾದ ಗೃಹಸ್ಥಬ್ರಾಹ್ಮಣರು ನಿಮ್ಮ ನೆರವಿನಿಂದ ಯಾಗವನ್ನು ನೆರವೇರಿಸುವರು" ಎಂದನು (೨೮). ಆಗ ವಿಪ್ರಪತ್ನಿಯರು ಹೇಳಿದರು: "ಹೇ ಸ್ವಾಮಿ, ಇಂತಹ ಕಠೋರವಾದ ಮಾತನ್ನಾಡುವುದು ನಿನಗೆ ತರವಲ್ಲ. 'ನ ಮೇ ಭಕ್ತಃ ಪ್ರಣಶ್ಯತಿ, ನ ಸ ಪುನರಾವರ್ತತೇ' ಮುಂತಾದ ನಿನ್ನ ಪ್ರತಿಜ್ಞೆಯನ್ನು ಸತ್ಯವಾಗಿಸು. ನೀನು ಕಾಲಿನಿಂದ ತಳ್ಳಿದ ತುಳಸೀಮಾಲೆಯನ್ನು ತಲೆಗೂದಲಲ್ಲಿ ಮುಡಿಯಬೇಕೆಂದು ಬಂದಿದ್ದೇವೆ. ಇದಕ್ಕಾಗಿ ಸಕಲ ಬಂಧುಗಳ ಮಾತನ್ನೂ ಉಲ್ಲಂಘಿಸಿದ್ದೇವೆ (೨೯). ನಮ್ಮ ಪತಿಗಳಾಗಲಿ ತಾಯಿತಂದೆಗಳಾಗಲಿ ಮಕ್ಕಳಾಗಲಿ ನಮ್ಮನ್ನು ಮತ್ತೆ ಸ್ವೀಕರಿಸುವುದಿಲ್ಲ. ಸೋದರರೂ ಬಂಧುಗಳೂ ಆಪ್ತರೂ ನಮ್ಮನ್ನು ಒಪ್ಪುವುದಿಲ್ಲ. ಇನ್ನು ಇತರರು ಒಪ್ಪಿಯಾರೆ? ಆದ್ದರಿಂದ, ಹೇ ಶತ್ರುಸೂದನ, ನಿನ್ನ ಅಡಿಗಳ ಅಂಚಿನಲ್ಲಿ ಬಿದ್ದಿದ್ದೇವೆ. ನಮಗೆ ಇನ್ನು ಯಾವ ಅವಲಂಬನೆಯೂ ಬೇಡ

---

* ಅಧ್ಯಾಸದಿಂದ.

ಶ್ರೀಭಗವಾನುವಾಚ—

**ಪತಯೋ ನಾಭ್ಯಸೂಯೇರನ್ ಪಿತೃಭ್ರಾತೃಸುತಾದಯಃ ।**
**ಲೋಕಾಶ್ಚ ವೋ ಮಯೋಪೇತಾ ದೇವಾ ಅಪ್ಯನುಮನ್ವತೇ ॥ ೩೧**

**ನ ಪ್ರೀತಯೇಽನುರಾಗಾಯ ಹ್ಯಂಗಸಂಗೋ ನೃಣಾಮಿಹ ।**
**ತನ್ಮನೋ ಮಯಿ ಯುಂಜಾನಾ ಅಚಿರಾನ್ಮಾಮವಾಪ್ಸ್ಯಥ ॥ ೩೨**

ಶ್ರೀಶುಕ ಉವಾಚ—

**ಇತ್ಯುಕ್ತಾ ಮುನಿಪತ್ನ್ಯಸ್ತಾ ಯಜ್ಞವಾಟಂ ಪುನರ್ಗತಾಃ ।**
**ತೇ ಚಾನಸೂಯವಃ ಸ್ವಾಭಿಃ ಸ್ತ್ರೀಭಿಃ ಸತ್ರಮಪಾರಯನ್ ॥ ೩೩**

**ತತ್ರೈಕಾ ವಿಧೃತಾ ಭರ್ತ್ರಾ ಭಗವಂತಂ ಯಥಾಶ್ರುತಮ್ ।**
**ಹೃದೋಪಗುಹ್ಯ ವಿಜಹೌ ದೇಹಂ ಕರ್ಮಾನುಬಂಧನಮ್ ॥ ೩೪**

**ಭಗವಾನಪಿ ಗೋವಿಂದಸ್ತೇನೈವಾನ್ನೇನ ಗೋಪಕಾನ್ ।**
**ಚತುರ್ವಿಧೇನಾಶಯಿತ್ವಾ ಸ್ವಯಂ ಚ ಬುಭುಜೇ ಪ್ರಭುಃ ॥ ೩೫**

---

(ಸ್ವರ್ಗವೂ ಬೇಡ). ಹಾಗೆ ಮಾಡು" (೩೦). ಭಗವಂತನು ಹೇಳಿದನು: "ಎಲೌ ಸಾಧ್ವಿಯರೆ, ನಿಮ್ಮ ಪತಿಗಳಾಗಲಿ, ತಂದೆ, ತಾಯಿ, ಸೋದರ, ಸುತರಾಗಲಿ ನಿಮ್ಮ ಮೇಲೆ ಅಸೂಯೆಯಿಂದ ಅಸಮಾಧಾನಗೊಳ್ಳುವುದಿಲ್ಲ. ಲೋಕದಲ್ಲಿ ಯಾರೂ ಅನ್ಯಥಾ ಭಾವಿಸುವುದಿಲ್ಲ. ನಾನು ಮೆಚ್ಚಿದವರನ್ನು ದೇವತೆಗಳೂ ಮೆಚ್ಚುವರು! (೩೧). ದೇಹಸಾಮೀಪ್ಯವಿದ್ದಮಾತ್ರದಿಂದ ಜನರಿಗೆ ಸುಖವಾಗದು; ಪ್ರೀತಿಯು ಹೆಚ್ಚದು. ನೀವು ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಿರಿ. ಅದರಿಂದ ಶೀಘ್ರವಾಗಿ ನನ್ನನ್ನು ಸೇರುವಿರಿ" ಎಂದನು (೩೨). ಹೀಗೆ ಶ್ರೀಕೃಷ್ಣನು ಹೇಳಲಾಗಿ ಆ ವಿಪ್ರಪತ್ನಿಯರು ಯಜ್ಞಶಾಲೆಗೆ ಮರಳಿದರು. ವಿಪ್ರರೂ ಸಹ ಯಾವ ದೋಷವನ್ನೂ ಎಣಿಸದೆ ತಮ್ಮ ಪತ್ನಿಯರೊಡನೆ ಯಾಗವನ್ನು ನೆರವೇರಿಸಿದರು (೩೩). ಆ ಸ್ತ್ರೀಯರಲ್ಲೊಬ್ಬಳು, ಪತಿಯು ಅವಳ ದೇಹವನ್ನು ಹಿಡಿದುಕೊಂಡಿರುವಾಗಲೇ, ಮನಸ್ಸಿನಿಂದ ಭಗವಂತನನ್ನು ಪೂರ್ವೋಕ್ತರೀತಿಯಲ್ಲಿ ಆಲಂಗಿಸಿಕೊಂಡು, ತನ್ನ ಕರ್ಮದೇಹವನ್ನು ತ್ಯಜಿಸಿದಳು* (೩೪). ಇತ್ತ ಸ್ವಾಮಿಯಾದ ಗೋವಿಂದನು ಭಕ್ಷ್ಯಭೋಜ್ಯಾದಿ ಚತುರ್ವಿಧ ಭೋಜನಸಾಮಗ್ರಿಯಿಂದ

* ಅವಳ ದೇಹವು ಪತಿಯ ಬಳಿ ಉಳಿಯಿತು. ಚೈತನ್ಯವು ಭಗವಂತನಲ್ಲಿ ಲೀನವಾಯಿತು. ಅವಳು ಮುಕ್ತಳಾದಳು—ಎಂದು ಅಭಿಪ್ರಾಯ.

*

**ಏವಂ ಲೀಲಾನರವಪುರ್ನೃಲೋಕಮನುಶೀಲಯನ್ ।**
**ರೇಮೇ ಗೋಗೋಪಗೋಪೀನಾಂ ರಮಯನ್ ರೂಪವಾಕ್ಕೃತೈಃ ॥**

**ಅಥಾನುಸ್ಮೃತ್ಯ ವಿಪ್ರಾಸ್ತೇ ಅನ್ವತಪ್ಯನ್ ಕೃತಾಗಸಃ ।**
**ಯದ್ ವಿಶ್ವೇಶ್ವರಯೋರ್ಯಾಚ್ಞಾಮಹನ್ಮ ನೃವಿಡಂಬಯೋಃ ॥ ೩೭**

**ದೃಷ್ಟ್ವಾ ಸ್ತ್ರೀಣಾಂ ಭಗವತಿ ಕೃಷ್ಣೇ ಭಕ್ತಿಮಲೌಕಿಕೀಮ್ ।**
**ಆತ್ಮಾನಂ ಚ ತಯಾ ಹೀನಮನುತಪ್ತಾ ವ್ಯಗರ್ಹಯನ್ ॥ ೩೮**

**ಧಿಗ್ ಜನ್ಮನಸ್ತ್ರಿವೃದ್ ವಿದ್ಯಾಂ ಧಿಗ್ ವ್ರತಂ ಧಿಗ್ ಬಹುಜ್ಞತಾಮ್ ।**
**ಧಿಕ್ ಕುಲಂ ಧಿಕ್ ಕ್ರಿಯಾದಾಕ್ಷ್ಯಂ ವಿಮುಖಾ ಯೇ ತ್ವಧೋಕ್ಷಜೇ॥**

**ನೂನಂ ಭಗವತೋ ಮಾಯಾ ಯೋಗಿನಾಮಪಿ ಮೋಹಿನೀ ।**
**ಯದ್ ವಯಂ ಗುರವೋ ನೃಣಾಂ ಸ್ವಾರ್ಥೇ ಮುಹ್ಯಾಮಹೇ ದ್ವಿಜಾಃ ॥ ೪೦**

---

ಗೊಲ್ಲರಿಗೆ ಭೋಜನಮಾಡಿಸಿ ತಾನು ಭುಂಜಿಸಿದನು (೩೫). ಹೀಗೆ ಲೀಲಾ ಮಾನುಷವೇಷಧಾರಿಯಾಗಿ ಲೋಕರೀತಿಯನ್ನನುಸರಿಸುತ್ತ ಗೋವು, ಗೋಪ, ಗೋಪಿಯರನ್ನು ತನ್ನ ರೂಪ, ನುಡಿ, ನಡೆಗಳಿಂದ ಸಂತೋಷಪಡಿಸುತ್ತ ವಿಹರಿಸುತ್ತಿದ್ದನು (೩೬). ಇತ್ತಲಾಗಿ ಆ ಬ್ರಾಹ್ಮಣರು ಮಾನವವೇಷಧಾರಿಗಳಾದ ಜಗದೀಶ್ವರ ರಾಮಕೃಷ್ಣರ ಪ್ರಾರ್ಥನೆಯನ್ನು ನಡೆಸದೆ ಹೋದೆವಲ್ಲ–ಎಂದು ತಮ್ಮ ಅಪರಾಧಕ್ಕಾಗಿ ಮರುಗಿದರು (೩೭). ಭಗವಂತನಾದ ಶ್ರೀಕೃಷ್ಣನಲ್ಲಿ ಹೆಂಗಸರಿಗಿದ್ದ ಲೋಕಾತೀತವಾದ ಆ ಭಕ್ತಿಯನ್ನೂ ತಮಗೆ ಅದು ಇಲ್ಲದೆ ಹೋದುದನ್ನೂ ನೆನೆಸಿಕೊಂಡು ಪಶ್ಚಾತ್ತಾಪದಿಂದ ತಮ್ಮನ್ನು ಜರಿದುಕೊಂಡರು (೩೮). "ನಮ್ಮ ಜನ್ಮಕ್ಕೆ ಧಿಕ್ಕಾರ! ಮೂರು ವೇದಗಳನ್ನು ಬಲ್ಲೆವೆಂಬ ನಮ್ಮ ವಿದ್ಯೆಗೆ ಧಿಕ್ಕಾರ! ಈ ಬ್ರಹ್ಮಚರ್ಯ ವ್ರತಕ್ಕೆ, ವ್ರತಜ್ಞತೆಗೆ ಧಿಕ್ಕಾರ! ಈ ಕುಲಕ್ಕೆ, ಕ್ರಿಯೆಗೆ, ದಕ್ಷತೆಗೆ ಎಲ್ಲವಕ್ಕೂ ಧಿಕ್ಕಾರ! ಪರಮಾತ್ಮನ ವಿಷಯದಲ್ಲಿ ಮುಖತಿರುಗಿಸಿದವರು ನಾವು! (೩೯). ನಿಜವಾಗಿಯೂ ಭಗವಂತನ ಮಾಯೆ ಯೋಗಿಗಳನ್ನೂ ಬುದ್ಧಿಗೆಡಿಸುವುದು! ನಾವು ಜನರಿಗೆ ಗುರುಗಳಾಗಿದ್ದರೂ ದ್ವಿಜರಾಗಿದ್ದರೂ ಪರಮಾರ್ಥದ ವಿಷಯ

**ಅಹೋ ಪಶ್ಯತ ನಾರೀಣಾಮಪಿ ಕೃಷ್ಣೇ ಜಗದ್ಗುರೌ ।**
**ದುರಂತಭಾವಂ ಯೋಽವಿಧ್ಯನ್ಮೃತ್ಯುಪಾಶಾನ್ ಗೃಹಾಭಿಧಾನ್ ॥ ೪೧**

**ನಾಸಾಂ ದ್ವಿಜಾತಿಸಂಸ್ಕಾರೋ ನ ನಿವಾಸೋ ಗುರಾವಪಿ ।**
**ನ ತಪೋ ನಾತ್ಮಮೀಮಾಂಸಾ ನ ಶೌಚಂ ನ ಕ್ರಿಯಾಃ ಶುಭಾಃ ॥ ೪೨**

**ಅಥಾಪಿ ಹ್ಯುತ್ತಮಶ್ಲೋಕೇ ಕೃಷ್ಣೇ ಯೋಗೇಶ್ವರೇಶ್ವರೇ ।**
**ಭಕ್ತಿರ್ದೃಢಾ ನ ಚಾಸ್ಮಾಕಂ ಸಂಸ್ಕಾರಾದಿಮತಾಮಪಿ ॥ ೪೩**

**ನನು ಸ್ವಾರ್ಥವಿಮೂಢಾನಾಂ ಪ್ರಮತ್ತಾನಾಂ ಗೃಹೇಹಯಾ ।**
**ಅಹೋ ನಃ ಸ್ಮಾರಯಾಮಾಸ ಗೋಪವಾಕ್ಯೈಃ ಸತಾಂ ಗತಿಃ ॥ ೪೪**

**ಅನ್ಯಥಾ ಪೂರ್ಣಕಾಮಸ್ಯ ಕೈವಲ್ಯಾದ್ಯಾಶಿಷಾಂ ಪತೇಃ ।**
**ಈಶಿತವ್ಯೈಃ ಕಿಮಸ್ಮಾಭಿರೀಶಸ್ಯೈತದ್ ವಿಡಂಬನಮ್ ॥ ೪೫**

---

ವಾಗಿ ನಾವೇ ಬುದ್ಧಿಗೆಟ್ಟು ತಪ್ಪುಮಾಡುತ್ತೇವಲ್ಲ! (೪೦). ಅಬ್ಬಾ! ಜಗದ್ಗುರುವಾದ ಕೃಷ್ಣನಲ್ಲಿ ಹೆಂಗಸರಿಗೂ ಸಹ ಎಂತಹ ದುರ್ದಮವಾದ ಭಕ್ತಿಭಾವವಿದೆ, ನೋಡಿರಿ! ಮನೆಮಠಗಳೆಂಬ ಮೃತ್ಯುಪಾಶಗಳನ್ನು ಅವರ ಭಕ್ತಿಭಾವವು ಕತ್ತರಿಸಿಹಾಕಿತು! (೪೧). ಈ ಸ್ತ್ರೀಯರಿಗೆ ಉಪನಯನ ಸಂಸ್ಕಾರವಾಗಿಲ್ಲ. ಗುರುಕುಲವಾಸವಿಲ್ಲ. ತಪಸ್ಸನ್ನಾಗಲಿ ಆತ್ಮವಿಚಾರ ಚರ್ಚೆಯನ್ನಾಗಲಿ ಇವರು ಮಾಡಿಲ್ಲ. ಶೌಚವಿಲ್ಲ. ಸಂಧ್ಯಾವಂದನಾದಿ ಕ್ರಿಯೆಗಳಿಲ್ಲ (೪೨). ಆದರೂ ಸಹ ಯೋಗೇಶ್ವರರಿಗೆ ಈಶ್ವರನೂ ಉತ್ತಮಶ್ಲೋಕನೂ* ಆದ ಶ್ರೀಕೃಷ್ಣನಲ್ಲಿ ದೃಢವಾದ ಭಕ್ತಿಯುಂಟು. ಉಪನಯನಾದಿ ಸಂಸ್ಕಾರಗಳನ್ನು ಪಡೆದ ನಮಗೆ ಇಲ್ಲವಾಯಿತು! (೪೩). ಆಹಾ! ಮನೆಮಠಗಳ ವ್ಯಾಮೋಹದಿಂದ ಪ್ರಮತ್ತರಾಗಿ ಪರಮಾರ್ಥದಲ್ಲಿ ಮೂಢರಾಗಿರುವ ನಮಗೆ, ಸಜ್ಜನರಕ್ಷಕನಾದ ಕೃಷ್ಣನು ಗೊಲ್ಲರ ಮಾತುಗಳ ಮೂಲಕ ತನ್ನನ್ನು ನೆನಪುಮಾಡಿಕೊಟ್ಟನು. ಅಲ್ಲವೆ? (೪೪). ಅಲ್ಲದಿದ್ದರೆ ಪೂರ್ಣಕಾಮನೂ ಕೈವಲ್ಯಾದಿವಿಭೂತಿಗಳಿಗೆ ಒಡೆಯನೂ ಆದವನಿಗೆ ನಮ್ಮಿಂದ

---

* ಶ್ರೇಷ್ಠವಾದ ಸ್ತುತಿಗೆ ಪಾತ್ರ; ಮಹಾಕೀರ್ತಿಶಾಲಿ. ಉತ್ತಮಶ್ಲೋಕ ಎಂಬ ಶಬ್ದ ಭಾಗವತದಲ್ಲಿ ಬಹಳ ಕಡೆ ಬರುತ್ತದೆ. ಇದನ್ನು ವಾಚಕರು ನೆನಪಿನಲ್ಲಿಡಬೇಕು.

**ಹಿತ್ವಾನ್ಯಾನ್ ಭಜತೇ ಯಂ ಶ್ರೀಃ ಪಾದಸ್ಪರ್ಶಾಶಯಾ ಸಕೃತ್ ।**
**ಆತ್ಮದೋಷಾಪವರ್ಗೇಣ ತದ್ಯಾಚ್ಞಾ ಜನಮೋಹಿನೀ ॥ ೪೬**

**ದೇಶಃ ಕಾಲಃ ಪೃಥಗ್ದ್ರವ್ಯಂ ಮಂತ್ರತಂತ್ರರ್ತ್ವಿಜೋಽಗ್ನಯಃ ।**
**ದೇವತಾ ಯಜಮಾನಶ್ಚ ಕ್ರತುರ್ಧರ್ಮಶ್ಚ ಯನ್ಮಯಃ ॥ ೪೭**

**ಸ ಏಷ ಭಗವಾನ್ ಸಾಕ್ಷಾದ್ ವಿಷ್ಣುರ್ಯೋಗೇಶ್ವರೇಶ್ವರಃ ।**
**ಜಾತೋ ಯದುಷ್ವಿತ್ಯಶೃಣ್ಮ ಹ್ಯಪಿ ಮೂಢಾ ನ ವಿದ್ಮಹೇ ॥ ೪೮**

**ಅಹೋ ವಯಂ ಧನ್ಯತಮಾ ಯೇಷಾಂ ನಸ್ತಾದೃಶೀಃ ಸ್ತ್ರಿಯಃ ।**
**ಭಕ್ತ್ಯಾ ಯಾಸಾಂ ಮತಿರ್ಜಾತಾ ಅಸ್ಮಾಕಂ ನಿಶ್ಚಲಾ ಹರೌ ॥ ೪೯**

**ನಮಸ್ತುಭ್ಯಂ ಭಗವತೇ ಕೃಷ್ಣಾಯಾಕುಂಠಮೇಧಸೇ ।**
**ಯನ್ಮಾಯಾಮೋಹಿತಧಿಯೋ ಭ್ರಮಾಮಃ ಕರ್ಮವರ್ತ್ಮಸು ॥ ೫೦**

---

ಏನಾಗಬೇಕಾಗಿತ್ತು? ದಾಸರಾದ ನಮ್ಮಿಂದ ಆ ಪ್ರಭುವಿಗೆ ಆಗಬೇಕಾದ್ದಿದೆಯೆ? ಇದೆಯೆಂದರೆ ಹಾಸ್ಯಾಸ್ಪದ (೪೫). ಲಕ್ಷ್ಮೀದೇವಿಯು ಇತರರನ್ನು ತ್ಯಜಿಸಿ ತನ್ನ ಚಾಂಚಲ್ಯದೋಷವನ್ನು ಬಿಟ್ಟು ಯಾರ ಪಾದಸ್ಪರ್ಶವು ಮತ್ತೆಮತ್ತೆ ದೊರೆಯಲೆಂಬ ಆಸೆಯಿಂದ ಯಾರನ್ನು ಸೇವಿಸುತ್ತಿರುವಳೋ ಆತನು (ಅನ್ನವನ್ನು) ಬೇಡುವುದೆಂದರೆ ಜನರನ್ನು ಮೋಹಗೊಳಿಸತಕ್ಕದ್ದೇ ಸರಿ (೪೬). ದೇಶ, ಕಾಲ, ಪುರೋಡಾಶಾದಿದ್ರವ್ಯ, ಮಂತ್ರ, ತಂತ್ರ, ಋತ್ವಿಜರು, ಅಗ್ನಿಗಳು, ದೇವತೆಗಳು, ಯಜ್ಞಕರ್ತ, ಯಜ್ಞ, ಯಜ್ಞದಿಂದಾಗುವ ಧರ್ಮ—ಇವೆಲ್ಲವೂ ಯಾವಾತನ ಸ್ವರೂಪವೋ, ಅಂತಹ ಸಾಕ್ಷಾದ್ ವಿಷ್ಣುವೂ ಯೋಗೇಶ್ವರೇಶ್ವರನೂ ಆದ ಭಗವಂತನು ಯದುಕುಲದಲ್ಲಿ ಜನಿಸಿದ್ದಾನೆಂದು ಕೇಳಿದ್ದೇವೆ. ಆದರೂ ಮೂಢರಾದ ನಾವು ತಿಳಿದುಕೊಳ್ಳದೆ ಹೋದೆವಲ್ಲ! (೪೭–೪೮). ಆಹಾ! ಆದರೂ ನಾವು ಧನ್ಯರೇ ಸರಿ! ನಮಗೆ ಇಂತಹ ಪತ್ನಿಯರಿದ್ದಾರಲ್ಲವೆ! ಅವರ ಭಕ್ತಿಯ ಮಹಿಮೆಯಿಂದ ನಮಗೂ ಶ್ರೀಹರಿಯಲ್ಲಿ ನಿಶ್ಚಲವಾದ ಮನಸ್ಸು ಉಂಟಾಯಿತು (೪೯). ಹೇ ಸ್ವಾಮಿ, ಭಗವಂತ, ಕೃಷ್ಣ, ನಿನಗೆ ನಮಸ್ಕಾರ. ನಿನ್ನ ಜ್ಞಾನಶಕ್ತಿಗೆ ತಡೆಯೆಂಬುದಿಲ್ಲ. ನಿನ್ನ ಮಾಯೆಯಿಂದ ಮೋಹಿತರಾದ

**ಸ ವೈ ನ ಆದ್ಯಃ ಪುರುಷಃ ಸ್ವಮಾಯಾಮೋಹಿತಾತ್ಮನಾಮ್ ।**
**ಅವಿಜ್ಞಾತಾನುಭಾವಾನಾಂ ಕ್ಷಂತುಮರ್ಹತ್ಯತಿಕ್ರಮಮ್ ॥ ೫೧**

**ಇತಿ ಸ್ವಾಘಮನುಸ್ಮೃತ್ಯ ಕೃಷ್ಣೇ ತೇ ಕೃತಹೇಲನಾಃ ।**
**ದಿದೃಕ್ಷವೋಽಪ್ಯಚ್ಯುತಯೋಃ ಕಂಸಾದ್ ಭೀತಾ ನ ಚಾಚಲನ್ ॥ ೫೨**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಯೋವಿಂಶಾಧ್ಯಾಯಃ**



ನಾವು ಕರ್ಮಮಾರ್ಗದಲ್ಲಿ ಅಲೆಯುತ್ತಿದ್ದೇವೆ (೫೦). ಆತನ ಮಾಯೆಯಿಂದ ಮೂಢರಾಗಿ ಆತನ ಮಹಿಮೆಯನ್ನರಿಯದೆ ಮಾಡಿದ ನಮ್ಮ ಅಪರಾಧವನ್ನು ಆ ಆದಿಪುರುಷನೇ ಕ್ಷಮಿಸಲೆಂದು ಪ್ರಾರ್ಥಿಸುತ್ತೇವೆ" ಎಂದು ಹೇಳಿಕೊಂಡರು (೫೧). ಹೀಗೆ ಶ್ರೀಕೃಷ್ಣನಲ್ಲಿ ಅಪರಾಧವೆಸಗಿ ತಮ್ಮ ಪಾಪಕಾರ್ಯವನ್ನು ಸ್ಮರಿಸಿಕೊಂಡು ಪಶ್ಚಾತ್ತಾಪಪಡುತ್ತಿದ್ದ ಆ ವಿಪ್ರರಿಗೆ ಬಲರಾಮಕೃಷ್ಣರನ್ನು ಹೋಗಿ ಕಾಣಬೇಕೆಂಬ ಇಚ್ಛೆಯಾಯಿತು. ಆದರೆ ಕಂಸನಿಗೆ ಹೆದರಿ ಅವರು ಹೊರಡಲಿಲ್ಲ (೫೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತುಮೂರನೆಯ ಅಧ್ಯಾಯ



## ಚತುರ್ವಿಂಶಾಧ್ಯಾಯಃ

ಶ್ರೀಶುಕ ಉವಾಚ—

**ಭಗವಾನಪಿ ತತ್ರೈವ ಬಲದೇವೇನ ಸಂಯುತಃ ।**
**ಅಪಶ್ಯನ್ನಿವಸನ್ ಗೋಪಾನಿಂದ್ರಯಾಗಕೃತೋದ್ಯಮಾನ್ ॥ ೧**

**ತದಭಿಜ್ಞೋಽಪಿ ಭಗವಾನ್ ಸರ್ವಾತ್ಮಾ ಸರ್ವದರ್ಶನಃ ।**
**ಪ್ರಶ್ರಯಾವನತೋಽಪೃಚ್ಛದ್ ವೃದ್ಧಾನ್ ನಂದಪುರೋಗಮಾನ್ ॥**

**ಕಥ್ಯತಾಂ ಮೇ ಪಿತಃ ಕೋಽಯಂ ಸಂಭ್ರಮೋ ವ ಉಪಾಗತಃ ।**
**ಕಿಂ ಫಲಂ ಕಸ್ಯ ಚೋದ್ದೇಶಃ ಕೇನ ವಾ ಸಾಧ್ಯತೇ ಮಖಃ ॥ ೩**

**ಏತದ್ ಬ್ರೂಹಿ ಮಹಾನ್ ಕಾಮೋ ಮಹ್ಯಂ ಶುಶ್ರೂಷವೇ ಪಿತಃ ।**
**ನ ಹಿ ಗೋಪ್ಯಂ ಹಿ ಸಾಧೂನಾಂ ಕೃತ್ಯಂ ಸರ್ವಾತ್ಮನಾಮಿಹ ॥ ೪**

### ಅಧ್ಯಾಯ ೨೪

ಇಂದ್ರನಿಗಾಗಿ ಉದ್ದೇಶಿಸಿದ ಉತ್ಸವವನ್ನು ನಿಲ್ಲಿಸುವುದು

ಶ್ರೀಕೃಷ್ಣನು ಬಲದೇವಸಹಿತನಾಗಿ ಯಮುನೋಪವನದಲ್ಲಿಯೇ ಇರುವಾಗ, ಗೋಪವೃದ್ಧರು ಇಂದ್ರಪೂಜೋತ್ಸವಕ್ಕಾಗಿ ಪ್ರಯತ್ನಿಸುತ್ತಿರುವುದನ್ನು ಕಂಡನು (೧). ಸರ್ವಾತ್ಮನೂ ಸರ್ವಜ್ಞನೂ ಆದ ಅವನಿಗೆ ಅದೆಲ್ಲವೂ ಗೊತ್ತಿದ್ದರೂ ನಂದಗೋಪನೇ ಮೊದಲಾದ ಹಿರಿಯ ಗೋಪಾಲರ ಬಳಿಗೆ ಹೋಗಿ ವಿನಯಪೂರ್ವಕವಾಗಿ ಹೀಗೆ ಕೇಳಿದನು (೨). "ಅಪ್ಪ, ನಿಮ್ಮೆಲ್ಲರಿಗೂ ಯಾವುದೋ ಸಂಭ್ರಮಕಾಲವು ಬಂದಂತೆ ಕಾಣುವುದಲ್ಲ, ಇದೇನು ? ಹೇಳಬೇಕು. ಇದು ಯಜ್ಞವಿಷಯಕವಾಗಿದ್ದರೆ ಈ ಯಜ್ಞಕ್ಕೆ ಫಲವೇನು? ಉದ್ದಿಷ್ಟ ದೇವತೆ ಯಾವುದು ? ಯಾರು ಇದನ್ನು ಮಾಡತಕ್ಕವರು ? (೩). ತಂದೆ, ಇದನ್ನು ಕೇಳಬೇಕೆಂದು ನನಗೆ ಬಹಳ ಆಸೆಯಾಗಿದೆ. ಇದನ್ನು ಹೇಳು. ಸರ್ವಾತ್ಮದೃಷ್ಟಿಯುಳ್ಳ ಸಜ್ಜನರಿಗೆ ಮರೆಮಾಚಬೇಕಾದದ್ದೇನೂ ಇಲ್ಲವಷ್ಟೆ ? ನಾನು–ಅವನು ಎಂಬ ಭೇದದೃಷ್ಟಿಯಿಲ್ಲದವರಿಗೆ ಮಿತ್ರ ಉದಾಸೀನ ಶತ್ರುಗಳು

ಅಸ್ತ್ಯಸ್ವಪರದೃಷ್ಟೀನಾಮಮಿತ್ರೋದಾಸ್ತವಿದ್ವಿಷಾಮ್ ।
ಉದಾಸೀನೋಽರಿವದ್ ವರ್ಜ್ಯ ಆತ್ಮವತ್ ಸುಹೃದುಚ್ಯತೇ ॥ ೫

ಜ್ಞಾತ್ವಾಜ್ಞಾತ್ವಾ ಚ ಕರ್ಮಾಣಿ ಜನೋಽಯಮನುತಿಷ್ಠತಿ ।
ವಿದುಷಃ ಕರ್ಮಸಿದ್ಧಿಃ ಸ್ಯಾತ್ತಥಾ ನಾವಿದುಷೋ ಭವೇತ್ ॥ ೬

ತತ್ರ ತಾವತ್ ಕ್ರಿಯಾಯೋಗೋ ಭವತಾಂ ಕಿಂ ವಿಚಾರಿತಃ ।
ಅಥವಾ ಲೌಕಿಕಸ್ತನ್ಮೇ ಪೃಚ್ಛತಃ ಸಾಧು ಭಣ್ಯತಾಮ್ ॥ ೭

ನಂದ ಉವಾಚ—
ಪರ್ಜನ್ಯೋ ಭಗವಾನಿಂದ್ರೋ ಮೇಘಾಸ್ತಸ್ಯಾತ್ಮಮೂರ್ತಯಃ ।
ತೇಽಭಿವರ್ಷಂತಿ ಭೂತಾನಾಂ ಪ್ರೀಣನಂ ಜೀವನಂ ಪಯಃ ॥ ೮

ತಂ ತಾತ ವಯಮನ್ಯೇ ಚ ವಾರ್ಮುಚಾಂ ಪತಿಮೀಶ್ವರಮ್ ।
ದ್ರವ್ಯೈಸ್ತದ್ರೇತಸಾ ಸಿದ್ಧೈರ್ಯಜಂತೇ ಕ್ರತುಭಿರ್ನರಾಃ ॥ ೯

---

ಇಲ್ಲವಾದ್ದರಿಂದ, ಗೋಪ್ಯವಾದುದೂ ಇರುವುದಿಲ್ಲ. (ಭೇದದೃಷ್ಟಿ ಇದ್ದವರಿಗೂ ಸಹ) ಉದಾಸೀನನು ವೈರಿಯಂತೆ ವರ್ಜನೀಯನಾಗುವನು. ಆದರೆ ಮಿತ್ರನನ್ನು ಮಾತ್ರ ತನ್ನಂತೆಯೇ ಕಾಣಬೇಕು (೪–೫). ಜನರು ತಿಳಿದೋ ತಿಳಿಯದೆಯೋ ಕರ್ಮವನ್ನು ಆಚರಿಸುತ್ತಿರುವರು. ಆದರೆ ತಿಳಿದು ಮಾಡತಕ್ಕವನಿಗೆ ಕರ್ಮಫಲವು ಸಿದ್ಧಿಸುವುದೇ ಹೊರತು, ತಿಳಿಯದೆ ಮಾಡತಕ್ಕವನಿಗಲ್ಲ (೬). ಹೀಗಿರುವಾಗ ನಿಮ್ಮ ಈ ಕಾರ್ಯವು ಶಾಸ್ತ್ರದಿಂದ ವಿಚಾರಿತವಾಗಿ ಕೈಗೊಂಡುದೆ? ಅಥವಾ ಲೋಕಾಚಾರದಿಂದ ಪ್ರವೃತ್ತವಾದುದೆ? ಇದನ್ನು ಕೇಳುತ್ತಿರುವ ನನಗೆ ಸರಿಯಾಗಿ ಹೇಳೋಣವಾಗಲಿ" ಎಂದನು (೭). ಆಗ ನಂದಗೋಪನು ಹೀಗೆಂದನು : "ವತ್ಸ, ಪರ್ಜನ್ಯನು ಭಗವಾನ್ ಇಂದ್ರನಾಗಿದ್ದಾನೆ. ಮೋಡಗಳು ಆತನಿಗೆ ಪ್ರಿಯವಾದ ಮೂರ್ತಿವಿಶೇಷಗಳು. ಪ್ರಾಣಿಗಳಿಗೆ ಆಪ್ಯಾಯನಕರವೂ ಜೀವನಾಧಾರವೂ ಆದ ಜಲವನ್ನು ಅವು ಸುರಿಸುತ್ತವೆ (೮). ಆ ಮೋಡಗಳ ಒಡೆಯನೂ ನಿಯಾಮಕನೂ ಆದ ಇಂದ್ರನನ್ನು, ಮಗು, ನಾವು ಅರ್ಚಿಸುತ್ತೇವೆ. ಆತನ ವೀರ್ಯದಿಂದಲೇ—ಅವನು ಕೊಟ್ಟ ನೀರಿನಿಂದಲೇ ಬೆಳೆದ ವಸ್ತುಗಳಿಂದ ಜನರು ಯಜ್ಞಗಳ ಮೂಲಕ ಇಂದ್ರನನ್ನು

**ತಚ್ಛೇಷೇಣೋಪಜೀವಂತಿ ತ್ರಿವರ್ಗಫಲಹೇತವೇ ।**
**ಪುಂಸಾಂ ಪುರುಷಕಾರಾಣಾಂ ಪರ್ಜನ್ಯಃ ಫಲಭಾವನಃ ॥ ೧೦**

**ಯ ಏವಂ ವಿಸೃಜೇದ್ ಧರ್ಮಂ ಪಾರಂಪರ್ಯಾಗತಂ ನರಃ ।**
**ಕಾಮಾಲ್ಲೋಭಾದ್ಭಯಾದ್ ದ್ವೇಷಾತ್ ಸ ವೈ ನಾಪ್ನೋತಿ ಶೋಭನಮ್ ॥ ೧೧**

ಶ್ರೀಶುಕ ಉವಾಚ—

**ವಚೋ ನಿಶಮ್ಯ ನಂದಸ್ಯ ತಥಾನ್ಯೇಷಾಂ ವ್ರಜೌಕಸಾಮ್ ।**
**ಇಂದ್ರಾಯ ಮನ್ಯುಂ ಜನಯನ್ ಪಿತರಂ ಪ್ರಾಹ ಕೇಶವಃ ॥ ೧೨**

ಶ್ರೀಭಗವಾನುವಾಚ—

**ಕರ್ಮಣಾ ಜಾಯತೇ ಜಂತುಃ ಕರ್ಮಣೈವ ವಿಲೀಯತೇ ।**
**ಸುಖಂ ದುಃಖಂ ಭಯಂ ಕ್ಷೇಮಂ ಕರ್ಮಣೈವಾಭಿಪದ್ಯತೇ ॥ ೧೩**

**ಅಸ್ತಿ ಚೇದೀಶ್ವರಃ ಕಶ್ಚಿತ್ ಫಲರೂಪ್ಯನ್ಯಕರ್ಮಣಾಮ್ ।**
**ಕರ್ತಾರಂ ಭಜತೇ ಸೋಽಪಿ ನ ಹ್ಯಕರ್ತುಃ ಪ್ರಭುರ್ಹಿ ಸಃ ॥ ೧೪**

---

ಪೂಜಿಸುತ್ತಾರೆ (೯). ಉಳಿದ ವಸ್ತುಗಳಿಂದ ಧರ್ಮಾರ್ಥಕಾಮಗಳೆಂಬ ತ್ರಿವರ್ಗದ ಸಾಧನೆಗಾಗಿ ಜನರು ಜೀವನವನ್ನು ಸಾಗಿಸುತ್ತಾರೆ. ಮನುಷ್ಯರ ಪ್ರಯತ್ನಗಳಿಗೆಲ್ಲ ಪರ್ಜನನೇ ಫಲವನ್ನು ದೊರಕಿಸತಕ್ಕವನು (೧೦). ಇದು ನಮಗೆ ಪರಂಪರೆಯಿಂದ ಬಂದ ಧರ್ಮ. ಕಾಮಲೋಭಗಳಿಂದಲೋ ಭಯದ್ವೇಷಗಳಿಂದಲೋ ಈ ಧರ್ಮಕಾರ್ಯವನ್ನು ಕೈಬಿಟ್ಟರೆ, ಮನುಷ್ಯನಿಗೆ ಶ್ರೇಯಸ್ಸಾಗದು (೧೧). ಹೀಗೆ ನಂದನೂ ಇನ್ನಿತರ ವ್ರಜನಿವಾಸಿಗಳೂ ಹೇಳಿದ ಮಾತನ್ನು ಕೇಳಿ ಕೇಶವನು ಹೇಳಿದನು. ಅವನ ನುಡಿ ಇಂದ್ರನಿಗೆ ಕೋಪವನ್ನುಂಟುಮಾಡತಕ್ಕದ್ದಾಗಿತ್ತು (೧೨). ಭಗವಂತನು ಹೇಳಿದ್ದೇನೆಂದರೆ: "ಜೀವಿಯು ಕರ್ಮದಿಂದ ಹುಟ್ಟುತ್ತಾನೆ. ಕರ್ಮದಿಂದಲೇ ಲಯಗೊಳ್ಳುತ್ತಾನೆ. ಸುಖ, ದುಃಖ, ಭಯ, ಕ್ಷೇಮ—ಎಲ್ಲವೂ ಕರ್ಮದಿಂದಲೇ ಪ್ರಾಪ್ತವಾಗುತ್ತವೆ (೧೩). ಅನ್ಯರ ಕರ್ಮಗಳಿಗೆ ತಕ್ಕ ಫಲವನ್ನು ಕೊಡುವ ಈಶ್ವರನೊಬ್ಬನು ಇರುವುದಾದರೆ, ಅವನೂ ಸಹ ಫಲವನ್ನು ನೀಡಲು ಕರ್ತೃವಾದ ಕರ್ಮವನ್ನು ಆಶ್ರಯಿಸಲೇಬೇಕಾಗುತ್ತದೆ. ಕರ್ಮವಿಲ್ಲದೆ ಈಶ್ವರನು

ಕಿಮಿಂದ್ರೇಣೇಹ ಭೂತಾನಾಂ ಸ್ವಸ್ವಕರ್ಮಾನುವರ್ತಿನಾಮ್ ।
ಅನೀಶೇನಾನ್ಯಥಾ ಕರ್ತುಂ ಸ್ವಭಾವವಿಹಿತಂ ನೃಣಾಮ್ ॥ ೧೫

ಸ್ವಭಾವತಂತ್ರೋ ಹಿ ಜನಃ ಸ್ವಭಾವಮನುವರ್ತತೇ ।
ಸ್ವಭಾವಸ್ಥಮಿದಂ ಸರ್ವಂ ಸದೇವಾಸುರಮಾನುಷಮ್ ॥ ೧೬

ದೇಹಾನುಚ್ಚಾವಚಾನ್ ಜಂತುಃ ಪ್ರಾಪ್ಯೋತ್ಸೃಜತಿ ಕರ್ಮಣಾ ।
ಶತ್ರುರ್ಮಿತ್ರಮುದಾಸೀನಃ ಕರ್ಮೈವ ಗುರುರೀಶ್ವರಃ ॥ ೧೭

ತಸ್ಮಾತ್ ಸಂಪೂಜಯೇತ್ ಕರ್ಮ ಸ್ವಭಾವಸ್ಥಃ ಸ್ವಕರ್ಮಕೃತ್ ।
ಅಂಜಸಾ ಯೇನ ವರ್ತೇತ ತದೇವಾಸ್ಯ ಹಿ ದೈವತಮ್ ॥ ೧೮

ಆಜೀವ್ಯೈಕತರಂ ಭಾವಂ ಯಸ್ತ್ವನ್ಯಮುಪಜೀವತಿ ।
ನ ತಸ್ಮಾದ್ ವಿಂದತೇ ಕ್ಷೇಮಂ ಜಾರಂ ನಾರ್ಯಸತೀ ಯಥಾ ॥ ೧೯

ವರ್ತೇತ ಬ್ರಹ್ಮಣಾ ವಿಪ್ರೋ ರಾಜನ್ಯೋ ರಕ್ಷಯಾ ಭುವಃ ।
ವೈಶ್ಯಸ್ತು ವಾರ್ತಯಾ ಜೀವೇಚ್ಛೂದ್ರಸ್ತು ದ್ವಿಜಸೇವಯಾ ॥ ೨೦

---

ಫಲವನ್ನು ಕೊಡಲು ಸಮರ್ಥನಲ್ಲವಷ್ಟೆ (೧೪). ಜೀವಿಗಳು ತಮ್ಮ ತಮ್ಮ ಕರ್ಮಗಳನ್ನನುಸರಿಸಿ ಹೋಗುತ್ತಿರುವಾಗ ಇಂದ್ರನಿಂದಾಗಬೇಕಾದ್ದೇನು? ಜನರ ಪ್ರಾಚೀನಕರ್ಮವನ್ನು ಬದಲಾಯಿಸಲು ಅಶಕ್ತನಾದ ಇಂದ್ರನಿಂದೇನು? (೧೫). ಜನರು ಪ್ರಾಕ್ತನ ಸಂಸ್ಕಾರಕ್ಕೆ ಅನುಗುಣವಾಗಿ ಸ್ವಭಾವಸಿದ್ಧಕರ್ಮವನ್ನಾಚರಿಸುತ್ತಾರೆ. ದೇವಾಸುರಮಾನುಷವಾದ ಈ ಜಗತ್ತೆಲ್ಲವೂ ಸ್ವಭಾವದಲ್ಲಿ ನಿಂತಿದೆ (೧೬). ಜೀವಿಯು ತನ್ನ ಕರ್ಮಾನುಗುಣವಾಗಿ ನಾನಾ ಬಗೆಯ ದೇಹಗಳನ್ನು ಪಡೆಯುತ್ತಾನೆ; ಬಿಡುತ್ತಾನೆ. ಕರ್ಮವೇ ಗುರು; ಕರ್ಮವೇ ಈಶ್ವರ. ಅವನು ಶತ್ರುವೂ ಹೌದು. ಮಿತ್ರನೂ ಹೌದು. ಉದಾಸೀನನೂ ಹೌದು (೧೭). ಆದ್ದರಿಂದ ಮನುಷ್ಯನು ಸ್ವಭಾವನಿಷ್ಠನಾಗಿ ಸ್ವಕರ್ಮಗಳನ್ನಾಚರಿಸುತ್ತ ಕರ್ಮವನ್ನು ಗೌರವಿಸಬೇಕು. ಯಾವುದು ಸಮಂಜಸವಾಗಿ ಹೊಂದಿಕೊಳ್ಳುತ್ತದೆಯೋ ಅದೇ ಇವನಿಗೆ ದೇವರು! (೧೮). ಒಂದು ವಸ್ತುವಿನಿಂದ ಬದುಕಿ ಇನ್ನೊಂದನ್ನು ಆಶ್ರಯಿಸಲು ಹೊರಟರೆ ಅದರಿಂದ ಕ್ಷೇಮವಾಗದು. ಕುಲಟೆಯು ಜಾರನನ್ನು ಆಶ್ರಯಿಸಿದಂತಾಗುತ್ತದೆ! (೧೯). ಬ್ರಾಹ್ಮಣನು ವೇದಾಧ್ಯಾಪನಾದಿಗಳಿಂದಲೂ ಕ್ಷತ್ರಿಯನು ರಾಜ್ಯಪಾಲನೆ

**ಕೃಷಿವಾಣಿಜ್ಯಗೋರಕ್ಷಾ ಕುಸೀದಂ ತುರ್ಯಮುಚ್ಯತೇ ।**
**ವಾರ್ತಾ ಚತುರ್ವಿಧಾ ತತ್ರ ವಯಂ ಗೋವೃತ್ತಯೋಽನಿಶಮ್ ॥ ೨೧**

**ಸತ್ತ್ವಂ ರಜಸ್ತಮ ಇತಿ ಸ್ಥಿತ್ಯುತ್ಪತ್ತ್ಯಂತಹೇತವಃ ।**
**ರಜಸೋತ್ಪದ್ಯತೇ ವಿಶ್ವಮನ್ಯೋನ್ಯಂ ವಿವಿಧಂ ಜಗತ್ ॥ ೨೨**

**ರಜಸಾ ಚೋದಿತಾ ಮೇಘಾ ವರ್ಷಂತ್ಯಂಬೂನಿ ಸರ್ವತಃ ।**
**ಪ್ರಜಾಸ್ತೈರೇವ ಸಿದ್ಧ್ಯಂತಿ ಮಹೇಂದ್ರಃ ಕಿಂ ಕರಿಷ್ಯತಿ ॥ ೨೩**

**ನ ನಃ ಪುರೋ ಜನಪದಾ ನ ಗ್ರಾಮಾ ನ ಗೃಹಾ ವಯಮ್ ।**
**ನಿತ್ಯಂ ವನೌಕಸಸ್ತಾತ ವನಶೈಲನಿವಾಸಿನಃ ॥ ೨೪**

**ತಸ್ಮಾದ್ ಗವಾಂ ಬ್ರಾಹ್ಮಣಾನಾಮದ್ರೇಶ್ಚಾರಭ್ಯತಾಂ ಮಖಃ ।**
**ಯ ಇಂದ್ರಯಾಗಸಂಭಾರಾಸ್ತೈರಯಂ ಸಾಧ್ಯತಾಂ ಮಖಃ ॥ ೨೫**

**ಪಚ್ಯಂತಾಂ ವಿವಿಧಾಃ ಪಾಕಾಃ ಸೂಪಾಂತಾಃ ಪಾಯಸಾದಯಃ ।**
**ಸಂಯಾವಾಪೂಪಶಷ್ಕುಲ್ಯಃ ಸರ್ವದೋಹಶ್ಚ ಗೃಹ್ಯತಾಮ್ ॥ ೨೬**

---

ಯಿಂದಲೂ ವೈಶ್ಯನು ವಾರ್ತೆಯಿಂದಲೂ ಶೂದ್ರನು ದ್ವಿಜಸೇವೆಯಿಂದಲೂ ಜೀವಿಸಬೇಕು (೨೦). ವಾರ್ತೆಯು ಕೃಷಿ ಗೋರಕ್ಷ ವಾಣಿಜ್ಯವೆಂದೂ ನಾಲ್ಕನೆಯದಾಗಿ ಹಣಕ್ಕೆ ಬಡ್ಡಿಯನ್ನು ಸ್ವೀಕರಿಸುವುದೆಂದೂ ಒಟ್ಟು ಚತುರ್ವಿಧವಾಗಿದೆ. ಅದರಲ್ಲಿ ನಾವು ಸದಾ ಗೋರಕ್ಷಣವೃತ್ತಿಯವರು (೨೧). ಸತ್ತ್ವ ರಜಸ್ತಮೋಗುಣಗಳು ಕ್ರಮವಾಗಿ ಸ್ಥಿತಿ ಉತ್ಪತ್ತಿ ಲಯಗಳಿಗೆ ಕಾರಣಗಳು. ರಜೋಗುಣದಿಂದ ಅನ್ಯೋನ್ಯಸಂಬಂಧವುಂಟಾಗಿ ವಿವಿಧ ರೂಪದ ಸಕಲ ಜಗತ್ತೂ ಹುಟ್ಟುತ್ತದೆ (೨೨). ರಜೋಗುಣದಿಂದ ಪ್ರೇರಿತವಾದ ಮೇಘಗಳು ಮಳೆ ಸುರಿಸುತ್ತವೆ. ಪ್ರಜೆಗಳು ಅದರಿಂದ ಜೀವಿಸುತ್ತಾರೆ. ದೇವೇಂದ್ರನು ಮಾಡುವುದೇನು? ಓ ತಂದೆ, ನಮಗೆ ಪಟ್ಟಣಗಳಿಲ್ಲ, ದೇಶವಿಲ್ಲ, ಗ್ರಾಮಗಳಿಲ್ಲ, ಮನೆಗಳಿಲ್ಲ. ಕಾಡುಮೇಡುಗಳಲ್ಲಿರುವ ವನವಾಸಿಗಳು ನಾವು! (೨೪). ಆದ್ದರಿಂದ ಗೋಬ್ರಾಹ್ಮಣರಿಗಾಗಿ ಬೆಟ್ಟಕ್ಕಾಗಿ ಉತ್ಸವವನ್ನು ಆಚರಿಸೋಣ. ಇಂದ್ರಯಜ್ಞಕ್ಕಾಗಿ ತಂದ ಸಾಮಗ್ರಿಗಳಿಂದಲೇ ಈ ಯಾಗವನ್ನು ನಡೆಸೋಣ (೨೫). ತೊವ್ವೆಯಿಂದ ಹಿಡಿದು ಪಾಯಸದವರೆಗೆ ನಾನಾವಿಧದ ಅಡಿಗೆಗಳು

**ಹೂಯಂತಾಮಗ್ನಯಃ ಸಮ್ಯಗ್ ಬ್ರಾಹ್ಮಣೈರ್ಬ್ರಹ್ಮವಾದಿಭಿಃ ।**
**ಅನ್ನಂ ಬಹುವಿಧಂ ತೇಭ್ಯೋ ದೇಯಂ ವೋ ಧೇನುದಕ್ಷಿಣಾಃ ॥ ೨೭**

**ಅನ್ಯೇಭ್ಯಶ್ಚಾ ಶ್ವಚಾಂಡಾಲಪತಿತೇಭ್ಯೋ ಯಥಾರ್ಹತಃ ।**
**ಯವಸಂ ಚ ಗವಾಂ ದತ್ತ್ವಾ ಗಿರಯೇ ದೀಯತಾಂ ಬಲಿಃ ॥ ೨೮**

**ಸ್ವಲಂಕೃತಾ ಭುಕ್ತವಂತಃ ಸ್ವನುಲಿಪ್ತಾಃ ಸುವಾಸಸಃ ।**
**ಪ್ರದಕ್ಷಿಣಂ ಚ ಕುರುತ ಗೋವಿಪ್ರಾನಲಪರ್ವತಾನ್ ॥ ೨೯**

**ಏತನ್ಮಮ ಮತಂ ತಾತ ಕ್ರಿಯತಾಂ ಯದಿ ರೋಚತೇ ।**
**ಅಯಂ ಗೋಬ್ರಾಹ್ಮಣಾದ್ರೀಣಾಂ ಮಹ್ಯಂ ಚ ದಯಿತೋ ಮಖಃ ॥**

ಶ್ರೀಶುಕ ಉವಾಚ—

**ಕಾಲಾತ್ಮನಾ ಭಗವತಾ ಶಕ್ರದರ್ಪಂ ಜಿಘಾಂಸತಾ ।**
**ಪ್ರೋಕ್ತಂ ನಿಶಮ್ಯ ನಂದಾದ್ಯಾಃ ಸಾಧ್ವಗೃಹ್ಣಂತ ತದ್ವಚಃ ॥ ೩೧**

---

ಸಿದ್ಧವಾಗಲಿ. ಸಂಯಾವ,* ಅಪೂಪ, ಚಕ್ಕುಲಿಗಳೂ ಎಲ್ಲ ಬಗೆಯ ಹಾಲು ಮೊಸರು ಮೊದಲಾದವೂ ಇರಲಿ (೨೬). ಬ್ರಹ್ಮವಾದಿಗಳಾದ ಬ್ರಾಹ್ಮಣರು ವಿಧಿಪೂರ್ವಕವಾಗಿ ಅಗ್ನಿಯಲ್ಲಿ ಹೋಮ ಮಾಡಲಿ. ಅವರಿಗೆ ನೀವು ಬಹುವಿಧ ವಾದ ಭೋಜ್ಯವನ್ನಿತ್ತು ಗೋದಾನ ಮಾಡಬೇಕು. ಅಲ್ಲದೆ ಚಂಡಾಲರಿಗೂ ಪತಿತರಿಗೂ ನಾಯಿಗಳಿಗೂ ಸಹ ಯಥಾಯೋಗ್ಯವಾಗಿ ಭೋಜನವನ್ನು ನೀಡಬೇಕು. ಹಸುಗಳಿಗೆ ಹುಲ್ಲನ್ನಿತ್ತು ಗೋವರ್ಧನಗಿರಿಗೆ ಬಲಿಯನ್ನರ್ಪಿಸುವು ದಾಗಲಿ (೨೭–೨೮). ಆಮೇಲೆ ಭೋಜನ ಮಾಡಿ ಅಲಂಕರಿಸಿಕೊಂಡು ಚಂದನಾದಿಗಳಿಂದ ಅನುಲಿಪ್ತರಾಗಿ, ಒಳ್ಳೆಯ ವಸ್ತ್ರವನ್ನು ಧರಿಸಿ ಗೋ-ಬ್ರಾಹ್ಮಣರಿಗೂ ಅಗ್ನಿಗೂ ಪರ್ವತಕ್ಕೂ ಪ್ರದಕ್ಷಿಣೆ ಮಾಡಿರಿ. ಅಪ್ಪ, ಇದು ನನ್ನ ಅಭಿಪ್ರಾಯ. ಸರಿ ಎನಿಸಿದರೆ ಮಾಡಿರಿ. ಇದು ಗೋಬ್ರಾಹ್ಮಣರಿಗೂ ಪರ್ವತಕ್ಕೂ **ನನಗೂ** ಪ್ರಿಯವಾದ ಯಜ್ಞ ಎಂದನು (೨೯–೩೦). ಕಾಲ ಸ್ವರೂಪನಾದ ಭಗವಂತನು ದೇವೇಂದ್ರನ ದರ್ಪವನ್ನು ಧ್ವಂಸಮಾಡಬೇಕೆಂಬ ಉದ್ದೇಶದಿಂದ ಹಾಗೆ ಹೇಳಿದನು. ಅದನ್ನು ಕೇಳಿ ನಂದನೇ ಮೊದಲಾದವರು ಆ ಮಾತು ಸರಿಯೆಂದು ಒಪ್ಪಿದರು (೩೧).

---

* ಸಂಯಾವ = ತುಪ್ಪ, ಹಾಲು, ಬೆಲ್ಲ, ಗೋಧಿಹಿಟ್ಟುಗಳಿಂದ ಮಾಡುವ ಒಂದು ಭಕ್ಷ್ಯ. ಅಪೂಪ = ವಡೆ, ಗಾರಿಗೆ, ಅತಿರಸ ಮೊದಲಾದದ್ದು.

**ತಥಾ ಚ ವ್ಯದಧುಃ ಸರ್ವಂ ಯಥಾಽಽಹ ಮಧುಸೂದನಃ ।**
**ವಾಚಯಿತ್ವಾ ಸ್ವಸ್ತ್ಯಯನಂ ತದ್ದ್ರವ್ಯೇಣ ಗಿರಿದ್ವಿಜಾನ್ ॥ ೩೨**

**ಉಪಹೃತ್ಯ ಬಲೀನ್ ಸರ್ವಾನಾದೃತಂ ಯವಸಂ ಗವಾಮ್ ।**
**ಗೋಧನಾನಿ ಪುರಸ್ಕೃತ್ಯ ಗಿರಿಂ ಚಕ್ರುಃ ಪ್ರದಕ್ಷಿಣಮ್ ॥ ೩೩**

**ಅನಾಂಸ್ಯನಡುದ್ಯುಕ್ತಾನಿ ತೇ ಚಾರುಹ್ಯ ಸ್ವಲಂಕೃತಾಃ ।**
**ಗೋಪ್ಯಶ್ಚ ಕೃಷ್ಣವೀರ್ಯಾಣಿ ಗಾಯಂತ್ಯಃ ಸದ್ವಿಜಾತಿಷಃ ॥ ೩೪**

**ಕೃಷ್ಣಸ್ತ್ವನ್ಯತಮಂ ರೂಪಂ ಗೋಪವಿಶ್ರಂಭಣಂ ಗತಃ ।**
**ಶೈಲೋಽಸ್ಮೀತಿ ಬ್ರುವನ್ ಭೂರಿ ಬಲಿಮಾದದ್ ಬೃಹದ್ವಪುಃ ॥ ೩೫**

**ತಸ್ಮೈ ನಮೋ ವ್ರಜಜನೈಃ ಸ ಚಕ್ರೇ ಆತ್ಮನಾಽಽತ್ಮನೇ ।**
**ಅಹೋ ಪಶ್ಯತ ಶೈಲೋಽಸೌ ರೂಪೀ ನೋಽನುಗ್ರಹಂ ವ್ಯಧಾತ್ ॥**

**ಏಷೋಽವಜಾನತೋ ಮರ್ತ್ಯಾನ್ ಕಾಮರೂಪೀ ವನೌಕಸಃ ।**
**ಹಂತಿ ಹ್ಯಸ್ಮೈ ನಮಸ್ಯಾಮಃ ಶರ್ಮಣೇ ಆತ್ಮನೋ ಗವಾಮ್ ॥ ೩೭**

---

ಹಾಗೆಯೇ ಮಧುಸೂದನನು ನುಡಿದಂತೆ ಎಲ್ಲವನ್ನೂ ನಡೆಸಿದರು. ಸ್ವಸ್ತ್ಯಯನವನ್ನು ಹೇಳಿಸಿ ಇಂದ್ರಯಜ್ಞಾರ್ಥವಾದ ಸಾಮಗ್ರಿಯಿಂದ ಗೋವರ್ಧನ ಗಿರಿಯನ್ನೂ ದ್ವಿಜರನ್ನೂ ಆದರಪೂರ್ವಕವಾಗಿ ಅರ್ಚಿಸಿದರು. ಹಸುಗಳಿಗೆ ಹುಲ್ಲನ್ನಿತ್ತರು. ಗೋವುಗಳನ್ನು ಮುಂದೆಮಾಡಿಕೊಂಡು ಬೆಟ್ಟಕ್ಕೆ ಪ್ರದಕ್ಷಿಣೆ ಮಾಡಿದರು (೩೨–೩೩). ಆಗ ಅವರು ಎತ್ತುಗಳನ್ನು ಹೂಡಿದ ಬಂಡಿಗಳನ್ನೇರಿದ್ದರು. ಗೋಪಿಯರು ಅಲಂಕರಿಸಿಕೊಂಡು ಶ್ರೀಕೃಷ್ಣನ ಶೌರ್ಯಕಾರ್ಯಗಳನ್ನು ಕುರಿತ ಹಾಡುಗಳನ್ನು ಹಾಡುತ್ತಿದ್ದರು. ಬ್ರಾಹ್ಮಣರು ಆಶೀರ್ವಾದ ಮಾಡುತ್ತಿದ್ದರು (೩೪). ಶ್ರೀಕೃಷ್ಣನಾದರೋ ಗೋಪರಿಗೆ ನಂಬಿಕೆಯನ್ನು ಹುಟ್ಟಿಸುವುದಕ್ಕಾಗಿ ಬೃಹದಾಕಾರದ ಇನ್ನೊಂದು ರೂಪವನ್ನು ಧರಿಸಿ ‘ನಾನು ಗೋವರ್ಧನಗಿರಿ!’ ಎಂದು ಹೇಳುತ್ತ, ಅವರು ಅರ್ಪಿಸಿದ ಪೂಜೆಯನ್ನು ಯಥೇಚ್ಛವಾಗಿ ಸ್ವೀಕರಿಸಿದನು (೩೫). ಗಿರಿರೂಪವಾಗಿ ಕಾಣಿಸಿದ ತನಗೇ ತಾನು ವ್ರಜವಾಸಿಗಳೊಡನೆ ಸೇರಿ ಇತ್ತ ನಮಸ್ಕಾರವನ್ನೂ ಮಾಡಿದನು! “ಅಬ್ಬಾ! ನೋಡಿರಿ. ಈ ಶೈಲವು ಶರೀರಧಾರಿಯಾಗಿ ನಮಗೆ ಅನುಗ್ರಹವನ್ನು ಮಾಡಿತು! ತನ್ನನ್ನು ಉಪೇಕ್ಷೆಮಾಡುವ ವನವಾಸಿಗಳಾದ ಜನರನ್ನು

ಇತ್ಯದ್ರಿಗೋದ್ವಿಜಮುಖಂ ವಾಸುದೇವಪ್ರಣೋದಿತಾಃ ।
ಯಥಾ ವಿಧಾಯ ತೇ ಗೋಪಾಃ ಸಹಕೃಷ್ಣಾ ವ್ರಜಂ ಯಯುಃ ॥ ೩೮

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತುರ್ವಿಂಶಾಧ್ಯಾಯಃ



ಈ ಶೈಲವು ಕಾಮರೂಪಿಯಾಗಿ (ಸರ್ಪಾದ್ಯಾಕೃತಿಯನ್ನು ಧರಿಸಿ) ಕೊಂದು ಬಿಡುತ್ತದೆ! ನಮಗೂ ಗೋವುಗಳಿಗೂ ಕ್ಷೇಮವಾಗಲೆಂದು ಇದಕ್ಕೆ ನಮಸ್ಕರಿಸೋಣ" ಎಂದು ನುಡಿದನು (೩೬–೩೭). ಈ ಪ್ರಕಾರವಾಗಿ ವಾಸುದೇವನಿಂದ ಪ್ರೇರಿತರಾದ ಗೋಪರು ಗಿರಿಗೂ ಗೋಬ್ರಾಹ್ಮಣರಿಗೂ ಯೋಗ್ಯವಾದ ಯಜ್ಞವನ್ನು ನಡೆಸಿ ಕೃಷ್ಣನೊಡನೆ ವ್ರಜಕ್ಕೆ ಹೋದರು* (೩೮).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತುನಾಲ್ಕನೆಯ ಅಧ್ಯಾಯ



---

* ಈ ಅಧ್ಯಾಯದಲ್ಲಿ ಹೇಳಿದ "ಕರ್ಮವೇ ಸಮರ್ಥವಾದದ್ದು, ಸ್ವಭಾವದಿಂದ ಜಗತ್ತು ನಡೆಯುತ್ತದೆ, ಕರ್ಮವು ಹೆಚ್ಚಿನದು, ಈಶ್ವರನು ಕರ್ಮಾಧೀನ, ಕರ್ಮವೇ ಕರ್ತೃ, ಕರ್ಮವೇ ದೇವತೆ" ಎಂಬೀ ಅಂಶಗಳು ಭಗವಂತನಿಗೆ ಸಂಮತವಾದವುಗಳಲ್ಲ. ಇಂದ್ರದರ್ಪಧ್ವಂಸವೇ ಹಾಗೆ ಹೇಳಿದುದರ ಉದ್ದೇಶ—ಎಂದು ಶ್ರೀಧರಸ್ವಾಮಿಗಳು ಬರೆದಿದ್ದಾರೆ.

## ಪಂಚವಿಂಶಾಧ್ಯಾಯಃ

ಶ್ರೀಶುಕ ಉವಾಚ—

**ಇಂದ್ರಸ್ತದಾಽಽತ್ಮನಃ ಪೂಜಾಂ ವಿಜ್ಞಾಯ ವಿಹತಾಂ ನೃಪ ।**
**ಗೋಪೇಭ್ಯಃ ಕೃಷ್ಣನಾಥೇಭ್ಯೋ ನಂದಾದಿಭ್ಯಶ್ಚುಕೋಪ ಸಃ ॥ ೧**

**ಗಣಂ ಸಾಂವರ್ತಕಂ ನಾಮ ಮೇಘಾನಾಂ ಚಾಂತಕಾರಿಣಾಮ್ ।**
**ಇಂದ್ರಃ ಪ್ರಾಚೋದಯತ್ ಕ್ರುದ್ಧೋ ವಾಕ್ಯಂ ಚಾಹೇಶಮಾನ್ಯುತ ॥**

**ಅಹೋ ಶ್ರೀಮದಮಾಹಾತ್ಮ್ಯಂ ಗೋಪಾನಾಂ ಕಾನನೌಕಸಾಮ್ ।**
**ಕೃಷ್ಣಂ ಮರ್ತ್ಯಮುಪಾಶ್ರಿತ್ಯ ಯೇ ಚಕ್ರುರ್ದೇವಹೇಲನಮ್ ॥ ೩**

**ಯಥಾಽದೃಢೈಃ ಕರ್ಮಮಯೈಃ ಕ್ರತುಭಿರ್ನಾಮನೌನಿಭೈಃ ।**
**ವಿದ್ಯಾಮಾನ್ವೀಕ್ಷಿಕೀಂ ಹಿತ್ವಾ ತಿತೀರ್ಷಂತಿ ಭವಾರ್ಣವಮ್ ॥ ೪**

### ಅಧ್ಯಾಯ ೨೫

ಕುಪಿತನಾದ ಇಂದ್ರನು ಘೋರವಾಗಿ ಮಳೆಗರೆಯಲು, ಶ್ರೀಕೃಷ್ಣನು
ಗೋವರ್ಧನಗಿರಿಯನ್ನು ಎತ್ತಿಹಿಡಿಯುವುದು

ಶುಕಮುನಿಗಳು ಹೇಳಿದರು: ಮಹಾರಾಜ, ತನ್ನ ಪೂಜೆಯು ಭಗ್ನವಾದುದನ್ನರಿತು ದೇವೇಂದ್ರನು, ಕೃಷ್ಣನೇ ರಕ್ಷಕನಾಗಿದ್ದ ನಂದಾದಿಗೋಪರ ಮೇಲೆ ಕೋಪಗೊಂಡನು (೧). ತಾನು ಈಶ್ವರನೆಂದು ಗರ್ವಿತನಾಗಿದ್ದ ಇಂದ್ರನು ಕ್ರುದ್ಧನಾಗಿ, ಪ್ರಳಯಕಾರಿಯಾದ ಸಂವರ್ತಕವೆಂಬ ಮೇಘಗಣವನ್ನು ಪ್ರಚೋದಿಸುತ್ತ ಹೀಗೆಂದನು: "ಕಾಡಿನಲ್ಲಿರುವ ಗೊಲ್ಲರಿಗೆ ಹಣದ ಕೊಬ್ಬು ಉಬ್ಬರಿಸಿದೆ. ಅಬ್ಬ! ಒಬ್ಬ ಮಾನವನಾದ ಕೃಷ್ಣನನ್ನು ನಂಬಿಕೊಂಡು ದೇವತೆಗಳಿಗೆ ಅವಮಾನವನ್ನು ಮಾಡಿದರು (೨-೩). ಆತ್ಮಾನುಸಂಧಾನದ ಬ್ರಹ್ಮವಿದ್ಯೆಯನ್ನುಲ್ಲಂಘಿಸಿ, ಹರಕುಮುರಕಾಗಿ ಹೆಸರಿಗೆ ಮಾತ್ರ ಹಡಗೆನಿಸಿದ ಕರ್ಮಮಯಯಾಗಗಳಿಂದ ಭವಸಾಗರವನ್ನು ದಾಟಲು ಬಯಸಿ

ವಾಚಾಲಂ ಬಾಲಿಶಂ ಸ್ತಬ್ಧಮಜ್ಞಂ ಪಂಡಿತಮಾನಿನಮ್ ।
ಕೃಷ್ಣಂ ಮರ್ತ್ಯಮುಪಾಶ್ರಿತ್ಯ ಗೋಪಾ ಮೇ ಚಕ್ರುರಪ್ರಿಯಮ್ ॥
ಏಷಾಂ ಶ್ರಿಯಾವಲಿಪ್ತಾನಾಂ ಕೃಷ್ಣೇನಾಧ್ಮಾಯಿತಾತ್ಮನಾಮ್ ।
ಧುನುತ ಶ್ರೀಮದಸ್ತಂಭಂ ಪಶೂನ್ ನಯತ ಸಂಕ್ಷಯಮ್ ॥ ೬

ಅಹಂ ಚೈರಾವತಂ ನಾಗಮಾರುಹ್ಯಾನುವ್ರಜೇ ವ್ರಜಮ್ ।
ಮರುದ್ಗಣೈರ್ಮಹಾವೀರ್ಯೈರ್ನಂದಗೋಷ್ಠಜಿಘಾಂಸಯಾ ॥ ೭

ಶ್ರೀಶುಕ ಉವಾಚ—

ಇತ್ಥಂ ಮಘವತಾಽಽಜ್ಞಪ್ತಾ ಮೇಘಾ ನಿರ್ಮುಕ್ತಬಂಧನಾಃ ।
ನಂದಗೋಕುಲಮಾಸಾರೈಃ ಪೀಡಯಾಮಾಸುರೋಜಸಾ ॥ ೮

ವಿದ್ಯೋತಮಾನಾ ವಿದ್ಯುದ್ಭಿಃ ಸ್ತನಂತಃ ಸ್ತನಯಿತ್ನುಭಿಃ ।
ತೀವ್ರೈರ್ಮರುದ್ಗಣೈರ್ನುನ್ನಾ ವವೃಷುರ್ಜಲಶರ್ಕರಾಃ ॥ ೯

ಸ್ಥೂಣಾಸ್ಥೂಲಾ ವರ್ಷಧಾರಾ ಮುಂಚತ್ಸ್ವಭ್ರೇಷ್ವಭೀಕ್ಷ್ಣಶಃ ।
ಜಲೌಘೈಃ ಪ್ಲಾವ್ಯಮಾನಾ ಭೂರ್ನಾದೃಶ್ಯತ ನತೋನ್ನತಮ್ ॥ ೧೦

---

ದಂತಾಯಿತು ! (೪). ತಾನು ಪಂಡಿತನೆಂದು ತಿಳಿದುಕೊಂಡಿರುವ ಅಜ್ಞನೂ ಉದ್ಧತನೂ ಮಾತಿನ ಮಲ್ಲನೂ ಮನುಷ್ಯಮಾತ್ರನೂ ಆದ ಕೃಷ್ಣನೆಂಬ ಹುಡುಗನ ಮಾತನ್ನು ಕೇಳಿಕೊಂಡು ಈ ಗೊಲ್ಲರು ನನಗೆ ಅಪ್ರಿಯವನ್ನು ಎಸಗಿದರು (೫). ಕೃಷ್ಣನಿಂದ ಉಬ್ಬಿಸಲ್ಪಟ್ಟ ಧನಬಲದಿಂದ ಉದ್ಧತರಾದ ಅವರ ಹಣದ ಕೊಬ್ಬನ್ನು ಇಳಿಸಿರಿ! ಅವರ ಪಶುಗಳನ್ನು ಕೊಂದುಹಾಕಿರಿ. ನಾನೂ ಸಹ ಐರಾವತಗಜವನ್ನೇರಿ ಮಹಾವೀರರಾದ ದೇವಗಣಗಳಿಂದ ಪರಿವೃತನಾಗಿ, ನಂದನ ಕೊಟ್ಟಿಗೆಯನ್ನು ಕುಟ್ಟಿಹಾಕುವುದಕ್ಕೋಸ್ಕರ ಬರುವೆನು!" (೬–೭). ಹೀಗೆ ದೇವೇಂದ್ರನಿಂದ ಆಜ್ಞಪ್ತರಾದ ಮೇಘಗಳು ಎಡೆತಡೆಯಿಲ್ಲದೆ ಹೊರಟು ತಮ್ಮ ತಮ್ಮ ಬಲವೆಲ್ಲವನ್ನೂ ಉಪಯೋಗಿಸಿ ಘನವೃಷ್ಟಿಗಳಿಂದ ನಂದಗೋಕುಲವನ್ನು ಪೀಡಿಸಿದವು (೮). ಮಿಂಚುಗಳಿಂದ ಬೆಳಗುತ್ತ ಗುಡುಗುಗಳಿಂದ ಗರ್ಜಿಸುತ್ತ ಬಿರುಗಾಳಿಗಳಿಂದ ತಳ್ಳಲ್ಪಟ್ಟ ಆಲಿಕಲ್ಲುಗಳನ್ನು ಸುರಿಸಿದವು. ಕಂಬಗಳಂತೆ ಸ್ಥೂಲವಾದ ವರ್ಷಧಾರೆಗಳನ್ನು ಮೋಡಗಳು ಮೇಲಿಂದಮೇಲೆ ಸುರಿಸುತ್ತಿರಲು, ಹಳ್ಳತಿಟ್ಟುಗಳಿಲ್ಲದೆ ತೇಲಿ

ಅತ್ಯಾಸಾರಾತಿವಾತೇನ ಪಶವೋ ಜಾತವೇಪನಾಃ ।
ಗೋಪಾ ಗೋಪ್ಯಶ್ಚ ಶೀತಾರ್ತಾ ಗೋವಿಂದಂ ಶರಣಂ ಯಯುಃ ॥

ಶಿರಃ ಸುತಾಂಶ್ಚ ಕಾಯೇನ ಪ್ರಚ್ಛಾದ್ಯಾಸಾರಪೀಡಿತಾಃ ।
ವೇಪಮಾನಾ ಭಗವತಃ ಪಾದಮೂಲಮುಪಾಯಯುಃ ॥ ೧೨

ಕೃಷ್ಣ ಕೃಷ್ಣ ಮಹಾಭಾಗ ತ್ವನ್ನಾಥಂ ಗೋಕುಲಂ ಪ್ರಭೋ ।
ತ್ರಾತುಮರ್ಹಸಿ ದೇವಾನ್ನಃ ಕುಪಿತಾದ್ ಭಕ್ತವತ್ಸಲ ॥ ೧೩

ಶಿಲಾವರ್ಷನಿಪಾತೇನ ಹನ್ಯಮಾನಮಚೇತನಮ್ ।
ನಿರೀಕ್ಷ್ಯ ಭಗವಾನ್ ಮೇನೇ ಕುಪಿತೇಂದ್ರಕೃತಂ ಹರಿಃ ॥ ೧೪

ಅಪರ್ತ್ವತ್ಯುಲ್ಬಣಂ ವರ್ಷಮತಿವಾತಂ ಶಿಲಾಮಯಮ್ ।
ಸ್ವಯಾಗೇ ವಿಹತೇಽಸ್ಮಾಭಿರಿಂದ್ರೋ ನಾಶಾಯ ವರ್ಷತಿ ॥ ೧೫

ತತ್ರ ಪ್ರತಿವಿಧಿಂ ಸಮ್ಯಗಾತ್ಮಯೋಗೇನ ಸಾಧಯೇ ।
ಲೋಕೇಶಮಾನಿನಾಂ ಮೌಢ್ಯಾದ್ಧರಿಷ್ಯೇ ಶ್ರೀಮದಂ ತಮಃ ॥ ೧೬

---

ಹೋಗುವಂತಿದ್ದ ಭೂಮಿ ಕಣ್ಣಿಗೆ ಕಾಣಿಸದಾಯಿತು (೯–೧೦). ಅತಿವೃಷ್ಟಿಯಿಂದಲೂ ಬಿರುಗಾಳಿಯಿಂದಲೂ ಪಶುಗಳು ನಡುಗಲಾರಂಭಿಸಿದವು. ಚಳಿಯಿಂದ ದಿಗ್ಭ್ರಾಂತರಾದ ಗೋಪಗೋಪಿಯರು ಗೋವಿಂದನಿಗೆ ಶರಣಾದರು (೧೧). ಮಳೆಯಿಂದ ಪೀಡಿತರಾದ ಅವರು ತಲೆಗೆ ಮುಸುಕು ಹಾಕಿ ಮಕ್ಕಳನ್ನು ಅವಚಿಕೊಂಡು ನಡುಗುತ್ತ ಭಗವಂತನ ಪಾದಮೂಲಕ್ಕೆ ಬಂದರು (೧೨). ಕೃಷ್ಣ, ಕೃಷ್ಣ, ಮಹಾತ್ಮ, ಈ ಗೋಕುಲಕ್ಕೆ ನೀನೇ ರಕ್ಷಕ. ಓ ಪ್ರಭು, ಭಕ್ತವತ್ಸಲ, ದೇವೇಂದ್ರನು ಕುಪಿತನಾಗಿದ್ದಾನೆ. ನೀನೇ ನಮ್ಮನ್ನು ಕಾಪಾಡಬೇಕು" ಎಂದರು (೧೩). ಬಂಡೆಗಳಂತಿರುವ ಆಲಿಕಲ್ಲುಗಳಿಂದ ಪ್ರಾಣಿಯೊಂದೂ ಉಳಿಯದಂತೆ ಹತವಾಗುತ್ತಿರುವುದನ್ನು ಗಮನಿಸಿ ಶ್ರೀಹರಿಯು 'ಓಹೊ, ಇದು ಕುಪಿತನಾದ ಇಂದ್ರನ ಕೃತ್ಯ!' ಎಂದು ತಿಳಿದಿದ್ದನು (೧೪). "ಇದು ವರ್ಷಾಕಾಲವಲ್ಲ. ಮಳೆ ಅತ್ಯುಲ್ಬಣವಾಗಿದೆ; ಬಿರುಗಾಳಿ ಬೀಸುತ್ತಿದೆ; ಆಲಿಕಲ್ಲು ಸುರಿಯುತ್ತಿದೆ. ತನ್ನ ಪೂಜೆಯು ನಮ್ಮಿಂದ ಭಗ್ನವಾಯಿತೆಂದು ಇಂದ್ರನು ನಮ್ಮ ನಾಶಕ್ಕಾಗಿ ಈ ಮಳೆಯನ್ನು ಸುರಿಸುತ್ತಿದ್ದಾನೆ! (೧೫). ಇದಕ್ಕೆ ಸರಿಯಾದ ಪ್ರತೀಕಾರವನ್ನು ಆತ್ಮಸಾಮರ್ಥ್ಯದಿಂದ ಸಾಧಿಸುವೆನು.

ನ ಹಿ ಸದ್ಭಾವಯುಕ್ತಾನಾಂ ಸುರಾಣಾಮೀಶವಿಸ್ಮಯಃ ।
ಮತ್ತೋಽಸತಾಂ ಮಾನಭಂಗಃ ಪ್ರಶಮಾಯೋಪಕಲ್ಪತೇ ॥ ೧೭
ತಸ್ಮಾನ್ಮಚ್ಛರಣಂ ಗೋಷ್ಠಂ ಮನ್ನಾಥಂ ಮತ್ಪರಿಗ್ರಹಮ್ ।
ಗೋಪಾಯೇ ಸ್ವಾತ್ಮಯೋಗೇನ ಸೋಽಯಂ ಮೇ ವ್ರತ ಆಹಿತಃ ॥
ಇತ್ಯುಕ್ತ್ವೈಕೇನ ಹಸ್ತೇನ ಕೃತ್ವಾ ಗೋವರ್ಧನಾಚಲಮ್ ।
ದಧಾರ ಲೀಲಯಾ ಕೃಷ್ಣಶ್ಛತ್ರಾಕಮಿವ ಬಾಲಕಃ ॥ ೧೯
ಅಥಾಹ ಭಗವಾನ್ ಗೋಪಾನ್ ಹೇಽಂಬ ತಾತ ವ್ರಜೌಕಸಃ ।
ಯಥೋಪಜೋಷಂ ವಿಶತ ಗಿರಿಗರ್ತಂ ಸಗೋಧನಾಃ ॥ ೨೦
ನ ತ್ರಾಸ ಇಹ ವಃ ಕಾರ್ಯೋ ಮದ್ಧಸ್ತಾದ್ರಿನಿಪಾತನೇ ।
ವಾತವರ್ಷಭಯೇನಾಲಂ ತತ್ತ್ರಾಣಂ ವಿಹಿತಂ ಹಿ ವಃ ॥ ೨೧
ತಥಾ ನಿರ್ವಿವಿಶುರ್ಗರ್ತಂ ಕೃಷ್ಣಾಶ್ವಾಸಿತಮಾನಸಾಃ ।
ಯಥಾವಕಾಶಂ ಸಧನಾಃ ಸವ್ರಜಾಃ ಸೋಪಜೀವಿನಃ ॥ ೨೨

---

ಮೌಢ್ಯದಿಂದ ನಾವೇ ಲೋಕೇಶ್ವರರೆಂದು ಭಾವಿಸಿರುವವರ ಐಶ್ವರ್ಯಮದವೆಂಬ ಅಜ್ಞಾನವನ್ನು ಹೋಗಲಾಡಿಸುವೆನು (೧೬). ಸದ್ಭಾವಯುಕ್ತರಾದ ದೇವತೆಗಳಿಗೆ ನಾನೇ ಈಶ್ವರನೆಂಬ ದುರಹಂಕಾರವಿರುವುದಿಲ್ಲ. ನನ್ನಿಂದ ದುರ್ಜನರ ಅಹಂಕಾರಭಂಗವಾದರೆ ಅದು ಶಾಂತಿಗೆ ಕಾರಣವಾಗುತ್ತದೆ (೧೭). ಆದ್ದರಿಂದ ನನಗೆ ಶರಣಾಗಿ, ನಾನು ರಕ್ಷಕನೆಂದು ನಂಬಿ, ನನ್ನನ್ನು ಆಶ್ರಯಿಸಿರುವ ಈ ಗೋಕುಲವನ್ನು ಆತ್ಮಸಾಮರ್ಥ್ಯದಿಂದ ರಕ್ಷಿಸುವೆನು. ಇದು ನಾನು ಹಿಡಿದಿರುವ ವ್ರತ" (೧೮). ಎಂದು ನುಡಿದು ಬಾಲಕನಾದ ಶ್ರೀಕೃಷ್ಣನು ಒಂದು ಕೈಯಿಂದ ಗೋವರ್ಧನಗಿರಿಯನ್ನು ನಾಯಿಕೊಡೆಯೋ ಎಂಬಂತೆ ಲೀಲಾಜಾಲವಾಗಿ ಕಿತ್ತು, ಎತ್ತಿಹಿಡಿದನು (೧೯). ಅನಂತರ ಭಗವಂತನು ಗೋಪಾಲರನ್ನುದ್ದೇಶಿಸಿ "ಓ ತಾಯಿ, ತಂದೆಯೆ, ವ್ರಜವಾಸಿಗಳೆ, ನಿಮ್ಮ ಗೋಧನಗಳೊಡನೆ ಈ ಬೆಟ್ಟದ ಕೆಳಗಿರುವ ಸಂದುಗಳಲ್ಲಿ ಸುಖವಾಗಿ ಸೇರಿಕೊಳ್ಳಿರಿ. ನನ್ನ ಕೈಯಿಂದ ಬೆಟ್ಟವು ಬಿದ್ದೀತೆಂದು ನೀವು ಹೆದರಬೇಕಾಗಿಲ್ಲ. ಗಾಳಿ ಮಳೆಗಳ ಭಯ ಬೇಡ. ನಿಮಗೆ ಅವುಗಳಿಂದ ರಕ್ಷಣೆಯನ್ನು ಕಲ್ಪಿಸಿದ್ದೇನೆ" ಎಂದು ಹೇಳಿದನು (೨೦–೨೧). ಕೃಷ್ಣನ ಮಾತಿನಿಂದ ಅವರ ಮನಸ್ಸಿಗೆ ನಂಬಿಕೆಯಾಯಿತು. ಎಲ್ಲರೂ ಹಣಕಾಸು, ಬಂಡಿ, ಪರಿವಾರಗಳೊಡನೆ ಬೆಟ್ಟದ ಗರ್ತವನ್ನು ಪ್ರವೇಶಿಸಿ

*

ಕ್ಷುತ್ತೃಡ್ವ್ಯಥಾಂ ಸುಖಾಪೇಕ್ಷಾಂ ಹಿತ್ವಾ ತೈರ್ವ್ರಜವಾಸಿಭಿಃ ।
ವೀಕ್ಷ್ಯಮಾಣೋ ದಧಾವದ್ರಿಂ ಸಪ್ತಾಹಂ ನಾಚಲತ್ ಪದಾತ್ ॥ ೨೩

ಕೃಷ್ಣಯೋಗಾನುಭಾವಂ ತಂ ನಿಶಾಮ್ಯೇಂದ್ರೋಽತಿವಿಸ್ಮಿತಃ ।
ನಿಃಸ್ತಂಭೋ ಭ್ರಷ್ಟಸಂಕಲ್ಪಃ ಸ್ವಾನ್ ಮೇಘಾನ್ ಸಂನ್ಯವಾರಯತ್

ಖಂ ವ್ಯಭ್ರಮುದಿತಾದಿತ್ಯಂ ವಾತವರ್ಷಂ ಚ ದಾರುಣಮ್ ।
ನಿಶಾಮ್ಯೋಪರತಂ ಗೋಪಾನ್ ಗೋವರ್ಧನಧರೋಽಬ್ರವೀತ್ ॥ ೨೫

ನಿರ್ಯಾತ ತ್ಯಜತ ತ್ರಾಸಂ ಗೋಪಾಃ ಸಸ್ತ್ರೀಧನಾರ್ಭಕಾಃ ।
ಉಪಾರತಂ ವಾತವರ್ಷಂ ವ್ಯುದಪ್ರಾಯಾಶ್ಚ ನಿಮ್ನಗಾಃ ॥ ೨೬

ತತಸ್ತೇ ನಿರ್ಯಯುರ್ಗೋಪಾಃ ಸ್ವಂ ಸ್ವಮಾದಾಯ ಗೋಧನಮ್ ।
ಶಕಟೋಢೋಪಕರಣಂ ಸ್ತ್ರೀಬಾಲಸ್ಥವಿರಾಃ ಶನೈಃ ॥ ೨೭

ಭಗವಾನಪಿ ತಂ ಶೈಲಂ ಸ್ವಸ್ಥಾನೇ ಪೂರ್ವವತ್ ಪ್ರಭುಃ ।
ಪಶ್ಯತಾಂ ಸರ್ವಭೂತಾನಾಂ ಸ್ಥಾಪಯಾಮಾಸ ಲೀಲಯಾ ॥ ೨೮

---

ಸುಖವಾಗಿದ್ದರು (೨೨). ಶ್ರೀಕೃಷ್ಣನು ಹಸಿವು ಬಾಯಾರಿಕೆಗಳ ಪೀಡೆಯನ್ನು ಲಕ್ಷಿಸದೆ ಸುಖಾಪೇಕ್ಷೆಯನ್ನು ತೊರೆದು, ವ್ರಜವಾಸಿಗಳು ನೋಡುತ್ತಿರಲು ಒಂದು ವಾರದವರೆಗೆ ಬೆಟ್ಟವನ್ನು ಎತ್ತಿಹಿಡಿದಿದ್ದನು. ತನ್ನ ಸ್ಥಳದಿಂದ ಸರಿಯಲಿಲ್ಲ (೨೩). ಶ್ರೀಕೃಷ್ಣನ ಯೋಗಸಾಮರ್ಥ್ಯವನ್ನು ಕಂಡು ಇಂದ್ರನು ಆಶ್ಚರ್ಯಚಕಿತನಾದನು. ಅವನ ದರ್ಪ ಇಳಿಯಿತು. ಉದ್ದೇಶವು ಈಡೇರಲಿಲ್ಲ. ಆಗ ತನ್ನ ಮೇಘಗಳನ್ನು ತಡೆದನು (೨೪). ಗಗನಮಂಡಲವು ಮೇಘಮುಕ್ತವಾದುದನ್ನೂ ಸೂರ್ಯನು ಉದಯಿಸಿರುವುದನ್ನೂ ದಾರುಣವಾದ ಬಿರುಗಾಳಿ ಮಳೆಗಳು ನಿಂತಿರುವುದನ್ನೂ ನೋಡಿ ಗೋವರ್ಧನಧಾರಿಯು ಗೋಪರನ್ನು ಕರೆದು "ಗೋಪಾಲರೆ, ನಿಮ್ಮ ಹೆಂಡಿರು ಮಕ್ಕಳು ಸಾಮಗ್ರಿಗಳೊಡನೆ ಇನ್ನು ಹೊರಗೆ ಬನ್ನಿರಿ. ಹೆದರಬೇಡಿರಿ. ಬಿರುಗಾಳಿಯೂ ಮಳೆಯೂ ನಿಂತಿದೆ. ಹೊಳೆಗಳಲ್ಲಿ ಸ್ವಲ್ಪವೇ ನೀರಿದೆ" ಎಂದು ನುಡಿದನು (೨೫—೨೬). ಅನಂತರ ಗೋಪರು ತಮ್ಮ ತಮ್ಮ ಗೋಧನವನ್ನು ತೆಗೆದುಕೊಂಡು ಬಂಡಿಗಳಲ್ಲಿ ಉಪಕರಣಗಳನ್ನು ಹೇರಿಕೊಂಡು ಹೊರಬಂದರು. ಹೆಂಗಸರು ಹುಡುಗರು ಮುದುಕರೂ ಮೆಲ್ಲಗೆ ಬಂದರು (೨೭). ಭಗವಂತನಾದ ಆ ಸ್ವಾಮಿಯು ಗೋವರ್ಧನಗಿರಿಯನ್ನು, ಸಕಲಜಂತುಗಳೂ ಕಣ್ಣುಬಿಟ್ಟು ನೋಡುತ್ತಿರಲು,

ತಂ ಪ್ರೇಮವೇಗಾನ್ನಿಭೃತಾ ವ್ರಜೌಕಸೋ
ಯಥಾ ಸಮೀಯುಃ ಪರಿರಂಭಣಾದಿಭಿಃ ।
ಗೋಪ್ಯಶ್ಚ ಸಸ್ನೇಹಮಪೂಜಯನ್ ಮುದಾ
ದಧ್ಯಕ್ಷತಾದ್ಭಿರ್ಯುಯುಜುಃ ಸದಾಶಿಷಃ ॥ ೨೯

ಯಶೋದಾ ರೋಹಿಣೀ ನಂದೋ ರಾಮಶ್ಚ ಬಲಿನಾಂ ವರಃ ।
ಕೃಷ್ಣಮಾಲಿಂಗ್ಯ ಯುಯುಜುರಾಶಿಷಃ ಸ್ನೇಹಕಾತರಾಃ ॥ ೩೦

ದಿವಿ ದೇವಗಣಾಃ ಸಾಧ್ಯಾಃ ಸಿದ್ಧಗಂಧರ್ವಚಾರಣಾಃ ।
ತುಷ್ಟುವುರ್ಮುಮುಚುಸ್ತುಷ್ಟಾಃ ಪುಷ್ಪವರ್ಷಾಣಿ ಪಾರ್ಥಿವ ॥ ೩೧

ಶಂಖದುಂದುಭಯೋ ನೇದುರ್ದಿವಿ ದೇವಪ್ರಣೋದಿತಾಃ ।
ಜಗುರ್ಗಂಧರ್ವಪತಯಸ್ತುಂಬುರುಪ್ರಮುಖಾ ನೃಪ ॥ ೩೨

ತತೋಽನುರಕ್ತೈಃ ಪಶುಪೈಃ ಪರಿಶ್ರಿತೋ
ರಾಜನ್ ಸ ಗೋಷ್ಠಂ ಸಬಲೋಽವ್ರಜದ್ಧರಿಃ ।

---

ಅದರ ಸ್ಥಾನದಲ್ಲಿ ಲೀಲೆಯಿಂದ ಸ್ಥಾಪಿಸಿದನು (೨೮). ವ್ರಜವಾಸಿಗಳು ಪ್ರೇಮಭರದಿಂದ ತುಳುಕುತ್ತ ಬಂದು ಶ್ರೀಕೃಷ್ಣನನ್ನು ಆಲಿಂಗನಾದಿಗಳಿಂದ ಸಂಭಾವಿಸಿದರು. ಸ್ನೇಹಪೂರ್ಣರಾದ ಗೋಪಿಯರು ಆನಂದದಿಂದ ಕೂಡಿ, ದಧಿ ಅಕ್ಷತೆ ಜಲಗಳಿಂದ ನಿವಾಳಿಸಿ ಆಶೀರ್ವದಿಸಿದರು (೨೯). ಸ್ನೇಹಕಾತರರಾದ ಯಶೋದೆ, ರೋಹಿಣಿ, ನಂದ, ಬಲರಾಮರು ಕೃಷ್ಣನನ್ನು ಅಪ್ಪಿಕೊಂಡು ಆಶೀರ್ವಾದಮಾಡಿದರು (೩೦). ಮಹಾರಾಜ, ಸ್ವರ್ಗದಲ್ಲಿ ದೇವತೆಗಳೂ ಸಾಧ್ಯ ಸಿದ್ಧ ಗಂಧರ್ವ ಚಾರಣರೂ ಸ್ತೋತ್ರಮಾಡಿದರು. ಸಂತುಷ್ಟರಾಗಿ ಹೂಮಳೆಗರೆದರು. ದೇವಲೋಕದಲ್ಲಿ ದೇವತೆಗಳು ಊದಿದ ಶಂಖಗಳೂ ಬಾರಿಸಿದ ದುಂದುಭಿಗಳೂ ಧ್ವನಿಗೈದವು. ಪರೀಕ್ಷಿತರಾಜ, ತುಂಬುರು ಮೊದಲಾದ ಗಂಧರ್ವಶ್ರೇಷ್ಠರು ಹಾಡಿದರು (೩೧–೩೨). ಗೋವರ್ಧನಗಿರಿಯ ಬಳಿಯಿಂದ ಶ್ರೀಹರಿಯು ಅನುರಕ್ತರಾದ ಗೋಪರಿಂದಲೂ ಬಲರಾಮನಿಂದಲೂ

ತಥಾವಿಧಾನ್ಯಸ್ಯ ಕೃತಾನಿ ಗೋಪಿಕಾ
ಗಾಯಂತ್ಯ ಈಯುರ್ಮುದಿತಾ ಹೃದಿಸ್ಪೃಶಃ ॥ ೩೩

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚವಿಂಶಾಧ್ಯಾಯಃ

---

## ಷಡ್ವಿಂಶಾಧ್ಯಾಯಃ

ಶ್ರೀಶುಕ ಉವಾಚ—

ಏವಂವಿಧಾನಿ ಕರ್ಮಾಣಿ ಗೋಪಾಃ ಕೃಷ್ಣಸ್ಯ ವೀಕ್ಷ್ಯ ತೇ ।
ಅತದ್ವೀರ್ಯವಿದಃ ಪ್ರೋಚುಃ ಸಮಭ್ಯೇತ್ಯ ಸುವಿಸ್ಮಿತಾಃ ॥ ೧

ಬಾಲಕಸ್ಯ ಯದೇತಾನಿ ಕರ್ಮಾಣ್ಯತ್ಯದ್ಭುತಾನಿ ವೈ ।
ಕಥಮರ್ಹತ್ಯಸೌ ಜನ್ಮ ಗ್ರಾಮ್ಯೇಷ್ವಾತ್ಮಜುಗುಪ್ಸಿತಮ್ ॥ ೨

---

ಸಹಿತನಾಗಿ ಹೊರಟನು. ಗೋಪಿಕೆಯರು ತಮ್ಮ ಹೃದಯವನ್ನು ಹೊಕ್ಕ ಆತನ ಅದ್ಭುತವಾದ ಚರಿತೆಗಳನ್ನು ಹರ್ಷದಿಂದ ಹಾಡುತ್ತ ಹೋದರು (೩೩).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತೈದನೆಯ ಅಧ್ಯಾಯ

---

## ಅಧ್ಯಾಯ ೨೬

ಶ್ರೀಕೃಷ್ಣನ ಅಮಾನುಷಕೃತ್ಯಗಳನ್ನು ಕಂಡು ಗೋಪರ ಅಚ್ಚರಿ.
ಅವರಿಗೆ ನಂದನು ಗರ್ಗರ ಉಕ್ತಿಯನ್ನು ತಿಳಿಸುವುದು

ಶ್ರೀಕೃಷ್ಣನ ಈ ಬಗೆಯ ಕಾರ್ಯಗಳನ್ನು ಕಂಡು ಅವನ ಸಾಮರ್ಥ್ಯವನ್ನರಿಯದ ಗೋಪಾಲರು ಆಶ್ಚರ್ಯಚಕಿತರಾಗಿ ನಂದಗೋಪನನ್ನು ಸಮೀಪಿಸಿ ನುಡಿದರು (೧): “ಹೇ ನಂದ, ಈ ಬಾಲಕನು ಅತ್ಯದ್ಭುತವಾದ ಕಾರ್ಯಗಳನ್ನು ನಡೆಸಿದ್ದಾನೆ. ಇವನು ಈ ಹಳ್ಳಿಗರ ನಡುವೆ ಇರಲು ಅನರ್ಹವಾದ

ಯಃ ಸಪ್ತಹಾಯನೋ ಬಾಲಃ ಕರೇಣೈಕೇನ ಲೀಲಯಾ ।
ಕಥಂ ಬಿಭ್ರದ್ ಗಿರಿವರಂ ಪುಷ್ಕರಂ ಗಜರಾಡಿವ ॥ ೩

ತೋಕೇನಾಮೀಲಿತಾಕ್ಷೇಣ ಪೂತನಾಯಾ ಮಹೌಜಸಃ ।
ಪೀತಃ ಸ್ತನಃ ಸಹ ಪ್ರಾಣೈಃ ಕಾಲೇನೇವ ವಯಸ್ತನೋಃ ॥ ೪

ಹಿನ್ವತೋಽಧಃ ಶಯಾನಸ್ಯ ಮಾಸ್ಯಸ್ಯ ಚರಣಾವುದಕ್ ।
ಅನೋಽಪತದ್ ವಿಪರ್ಯಸ್ತಂ ರುದತಃ ಪ್ರಪದಾಹತಮ್ ॥ ೫

ಏಕಹಾಯನ ಆಸೀನೋ ಹ್ರಿಯಮಾಣೋ ವಿಹಾಯಸಾ ।
ದೈತ್ಯೇನ ಯಸ್ತೃಣಾವರ್ತಮಹನ್ ಕಂಠಗ್ರಹಾತುರಮ್ ॥ ೬

ಕ್ವಚಿದ್ಧೈಯಂಗವಸ್ತೈನ್ಯೇ ಮಾತ್ರಾ ಬದ್ಧ ಉಲೂಖಲೇ ।
ಗಚ್ಛನ್ನರ್ಜುನಯೋರ್ಮಧ್ಯೇ ಬಾಹುಭ್ಯಾಂ ತಾವಪಾತಯತ್ ॥ ೭

ವನೇ ಸಂಚಾರಯನ್ ವತ್ಸಾನ್ ಸರಾಮೋ ಬಾಲಕೈರ್ವೃತಃ ।
ಹಂತುಕಾಮಂ ಬಕಂ ದೋರ್ಭ್ಯಾಂ ಮುಖತೋಽರಿಮುಪಾಟಯತ್ ॥

---

ಜನ್ಮವನ್ನು ಹೇಗೆ ಎತ್ತಿರಬಹುದು? ಏಳುವರ್ಷದ ಪೋರನು ಒಂದೇ ಕೈಯಿಂದ ಲೀಲಾಜಾಲವಾಗಿ ಗೋವರ್ಧನಗಿರಿಯನ್ನು ಹೇಗೆ ಎತ್ತಿಹಿಡಿದನು? ಗಜರಾಜನು ಕಮಲದ ಹೂವನ್ನು ಎತ್ತಿದಂತೆ ಎತ್ತಿ ಹೊತ್ತನಲ್ಲ! (೨–೩). ಆಗತಾನೇ ಕಣ್ದೆರೆದ ಶಿಶುವಾಗಿದ್ದಾಗ ಬಲಿಷ್ಠಳಾದ ಪೂತನೆಯ ಮೊಲೆಯನ್ನು ಪ್ರಾಣಸಹಿತವಾಗಿ, ಕಾಲವು ದೇಹದ ಆಯುಸ್ಸನ್ನು ಹೀರುವಂತೆ ಹೀರಿಬಿಟ್ಟಿದ್ದಾನೆ! (೪). ಮೂರು ತಿಂಗಳ ಮಗು ಅಂಗಾತನಾಗಿ ಮಲಗಿ ಕಾಲನ್ನು ಆಡಿಸಿದರೆ, ಕಾಲ್ತುದಿಯು ತಗುಲಿ ಬಂಡಿಯು ಉರುಳಿಬಿದ್ದುದು ಹೇಗೆ! (೫). ಒಂದು ವರ್ಷದ ಬಾಲಕನು ಕುಳಿತಿರುವಾಗ ತೃಣಾವರ್ತನೆಂಬ ದೈತ್ಯನು ಹಿಡಿದು ಆಕಾಶಮಾರ್ಗದಲ್ಲಿ ಸೆಳೆದೊಯ್ಯಲು, ಕತ್ತನ್ನು ಹಿಸುಕಬೇಕೆಂದಿದ್ದ ದೈತ್ಯನನ್ನೇ ಈ ಬಾಲಕನು ಕೊಂದುದು ಹೇಗೆ! (೬). ಒಂದು ಸಲ ಬೆಣ್ಣೆಯನ್ನು ಕದ್ದನೆಂದು ತಾಯಿ ಕೃಷ್ಣನನ್ನು ಒರಳಿಗೆ ಕಟ್ಟಿದಳಷ್ಟೆ. ಆಗ ಮತ್ತಿಮರಗಳ ನಡುವೆ ಕೈಗಳಿಂದ ಹರೆಯುತ್ತ ಹೋಗಿ ಆ ಮರಗಳನ್ನೇ ಉರುಳಿಸಿಬಿಟ್ಟಿದ್ದಾನೆ! (೭). ಗೋಪರಿಂದ ಪರಿವೃತನಾಗಿ ಬಲರಾಮನೊಡನೆ ವನದಲ್ಲಿ

ವತ್ಸೇಷು ವತ್ಸರೂಪೇಣ ಪ್ರವಿಶಂತಂ ಜಿಘಾಂಸಯಾ ।
ಹತ್ವಾ ನ್ಯಪಾತಯತ್ತೇನ ಕಪಿತ್ಥಾನಿ ಚ ಲೀಲಯಾ ॥ ೯

ಹತ್ವಾ ರಾಸಭದೈತೇಯಂ ತದ್ಬಂಧೂಂಶ್ಚ ಬಲಾನ್ವಿತಃ ।
ಚಕ್ರೇ ತಾಲವನಂ ಕ್ಷೇಮಂ ಪರಿಪಕ್ವಫಲಾನ್ವಿತಮ್ ॥ ೧೦

ಪ್ರಲಂಬಂ ಘಾತಯಿತ್ವೋಗ್ರಂ ಬಲೇನ ಬಲಶಾಲಿನಾ ।
ಅಮೋಚಯದ್ ವ್ರಜಪಶೂನ್ ಗೋಪಾಂಶ್ಚಾರಣ್ಯವಹ್ನಿತಃ ॥ ೧೧

ಆಶೀವಿಷತಮಾಹೀಂದ್ರಂ ದಮಿತ್ವಾ ವಿಮದಂ ಹ್ರದಾತ್ ।
ಪ್ರಸಹ್ಯೋದ್ವಾಸ್ಯ ಯಮುನಾಂ ಚಕ್ರೇಽಸೌ ನಿರ್ವಿಷೋದಕಾಮ್ ॥

ದುಸ್ತ್ಯಜಶ್ಚಾನುರಾಗೋಽಸ್ಮಿನ್ ಸರ್ವೇಷಾಂ ನೋ ವ್ರಜೌಕಸಾಮ್ ।
ನಂದ ತೇ ತನಯೇಽಸ್ಮಾಸು ತಸ್ಯಾಪ್ಯೌತ್ಪತ್ತಿಕಃ ಕಥಮ್ ॥ ೧೩

---

ಹಸುಗಳನ್ನು ಮೇಯಿಸುವಾಗ, ಕೊಲ್ಲಬೇಕೆಂದು ಬಂದ ವೈರಿಯಾದ ಬಕನನ್ನು, ಕೈಗಳಿಂದ ಕೊಕ್ಕನ್ನು ಹಿಡಿದು ಸೀಳಿ ಬಿಸುಟಿದ್ದಾನೆ (೮). ಕೊಲ್ಲುವ ಉದ್ದೇಶದಿಂದ ಕರುಗಳ ನಡುವೆ ಕರುವಿನ ರೂಪದಿಂದ ಪ್ರವೇಶಿಸುತ್ತಿದ್ದ ವತ್ಸಾಸುರನನ್ನು ಕೃಷ್ಣನು ಕೊಂದುಹಾಕಿದ್ದಾನೆ. ಅಲ್ಲದೆ ಲೀಲೆಯಿಂದ ಅವನ ದೇಹವನ್ನೆಸೆದು ಕಪಿತ್ಥಫಲಗಳನ್ನು ಉದುರಿಸಿದ್ದಾನೆ (೯). ರಾಸಭವೇಷದಿಂದ ಬಂದ ದೈತ್ಯನನ್ನೂ ಅವನ ಬಂಧುಗಳನ್ನೂ ಬಲರಾಮಸಹಿತನಾದ ಕೃಷ್ಣನು ಸಂಹರಿಸಿದ್ದಾನೆ. ತಾಳವನಕ್ಕೆ ಬಂದ ಉಪದ್ರವವನ್ನು ಹೋಗಲಾಡಿಸಿ ಅದನ್ನು ಪರಿಪಕ್ವಫಲಾನ್ವಿತವನ್ನಾಗಿ ಮಾಡಿದ್ದಾನೆ (೧೦). ಬಲಾಢ್ಯನಾದ ಬಲರಾಮನಿಂದ ಉಗ್ರನಾದ ಪ್ರಲಂಬಾಸುರನನ್ನು ಘಾತಿಸಿ, ಗೋವುಗಳನ್ನೂ ಗೋಪಾಲರನ್ನೂ ಕಾಳ್ಗಿಚ್ಚಿನಿಂದ ಪಾರುಮಾಡಿದ್ದಾನೆ (೧೧). ಘೋರವಿಷಸರ್ಪವಾದ ಕಾಳಿಯನ ಕೊಬ್ಬನ್ನಡಗಿಸಿ ಯಮುನೆಯ ಮಡುವಿನಿಂದ ಹೊರಕ್ಕೆ ದಬ್ಬಿ, ಯಮುನಾಜಲವನ್ನು ಈತನು ವಿಷರಹಿತವನ್ನಾಗಿ ಮಾಡಿದನು (೧೨). ಹೇ ನಂದಗೋಪ, ವ್ರಜವಾಸಿಗಳಾದ ನಮ್ಮೆಲ್ಲರಿಗೂ ನಿನ್ನ ಈ ಮಗನಲ್ಲಿ

ಕ್ವ ಸಪ್ತಹಾಯನೋ ಬಾಲಃ ಕ್ವ ಮಹಾದ್ರಿವಿಧಾರಣಮ್ ।
ತತೋ ನೋ ಜಾಯತೇ ಶಂಕಾ ವ್ರಜನಾಥ ತವಾತ್ಮಜೇ ॥ ೧೪

ನಂದ ಉವಾಚ—

ಶ್ರೂಯತಾಂ ಮೇ ವಚೋ ಗೋಪಾ ವ್ಯೇತುಶಂಕಾ ಚ ವೋಽರ್ಭಕೇ
ಏನಂ ಕುಮಾರಮುದ್ದಿಶ್ಯ ಗರ್ಗೋ ಮೇ ಯದುವಾಚ ಹ ॥ ೧೫

ವರ್ಣಾಸ್ತ್ರಯಃ ಕಿಲಾಸ್ಯಾಸನ್ ಗೃಹ್ಣತೋಽನುಯುಗಂ ತನೂಃ ।
ಶುಕ್ಲೋ ರಕ್ತಸ್ತಥಾ ಪೀತ ಇದಾನೀಂ ಕೃಷ್ಣತಾಂ ಗತಃ ॥ ೧೬

ಪ್ರಾಗಯಂ ವಸುದೇವಸ್ಯ ಕ್ವಚಿಜ್ಜಾತಸ್ತವಾತ್ಮಜಃ ।
ವಾಸುದೇವ ಇತಿ ಶ್ರೀಮಾನಭಿಜ್ಞಾಃ ಸಂಪ್ರಚಕ್ಷತೇ ॥ ೧೭

ಬಹೂನಿ ಸಂತಿ ನಾಮಾನಿ ರೂಪಾಣಿ ಚ ಸುತಸ್ಯ ತೇ ।
ಗುಣಕರ್ಮಾನುರೂಪಾಣಿ ತಾನ್ಯಹಂ ವೇದ ನೋ ಜನಾಃ ॥ ೧೮

---

ಅಗಾಧವಾದ ಅನುರಾಗವು ದೃಢವಾಗಿದೆ. ಅವನಿಗೂ ನಮ್ಮಲ್ಲಿ ಅದೇ ಅನುರಾಗವಿದೆ. ಇದೇನು ಸ್ವಭಾವಸಿದ್ಧವಾಗಿರಬಹುದೆ? (೧೩). ಏಳು ವರ್ಷದ ಹುಡುಗನೆಲ್ಲಿ? ಮಹಾಪರ್ವತವನ್ನು ಹೊರುವುದೆಲ್ಲಿ? ಆದ್ದರಿಂದ, ಹೇ ವ್ರಜೇಶ್ವರ, ನಮಗೆ ನಿನ್ನ ಮಗನ ವಿಷಯದಲ್ಲಿ ಅದೇನೋ ಶಂಕೆ ಹುಟ್ಟುತ್ತಿದೆ!" ಎಂದರು (೧೪). ನಂದನು ಹೇಳಿದನು: "ಎಲೈ ಗೋಪಾಲರೆ, ನಾನು ಹೇಳುವುದನ್ನು ಕೇಳಿರಿ. ಈ ಬಾಲಕನ ವಿಷಯದಲ್ಲಿ ನಿಮಗೆ ಶಂಕೆ ಬೇಡ. ಈ ಕುಮಾರನ ವಿಷಯವಾಗಿ ಗರ್ಗಮುನಿಗಳು ಹೇಳಿದ್ದನ್ನು ಕೇಳಿರಿ (೧೫). ಅವರು ಹೇಳಿದ್ದೇನೆಂದರೆ: "ಈ ಬಾಲಕನು ಹಿಂದಿನ (ಮೂರು) ಯುಗಗಳಲ್ಲಿ ಜನಿಸಿದಾಗ ಕ್ರಮವಾಗಿ ಶುಕ್ಲ, ರಕ್ತ, ಪೀತವರ್ಣದ ದೇಹಗಳನ್ನು ಧರಿಸಿದ್ದನು! ಈಗ (ದ್ವಾಪರಯುಗದಲ್ಲಿ) ಕೃಷ್ಣವರ್ಣನಾಗಿದ್ದಾನೆ (೧೬). ನಿನ್ನ ಪುತ್ರನು ಹಿಂದೆ ಒಂದು ಕಡೆ ವಸುದೇವನಿಗೆ ಮಗನಾಗಿ ಜನಿಸಿದ್ದನು. ಅದನ್ನರಿತವರು ಶ್ರೀಯುಕ್ತನಾದ ಇವನನ್ನು ವಾಸುದೇವನೆಂದು ಕರೆಯುತ್ತಾರೆ (೧೭). ನಂದಗೋಪ, ನಿನ್ನ ಪುತ್ರನ ಗುಣಕರ್ಮಗಳಿಗೆ ಅನುಸಾರವಾಗಿ ಈತನ ನಾಮಗಳು ಅಸಂಖ್ಯಾತವಾಗಿವೆ. ಅದನ್ನು ನಾನು ಬಲ್ಲೆ! ಈ ಜನರಿಗೆ

ಏಷ ವಃ ಶ್ರೇಯ ಆಧಾಸ್ಯದ್ ಗೋಪಗೋಕುಲನಂದನಃ ।
ಅನೇನ ಸರ್ವದುರ್ಗಾಣಿ ಯೂಯಮಂಜಸ್ತರಿಷ್ಯಥ ॥ ೧೯

ಪುರಾನೇನ ವ್ರಜಪತೇ ಸಾಧವೋ ದಸ್ಯುಪೀಡಿತಾಃ ।
ಅರಾಜಕೇ ರಕ್ಷ್ಯಮಾಣಾ ಜಿಗ್ಯುರ್ದಸ್ಯೂನ್ ಸಮೇಧಿತಾಃ ॥ ೨೦

ಯ ಏತಸ್ಮಿನ್ ಮಹಾಭಾಗಾಃ ಪ್ರೀತಿಂ ಕುರ್ವಂತಿ ಮಾನವಾಃ ।
ನಾರಯೋಽಭಿಭವಂತ್ಯೇತಾನ್ ವಿಷ್ಣುಪಕ್ಷಾನಿವಾಸುರಾಃ ॥ ೨೧

ತಸ್ಮಾನ್ನಂದ ಕುಮಾರೋಽಯಂ ನಾರಾಯಣಸಮೋ ಗುಣೈಃ ।
ಶ್ರಿಯಾ ಕೀರ್ತ್ಯಾನುಭಾವೇನ ತತ್ಕರ್ಮಸು ನ ವಿಸ್ಮಯಃ ॥ ೨೨

ಇತ್ಯದ್ಧಾ ಮಾಂ ಸಮಾದಿಶ್ಯ ಗರ್ಗೇ ಚ ಸ್ವಗೃಹಂ ಗತೇ ।
ಮನ್ಯೇ ನಾರಾಯಣಸ್ಯಾಂಶಂ ಕೃಷ್ಣಮಕ್ಲಿಷ್ಟಕಾರಿಣಮ್ ॥ ೨೩

ಇತಿ ನಂದವಚಃ ಶ್ರುತ್ವಾ ಗರ್ಗಗೀತಂ ವ್ರಜೌಕಸಃ ।
ದೃಷ್ಟಶ್ರುತಾನುಭಾವಾಸ್ತೇ ಕೃಷ್ಣ ಸ್ಯಾಮಿತತೇಜಸಃ ।
ಮುದಿತಾ ನಂದಮಾನರ್ಚುಃ ಕೃಷ್ಣಂ ಚ ಗತವಿಸ್ಮಯಾಃ ॥ ೨೪

---

ಗೊತ್ತಿಲ್ಲ (೧೮). ಈ ಬಾಲಕನು ನಿಮಗೆ ಶ್ರೇಯಸ್ಸನ್ನುಂಟುಮಾಡುವನು. ಗೋಪರನ್ನೂ ಗೋಕುಲವನ್ನೂ ಆನಂದಪಡಿಸುವನು. ಇವನಿಂದ ನೀವು ಸಕಲ ಕಷ್ಟಗಳನ್ನೂ ಶೀಘ್ರವಾಗಿ ನೀಗಿಕೊಳ್ಳುವಿರಿ (೧೯). ಗೋಕುಲೇಶ್ವರ, ಹಿಂದೆ ದೇಶವು ಅರಾಜಕವಾಗಿದ್ದಾಗ ಸಜ್ಜನರು ದುರ್ಜನರ ಪೀಡೆಗೆ ಸಿಕ್ಕಿಕೊಂಡಿದ್ದರು. ಈತನ ರಕ್ಷಣೆಯಲ್ಲಿ ಸಜ್ಜನರು ಪ್ರಬಲರಾಗಿ ದಸ್ಯುಗಳನ್ನು ಜಯಿಸಿದ್ದಾರೆ (೨೦). ಯಾವ ಮಾನವರು ಈತನನ್ನು ಪ್ರೀತಿಸುವರೋ ಆ ಪುಣ್ಯಶಾಲಿಗಳನ್ನು ವೈರಿಗಳು ಜಯಿಸಲಾರರು. ವಿಷ್ಣುಭಕ್ತರನ್ನು ಅಸುರರು ಹೇಗೆ ಜಯಿಸಲಾರರೋ ಹಾಗೆಯೇ ಇದು! (೨೧). ಆದ್ದರಿಂದ, ನಂದ, ನಿನ್ನ ಪುತ್ರನು ಗುಣಗಳಲ್ಲಿ ಶ್ರೀಮನ್ನಾರಾಯಣನಿಗೆ ಸಮಾನನೆಂದು ತಿಳಿ. ಸಂಪತ್ತು, ಕೀರ್ತಿ, ಮಹಿಮೆಗಳಲ್ಲಿಯೂ ಆತನಿಗೆ ಸದೃಶನಿವನು. ಈತನು ನಡೆಸುವ ಕಾರ್ಯಗಳಲ್ಲಿ ಅಚ್ಚರಿ ಬೇಡ" (೨೨). ಈ ರೀತಿಯಾಗಿ ಗರ್ಗಮುನಿಗಳು ನನಗೆ ತಿಳಿಸಿ ತಮ್ಮ ಆಶ್ರಮಕ್ಕೆ ತೆರಳಿದರು. ಅಂದಿನಿಂದ ಕ್ಲೇಶವಿಲ್ಲದೆ ದೊಡ್ಡ ಕಾರ್ಯವನ್ನು ನಡೆಸುವ ಕೃಷ್ಣನನ್ನು ಶ್ರೀಮನ್ನಾರಾಯಣನ ಅಂಶವೆಂದೇ ನಾನು ತಿಳಿದಿದ್ದೇನೆ" ಎಂದನು (೨೩). ನಂದನ ನುಡಿಯನ್ನೂ

**ದೇವೇ ವರ್ಷತಿ ಯಜ್ಞವಿಪ್ಲವರುಷಾ ವಜ್ರಾಶ್ಮವರ್ಷಾನಿಲೈಃ**
**ಸೀದತ್ಪಾಲಪಶುಸ್ತ್ರಿ ಆತ್ಮಶರಣಂ ದೃಷ್ಟ್ವಾನುಕಂಪ್ಯುತ್ಸ್ಮಯನ್ ।**
**ಉತ್ಪಾಟ್ಯೈಕಕರೇಣ ಶೈಲಮಬಲೋ ಲೀಲೋಚ್ಛಿಲೀಂಧ್ರಂ ಯಥಾ**
**ಬಿಭ್ರದ್ ಗೋಷ್ಠಮಪಾನ್ಮಹೇಂದ್ರಮದಭಿತ್ ಪ್ರೀಯಾನ್ನ**
**ಇಂದ್ರೋ ಗವಾಮ್ ॥ ೨೫**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಡ್ವಿಂಶಾಧ್ಯಾಯಃ**



ಗರ್ಗಮುನಿಗಳ ಪವಿತ್ರವಚನವನ್ನೂ ವ್ರಜವಾಸಿಗಳು ಆಲಿಸಿದರು. ಅಮಿತ ತೇಜೋವಂತನಾದ ಶ್ರೀಕೃಷ್ಣನ ಮಹಿಮೆಯನ್ನು ಅವರು ಸ್ವತಃ ಕಂಡಿದ್ದರು; ಕೇಳಿದ್ದರು. ಈಗ ಅವರು ಸಂತೃಪ್ತರಾಗಿ ಆಶ್ಚರ್ಯಶಂಕೆಗಳನ್ನು ಬಗೆಹರಿಸಿ ಕೊಂಡು ನಂದನನ್ನೂ ಶ್ರೀಕೃಷ್ಣನನ್ನೂ ಹೊಗಳಿ ಸಂಮಾನಿಸಿದರು (೨೪). ಯಜ್ಞಭಂಗವಾಯಿತೆಂಬ ಕ್ರೋಧದಿಂದ ದೇವೇಂದ್ರನು ಸಿಡಿಲು, ಆಲಿಕಲ್ಲು, ವೃಷ್ಟಿ, ಬಿರುಗಾಳಿಗಳೊಡನೆ ಮಳೆಗರೆಯಲು, ಕಂಗಾಲಾದ ಗೋಪರು ಗೋವು ಗಳು ಹೆಂಗಸರುಳ್ಳ ಗೋಕುಲವು ಕೃಷ್ಣನಿಗೆ ಶರಣಾಯಿತು. ಶರಣಾಗತವೂ ಕರುಣಾಪಾತ್ರವೂ ಆದ ಗೋಕುಲವನ್ನು ನೋಡಿ ಬಾಲಕನಾಗಿದ್ದ ಯಾವಾತನು ಮುಗುಳ್ನಗೆ ಬೀರುತ್ತ ಲೀಲೆಯಿಂದ ಗೋವರ್ಧನಗಿರಿಯನ್ನು ನಾಯಿಕೊಡೆ ಯಂತೆ ಒಂದು ಕೈಯಿಂದ ಕಿತ್ತು ಎತ್ತಿ ಹಿಡಿದು ಗೋಕುಲವನ್ನು ಕಾಪಾಡಿ ದನೋ ಇಂದ್ರನ ದರ್ಪವನ್ನು ವಿಧ್ವಂಸಗೊಳಿಸಿದನೋ ಆ ಗೋವಿಂದನು ಸಂಪ್ರೀತನಾಗಲಿ ! (೨೫).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತಾರನೆಯ ಅಧ್ಯಾಯ



## ಸಪ್ತವಿಂಶಾಧ್ಯಾಯಃ

ಶ್ರೀಶುಕ ಉವಾಚ—

ಗೋವರ್ಧನೇ ಧೃತೇ ಶೈಲ ಆಸಾರಾದ್ ರಕ್ಷಿತೇ ವ್ರಜೇ ।
ಗೋಲೋಕಾದಾವ್ರಜತ್ ಕೃಷ್ಣಂ ಸುರಭಿಃ ಶಕ್ರ ಏವ ಚ ॥ ೧

ವಿವಿಕ್ತ ಉಪಸಂಗಮ್ಯ ವ್ರೀಡಿತಃ ಕೃತಹೇಲನಃ ।
ಪಸ್ಪರ್ಶ ಪಾದಯೋರೇನಂ ಕಿರೀಟೇನಾರ್ಕವರ್ಚಸಾ ॥ ೨

ದೃಷ್ಟಶ್ರುತಾನುಭಾವೋಽಸ್ಯ ಕೃಷ್ಣಸ್ಯಾಮಿತತೇಜಸಃ ।
ನಷ್ಟತ್ರಿಲೋಕೇಶಮದ ಇಂದ್ರ ಆಹ ಕೃತಾಂಜಲಿಃ ॥ ೩

ಇಂದ್ರ ಉವಾಚ—

ವಿಶುದ್ಧಸತ್ತ್ವಂ ತವ ಧಾಮ ಶಾಂತಂ
ತಪೋಮಯಂ ಧ್ವಸ್ತರಜಸ್ತಮಸ್ಕಮ್ ।

## ಅಧ್ಯಾಯ ೨೭

ಕಾಮಧೇನುವೂ ಇಂದ್ರನೂ ಶ್ರೀಕೃಷ್ಣನನ್ನು ಸಂದರ್ಶಿಸುವುದು.
ಇಂದ್ರನ ಕ್ಷಮಾಯಾಚನೆ. ಶ್ರೀಕೃಷ್ಣನ ಅಭಿಷೇಕ

ಶುಕಮಹರ್ಷಿಗಳು ಹೇಳಿದರು : ಶ್ರೀಕೃಷ್ಣನು ಗೋವರ್ಧನಗಿರಿಯನ್ನು ಎತ್ತಿಹಿಡಿದು, ಗೋಕುಲವನ್ನು ವೃಷ್ಟಿಭಯದಿಂದ ರಕ್ಷಿಸಲಾಗಿ, ಕಾಮಧೇನುವು ಗೋಲೋಕದಿಂದ ಶ್ರೀಕೃಷ್ಣನ ಬಳಿಗೆ ಆಗಮಿಸಿತು. ದೇವೇಂದ್ರನೂ ಬಂದನು (೧). ತಪ್ಪನ್ನೆಸಗಿದ ಇಂದ್ರನು ಲಜ್ಜಿತನಾಗಿ ಶ್ರೀಕೃಷ್ಣನನ್ನು ಏಕಾಂತದಲ್ಲಿ ಕಂಡು, ಸೂರ್ಯನಂತೆ ಬೆಳಗುವ ಕಿರೀಟದಿಂದ ಆತನ ಪಾದಗಳನ್ನು ಮುಟ್ಟಿ ವಂದಿಸಿದನು (೨). ಅಪಾರತೇಜಃಶಾಲಿಯಾದ ಶ್ರೀಕೃಷ್ಣನ ಮಹಿಮೆಯನ್ನು ಕೇಳಿದ್ದ ಅವನು ಈಗ ಅದನ್ನು ಪ್ರತ್ಯಕ್ಷವಾಗಿ ಕಂಡಿದ್ದನು. ನಾನು ತ್ರಿಲೋಕೇಶ್ವರನೆಂಬ ಅವನ ಮದವು ಅಳಿಸಿಹೋಗಿತ್ತು. ಆ ಇಂದ್ರನು ಕೈಮುಗಿದುಕೊಂಡು ಹೀಗೆಂದನು (೩) : "ಹೇ ಸ್ವಾಮಿ, ಪರಿಶುದ್ಧವಾದ ಸತ್ತ್ವಗುಣವುಳ್ಳ ನಿನ್ನ ಸ್ವರೂಪವು ಶಾಂತವಾದದ್ದು. ರಜಸ್ತಮೋಗುಣಗಳು

ಮಾಯಾಮಯೋಽಯಂ ಗುಣಸಂಪ್ರವಾಹೋ
ನ ವಿದ್ಯತೇ ತೇಽಗ್ರಹಣಾನುಬಂಧಃ ॥ ೪

ಕುತೋ ನು ತದ್ಧೇತವ ಈಶ ತತ್ಕೃತಾ
ಲೋಭಾದಯೋ ಯೇಽಬುಧಲಿಂಗಭಾವಾಃ ।
ತಥಾಪಿ ದಂಡಂ ಭಗವಾನ್ ಬಿಭರ್ತಿ
ಧರ್ಮಸ್ಯ ಗುಪ್ತ್ಯೈ ಖಲನಿಗ್ರಹಾಯ ॥ ೫

ಪಿತಾ ಗುರುಸ್ತ್ವಂ ಜಗತಾಮಧೀಶೋ
ದುರತ್ಯಯಃ ಕಾಲ ಉಪಾತ್ತದಂಡಃ ।
ಹಿತಾಯ ಸ್ವೇಚ್ಛಾತನುಭಿಃ ಸಮೀಹಸೇ
ಮಾನಂ ವಿಧುನ್ವನ್ ಜಗದೀಶಮಾನಿನಾಮ್ ॥ ೬

ಯೇ ಮದ್ವಿಧಾಜ್ಞಾ ಜಗದೀಶಮಾನಿನ-
ಸ್ತ್ವಾಂ ವೀಕ್ಷ್ಯ ಕಾಲೇಽಭಯಮಾಶು ತನ್ಮದಮ್ ।
ಹಿತ್ವಾಽಽರ್ಯಮಾರ್ಗಂ ಪ್ರಭಜಂತ್ಯಪಸ್ಮಯಾ
ಈಹಾ ಖಲಾನಾಮಪಿ ತೇಽನುಶಾಸನಮ್ ॥ ೭

---

ಇಲ್ಲವಾದ್ದರಿಂದ ಸರ್ವಜ್ಞನಾಗಿರುವೆ. ಮಾಯಾಮಯವೂ ಸಗುಣವೂ ಅಜ್ಞಾನ ಪ್ರಯುಕ್ತವೂ ಆದ ಸಂಸಾರಬಂಧನವು ನಿನಗಿಲ್ಲ (೪). ಇನ್ನು ಅಜ್ಞಾನಿಯ ಚಿಹ್ನೆಗಳೂ ಸಂಸಾರದಿಂದ ಸಂಭವಿಸತಕ್ಕವೂ ಆದ ಲೋಭವೇ ಮೊದಲಾದವು ನಿನಗೆ ಹೇಗೆತಾನೆ ಇರಬಲ್ಲವು? ಆದರೂ ಧರ್ಮದ ರಕ್ಷಣೆಗಾಗಿ ಮತ್ತು ಖಳರನ್ನು ನಿಗ್ರಹಿಸುವುದಕ್ಕಾಗಿ ಭಗವಂತನಾದ ನೀನು ದಂಡೋಪಾಯವನ್ನು ಹಿಡಿಯುವುದುಂಟು (೫). ಜಗತ್ತಿಗೆ ನೀನು ತಂದೆ, ಗುರು, ಅಧೀಶ್ವರ. ಅದಮ್ಯವಾದ ಕಾಲವೂ ನೀನೆ. ಆದ್ದರಿಂದ ದಂಡಧಾರಿಯಾಗಿ ಲೀಲಾಶರೀರ ಗಳಿಂದ ಜಗತ್ಕಲ್ಯಾಣಕ್ಕಾಗಿ ಉದ್ಯುಕ್ತನಾಗುತ್ತೀಯೆ. ನಾವೇ ಜಗದೀಶ್ವರ ರೆಂಬ ದುರಹಂಕಾರಿಗಳ ದರ್ಪವನ್ನು ಅಡಗಿಸುತ್ತೀಯೆ (೬). ಜಗತ್ತಿನ ನಿಯಾಮಕರೆಂದುಕೊಂಡಿರುವ ನನ್ನಂತಹ ಪಾಮರರು ಎಂತಹ ಸಮಯ ದಲ್ಲಿಯೂ ನಿರ್ಭಯನಾಗಿರುವ ನಿನ್ನನ್ನು ನೋಡಿ ತಮ್ಮ ಮದವನ್ನು ನೀಗುತ್ತಾರೆ. ಗರ್ವವನ್ನು ತ್ಯಜಿಸಿ ಸನ್ಮಾರ್ಗವನ್ನು ಹಿಡಿಯುತ್ತಾರೆ. ನಿನ್ನ

ಸ ತ್ವಂ ಮಮೈಶ್ವರ್ಯಮದಪ್ಲುತಸ್ಯ
ಕೃತಾಗಸಸ್ತೇಽವಿದುಷಃ ಪ್ರಭಾವಮ್ ।
ಕ್ಷಂತುಂ ಪ್ರಭೋಽಥಾರ್ಹಸಿ ಮೂಢಚೇತಸೋ
ಮೈವಂ ಪುನರ್ಭೂನ್ಮತಿರೀಶ ಮೇಽಸತೀ ॥ ೮

ತವಾವತಾರೋಽಯಮಧೋಕ್ಷಜೇಹ
ಸ್ವಯಂಭರಾಣಾಮುರುಭಾರಜನ್ಮನಾಮ್ ।
ಚಮೂಪತೀನಾಮಭವಾಯ ದೇವ
ಭವಾಯ ಯುಷ್ಮಚ್ಚರಣಾನುವರ್ತಿನಾಮ್ ॥ ೯

ನಮಸ್ತುಭ್ಯಂ ಭಗವತೇ ಪುರುಷಾಯ ಮಹಾತ್ಮನೇ ।
ವಾಸುದೇವಾಯ ಕೃಷ್ಣಾಯ ಸಾತ್ವತಾಂ ಪತಯೇ ನಮಃ ॥ ೧೦

ಸ್ವಚ್ಛಂದೋಪಾತ್ತದೇಹಾಯ ವಿಶುದ್ಧಜ್ಞಾನಮೂರ್ತಯೇ ।
ಸರ್ವಸ್ಮೈ ಸರ್ವಬೀಜಾಯ ಸರ್ವಭೂತಾತ್ಮನೇ ನಮಃ ॥ ೧೧

ಮಯೇದಂ ಭಗವನ್ ಗೋಷ್ಠನಾಶಾಯಾಸಾರವಾಯುಭಿಃ ।
ಚೇಷ್ಟಿತಂ ವಿಹತೇ ಯಜ್ಞೇ ಮಾನಿನಾ ತೀವ್ರಮನ್ಯುನಾ ॥ ೧೨

---

ಉದ್ಯಮವೇ ಖಳಜನರಿಗೆ ಪಾಠವನ್ನು ಕಲಿಸುತ್ತದೆ (೭). ಐಶ್ವರ್ಯಮದದಲ್ಲಿ ಮುಳುಗಿ ನಿನ್ನ ಪ್ರಭಾವವನ್ನರಿಯದೆ ತಪ್ಪುಮಾಡಿರುವ ಮೂಢಾತ್ಮನಾದ ನನ್ನನ್ನು, ಹೇ ಪ್ರಭುವೆ, ಮನ್ನಿಸು. ಓ ಸ್ವಾಮಿ, ನನಗೆ ಈ ಬಗೆಯ ಕೆಟ್ಟ ಬುದ್ಧಿ ಮತ್ತೆ ಎಂದೆಂದಿಗೂ ಬಾರದಿರಲಿ (೮). ಅಧೋಕ್ಷಜ, ತಾವೇ ಭೂಮಿಗೆ ಹೊರೆಯಾಗಿ ಇನ್ನಷ್ಟು ಹೊರೆಯನ್ನು ಹೊರಿಸುತ್ತಿರುವ ಪಾಳೇಗಾರರನ್ನು ಧ್ವಂಸಮಾಡುವುದಕ್ಕಾಗಿ ನಿನ್ನ ಅವತಾರವಾಗಿದೆ. ದೇವ, ನಿನ್ನ ಪಾದಸೇವಕರಾದ ಭಕ್ತರ ಕಲ್ಯಾಣಕ್ಕಾಗಿಯೂ ಆಗಿದೆ (೯). ಭಗವಂತನೂ ಪರಮಪುರುಷನೂ ಮಹಾತ್ಮನೂ ಆದ ನಿನಗೆ ನಮಸ್ಕಾರ. ವಾಸುದೇವನೂ ಕೃಷ್ಣನೂ ಯದುಪತಿಯೂ ಆದ ನಿನಗೆ ನಮಸ್ಕಾರ (೧೦). ಸ್ವೇಚ್ಛೆಯಿಂದ ದೇಹವನ್ನು ಧರಿಸಿರುವ ವಿಶುದ್ಧಜ್ಞಾನಮೂರ್ತಿಗೆ ನಮಸ್ಕಾರ. ಸರ್ವಸ್ವರೂಪನೂ ಸರ್ವಕಾರಣನೂ ಸರ್ವಭೂತಾತ್ಮನೂ ಆದ ನಿನಗೆ ನಮಸ್ಕಾರ (೧೧). ಭಗವನ್, (ನನಗಾಗಿ ತೊಡಗಿದ) ಯಜ್ಞಕ್ಕೆ ವಿಘ್ನವಾಯಿತೆಂದು

ತ್ವಯೇಶಾನುಗೃಹೀತೋಽಸ್ಮಿ ಧ್ವಸ್ತಸ್ತಂಭೋ ವೃಥೋದ್ಯಮಃ ।
ಈಶ್ವರಂ ಗುರುಮಾತ್ಮಾನಂ ತ್ವಾಮಹಂ ಶರಣಂ ಗತಃ ॥ ೧೩

ಶ್ರೀಶುಕ ಉವಾಚ—

ಏವಂ ಸಂಕೀರ್ತಿತಃ ಕೃಷ್ಣೋ ಮಘೋನಾ ಭಗವಾನಮುಮ್ ।
ಮೇಘಗಂಭೀರಯಾ ವಾಚಾ ಪ್ರಹಸನ್ನಿದಮಬ್ರವೀತ್ ॥ ೧೪

ಶ್ರೀಭಗವಾನುವಾಚ—

ಮಯಾ ತೇಽಕಾರಿ ಮಘವನ್ ಮಖಭಂಗೋಽನುಗೃಹ್ಣತಾ ।
ಮದನುಸ್ಮೃತಯೇ ನಿತ್ಯಂ ಮತ್ತಸ್ಯೇಂದ್ರಶ್ರಿಯಾ ಭೃಶಮ್ ॥ ೧೫

ಮಾಮೈಶ್ವರ್ಯಶ್ರೀಮದಾಂಧೋ ದಂಡಪಾಣಿಂ ನ ಪಶ್ಯತಿ ।
ತಂ ಭ್ರಂಶಯಾಮಿ ಸಂಪದ್ಭ್ಯೋ ಯಸ್ಯ ಚೇಚ್ಛಾಮ್ಯನುಗ್ರಹಮ್॥

ಗಮ್ಯತಾಂ ಶಕ್ರ ಭದ್ರಂ ವಃ ಕ್ರಿಯತಾಂ ಮೇಽನುಶಾಸನಮ್ ।
ಸ್ಥೀಯತಾಂ ಸ್ವಾಧಿಕಾರೇಷು ಯುಕ್ತೈರ್ವಃ ಸ್ತಂಭವರ್ಜಿತೈಃ ॥ ೧೭

---

ದುರಹಂಕಾರಿಯಾದ ನಾನು ತೀವ್ರಕೋಪಕ್ಕೆ ವಶನಾಗಿ ಮಳೆ ಬಿರುಗಾಳಿಗಳ ನೆರವಿನಿಂದ ಗೋಕುಲದ ನಾಶಕ್ಕಾಗಿ ಚೇಷ್ಟೆಮಾಡಿದೆನು (೧೨). ಹೇ ಸ್ವಾಮಿ, ನನ್ನ ಜಂಭ ಇಳಿಯಿತು. ಪ್ರಯತ್ನ ಕುಸಿಯಿತು. ಇದರಿಂದ ನಾನು ಅನುಗೃಹೀತನಾದೆನು. ಈಶ್ವರನೂ ಗುರುವೂ ಪರಮಾತ್ಮನೂ ಆದ ನಿನ್ನ ಮರೆ ಹೊಕ್ಕಿದ್ದೇನೆ" ಎಂದನು (೧೩). ಇಂದ್ರನು ಹೀಗೆ ನುಡಿಯಲಾಗಿ ಭಗವಾನ್ ಶ್ರೀಕೃಷ್ಣನು ಮುಗುಳ್ನಗೆ ಬೀರುತ್ತ ಮೇಘಗಂಭೀರವಾದ ಧ್ವನಿಯಿಂದ ಇಂತೆಂದನು : "ಎಲೈ ಇಂದ್ರ, ನಿನ್ನನ್ನು ಅನುಗ್ರಹಿಸುವುದಕಾಗಿಯೇ ನಾನು ಯಜ್ಞಕ್ಕೆ ಅಡ್ಡಿಯನ್ನೊಡ್ಡಿದೆನು ! ದೇವರಾಜ್ಯದಿಂದ ಮತ್ತನಾದ ನಿನಗೆ ನನ್ನ ಸ್ಮರಣೆಯಾಗಲೆಂದು ಹೀಗೆ ಮಾಡಿದೆನು (೧೪–೧೫). ಐಶ್ವರ್ಯ ವೈಭವಗಳ ಮದದಿಂದ ಕುರುಡಾದವನು ದಂಡಪಾಣಿಯಾದ ನನ್ನನ್ನು ಗಣಿಸುವುದಿಲ್ಲ. ಯಾರನ್ನು ನಾನು ಅನುಗ್ರಹಿಸಲು ಬಯಸುವೆನೋ ಅವನನ್ನು ಸಂಪತ್ತಿನಿಂದ ದೂರಮಾಡುತ್ತೇನೆ ! (೧೬). ಇಂದ್ರ, ತೆರಳು. ನಿಮ್ಮೆಲ್ಲರಿಗೆ ಒಳ್ಳೆಯದಾಗಲಿ. ನನ್ನ ಆಜ್ಞೆಯನ್ನು ಪಾಲಿಸುತ್ತಿರಿ. ಅಹಂಕಾರವನ್ನು ಬಿಟ್ಟು ಎಚ್ಚರಿಕೆ

**ಅಥಾಹ ಸುರಭಿಃ ಕೃಷ್ಣಮಭಿವಂದ್ಯ ಮನಸ್ವಿನೀ ।**
**ಸ್ವಸಂತಾನೈರುಪಾಮಂತ್ರ್ಯ ಗೋಪರೂಪಿಣಮೀಶ್ವರಮ್ ॥ ೧೮**

ಸುರಭಿರುವಾಚ—

**ಕೃಷ್ಣ ಕೃಷ್ಣ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಸಂಭವ ।**
**ಭವತಾ ಲೋಕನಾಥೇನ ಸನಾಥಾ ವಯಮಚ್ಯುತ ॥ ೧೯**

**ತ್ವಂ ನಃ ಪರಮಕಂ ದೈವಂ ತ್ವಂ ನ ಇಂದ್ರೋ ಜಗತ್ಪತೇ ।**
**ಭವಾಯ ಭವ ಗೋವಿಪ್ರದೇವಾನಾಂ ಯೇ ಚ ಸಾಧವಃ ॥ ೨೦**

**ಇಂದ್ರಂ ನಸ್ತ್ವಾಭಿಷೇಕ್ಷ್ಯಾಮೋ ಬ್ರಹ್ಮಣಾ ನೋದಿತಾ ವಯಮ್ ।**
**ಅವತೀರ್ಣೋಽಸಿ ವಿಶ್ವಾತ್ಮನ್ ಭೂಮೇರ್ಭಾರಾಪನುತ್ತಯೇ ॥ ೨೧**

ಶ್ರೀಶುಕ ಉವಾಚ—

**ಏವಂ ಕೃಷ್ಣಮುಪಾಮಂತ್ರ್ಯ ಸುರಭಿಃ ಪಯಸಾಽಽತ್ಮನಃ ।**
**ಜಲೈರಾಕಾಶಗಂಗಾಯಾ ಐರಾವತಕರೋದ್ಧೃತೈಃ ॥ ೨೨**

---

ಯಿಂದ ನಿಮ್ಮ ನಿಮ್ಮ ಅಧಿಕಾರಗಳಲ್ಲಿ ನೆಲೆಸಿರಿ" ಎಂದನು (೧೭). ಅನಂತರ ಧೀರೆಯಾದ ಕಾಮಧೇನು ತನ್ನ ಸಂತಾನಗಳಾದ ಗೋವುಗಳೊಡನೆ ಶ್ರೀಕೃಷ್ಣನನ್ನು ವಂದಿಸಿ, ಗೋಪಾಲರೂಪಿಯಾದ ಸ್ವಾಮಿಯನ್ನು ಸಂಬೋಧಿಸಿ ಹೀಗೆಂದಿತು (೧೮). "ಕೃಷ್ಣ, ಕೃಷ್ಣ, ಮಹಾಯೋಗಿಯೆ, ಹೇ ವಿಶ್ವಾತ್ಮ, ವಿಶ್ವಜನಕ, ಲೋಕನಾಥನಾದ ನಿನ್ನಿಂದ, ಅಚ್ಯುತ, ನಾವು ಸನಾಥರಾಗಿದ್ದೇವೆ. ಹೇ ಲೋಕೇಶ್ವರ, ನೀನೇ ನಮಗೆ ಪರದೇವತೆ. ಗೋಬ್ರಾಹ್ಮಣ ದೇವತೆಗಳಿಗೂ ಮತ್ತಿತರ ಸಜ್ಜನರಿಗೂ ಶುಭವಾಗಲೆಂದು ನೀನೇ ನಮಗೆ ಇಂದ್ರನಾಗು! (೧೯—೨೦). (ಈ ಇಂದ್ರನು ಅತ್ತ ಇರಲಿ!) ಬ್ರಹ್ಮನಿಂದ ಪ್ರೇರಿತರಾದ ನಾವು ನೀನೇ ನಮಗೆ ಇಂದ್ರನೆಂದು ನಿನಗೆ ಪಟ್ಟಾಭಿಷೇಕ ಮಾಡುವೆವು! ಹೇ ವಿಶ್ವಾತ್ಮ, ಭೂಭಾರವನ್ನು ಇಳಿಸುವುದಕ್ಕಾಗಿ ಅವತರಿಸಿದ್ದೀಯೆ" (೨೧). ಹೀಗೆ ಹೇಳಿ ಕಾಮಧೇನುವು ತನ್ನ ಹಾಲಿನಿಂದ ಶ್ರೀಕೃಷ್ಣನಿಗೆ ಅಭಿಷೇಕಮಾಡಿತು. ಆಗ ಇಂದ್ರನೂ ಸಹ ಅದಿತಿ ಮೊದಲಾದ

ಇಂದ್ರಃ ಸುರರ್ಷಿಭಿಃ ಸಾಕಂ ನೋದಿತೋ ದೇವಮಾತೃಭಿಃ ।
ಅಭ್ಯಷಿಂಚತ ದಾಶಾರ್ಹಂ ಗೋವಿಂದ ಇತಿ ಚಾಭ್ಯಧಾತ್ ॥ ೨೩

ತತ್ರಾಗತಾಸ್ತುಂಬುರುನಾರದಾದಯೋ
ಗಂಧರ್ವವಿದ್ಯಾಧರಸಿದ್ಧಚಾರಣಾಃ ।
ಜಗುರ್ಯಶೋ ಲೋಕಮಲಾಪಹಂ ಹರೇಃ
ಸುರಾಂಗನಾಃ ಸಂನನೃತುರ್ಮುದಾನ್ವಿತಾಃ ॥ ೨೪

ತಂ ತುಷ್ಟುವುರ್ದೇವನಿಕಾಯಕೇತವೋ
ವ್ಯವಾಕಿರಂಶ್ಚಾದ್ಭುತಪುಷ್ಪವೃಷ್ಟಿಭಿಃ ।
ಲೋಕಾಃ ಪರಾಂ ನಿರ್ವೃತಿಮಾಪ್ನುವಂಸ್ತ್ರಯೋ
ಗಾವಸ್ತದಾ ಗಾಮನಯನ್ ಪಯೋದ್ರುತಾಮ್ ॥ ೨೫

ನಾನಾರಸೌಘಾಃ ಸರಿತೋ ವೃಕ್ಷಾ ಆಸನ್ ಮಧುಸ್ರವಾಃ ।
ಅಕೃಷ್ಟಪಚ್ಯೌಷಧಯೋ ಗಿರಯೋಽಬಿಭ್ರದುನ್ಮಣೀನ್ ॥ ೨೬

ಕೃಷ್ಣೇಽಭಿಷಿಕ್ತ ಏತಾನಿ ಸತ್ತ್ವಾನಿ ಕುರುನಂದನ ।
ನಿರ್ವೈರಾಣ್ಯಭವಂಸ್ತಾತ ಕ್ರೂರಾಣ್ಯಪಿ ನಿಸರ್ಗತಃ ॥ ೨೭

---

ದೇವಮಾತೃಗಳಿಂದ ಪ್ರೇರಿತನಾಗಿ ದೇವರ್ಷಿಗಳನ್ನೊಡಗೂಡಿ, ಐರಾವತವು ಸೊಂಡಿಲಿಂದ ಸುರಿದ ಆಕಾಶಗಂಗಾಜಲದಿಂದ ಶ್ರೀಕೃಷ್ಣನಿಗೆ ಅಭಿಷೇಕಮಾಡಿ ಅವನಿಗೆ **ಗೋವಿಂದ** ಎಂದು ಹೆಸರಿಟ್ಟನು! (೨೨–೨೩). ಆಗ ತುಂಬುರು ನಾರದಾದಿಗಳೂ ಗಂಧರ್ವ ವಿದ್ಯಾಧರ ಸಿದ್ಧ ಚಾರಣರೂ ಅಲ್ಲಿಗೆ ಆಗಮಿಸಿ, ಕಲ್ಮಷಾಪಹಾರಿಯಾದ ಶ್ರೀಹರಿಯ ಕೀರ್ತಿಯನ್ನು ಕುರಿತು ಹಾಡಿದರು. ಅಪ್ಸರೆಯರು ಆನಂದದಿಂದ ನರ್ತಿಸಿದರು (೨೪). ದೇವಮುಖ್ಯರು ಆಶ್ಚರ್ಯಕರವಾದ ಹೂಮಳೆಗರೆದು ಗೋವಿಂದನನ್ನು ಸ್ತೋತ್ರಮಾಡಿದರು. ಮೂರು ಲೋಕಗಳೂ ಪರಮಾನಂದ ಹೊಂದಿದವು. ಗೋವುಗಳು ಹಾಲನ್ನು ಸುರಿಸಿ ನೆಲವನ್ನು ನೆನೆಸಿದವು (೨೫). ನದಿಗಳು ಕ್ಷೀರಾದಿರಸಗಳನ್ನು ಹರಿಸಿದವು. ಮರಗಳು ಮಧುರವಾದ ಮಧುವನ್ನು ಸುರಿಸಿದವು. ಉಳದೆಯೇ ಸಸಿಗಳು ಫಸಲನ್ನಿತ್ತವು. ಗಿರಿಗಳು ತಮ್ಮಲ್ಲಿ ಅಡಗಿದ್ದ ರತ್ನಗಳನ್ನು ಹೊರಸೂಸಿದವು (೨೬). ಪರೀಕ್ಷಿತ, ಶ್ರೀಕೃಷ್ಣನಿಗೆ ಅಭಿಷೇಕವಾದಾಗ ಸಹಜವಾಗಿ ಕ್ರೂರ

**ಇತಿ ಗೋಗೋಕುಲಪತಿಂ ಗೋವಿಂದಮಭಿಷಿಚ್ಯ ಸಃ ।**
**ಅನುಜ್ಞಾತೋ ಯಯೌ ಶಕ್ರೋ ವೃತೋ ದೇವಾದಿಭಿರ್ದಿವಮ್ ॥**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತವಿಂಶಾಧ್ಯಾಯಃ

---

## ಅಷ್ಟಾವಿಂಶಾಧ್ಯಾಯಃ

**ಶ್ರೀಶುಕ ಉವಾಚ**

**ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಜನಾರ್ದನಮ್ ।**
**ಸ್ನಾತುಂ ನಂದಸ್ತು ಕಾಲಿಂದ್ಯಾ ದ್ವಾದಶ್ಯಾಂ ಜಲಮಾವಿಶತ್ ॥ ೧**

**ತಂ ಗೃಹೀತ್ವಾನಯದ್ ಭೃತ್ಯೋ ವರುಣಸ್ಯಾಸುರೋಽಂತಿಕಮ್ ।**
**ಅವಿಜ್ಞಾಯಾಸುರೀಂ ವೇಲಾಂ ಪ್ರವಿಷ್ಟಮುದಕಂ ನಿಶಿ ॥ ೨**

---

ಸ್ವಭಾವವಿರುವ ಜಂತುಗಳು ವೈರವನ್ನು ಬಿಟ್ಟವು (೨೭). ಈ ರೀತಿಯಲ್ಲಿ ಗೋವುಗಳಿಗೂ ಗೋಕುಲಕ್ಕೂ ಅಧಿಪತಿಯಾದ ಗೋವಿಂದನಿಗೆ ಅಭಿಷೇಕ ಮಾಡಿ, ಇಂದ್ರನು ಅವನ ಅನುಜ್ಞೆಯನ್ನು ಪಡೆದು, ದೇವಾದಿಗಳೊಡನೆ ಸ್ವರ್ಗಕ್ಕೆ ನಿರ್ಗಮಿಸಿದನು (೨೮).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತೇಳನೆಯ ಅಧ್ಯಾಯ

---

## ಅಧ್ಯಾಯ ೨೮

ವರುಣಭೃತ್ಯನು ನಂದಗೋಪನನ್ನು ವರುಣಲೋಕಕ್ಕೆ ಒಯ್ಯುವುದು.
ಶ್ರೀಕೃಷ್ಣನು ಅವನನ್ನು ಕರೆತರುವುದು

ಒಂದು ಸಲ ನಂದಗೋಪನು ಏಕಾದಶಿಯ ದಿನ ನಿರಾಹಾರನಾಗಿ ವಿಷ್ಣುವನ್ನರ್ಚಿಸಿ, ದ್ವಾದಶಿಯಂದು ಸ್ನಾನಮಾಡುವುದಕ್ಕಾಗಿ ಯಮುನೆಯ ಜಲದಲ್ಲಿ ಇಳಿದನು (೧). ಆಸುರೀವೇಳೆಯೆಂಬುದನ್ನರಿಯದೆ ರಾತ್ರಿಯಲ್ಲಿಯೇ ನೀರಿಗೆ

ಚುಕ್ರುಶುಸ್ತಮಪಶ್ಯಂತಃ ಕೃಷ್ಣ ರಾಮೇತಿ ಗೋಪಕಾಃ ।
ಭಗವಾಂಸ್ತದುಪಶ್ರುತ್ಯ ಪಿತರಂ ವರುಣಾಹೃತಮ್ ।
ತದಂತಿಕಂ ಗತೋ ರಾಜನ್ ಸ್ವಾನಾಮಭಯದೋ ವಿಭುಃ ॥ ೩

ಪ್ರಾಪ್ತಂ ವೀಕ್ಷ್ಯ ಹೃಷೀಕೇಶಂ ಲೋಕಪಾಲಃ ಸಪರ್ಯಯಾ ।
ಮಹತ್ಯಾ ಪೂಜಯಿತ್ವಾಽಽಹ ತದ್ದರ್ಶನಮಹೋತ್ಸವಃ ॥ ೪

ವರುಣ ಉವಾಚ—

ಅದ್ಯ ಮೇ ನಿಭೃತೋ ದೇಹೋಽದ್ಯೈವಾರ್ಥೋಽಧಿಗತಃ ಪ್ರಭೋ ।
ತ್ವತ್ಪಾದಭಾಜೋ ಭಗವನ್ನವಾಪುಃ ಪಾರಮಧ್ವನಃ ॥ ೫

ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ ।
ನ ಯತ್ರ ಶ್ರೂಯತೇ ಮಾಯಾ ಲೋಕಸೃಷ್ಟಿವಿಕಲ್ಪನಾ ॥ ೬

---

ಇಳಿದ ನಂದಗೋಪನನ್ನು ವರುಣಭೃತ್ಯನಾದ ಒಬ್ಬ ಅಸುರನು ಹಿಡಿದು ವರುಣನ ಬಳಿಗೆ ಒಯ್ದನು* (೨). ಗೋಪಾಲರು ನಂದನನ್ನು ಕಾಣದೆ 'ಹಾ ಕೃಷ್ಣ, ರಾಮ' ಎಂದು ಕೂಗಾಡಿದರು. ಶ್ರೀಕೃಷ್ಣನಿಗೆ ಅದು ಕೇಳಿಸಿತು. ತಂದೆಯನ್ನು ವರುಣನು ಅಪಹರಿಸಿದನೆಂಬುದನ್ನರಿತು, ಪರೀಕ್ಷಿತರಾಜ, ತನ್ನವರಿಗೆ ಅಭಯದಾತನಾದ ಆ ಸ್ವಾಮಿಯು ವರುಣನ ಬಳಿಗೆ ತೆರಳಿದನು (೩). ಹೃಷೀಕೇಶನು ಬಂದಿರುವುದನ್ನು ಕಂಡು ಲೋಕಪಾಲನಾದ ವರುಣನು ಆನಂದಪೂರ್ಣನಾಗಿ ಆತನನ್ನು ಅರ್ಘ್ಯಪಾದ್ಯಾದಿಗಳಿಂದ ವಿಶೇಷರೀತಿಯಲ್ಲಿ ಪೂಜಿಸಿದನು (೪). ಆಮೇಲೆ ಹೀಗೆಂದನು: "ಓ ಪ್ರಭುವೆ, ನನ್ನ ದೇಹವಿದ್ದುದು ಈ ದಿನ ಸಫಲವಾಯಿತು. ಈ ದಿನವೇ ಸಕಲ ಪುರುಷಾರ್ಥವೂ ಲಭಿಸಿತು. ಭಗವನ್, ನಿನ್ನ ಪಾದವನ್ನು ಭಜಿಸತಕ್ಕವರು ಸಂಸಾರಮಾರ್ಗದ ಪಾರವನ್ನು (ಮೋಕ್ಷವನ್ನು) ಐದಿದರು (೫). ಭಗವಂತನೂ ಬ್ರಹ್ಮವಸ್ತುವೂ ಪರಮಾತ್ಮನೂ ಆದ ನಿನಗೆ ನಮಸ್ಕಾರ. ಲೋಕಸೃಷ್ಟಿಯ ವಿಕಲ್ಪಕ್ಕೆ ನಿಮಿತ್ತ

---

* ಏಕಾದಶಿಯಂದು ಮಧ್ಯರಾತ್ರವಾದಮೇಲೆ ಸ್ವಲ್ಪಕಾಲ ದ್ವಾದಶಿಯಿದ್ದರೂ ಆಗ ಪಾರಣೆಯನ್ನು ನಡೆಸಬೇಕೆಂದು ಶಾಸ್ತ್ರವಿಧಿಯುಂಟು. ಆದ್ದರಿಂದ ನಂದನು ಅರುಣೋದಯವಾಗುವವರೆಗೂ ಕಾಯದೆ ರಾತ್ರಿಯಲ್ಲಿಯೇ ಸ್ನಾನಕ್ಕಾಗಿ ಹೋದನು. ಈ ಶಾಸ್ತ್ರವನ್ನರಿಯದ ವರುಣಭೃತ್ಯನು ಆಸುರೀವೇಳೆಯಲ್ಲಿ ಸ್ನಾನಕ್ಕೆ ಬಂದನೆಂದು ನಂದನನ್ನು ಹಿಡಿದುಕೊಂಡು ಹೋದನು.

*

**ಅಜಾನತಾ ಮಾಮಕೇನ ಮೂಢೇನಾಕಾರ್ಯವೇದಿನಾ ।**
**ಆನೀತೋಽಯಂ ತವ ಪಿತಾ ತದ್ ಭವಾನ್ ಕ್ಷಂತುಮರ್ಹತಿ ॥ ೭**

**ಮಮಾಪ್ಯನುಗ್ರಹಂ ಕೃಷ್ಣ ಕರ್ತುಮರ್ಹಸ್ಯಶೇಷದೃಕ್ ।**
**ಗೋವಿಂದ ನೀಯತಾಮೇಷ ಪಿತಾ ತೇ ಪಿತೃವತ್ಸಲ ॥ ೮**

ಶ್ರೀಶುಕ ಉವಾಚ—

**ಏವಂ ಪ್ರಸಾದಿತಃ ಕೃಷ್ಣೋ ಭಗವಾನೀಶ್ವರೇಶ್ವರಃ ।**
**ಆದಾಯಾಗಾತ್ ಸ್ವಪಿತರಂ ಬಂಧೂನಾಂ ಚಾವಹನ್ಮುದಮ್ ॥ ೯**

**ನಂದಸ್ತ್ವತೀಂದ್ರಿಯಂ ದೃಷ್ಟ್ವಾ ಲೋಕಪಾಲಮಹೋದಯಮ್ ।**
**ಕೃಷ್ಣೇ ಚ ಸನ್ನತಿಂ ತೇಷಾಂ ಜ್ಞಾತಿಭ್ಯೋ ವಿಸ್ಮಿತೋಽಬ್ರವೀತ್ ॥**

**ತೇ ತ್ವೌತ್ಸುಕ್ಯಧಿಯೋ ರಾಜನ್ ಮತ್ವಾ ಗೋಪಾಸ್ತಮೀಶ್ವರಮ್ ।**
**ಅಪಿ ನಃ ಸ್ವಗತಿಂ ಸೂಕ್ಷ್ಮಾಮುಪಾಧಾಸ್ಯದಧೀಶ್ವರಃ ॥ ೧೧**

**ಇತಿ ಸ್ವಾನಾಂ ಸ ಭಗವಾನ್ ವಿಜ್ಞಾಯಾಖಿಲದೃಕ್ ಸ್ವಯಮ್ ।**
**ಸಂಕಲ್ಪಸಿದ್ಧಯೇ ತೇಷಾಂ ಕೃಪಯೈತದಚಿಂತಯತ್ ॥ ೧೨**

---

ವಾದ ಮಾಯೆ ನಿನ್ನ ಬಳಿ ಸುಳಿಯದು (೬). (ಶಾಸ್ತ್ರವಿಧಿಯನ್ನು) ಅರಿಯದ ಮೂಢನೂ ಕರ್ತವ್ಯಜ್ಞಾನವಿಲ್ಲದವನೂ ಆದ ನನ್ನ ಭೃತ್ಯನು ನಿನ್ನ ತಂದೆಯನ್ನು ಇಲ್ಲಿಗೆ ತಂದನು. ಪೂಜ್ಯನಾದ ನೀನು ಅದನ್ನು ಮನ್ನಿಸಬೇಕು (೭). ಶ್ರೀಕೃಷ್ಣ, ಸರ್ವಜ್ಞನಾದ ನೀನು ನನ್ನನ್ನು ಅನುಗ್ರಹಿಸು. ಹೇ ಗೋವಿಂದ, ಪಿತೃವತ್ಸಲ, ನಿನ್ನ ತಂದೆಯನ್ನು ಕರೆದೊಯ್ಯಬಹುದು" ಎಂದನು(೮). ಹೀಗೆ ಯಾಚಿಸಿದ ಮೇಲೆ ಈಶ್ವರೇಶ್ವರನಾದ ಶ್ರೀಕೃಷ್ಣನು ಪ್ರಸನ್ನನಾಗಿ ತಂದೆಯನ್ನು ಕರೆದುಕೊಂಡು ಮರಳಿದನು. ಬಂಧುಗಳಿಗೆ ಆನಂದವನ್ನುಂಟುಮಾಡಿದನು (೯). ನಂದಗೋಪನಾದರೋ ಹಿಂದೆಂದೂ ಕಾಣದ ವರುಣನ ಸಂಪದ್ವೈಭವವನ್ನೂ ಕೃಷ್ಣನಲ್ಲಿ ಅವನ ವಿನಯವನ್ನೂ ನೋಡಿ ವಿಸ್ಮಿತನಾಗಿ ಅದೆಲ್ಲವನ್ನೂ ತನ್ನ ಬಾಂಧವರಿಗೆ ವಿವರಿಸಿದನು (೧೦). ಪರೀಕ್ಷಿತರಾಜ, ಆ ಗೊಲ್ಲರು ಕೌತುಕಾವಿಷ್ಟರಾಗಿ ಕೃಷ್ಣನನ್ನು ದೇವರೆಂದೇ ಭಾವಿಸಿದರು. ಈ ಅಧೀಶ್ವರನು ಸೂಕ್ಷ್ಮವಾದ ತನ್ನ ಕೈವಲ್ಯಸ್ಥಾನವನ್ನು ನಮಗೆ ಅನುಗ್ರಹಿಸಬಹುದೆ–ಎಂದು ಆಶಿಸಿದರು (೧೧). ಈ ಪ್ರಕಾರವಾಗಿದ್ದ ತನ್ನವರ ಸಂಕಲ್ಪವನ್ನು ಸರ್ವಜ್ಞ

**ಜನೋ ವೈ ಲೋಕ ಏಕಸ್ಮಿನ್ನವಿದ್ಯಾಕಾಮಕರ್ಮಭಿಃ ।**
**ಉಚ್ಚಾವಚಾಸು ಗತಿಷು ನ ವೇದ ಸ್ವಾಂ ಗತಿಂ ಭ್ರಮನ್ ॥ ೧೩**
**ಇತಿ ಸಂಚಿಂತ್ಯ ಭಗವಾನ್ ಮಹಾಕಾರುಣಿಕೋ ಹರಿಃ ।**
**ದರ್ಶಯಾಮಾಸ ಲೋಕಂ ಸ್ವಂ ಗೋಪಾನಾಂ ತಮಸಃ ಪರಮ್ ॥**
**ಸತ್ಯಂ ಜ್ಞಾನಮನಂತಂ ಯದ್ ಬ್ರಹ್ಮ ಜ್ಯೋತಿಃ ಸನಾತನಮ್ ।**
**ಯದ್ಧಿ ಪಶ್ಯಂತಿ ಮುನಯೋ ಗುಣಾಪಾಯೇ ಸಮಾಹಿತಾಃ ॥ ೧೫**
**ತೇ ತು ಬ್ರಹ್ಮಹ್ರದಂ ನೀತಾ ಮಗ್ನಾಃ ಕೃಷ್ಣೇನ ಚೋದ್ಧೃತಾಃ ।**
**ದದೃಶುರ್ಬ್ರಹ್ಮಣೋ ಲೋಕಂ ಯತ್ರಾಕ್ರೂರೋಽಧ್ಯಗಾತ್ ಪುರಾ**

---

ನಾದ ಭಗವಂತನು ತಿಳಿದುಕೊಂಡು, ಅವರ ಸಂಕಲ್ಪವು ಸಿದ್ಧಿಸಲೆಂದು ಬಗೆದು ಕೃಪೆಯಿಂದ ಹೀಗೆ ಆಲೋಚಿಸಿದನು (೧೨). ಹೇಗೆಂದರೆ, " ಈ ಲೋಕದಲ್ಲಿ ಜನರು ಅವಿದ್ಯಾಕಾಮಕರ್ಮಗಳಿಗೆ ವಶರಾಗಿ ನಾನಾಬಗೆಯ ದೇವತಿರ್ಯಗಾದಿ ಜನ್ಮಗಳಲ್ಲಿ ಸಿಕ್ಕಿ ಅಲೆಯುತ್ತಿದ್ದಾರೆ. ತಮ್ಮ ಗುರಿಯೇನೆಂಬುದನ್ನು ತಿಳಿಯಲಾರದೆ ಹೋಗಿದ್ದಾರೆ " (೧೩). ಹೀಗೆ ಆಲೋಚಿಸಿ ಪರಮಕಾರುಣಿಕನಾದ ಶ್ರೀಹರಿಯು ಅವಿದ್ಯೆಯ ಆಚೆಗಿರುವ ತನ್ನ ಸ್ವರೂಪವನ್ನೂ ತನ್ನ ವೈಕುಂಠಲೋಕವನ್ನೂ ಗೊಲ್ಲರಿಗೆ ತೋರಿಸಿದನು (೧೪). ಸತ್ಯವೂ ಜ್ಞಾನವೂ ಅನಂತವೂ ಶಾಶ್ವತವೂ ಸ್ವಪ್ರಕಾಶಜ್ಯೋತಿಯೂ ಆದ ಯಾವ ಬ್ರಹ್ಮ ಉಂಟೋ, ಗುಣವಿಮುಕ್ತರಾದಾಗ ಸಮಾಧಿಯಲ್ಲಿರುವ ಯೋಗಿಗಳು ಯಾವುದನ್ನು ಸಾಕ್ಷಾತ್ಕರಿಸುವರೋ, ಆ ಬ್ರಹ್ಮವಸ್ತುವನ್ನು ಕೃಪೆಯಿಂದ ತೋರಿಸಿದನು(೧೫). ಶ್ರೀಕೃಷ್ಣನು ಅವರನ್ನು ಬ್ರಹ್ಮವೆಂಬ ಮಡುವಿಗೆ ಒಯ್ದು ಅದರಲ್ಲಿ ಮುಳುಗಿಸಿ ಎತ್ತಿದನು. ಆ ಗೊಲ್ಲರು ಬ್ರಹ್ಮಲೋಕವನ್ನು (ವೈಕುಂಠವನ್ನು) ಆಗ ಕಂಡರು. ಹಿಂದೆ ಅಕ್ರೂರನು ಕಂಡಿದ್ದ ಬ್ರಹ್ಮಲೋಕವೇ ಅದು* (೧೬).

---

* ಅಕ್ರೂರನ ವಿಷಯವು ಮುಂದೆ ೩೯ನೆಯ ಅಧ್ಯಾಯದಲ್ಲಿ ಬರುತ್ತದೆ. ಶುಕರು ಪರೀಕ್ಷಿತನಿಗೆ ಅದನ್ನು ಹೇಳುತ್ತಿರುವ ಸಮಯದಲ್ಲಿ ಅದು ನಡೆದುಹೋಗಿದ್ದುದರಿಂದ, **ಹಿಂದೆ** ಎಂದು ಶುಕರ ಬಾಯಿಂದ ಬಂದಿದೆ. ಬ್ರಹ್ಮಹ್ರದ=ಗಾಢವೂ ಗೂಢವೂ ಆದ್ದರಿಂದ ಬ್ರಹ್ಮವು ಮಡುವಿದ್ದಂತೆ. ಅಥವಾ ಅಕ್ರೂರನು ಯಮುನೆಯಲ್ಲಿ ಮುಳುಗಿದ ಸ್ಥಳಕ್ಕೆ ಬ್ರಹ್ಮಹ್ರದವೆಂದು ಹೆಸರು. ಕೃಷ್ಣನು ಗೊಲ್ಲರನ್ನು ಅಲ್ಲಿಗೆ ಕರೆದೊಯ್ದು ಬ್ರಹ್ಮಲೋಕವನ್ನು ತೋರಿಸಿದನೆಂದೂ ಹೇಳಬಹುದು.

ನಂದಾದಯಸ್ತು ತಂ ದೃಷ್ಟ್ವಾ ಪರಮಾನಂದನಿರ್ವೃತಾಃ ।
ಕೃಷ್ಣಂ ಚ ತತ್ರಚ್ಛಂದೋಭಿಃ ಸ್ತೂಯಮಾನಂ ಸುವಿಸ್ಮಿತಾಃ ॥ ೧೭

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಾವಿಂಶಾಧ್ಯಾಯಃ

---

## ಏಕೋನತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಭಗವಾನಪಿ ತಾ ರಾತ್ರೀಃ ಶರದೋತ್ಫುಲ್ಲಮಲ್ಲಿಕಾಃ ।
ವೀಕ್ಷ್ಯ ರಂತುಂ ಮನಶ್ಚಕ್ರೇ ಯೋಗಮಾಯಾಮುಪಾಶ್ರಿತಃ ॥ ೧

ತದೋಡುರಾಜಃ ಕಕುಭಃ ಕರೈರ್ಮುಖಂ
ಪ್ರಾಚ್ಯಾ ವಿಲಿಂಪನ್ನರುಣೇನ ಶಂತಮೈಃ ।

---

ವೈಕುಂಠದಲ್ಲಿ ವೇದಗಳಿಂದ ಸ್ತುತಿಸಲ್ಪಡುತ್ತಿದ್ದ ಶ್ರೀಕೃಷ್ಣನನ್ನು ವೀಕ್ಷಿಸಿ ನಂದಾದಿಗೋಪಾಲರು ಪರಮಾನಂದತುಂದಿಲರಾಗಿ ಅಚ್ಚರಿಗೊಂಡರು (೧೭).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ

---

## ಅಧ್ಯಾಯ ೨೯

ಶ್ರೀಕೃಷ್ಣನ ವೇಣುನಾದವನ್ನು ಕೇಳಿ ಗೋಪಿಯರ ಆಗಮನ;
ಸಂಭಾಷಣೆ; ಕ್ರೀಡೆ. ಶ್ರೀಕೃಷ್ಣನ ಅಂತರ್ಧಾನ

ಶುಕಮಹರ್ಷಿಗಳು ಹೇಳಿದರು : ಶರತ್ಕಾಲದಿಂದ ಮಲ್ಲಿಗೆಗಳು ಅರಳಿರುವುದನ್ನು ವೀಕ್ಷಿಸಿ, ಯೋಗಮಾಯೆಯನ್ನವಲಂಬಿಸಿದ ಭಗವಂತನೂ ಸಹ ಆ ರಾತ್ರಿಗಳಲ್ಲಿ ವಿಹರಿಸಬೇಕೆಂದು ಮನಸ್ಸು ಮಾಡಿದನು! (೧). ಒಡನೆಯೇ ಉಡುರಾಜನಾದ ಚಂದ್ರನು ಸುಖಸ್ಪರ್ಶವನ್ನೀಯುವ ಕೈಗಳೆಂಬ ಕಿರಣಗಳಿಂದ

ಸ ಚರ್ಷಣೀನಾಮುದಗಾಚ್ಛುಚೋ ಮೃಜನ್
ಪ್ರಿಯಃ ಪ್ರಿಯಾಯಾ ಇವ ದೀರ್ಘದರ್ಶನಃ ॥ ೨

ದೃಷ್ಟ್ವಾ ಕುಮುದ್ವಂತಮಖಂಡಮಂಡಲಂ
ರಮಾನನಾಭಂ ನವಕುಂಕುಮಾರುಣಮ್ ।
ವನಂ ಚ ತತ್ಕೋಮಲಗೋಭಿರಂಜಿತಂ
ಜಗೌ ಕಲಂ ವಾಮದೃಶಾಂ ಮನೋಹರಮ್ ॥ ೩

ನಿಶಮ್ಯ ಗೀತಂ ತದನಂಗವರ್ಧನಂ
ವ್ರಜಸ್ತ್ರಿಯಃ ಕೃಷ್ಣಗೃಹೀತಮಾನಸಾಃ ।
ಆಜಗ್ಮುರನ್ಯೋಽನ್ಯಮಲಕ್ಷಿತೋದ್ಯಮಾಃ
ಸ ಯತ್ರ ಕಾಂತೋ ಜವಲೋಲಕುಂಡಲಾಃ ॥ ೪

ದುಹಂತ್ಯೋಽಭಿಯಯುಃ ಕಾಶ್ಚಿದ್ ದೋಹಂ ಹಿತ್ವಾ ಸಮುತ್ಸುಕಾಃ
ಪಯೋಽಧಿಶ್ರಿತ್ಯ ಸಂಯಾವಮನುದ್ವಾಸ್ಯಾಪರಾ ಯಯುಃ ॥ ೫

---

ಪೂರ್ವದಿಗಂಗನೆಯ ಮುಖಕ್ಕೆ ಉದಯರಾಗವನ್ನು–ಕುಂಕುಮದ ಕೆಂಪನ್ನು ಬಳಿಯುತ್ತ ಮೇಲೆದ್ದನು! ದೀರ್ಘಕಾಲದ ಮೇಲೆ ಕಾಣಿಸಿಕೊಂಡ ಕಾಂತನು ಕಾಂತೆಯ ಶೋಕವನ್ನು ಹೋಗಲಾಡಿಸುವಂತೆ, ಜನರ ತಾಪವನ್ನು ಪರಿಹರಿಸುತ್ತ ಉದಯಿಸಿದನು (೨). ನೈದಿಲೆಗಳನ್ನು ನಗಿಸುವವನೂ ಲಕ್ಷ್ಮೀದೇವಿಯ ಮುಖದ ಸೊಬಗುಳ್ಳವನೂ ನವಕುಂಕುಮದಂತೆ ಅರುಣವರ್ಣನೂ ಆದ ಪೂರ್ಣಚಂದ್ರನನ್ನೂ ಅವನ ಕೋಮಲಕಿರಣಗಳಿಂದ ರಂಜಿತವಾದ ವನವನ್ನೂ ನೋಡಿ ಶ್ರೀಕೃಷ್ಣನು ಸುಂದರಿಯರನ್ನು ಮರುಳುಗೊಳಿಸುವಂತೆ ಇಂಪಾಗಿ ಹಾಡತೊಡಗಿದನು (೩). ಮನ್ಮಥವಿವರ್ಧನವಾದ ಆ ಗೀತವನ್ನು ಕೇಳಿ ಕೃಷ್ಣನಲ್ಲಿ ನೆಟ್ಟಮನಸ್ಸುಳ್ಳ ಗೋಪಿಕೆಯರು ಒಬ್ಬರಿಗೊಬ್ಬರು ಹೇಳದೆ ಹಿಡಿದ ಕೆಲಸವನ್ನು ಕೈಬಿಟ್ಟು ಕೃಷ್ಣನಿದ್ದಲ್ಲಿಗೆ ಬಂದರು. ಪ್ರಿಯನು ಹಾಡುವ ಜಾಡನ್ನು ಹಿಡಿದು, ಕುಂಡಲಗಳು ಅಲ್ಲಾಡುತ್ತಿರಲು ಭರದಿಂದ ಬಂದರು (೪). ಹಾಲು ಕರೆಯುತ್ತಿದ್ದವರು ಸಮುತ್ಸುಕರಾಗಿ ಹಾಲನ್ನು ಅಲ್ಲಿಯೇ ಇಟ್ಟು ಬಂದರು. ಒಲೆಯ ಮೇಲೆ ಹಾಲಿಟ್ಟವರು ಹಾಗೆಯೇ ಬಂದರು. ಗೋಧಿಯ ರವೆಯನ್ನು

ಪರಿವೇಷಯಂತ್ಯಸ್ತದ್ಧಿತ್ವಾ ಪಾಯಯಂತ್ಯಃ ಶಿಶೂನ್ ಪಯಃ ।
ಶುಶ್ರೂಷಂತ್ಯಃ ಪತೀನ್ ಕಾಶ್ಚಿದಶ್ನಂತ್ಯೋಽಪಾಸ್ಯ ಭೋಜನಮ್ ॥

ಲಿಂಪಂತ್ಯಃ ಪ್ರಮೃಜಂತ್ಯೋಽನ್ಯಾ ಅಂಜಂತ್ಯಃ ಕಾಶ್ಚ ಲೋಚನೇ ।
ವ್ಯತ್ಯಸ್ತವಸ್ತ್ರಾಭರಣಾಃ ಕಾಶ್ಚಿತ್ ಕೃಷ್ಣಾಂತಿಕಂ ಯಯುಃ ॥ ೭

ತಾ ವಾರ್ಯಮಾಣಾಃ ಪತಿಭಿಃ ಪಿತೃಭಿರ್ಭ್ರಾತೃಬಂಧುಭಿಃ ।
ಗೋವಿಂದಾಪಹೃತಾತ್ಮಾನೋ ನ ನ್ಯವರ್ತಂತ ಮೋಹಿತಾಃ ॥ ೮

ಅಂತರ್ಗೃಹಗತಾಃ ಕಾಶ್ಚಿದ್ ಗೋಪ್ಯೋಽಲಬ್ಧವಿನಿರ್ಗಮಾಃ ।
ಕೃಷ್ಣಂ ತದ್ಭಾವನಾಯುಕ್ತಾ ದಧ್ಯುರ್ಮೀಲಿತಲೋಚನಾಃ ॥ ೯

ದುಃಸಹಪ್ರೇಷ್ಠವಿರಹತೀವ್ರತಾಪಧುತಾಶುಭಾಃ ।
ಧ್ಯಾನಪ್ರಾಪ್ತಾಚ್ಯುತಾಶ್ಲೇಷನಿರ್ವೃತ್ಯಾ ಕ್ಷೀಣಮಂಗಲಾಃ ॥ ೧೦

---

ಹುರಿಯುತ್ತಿದ್ದ ಹೆಂಗಸರು ಅದನ್ನು ಇಳಿಸದೆಯೇ ಬಂದರು (೫). ಊಟಕ್ಕೆ ಬಡಿಸುತ್ತಿದ್ದ ಗೋಪಿಯರು ಬಡಿಸುವುದನ್ನು ಬಿಟ್ಟು, ಮಕ್ಕಳಿಗೆ ಹಾಲನ್ನು ಕುಡಿಸುತ್ತಿದ್ದವರು ಕುಡಿಸುವುದನ್ನು ನಿಲ್ಲಿಸಿ, ಗಂಡಂದಿರ ಶುಶ್ರೂಷೆಯಲ್ಲಿದ್ದವರು ಅದನ್ನು ವರ್ಜಿಸಿ, ಊಟಮಾಡುತ್ತಿದ್ದವರು ಊಟವನ್ನು ತೊರೆದು ಕೃಷ್ಣನಿದ್ದಲ್ಲಿಗೆ ಧಾವಿಸಿದರು (೬). ಚಂದನವನ್ನು ತೊಡೆದುಕೊಳ್ಳುತ್ತಿದ್ದ ಗೋಪಿಯರು, ಕೈಕಾಲುಗಳನ್ನು ಒರೆಸಿಕೊಳ್ಳುತ್ತಿದ್ದವರು, ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಳ್ಳುತ್ತಿದ್ದವರು–ಎಲ್ಲರೂ ತಮ್ಮ ವಸ್ತ್ರಾಭರಣಗಳು ವ್ಯತ್ಯಾಸವಾದರೂ ಗಮನಿಸದೆ ಕೃಷ್ಣನ ಬಳಿಗೆ ಓಡಿದರು (೭). ಅವರ ಗಂಡಂದಿರೂ ತಂದೆತಾಯಿಗಳೂ ಸೋದರರೂ ಬಂಧುಗಳೂ ಬೇಡವೆಂದರೂ ಮೋಹಿತರಾದ ಗೋಪಿಕೆಯರು ಹಿಂದಿರುಗಲಿಲ್ಲ. ಗೋವಿಂದನು ಅವರ ಹೃದಯವನ್ನು ಸೂರೆಗೊಂಡಿದ್ದನು(೮). ಹೊರಗೆ ಹೋಗಲು ಯಾರಿಗೆ ಅವಕಾಶವಾಗಲಿಲ್ಲವೋ ಆ ಸ್ತ್ರೀಯರು ಮನೆಯೊಳಗಿದ್ದರೂ ಕೃಷ್ಣಭಾವನೆಯಲ್ಲಿ ಮುಳುಗಿ ಕಣ್ಮುಚ್ಚಿ ಅವನನ್ನೇ ಧ್ಯಾನಿಸುತ್ತಿದ್ದರು(೯). ದುಃಸಹವೂ ಪ್ರಬಲವೂ ತೀವ್ರವೂ ಆದ ವಿರಹತಾಪವನ್ನನುಭವಿಸಿದ್ದರಿಂದ ಆ ಸ್ತ್ರೀಯರ ಪಾಪಕರ್ಮವು ನಷ್ಟವಾಯಿತು. ಧ್ಯಾನದಲ್ಲಿ ಗೋಚರಿಸಿದ ಶ್ರೀಕೃಷ್ಣನ ಆಲಿಂಗನ ಸುಖವನ್ನು ಅನುಭವಿಸಿದ್ದ

**ತಮೇವ ಪರಮಾತ್ಮಾನಂ ಜಾರಬುದ್ಧ್ಯಾಪಿ ಸಂಗತಾಃ ।**
**ಜಹುರ್ಗುಣಮಯಂ ದೇಹಂ ಸದ್ಯಃ ಪ್ರಕ್ಷೀಣಬಂಧನಾಃ ॥ ೧೧**

ರಾಜೋವಾಚ—

**ಕೃಷ್ಣಂ ವಿದುಃ ಪರಂ ಕಾಂತಂ ನ ತು ಬ್ರಹ್ಮತಯಾ ಮುನೇ ।**
**ಗುಣಪ್ರವಾಹೋಪರಮಸ್ತಾಸಾಂ ಗುಣಧಿಯಾಂ ಕಥಮ್ ॥ ೧೨**

ಶ್ರೀಶುಕ ಉವಾಚ—

**ಉಕ್ತಂ ಪುರಸ್ತಾದೇತತ್ತೇ ಚೈದ್ಯಃ ಸಿದ್ಧಿಂ ಯಥಾ ಗತಃ ।**
**ದ್ವಿಷನ್ನಪಿ ಹೃಷೀಕೇಶಂ ಕಿಮುತಾಧೋಕ್ಷಜಪ್ರಿಯಾಃ ॥ ೧೩**

**ನೃಣಾಂ ನಿಃಶ್ರೇಯಸಾರ್ಥಾಯ ವ್ಯಕ್ತಿರ್ಭಗವತೋ ನೃಪ ।**
**ಅವ್ಯಯಸ್ಯಾಪ್ರಮೇಯಸ್ಯ ನಿರ್ಗುಣಸ್ಯ ಗುಣಾತ್ಮನಃ ॥ ೧೪**

---

ರಿಂದ ಅವರ ಪುಣ್ಯಕರ್ಮವೂ ಕ್ಷೀಣಿಸಿತು (೧೦). ಹೀಗೆ ಆ ಪರಮಾತ್ಮನನ್ನು ಜಾರಬುದ್ಧಿಯಿಂದಲೇ ಧ್ಯಾನಿಸಿದರೂ ಸಹ, ಆ ಸ್ತ್ರೀಯರು ಆಗಲೇ ಸಂಸಾರ ಬಂಧನವನ್ನು ಕಳಚಿ ಗುಣಮಯವಾದ ದೇಹವನ್ನು ತೊರೆದರು (ಮುಕ್ತರಾದರು)* (೧೧). ಆಗ ಪರೀಕ್ಷಿತರಾಜನು ಶುಕಮುನಿಗಳನ್ನು ಕುರಿತು "ಮುನಿಗಳೆ, ಆ ಸ್ತ್ರೀಯರು ಕೃಷ್ಣನನ್ನು ತಮ್ಮ ಕಾಂತನೆಂದು ತಿಳಿದಿದ್ದರು. ಪರಬ್ರಹ್ಮವೆಂದು ತಿಳಿದಿರಲಿಲ್ಲ. ಸಗುಣಬುದ್ಧಿಯುಳ್ಳ ಅವರಿಗೆ ಗುಣಪ್ರವಾಹವೆಂಬ ಸಂಸಾರದ ನಾಶವು ಹೇಗಾಗುತ್ತದೆ?" ಎಂದು ಕೇಳಿದನು (೧೨). ಶುಕಮಹರ್ಷಿಗಳು ಹೇಳಿದರು: ಪರೀಕ್ಷಿತ, ಇದನ್ನು ಹಿಂದೆ ಹೇಳಿದ್ದೇನೆ. ಶಿಶುಪಾಲನು ಹೇಗೆ ಸಿದ್ಧಿಯನ್ನು ಪಡೆದನೆಂಬುದನ್ನು ತಿಳಿಸಿದ್ದೇನೆ. ಶ್ರೀಕೃಷ್ಣನನ್ನು ದ್ವೇಷಿಸತಕ್ಕವನಿಗೂ ಸಿದ್ಧಿ ದೊರೆಯುವುದಾದರೆ ಅವನನ್ನು ಪ್ರೀತಿಸತಕ್ಕವರಿಗೆ ದೊರೆಯುವುದೆಂದು ಹೇಳತಕ್ಕದ್ದೇನಿದೆ? (೧೩). ರಾಜ, ಜನರಿಗೆ ಕೈವಲ್ಯವು ಸಿದ್ಧಿಸಲೆಂದೇ ಭಗವಂತನ ಅವತಾರವಾಗುತ್ತದೆ. ಅವ್ಯಯನೂ

---

* ಮೋಕ್ಷಕ್ಕೆ ಪಾಪಪುಣ್ಯಗಳೆರಡೂ ಅಡ್ಡಿಯಾಗುತ್ತವೆ. ಆ ಸ್ತ್ರೀಯರು ಕೃಷ್ಣನ ವಿರಹದುಃಖವನ್ನನುಭವಿಸಿ ಪಾಪವನ್ನೂ ಆಲಿಂಗನಸುಖವನ್ನನುಭವಿಸಿ ಪುಣ್ಯವನ್ನೂ ನೀಗಿ ಮುಕ್ತರಾದರು. ಅವರು ಜಾರಬುದ್ಧಿಯಿಂದ ಧ್ಯಾನಿಸಿದರೂ ಪರಮಾತ್ಮನ ಧ್ಯಾನವು ಫಲವನ್ನು ನೀಡಿತು, ಯಾವ ಬುದ್ಧಿಯಿಂದ ಕುಡಿದರೂ ಅಮೃತವು ತನ್ನ ಫಲವನ್ನು ನೀಡುವಂತೆ—ಎಂದು ಅಭಿಪ್ರಾಯ.

**ಕಾಮಂ ಕ್ರೋಧಂ ಭಯಂ ಸ್ನೇಹಮೈಕ್ಯಂ ಸೌಹೃದಮೇವ ಚ ।**
**ನಿತ್ಯಂ ಹರೌ ವಿದಧತೋ ಯಾಂತಿ ತನ್ಮಯತಾಂ ಹಿ ತೇ ॥ ೧೫**

**ನ ಚೈವ ವಿಸ್ಮಯಃ ಕಾರ್ಯೋ ಭವತಾ ಭಗವತ್ಯಜೇ ।**
**ಯೋಗೇಶ್ವರೇಶ್ವರೇ ಕೃಷ್ಣೇ ಯತ ಏತದ್ ವಿಮುಚ್ಯತೇ ॥ ೧೬**

**ತಾ ದೃಷ್ಟ್ವಾಂತಿಕಮಾಯಾತಾ ಭಗವಾನ್ ವ್ರಜಯೋಷಿತಃ ।**
**ಅವದದ್ ವದತಾಂ ಶ್ರೇಷ್ಠೋ ವಾಚಃಪೇಶೈರ್ವಿಮೋಹಯನ್॥ ೧೭**

**ಶ್ರೀಭಗವಾನುವಾಚ—**

**ಸ್ವಾಗತಂ ವೋ ಮಹಾಭಾಗಾಃ ಪ್ರಿಯಂ ಕಿಂ ಕರವಾಣಿ ವಃ ।**
**ವ್ರಜಸ್ಯಾನಾಮಯಂ ಕಚ್ಚಿದ್ ಬ್ರೂತಾಗಮನಕಾರಣಮ್ ॥ ೧೮**

**ರಜನ್ಯೇಷಾ ಘೋರರೂಪಾ ಘೋರಸತ್ತ್ವ ನಿಷೇವಿತಾ ।**
**ಪ್ರತಿಯಾತ ವ್ರಜಂ ನೇಹ ಸ್ಥೇಯಂ ಸ್ತ್ರೀಭಿಃ ಸುಮಧ್ಯಮಾಃ ॥ ೧೯**

**ಮಾತರಃ ಪಿತರಃ ಪುತ್ರಾ ಭ್ರಾತರಃ ಪತಯಶ್ಚ ವಃ ।**
**ವಿಚಿನ್ವಂತಿ ಹ್ಯಪಶ್ಯಂತೋ ಮಾ ಕೃಢ್ವಂ ಬಂಧುಸಾಧ್ವಸಮ್ ॥ ೨೦**

---

ಅಪ್ರಮೇಯನೂ ನಿರ್ಗುಣನೂ ಆದವನು ಸಗುಣನಾಗಿ ಗೋಚರಿಸುತ್ತಾನೆ (೧೪). ಕಾಮ, ಕ್ರೋಧ, ಭಯ, ಸ್ನೇಹ, ಅವನೇ ನಾನೆಂಬ ಅಭೇದ ಬುದ್ಧಿ, ಭಕ್ತಿ–ಇವುಗಳಲ್ಲಿ ಯಾವುದನ್ನೇ ಆಗಲಿ ಭಗವಂತನ ವಿಷಯದಲ್ಲಿ ಸದಾ ಇರಿಸಿದವರು ಭಗವನ್ಮಯವಾಗಿಬಿಡುತ್ತಾರೆ (೧೫). ಪರಮಾತ್ಮನೂ ಅಜನೂ ಯೋಗೇಶ್ವರೇಶ್ವರನೂ ಆದ ಕೃಷ್ಣನಲ್ಲಿ ನೀನು ಹೀಗೆ ಅಚ್ಚರಿಗೊಳ್ಳಬೇಕಾದುದೇನೂ ಇಲ್ಲ. ಸಕಲರಿಗೂ ಮೋಕ್ಷದಾಯಕನು ಆತನೇ (೧೬). ಅಂತು ತನ್ನ ಸಮೀಪಕ್ಕೆ ಬಂದ ವ್ರಜಸ್ತ್ರೀಯರನ್ನು ವೀಕ್ಷಿಸಿ ವಾಗ್ಮಿದರಲ್ಲಿ ವರಿಷ್ಠನಾದ ವಾಸುದೇವನು ವಾಗ್ವಿಲಾಸಗಳಿಂದ ವಿಮೋಹಗೊಳಿಸುತ್ತ ನುಡಿದನು (೧೭). "ಎಲೌ ಮಾನ್ಯರಾದ ಮಹಿಳೆಯರೆ, ನಿಮಗೆ ಸ್ವಾಗತ. ನಿಮಗೆ ಪ್ರಿಯವಾದುದೇನನ್ನು ಮಾಡಲಿ? ಗೋಕುಲಕ್ಕೆ ಕ್ಷೇಮವಷ್ಟೆ? ಬಂದ ಕಾರಣವೇನು, ಹೇಳಿರಿ (೧೮). ಇದು ಭೀಕರವಾದ ರಾತ್ರಿ. ಘೋರ ಜಂತುಗಳು ಸುತ್ತಾಡುತ್ತವೆ. ವನಿತೆಯರೆ, ವ್ರಜಕ್ಕೆ ತೆರಳಿರಿ. ನೀವು ಇಲ್ಲಿರಬಾರದು(೧೯). ನಿಮ್ಮ ತಾಯಿತಂದೆಯರೂ ಮಕ್ಕಳೂ ಸೋದರರೂ ಪತಿಗಳೂ ನಿಮ್ಮನ್ನು

ದೃಷ್ಟಂ ವನಂ ಕುಸುಮಿತಂ ರಾಕೇಶಕರರಂಜಿತಮ್ ।
ಯಮುನಾನಿಲಲೀಲೈಜತ್ತರುಪಲ್ಲವಶೋಭಿತಮ್ ॥ ೨೧

ತದ್ ಯಾತ ಮಾ ಚಿರಂ ಗೋಷ್ಠಂ ಶುಶ್ರೂಷಧ್ವಂ ಪತೀನ್ ಸತೀಃ ।
ಕ್ರಂದಂತಿ ವತ್ಸಾ ಬಾಲಾಶ್ಚ ತಾನ್ ಪಾಯಯತ ದುಹ್ಯತ ॥ ೨೨

ಅಥವಾ ಮದಭಿಸ್ನೇಹಾದ್ ಭವತ್ಯೋ ಯಂತ್ರಿತಾಶಯಾಃ ।
ಆಗತಾ ಹ್ಯುಪಪನ್ನಂ ವಃ ಪ್ರೀಯಂತೇ ಮಯಿ ಜಂತವಃ ॥ ೨೩

ಭರ್ತುಃ ಶುಶ್ರೂಷಣಂ ಸ್ತ್ರೀಣಾಂ ಪರೋ ಧರ್ಮೋ ಹ್ಯಮಾಯಯಾ
ತದ್ಬಂಧೂನಾಂ ಚ ಕಲ್ಯಾಣ್ಯಃ ಪ್ರಜಾನಾಂ ಚಾನುಪೋಷಣಮ್ ॥

ದುಃಶೀಲೋ ದುರ್ಭಗೋ ವೃದ್ಧೋ ಜಡೋ ರೋಗ್ಯಧನೋಽಪಿ ವಾ
ಪತಿಃ ಸ್ತ್ರೀಭಿರ್ನ ಹಾತವ್ಯೋ ಲೋಕೇಪ್ಸುಭಿರಪಾತಕೀ ॥ ೨೫

---

ಕಾಣದೆ ಹುಡುಕಾಡಲಾರಂಭಿಸುತ್ತಾರೆ. ಬಂಧುಗಳು ಭಯಗೊಳ್ಳುವಂತೆ ಮಾಡಬೇಡಿರಿ (೨೦). ಇಂದು ಕಿರಣಗಳಿಂದ ರಮಣೀಯವಾದ ಕುಸುಮಿತ ವನವನ್ನು ಈಕ್ಷಿಸಿದ್ದಾಯಿತು. ಯಮುನೆಯ ಮೇಲೆ ಬೀಸಿಬರುವ ತಂಗಾಳಿಯ ಲೀಲೆಯಿಂದ ಅಲ್ಲಾಡುವ ಮರಚಿಗುರುಗಳಿಂದ ಶೋಭಿತವಾದುದನ್ನು ಕಂಡಾಯಿತು (೨೧). ಆದ್ದರಿಂದ ತಡಮಾಡದೆ ಹೊರಡಿರಿ. ಸಾಧ್ವಿಯರೆ, ಗೋಕುಲಕ್ಕೆ ಹೋಗಿ ನಿಮ್ಮ ಗಂಡಂದಿರ ಶುಶ್ರೂಷೆ ಮಾಡಿರಿ. ಕರುಗಳು ಕೂಗುತ್ತಿರಬಹುದು. ಮಕ್ಕಳು ಅಳುತ್ತಿರಬಹುದು. ಅವುಗಳಿಗೆ ಹಾಲು ಕುಡಿಸಿರಿ. ಹಾಲು ಕರೆಯಿರಿ (೨೨). ಒಂದುವೇಳೆ ನನ್ನ ಮೇಲಿನ ಸ್ನೇಹ ದಿಂದ ನೀವು ವಶೀಕೃತಚಿತ್ತರಾಗಿ ಇಲ್ಲಿಗೆ ಬಂದಿರಬಹುದು! ಅದೂ ಸಂಭವ. ಎಲ್ಲರೂ ನನ್ನನ್ನು ಪ್ರೀತಿಸುತ್ತಾರೆ (೨೩). ಆದರೆ ವಂಚನೆಯಿಲ್ಲದೆ ಗಂಡನ ಶುಶ್ರೂಷೆ ಮಾಡುವುದು ಹೆಂಗಸರಿಗೆ ಶ್ರೇಷ್ಠವಾದ ಧರ್ಮ. ಮಂಗಳಾಂಗಿಯರೆ, ಗಂಡನ ಬಂಧುಗಳನ್ನು ಉಪಚರಿಸುವುದೂ ಮಕ್ಕಳನ್ನು ಪೋಷಿಸುವುದೂ ಉತ್ತಮ ಧರ್ಮವೇ (೨೪). ಪತಿಯು ಕೆಟ್ಟ ಚಟದವನಾಗಿರಲಿ ಭಾಗ್ಯಹೀನ ನಾಗಿರಲಿ, ಮುದುಕನೋ ದಡ್ಡನೋ ರೋಗಿಯೋ ಬಡವನೋ ಆಗಿರಲಿ, ಆದರೂ ಪುಣ್ಯಲೋಕವನ್ನು ಬಯಸುವ ಸ್ತ್ರೀಯರು ಪಾತಕಿಯಲ್ಲದ ಪತಿಯನ್ನು

ಅಸ್ವರ್ಗ್ಯಮಯಶಸ್ಯಂ ಚ ಫಲ್ಗು ಕೃಚ್ಛ್ರಂ ಭಯಾವಹಮ್ ।
ಜುಗುಪ್ಸಿತಂ ಚ ಸರ್ವತ್ರ ಔಪಪತ್ಯಂ ಕುಲಸ್ತ್ರಿಯಾಃ ॥ ೨೬

ಶ್ರವಣಾದ್ ದರ್ಶನಾದ್ ಧ್ಯಾನಾನ್ಮಯಿ ಭಾವೋಽನುಕೀರ್ತನಾತ್ ।
ನ ತಥಾ ಸನ್ನಿಕರ್ಷೇಣ ಪ್ರತಿಯಾತ ತತೋ ಗೃಹಾನ್ ॥ ೨೭

ಶ್ರೀಶುಕ ಉವಾಚ—

ಇತಿ ವಿಪ್ರಿಯಮಾಕರ್ಣ್ಯ ಗೋಪ್ಯೋ ಗೋವಿಂದಭಾಷಿತಮ್ ।
ವಿಷಣ್ಣಾ ಭಗ್ನಸಂಕಲ್ಪಾಶ್ಚಿಂತಾಮಾಪುರ್ದುರತ್ಯಯಾಮ್ ॥ ೨೮

ಕೃತ್ವಾ ಮುಖಾನ್ಯವಶುಚಃ ಶ್ವಸನೇನ ಶುಷ್ಯದ್-
ಬಿಂಬಾಧರಾಣಿ ಚರಣೇನ ಭುವಂ ಲಿಖಂತ್ಯಃ ।
ಅಸ್ರೈರುಪಾತ್ತಮಷಿಭಿಃ ಕುಚಕುಂಕುಮಾನಿ
ತಸ್ಥುರ್ಮೃಜಂತ್ಯ ಉರುದುಃಖಭರಾಃ ಸ್ಮ ತೂಷ್ಣೀಮ್ ॥ ೨೯

ಪ್ರೇಷ್ಠಂ ಪ್ರಿಯೇತರಮಿವ ಪ್ರತಿಭಾಷಮಾಣಂ
ಕೃಷ್ಣಂ ತದರ್ಥವಿನಿವರ್ತಿತಸರ್ವಕಾಮಾಃ ।

---

ತೊರೆಯಬಾರದು (೨೫). ಯಾವ ಸಂದರ್ಭದಲ್ಲಿಯೂ ಜಾರತನವು ಕುಲಸ್ತ್ರೀಗೆ ತರವಲ್ಲ. ಅದು ಸ್ವರ್ಗಪ್ರಾಪ್ತಿಗೆ ಹಾನಿಕರವಾದದ್ದು. ಕೆಟ್ಟ ಹೆಸರನ್ನು ತರುವುದು. ಅಲ್ಪವೂ ತುಚ್ಛವೂ ಆದದ್ದು. ಅದು ವಿಪತ್ತಿಗೆ ಕಾರಣ. ಜುಗುಪ್ಸಿತವಾದ ನಡತೆ (೨೬). ಶ್ರವಣ, ದರ್ಶನ, ಧ್ಯಾನ, ಕೀರ್ತನೆಗಳಿಂದ ನನ್ನಲ್ಲಿ ಭಕ್ತಿಯು ನೆಲೆಸುವಂತೆ ಸಮೀಪದಲ್ಲಿ ಇದ್ದಮಾತ್ರದಿಂದ ಆಗದು. ಆದ್ದರಿಂದ ಮನೆಗೆ ಹಿಂದಿರುಗಿರಿ" ಎಂದನು (೨೭). ಹೀಗೆ ಗೋವಿಂದನು ಆಡಿದ ಅಪ್ರಿಯವಾದ ಮಾತನ್ನು ಆಕರ್ಣಿಸಿ ಗೋಪಿಯರು ವಿಷಣ್ಣರಾದರು. ಅವರ ಆಸೆ ಮುಗ್ಗರಿಸಿತು. ಗಾಢವಾದ ಚಿಂತೆ ಆವರಿಸಿತು (೨೮). ಆ ಗೋಪಿಯರು ದುಃಖದಿಂದ ಮುಖವನ್ನು ಬಾಗಿಸಿ ನಿಟ್ಟುಸಿರಿನಿಂದ ಬಿಂಬಾಧರಗಳನ್ನು ಬಾಡಿಸುತ್ತ ಕಾಲಿಂದ ನೆಲವನ್ನು ಕೆರೆಯುತ್ತ ನಿಂತರು. ಕಾಡಿಗೆ ಬಳಿದ ಕಣ್ಣೀರಿಂದ ಕುಚಕುಂಕುಮವನ್ನು ಒರಸುತ್ತ ಅತಿದುಃಖದಿಂದ ತಪ್ತರಾಗಿ ಮಾತಾಡದೆ ಸುಮ್ಮನಿದ್ದರು (೨೯). ಕೃಷ್ಣನಲ್ಲಿ ಅನುರಾಗವನ್ನಿಟ್ಟಿದ್ದ ಆ ಸ್ತ್ರೀಯರು ಅವನಿಗಾಗಿ ಸಕಲಕಾಮನೆಗಳನ್ನೂ ತೊರೆದು ಬಂದಿದ್ದರು. ತಮಗೆ ಅತ್ಯಂತ ಪ್ರಿಯ

ನೇತ್ರೇ ವಿಮೃಜ್ಯ ರುದಿತೋಪಹತೇ ಸ್ಮ ಕಿಂಚಿತ್
ಸಂರಂಭಗದ್ಗದಗಿರೋಽಬ್ರುವತಾನುರಕ್ತಾಃ ॥ ೩೦

ಗೋಪ್ಯ ಊಚುಃ—

ಮೈವಂ ವಿಭೋಽರ್ಹತಿ ಭವಾನ್ ಗದಿತುಂ ನೃಶಂಸಂ
ಸಂತ್ಯಜ್ಯ ಸರ್ವವಿಷಯಾಂಸ್ತವ ಪಾದಮೂಲಮ್ ।
ಭಕ್ತಾ ಭಜಸ್ವ ದುರವಗ್ರಹ ಮಾ ತ್ಯಜಾಸ್ಮಾನ್
ದೇವೋ ಯಥಾಽಽದಿಪುರುಷೋ ಭಜತೇ ಮುಮುಕ್ಷೂನ್ ॥ ೩೧

ಯತ್ಪತ್ಯಪತ್ಯಸುಹೃದಾಮನುವೃತ್ತಿರಂಗ
ಸ್ತ್ರೀಣಾಂ ಸ್ವಧರ್ಮ ಇತಿ ಧರ್ಮವಿದಾ ತ್ವಯೋಕ್ತಮ್ ।
ಅಸ್ತ್ವೇವಮೇತದುಪದೇಶಪದೇ ತ್ವಯೀಶೇ
ಪ್ರೇಷ್ಠೋ ಭವಾಂಸ್ತನುಭೃತಾಂ ಕಿಲ ಬಂಧುರಾತ್ಮಾ ॥ ೩೨

ಕುರ್ವಂತಿ ಹಿ ತ್ವಯಿ ರತಿಂ ಕುಶಲಾಃ ಸ್ವ ಆತ್ಮನ್
ನಿತ್ಯಪ್ರಿಯೇ ಪತಿಸುತಾದಿಭಿರಾರ್ತಿದೈಃ ಕಿಮ್ ।

---

ನಾದರೂ ಪ್ರಿಯನಲ್ಲದವನಂತೆ ಮಾತಾಡುತ್ತಿದ್ದ ಕೃಷ್ಣನನ್ನು ಕುರಿತು ಅತ್ತು ಅತ್ತು ಕಿತ್ತುಹೋದ ಕಣ್ಣುಗಳನ್ನೊರಸುತ್ತ, ಸ್ವಲ್ಪ ಸಿಟ್ಟಿನಿಂದಲೇ ತೊದಲುತ್ತ ಇಂತೆಂದರು (೩೦). "ಹೇ ವಿಭು, ನೀನು ಇಷ್ಟು ಕ್ರೂರವಾಗಿ ನುಡಿಯುವುದು ತರವಲ್ಲ. ಸಕಲ ವಸ್ತುಗಳನ್ನೂ ಪರಿತ್ಯಜಿಸಿ ನಿನ್ನ ಪಾದಮೂಲವನ್ನಾಶ್ರಯಿಸಿರುವ ನಮ್ಮನ್ನು ಸ್ವೀಕರಿಸು. ಎಲೈ ಹಠವಾರಿ! ನಮ್ಮನ್ನು ತೊರೆಯಬೇಡ. ಆದಿಪುರುಷನಾದ ನಾರಾಯಣದೇವನು ಮುಮುಕ್ಷುಗಳಿಗೆ ಆಶ್ರಯವನ್ನೀಯುವಂತೆ ನಮಗೆ ಆಶ್ರಯವನ್ನು ಕೊಡು (೩೧). ಪತಿ, ಪುತ್ರ, ಬಂಧುಗಳನ್ನು ಅನುವರ್ತಿಸುತ್ತ ಉಪಚರಿಸುವುದು ಸ್ತ್ರೀಯರಿಗೆ ಸ್ವಧರ್ಮವೆಂದು ಧರ್ಮಜ್ಞನಾದ ನೀನು ಹೇಳಿದೆಯಲ್ಲವೆ? ಹಾಗೆಯೇ ಆಗಲಿ! ಈಶನಾದ ನಿನ್ನಲ್ಲಿಯೇ ಈ ಉಪದೇಶಗಳು ಅನ್ವಯಿಸುತ್ತವೆ! ಜನರಿಗೆ ನೀನು ಅತ್ಯಂತ ಪ್ರಿಯನೂ ಬಂಧುವೂ ಆತ್ಮನೂ ಆಗಿದ್ದೀಯೆ (ಆದ್ದರಿಂದ ನಿನ್ನ ಶುಶ್ರೂಷೆ ಧರ್ಮವೇ) (೩೨). ತಮ್ಮ ಆತ್ಮವೇ ಆದ ನಿನ್ನಲ್ಲಿ ಶಾಸ್ತ್ರಜ್ಞರು ಪ್ರೇಮವನ್ನಿಡುತ್ತಾರೆ. ನಿತ್ಯಪ್ರಿಯನಾದ ನೀನಿರುವಾಗ ದುಃಖಕಾರಣರಾದ

ತನ್ನಃ ಪ್ರಸೀದ ಪರಮೇಶ್ವರ ಮಾ ಸ್ಮ ಛಿಂದ್ಯಾ
ಆಶಾಂ ಭೃತಾಂ ತ್ವಯಿ ಚಿರಾದರವಿಂದನೇತ್ರ ॥ ೩೩

ಚಿತ್ತಂ ಸುಖೇನ ಭವತಾಪಹೃತಂ ಗೃಹೇಷು
ಯನ್ನಿರ್ವಿಶತ್ಯುತ ಕರಾವಪಿ ಗೃಹ್ಯಕೃತ್ಯೇ ।
ಪಾದೌ ಪದಂ ನ ಚಲತಸ್ತವ ಪಾದಮೂಲಾದ್
ಯಾಮಃ ಕಥಂ ವ್ರಜಮಥೋ ಕರವಾಮ ಕಿಂ ವಾ ॥ ೩೪

ಸಿಂಚಾಂಗ ನಸ್ತ್ವದಧರಾಮೃತಪೂರಕೇಣ
ಹಾಸಾವಲೋಕಕಲಗೀತಜಹೃಚ್ಛಯಾಗ್ನಿಮ್ ।
ನೋ ಚೇದ್ ವಯಂ ವಿರಹಜಾಗ್ನ್ಯುಪಯುಕ್ತದೇಹಾ
ಧ್ಯಾನೇನ ಯಾಮ ಪದಯೋಃ ಪದವೀಂ ಸಖೇ ತೇ ॥ ೩೫

ಯರ್ಹ್ಯಂಬುಜಾಕ್ಷ ತವ ಪಾದತಲಂ ರಮಾಯಾ
ದತ್ತಕ್ಷಣಂ ಕ್ವಚಿದರಣ್ಯಜನಪ್ರಿಯಸ್ಯ ।

---

ಪತಿಸುತಾದಿಗಳಿಂದ ಏನಾಗುತ್ತದೆ? ಹೇ ಪರಮೇಶ್ವರ, ನಮ್ಮಲ್ಲಿ ಪ್ರಸನ್ನನಾಗು. ಅರವಿಂದನಯನ, ಬಹುಕಾಲದಿಂದ ಆಸೆಯನ್ನಿಟ್ಟುಕೊಂಡಿರುವ ನಮ್ಮ ಆಸೆಯನ್ನು ನುಚ್ಚುನೂರುಮಾಡಬೇಡ (೩೩). ಮನೆಯಲ್ಲಿ ಮಗ್ನವಾಗಿದ್ದ ಮನಸ್ಸನ್ನೂ ಗೃಹಕೃತ್ಯದಲ್ಲಿ ತೊಡಗಿದ್ದ ಕೈಗಳನ್ನೂ ಸುಖರೂಪನಾದ ನೀನು ಅಪಹರಿಸಿಬಿಟ್ಟಿದ್ದೀಯೆ. ನಮ್ಮ ಕಾಲುಗಳು ಒಂದು ಹೆಜ್ಜೆಯನ್ನೂ ಇಡಲಾರವು. ನಾವು ಗೋಕುಲಕ್ಕೆ ಹೋಗುವುದೆಂತು? ಹೋಗಿ ಮಾಡುವುದೇನು? (೩೪). ಓ ಕೃಷ್ಣ, ನಿನ್ನ ನಗೆನೋಟದಿಂದಲೂ ಮಂಜುಳಗೀತದಿಂದಲೂ ಜನಿಸಿದ ನಮ್ಮ ಕಾಮಾಗ್ನಿಯನ್ನು ನಿನ್ನ ಅಧರಾಮೃತವನ್ನು ಸುರಿಸಿ ನಂದಿಸು! ಇಲ್ಲದಿದ್ದರೆ, ಗೆಳೆಯ, ವಿರಹಾಗ್ನಿಯಿಂದ ನಮ್ಮ ದೇಹ ಸುಟ್ಟುಹೋಗುವುದು! ಆಗ (ಯೋಗಿಗಳಂತೆ) ಧ್ಯಾನಮಾಡುತ್ತಲೇ ನಿನ್ನ ಪಾದಮೂಲವನ್ನು ಸೇರಿಕೊಳ್ಳುವೆವು! (೩೫). ಶ್ರೀದೇವಿಗೆ ಹಬ್ಬವನ್ನುಂಟುಮಾಡಿದ ನಿನ್ನ ಪಾದತಲವೇನುಂಟು, ಅದನ್ನು ಒಮ್ಮೆ ನಾವು ಸ್ಪರ್ಶಿಸಿದ್ದೆವು! ನಮ್ಮಂಥ ಕಾಡುಜನರನ್ನು ಪ್ರೀತಿಸತಕ್ಕವನಲ್ಲವೆ ನೀನು! ಅಂಬುಜಾಕ್ಷ, ಅದರಿಂದ ಆನಂದಿತರಾದ ನಮಗೆ, ಆಹಾ! ಇನ್ನೊಬ್ಬನೆಮುರಿಗೆ ನಿಲ್ಲಲು ಸಹ

ಅಸ್ಪ್ರಾಕ್ಷ್ಮ ತತ್ಪ್ರಭೃತಿ ನಾನ್ಯಸಮಕ್ಷಮಂಗ
ಸ್ಥಾತುಂ ತ್ವಯಾಭಿರಮಿತಾ ಬತ ಪಾರಯಾಮಃ ॥ ೩೬

ಶ್ರೀರ್ಯತ್ಪದಾಂಬುಜರಜಶ್ಚಕಮೇ ತುಲಸ್ಯಾ
ಲಬ್ಧ್ವಾಪಿ ವಕ್ಷಸಿ ಪದಂ ಕಿಲ ಭೃತ್ಯಜುಷ್ಟಮ್ ।
ಯಸ್ಯಾಃ ಸ್ವವೀಕ್ಷಣಕೃತೇಽನ್ಯಸುರಪ್ರಯಾಸ-
ಸ್ತದ್ವದ್ ವಯಂ ಚ ತವ ಪಾದರಜಃಪ್ರಪನ್ನಾಃ ॥ ೩೭

ತನ್ನಃ ಪ್ರಸೀದ ವೃಜಿನಾರ್ದನ ತೇಽಂಘ್ರಿಮೂಲಂ
ಪ್ರಾಪ್ತಾ ವಿಸೃಜ್ಯ ವಸತೀಸ್ತ್ವದುಪಾಸನಾಶಾಃ ।
ತ್ವತ್ಸುಂದರಸ್ಮಿತನಿರೀಕ್ಷಣತೀವ್ರಕಾಮ-
ತಪ್ತಾತ್ಮನಾಂ ಪುರುಷಭೂಷಣ ದೇಹಿ ದಾಸ್ಯಮ್ ॥ ೩೮

ವೀಕ್ಷ್ಯಾಲಕಾವೃತಮುಖಂ ತವ ಕುಂಡಲಶ್ರೀ-
ಗಂಡಸ್ಥಲಾಧರಸುಧಂ ಹಸಿತಾವಲೋಕಮ್ ।
ದತ್ತಾಭಯಂ ಚ ಭುಜದಂಡಯುಗಂ ವಿಲೋಕ್ಯ
ವಕ್ಷಃ ಶ್ರಿಯೈಕರಮಣಂ ಚ ಭವಾಮ ದಾಸ್ಯಃ ॥ ೩೯

---

ಸಾಧ್ಯವಿಲ್ಲವಾಗಿದೆ! (೩೬). ಯಾರು ತಮ್ಮನ್ನು ಪ್ರಸನ್ನದೃಷ್ಟಿಯಿಂದ ನೋಡಲೆಂದು ಇತರ ದೇವತೆಗಳೂ ಪ್ರಯಾಸಪಡುವರೋ ಆ ಲಕ್ಷ್ಮಿಯು ನಿನ್ನ ವಕ್ಷಃಸ್ಥಳದಲ್ಲಿ ನೆಲೆಸಿರುವಳು. ಆದರೂ ಸಹ, ಭೃತ್ಯರು ಸೇವಿಸುವ ನಿನ್ನ ಚರಣವನ್ನು (ಸವತಿಯಾದ) ತುಳಸಿಯೊಡನೆ ಕುಳಿತು ಅವಳು ಸೇವಿಸುತ್ತಿದ್ದಾಳೆ! ಹಾಗೆಯೇ ನಾವು ನಿನ್ನ ಪಾದಧೂಳಿಯನ್ನು ಆಶ್ರಯಿಸಿದ್ದೇವೆ (೩೭). ಪಾಪನಾಶನ, ನಮ್ಮಲ್ಲಿ ಪ್ರಸನ್ನನಾಗು. ನಿನ್ನ ಶುಶ್ರೂಷೆ ಮಾಡಬೇಕೆಂದು ಮನೆಮಾರುಗಳನ್ನು ತೊರೆದು ನಿನ್ನ ಚರಣತಳದ ಬಳಿಗೆ ಬಂದಿದ್ದೇವೆ. ನಿನ್ನ ಬೆಡಗಿನ ನಗೆನೋಟದಿಂದಾದ ತೀವ್ರಕಾಮದಿಂದ ಸಂತಪ್ತರಾಗಿದ್ದೇವೆ. ಹೇ ಪುರುಷರತ್ನ, ನಿನ್ನ ದಾಸ್ಯವನ್ನು ಕರುಣಿಸು (೩೮). ಗುಂಗುರುಕೂದಲಿಂದ ಕೂಡಿದ ನಿನ್ನ ಮುಖ, ಕುಂಡಲಕಾಂತಿಮಂಡಿತವಾದ ಗಂಡಸ್ಥಳ, ಸುಧೆಯನ್ನು ಸೂಸುವ ಅಧರ, ಸ್ಮಿತದಿಂದ ಸೊಗಸಾದ ನೋಟ, ಅಭಯವನ್ನೀಯುವ ಭುಜದಂಡಯುಗಳ, ಲಕ್ಷ್ಮಿಯ ಲೀಲೆಗೆ ತಾಣವಾದ ವಕ್ಷಃ

ಕಾ ಸ್ತ್ರ್ಯಂಗ ತೇ ಕಲಪದಾಯತಮೂರ್ಛಿತೇನ
ಸಮ್ಮೋಹಿತಾಽಽರ್ಯಚರಿತಾನ್ನ ಚಲೇತ್ತ್ರಿಲೋಕ್ಯಾಮ್ ।
ತ್ರೈಲೋಕ್ಯಸೌಭಗಮಿದಂ ಚ ನಿರೀಕ್ಷ್ಯ ರೂಪಂ
ಯದ್ಗೋದ್ವಿಜದ್ರುಮಮೃಗಾಃ ಪುಲಕಾನ್ಯಬಿಭ್ರನ್ ॥ ೪೦

ವ್ಯಕ್ತಂ ಭವಾನ್ ವ್ರಜಭಯಾರ್ತಿಹರೋಽಭಿಜಾತೋ
ದೇವೋ ಯಥಾಽಽದಿಪುರುಷಃ ಸುರಲೋಕಗೋಪ್ತಾ ।
ತನ್ನೋ ನಿಧೇಹಿ ಕರಪಂಕಜಮಾರ್ತಬಂಧೋ
ತಪ್ತಸ್ತನೇಷು ಚ ಶಿರಸ್ಸು ಚ ಕಿಂಕರೀಣಾಮ್ ॥ ೪೧

ಶ್ರೀಶುಕ ಉವಾಚ—

ಇತಿ ವಿಕ್ಲವಿತಂ ತಾಸಾಂ ಶ್ರುತ್ವಾ ಯೋಗೇಶ್ವರೇಶ್ವರಃ ।
ಪ್ರಹಸ್ಯ ಸದಯಂ ಗೋಪೀರಾತ್ಮಾರಾಮೋಽಪ್ಯರೀರಮತ್ ॥ ೪೨

ತಾಭಿಃ ಸಮೇತಾಭಿರುದಾರಚೇಷ್ಟಿತಃ
ಪ್ರಿಯೇಕ್ಷಣೋತ್ಫುಲ್ಲಮುಖೀಭಿರಚ್ಯುತಃ ।

---

ಸ್ಥಳ–ಇವನ್ನು ನೋಡಿ ನಿನ್ನ ದಾಸಿಯಾಗಬಯಸುತ್ತೇವೆ (೩೯). ಮಂಜುಳ ಪದರಂಜಿತವಾದ ನಿನ್ನ ಈ ವೇಣುಗಾನವನ್ನು ಆಲಿಸಿ ಸಂಮೋಹಿತಳಾದ ಯಾವ ತರುಣಿ ತಾನೇ ಈ ಜಗತ್ತಿನಲ್ಲಿ ಕುಲಸ್ತ್ರೀಚಾರಿತ್ರದಿಂದ ಚಲಿಸದಿದ್ದಾಳು! ಆಹಾ! ಮೂರು ಲೋಕವನ್ನೂ ಮರುಳು ಮಾಡುವ ಈ ರೂಪವನ್ನವಲೋಕಿಸಿ ಗೋಬ್ರಾಹ್ಮಣರೂ ಮರಗಳೂ ಮೃಗಗಳೂ ರೋಮಾಂಚಗೊಂಡವು! (೪೦). ಆದಿಪುರುಷನಾದ ದೇವನು ಸುರಲೋಕವನ್ನು ಸಂರಕ್ಷಿಸುವಂತೆ, ನೀನು ನಿಶ್ಚಯವಾಗಿ ಈ ವ್ರಜದ ಭಯವನ್ನು ನೀಗಲು ಅವತರಿಸಿರುವೆ. ಆದ್ದರಿಂದ, ಓ ದೀನಬಂಧು, ದಾಸಿಯರಾದ ನಮ್ಮ ಸಂತಪ್ತಸ್ತನಗಳ ಮೇಲೆ, ತಲೆಗಳ ಮೇಲೆ, ನಿನ್ನ ಕರಕಮಲವನ್ನಿಡು!" ಎಂದು ಹೇಳಿದರು (೪೧). ಗೋಪಿಯರು ಹೀಗೆ ಹಲುಬುವುದನ್ನು ಕೇಳಿ ಯೋಗೇಶ್ವರೇಶ್ವರನು ನಕ್ಕು, ತಾನು ಆತ್ಮಾರಾಮನಾದರೂ ಕಾರುಣ್ಯದಿಂದ ಅವರೊಡನೆ ರಮಿಸಿದನು (೪೨). ಪ್ರಿಯದರ್ಶನದಿಂದ ಅರಳಿದ ಮುಖವುಳ್ಳ ಗೋಪಿಕೆಯರೊಡನೆ ಸೇರಿದ ಅಚ್ಯುತನು ಮನೋಜ್ಞವಾದ ಶೃಂಗಾರಚೇಷ್ಟೆಗಳನ್ನು ಮಾಡುತ್ತ, ಮಂಜುಳ

ಉದಾರಹಾಸದ್ವಿಜಕುಂದದೀಧಿತಿ-
ರ್ವ್ಯರೋಚತೈಣಾಂಕ ಇವೋಡುಭಿರ್ವೃತಃ ॥ ೪೩

ಉಪಗೀಯಮಾನ ಉದ್ಗಾಯನ್ ವನಿತಾಶತಯೂಥಪಃ ।
ಮಾಲಾಂ ಬಿಭ್ರದ್ ವೈಜಯಂತೀಂ ವ್ಯಚರನ್ಮಂಡಯನ್‌ವನಮ್ ॥

ನದ್ಯಾಃ ಪುಲಿನಮಾವಿಶ್ಯ ಗೋಪೀಭಿರ್ಹಿಮವಾಲುಕಮ್ ।
ರೇಮೇ ತತ್ತರಲಾನಂದಕುಮುದಾಮೋದವಾಯುನಾ ॥ ೪೫

ಬಾಹುಪ್ರಸಾರಪರಿರಂಭಕರಾಲಕೋರು-
ನೀವೀಸ್ತನಾಲಭನನರ್ಮನಖಾಗ್ರಪಾತೈಃ ।
ಕ್ಷ್ವೇಲ್ಯಾವಲೋಕಹಸಿತೈರ್ವ್ರಜಸುಂದರೀಣಾ-
ಮುತ್ತಂಭಯನ್ ರತಿಪತಿಂ ರಮಯಾಂಚಕಾರ ॥ ೪೬

ಏವಂ ಭಗವತಃ ಕೃಷ್ಣಾಲ್ಲಬ್ಧಮಾನಾ ಮಹಾತ್ಮನಃ ।
ಆತ್ಮಾನಂ ಮೇನಿರೇ ಸ್ತ್ರೀಣಾಂ ಮಾನಿನ್ಯೋಽಭ್ಯಧಿಕಂ ಭುವಿ ॥ ೪೭

---

ಸ್ಮಿತದಿಂದಲೂ ದಂತಪಂಕ್ತಿಯಿಂದಲೂ ಮಲ್ಲಿಗೆಯ ಕಾಂತಿಯನ್ನು ಬೀರುತ್ತ, ತಾರೆಗಳಿಂದ ಪರಿವೃತನಾದ ಚಂದ್ರಮನಂತೆ ಕಂಗೊಳಿಸಿದನು (೪೩). (ಹೆಣ್ಣಾನೆಗಳಿಂದ ಪರಿವೃತನಾದ ಗಜೇಂದ್ರನಂತೆ) ನೂರಾರು ವನಿತೆಯರ ಹೃದಯೇಶ್ವರನಾದ ಶ್ರೀಕೃಷ್ಣನು ವೈಜಯಂತೀಮಾಲೆಯನ್ನು ಧರಿಸಿ, ಗೋಪಿಯರು ಹೊಗಳಿ ಹಾಡುತ್ತಿರಲು ತಾನೂ ಹಾಡುತ್ತ ಆ ವನಕ್ಕೆ ಒಂದು ಶೋಭೆಯನ್ನುಂಟುಮಾಡುತ್ತ ತಿರುಗಾಡಿದನು (೪೪). ಗೋಪಿಯರಿಂದ ಸಮೇತನಾಗಿ ತಣ್ಣನೆಯ ಮರಳುರಾಶಿಯುಳ್ಳ ಯಮುನಾನದಿಯ ದಿಣ್ಣೆಯನ್ನು ಸೇರಿ, ನದಿಯ ಮೇಲೆ ಮೆಲ್ಲನೆ ಬೀಸುತ್ತ ಬರುವ ಹರ್ಷದಾಯಕವೂ ನೈದಿಲೆಹೂಗಳ ಪರಿಮಳವನ್ನು ಹೊತ್ತುದೂ ಆದ ಗಾಳಿಯಿಂದ ಆನಂದಿಸಿದನು (೪೫). ತೋಳನ್ನು ನೀಡುವುದು, ಆಲಿಂಗನ, ಕೈ ಮುಂಗುರುಳು ತೊಡೆ ನೀವಿ ಸ್ತನಗಳ ಸ್ಪರ್ಶ, ಪರಿಹಾಸ, ನಖಕ್ಷತ, ಕ್ರೀಡೆ, ನೋಟ, ನಗು—ಇವುಗಳಿಂದ ವ್ರಜಸುಂದರಿಯರ ಕಾಮವನ್ನು ಕೆರಳಿಸುತ್ತ ಅವರನ್ನು ರಮಿಸಿದನು (೪೬). ಹೀಗಿರಲು ಭಗವಂತನೂ ನಿರ್ಲಿಪ್ತಚಿತ್ತನೂ ಆದ ಶ್ರೀಕೃಷ್ಣನಿಂದ ಗೋಪಿಯರಿಗೆ ಮನ್ನಣೆ ದೊರೆಯಲಾಗಿ, ಆ ಮಾನಿನಿಯರು ಈ ಜಗತ್ತಿನಲ್ಲಿರುವ ಎಲ್ಲ

**ತಾಸಾಂ ತತ್ ಸೌಭಗಮದಂ ವೀಕ್ಷ್ಯ ಮಾನಂ ಚ ಕೇಶವಃ ।**
**ಪ್ರಶಮಾಯ ಪ್ರಸಾದಾಯ ತತ್ರೈವಾಂತರಧೀಯತ ॥ ೪೮**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕೋನತ್ರಿಂಶಾಧ್ಯಾಯಃ**

---

## ತ್ರಿಂಶಾಧ್ಯಾಯಃ

**ಶ್ರೀಶುಕ ಉವಾಚ—**

**ಅಂತರ್ಹಿತೇ ಭಗವತಿ ಸಹಸೈವ ವ್ರಜಾಂಗನಾಃ ।**
**ಅತಪ್ಯಂಸ್ತಮಚಕ್ಷಾಣಾಃ ಕರಿಣ್ಯ ಇವ ಯೂಥಪಮ್ ॥ ೧**

**ಗತ್ಯಾನುರಾಗಸ್ಮಿತವಿಭ್ರಮೇಕ್ಷಿತೈ-**
**ರ್ಮನೋರಮಾಲಾಪವಿಹಾರವಿಭ್ರಮೈಃ ।**

---

ಸ್ತ್ರೀಯರಿಗಿಂತಲೂ ನಾವೇ ಹೆಚ್ಚಿನವರೆಂದು ಅಭಿಮಾನವನ್ನು ತಳೆದರು(೪೭). ಅವರ ಆ ಸೌಭಾಗ್ಯಮದವನ್ನೂ ಅಭಿಮಾನವನ್ನೂ ಗಮನಿಸಿದ ಕೇಶವನು ಅದನ್ನು ನೀಗಿಸಬೇಕೆಂದು ಅವರ ಅನುಗ್ರಹಕ್ಕಾಗಿ ಅಲ್ಲಿಯೇ ಅಂತರ್ಧಾನ ಹೊಂದಿದನು ! (೪೮).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ

---

## ಅಧ್ಯಾಯ ೩೦

ಶ್ರೀಕೃಷ್ಣನನ್ನು ಕಾಣದೆ ಉನ್ಮತ್ತರಾದ ಗೋಪಿಯರ ಪ್ರಲಾಪ

ಭಗವಂತನು ಥಟ್ಟನೆ ಅಂತರ್ಹಿತನಾಗಲು ವ್ರಜಾಂಗನೆಯರು ಅವನನ್ನು ಕಾಣದೆ, ಗಜೇಂದ್ರನನ್ನು ಕಾಣದ ಹೆಣ್ಣಾನೆಗಳಂತೆ ದುಃಖಸಂತಪ್ತರಾದರು. (೧). ಆ ಲಕ್ಷ್ಮೀಪತಿಯ ನಡಿಗೆ, ನಲ್ಮೆನಗೆಗಳಿಂದ ಕೂಡಿದ ಬೆಡಗಿನ ನೋಟ ಗಳು, ಮನೋಹರವಾದ ಸಂಭಾಷಣೆ, ವಿಹಾರ, ವಿಲಾಸಗಳಿಂದ ಹೃದಯವು

ಆಕ್ಷಿಪ್ತಚಿತ್ತಾಃ ಪ್ರಮದಾ ರಮಾಪತೇ-
ಸ್ತಾಸ್ತಾ ವಿಚೇಷ್ಟಾ ಜಗೃಹುಸ್ತದಾತ್ಮಿಕಾಃ ॥ ೨

ಗತಿಸ್ಮಿತಪ್ರೇಕ್ಷಣಭಾಷಣಾದಿಷು
ಪ್ರಿಯಾಃ ಪ್ರಿಯಸ್ಯ ಪ್ರತಿರೂಢಮೂರ್ತಯಃ ।
ಅಸಾವಹಂ ತ್ವಿತ್ಯಬಲಾಸ್ತದಾತ್ಮಿಕಾ
ನ್ಯವೇದಿಷುಃ ಕೃಷ್ಣವಿಹಾರವಿಭ್ರಮಾಃ ॥ ೩

ಗಾಯಂತ್ಯ ಉಚ್ಚೈರಮುಮೇವ ಸಂಹತಾ
ವಿಚಿಕ್ಯುರುನ್ಮತ್ತಕವದ್ ವನಾದ್ ವನಮ್ ।
ಪಪ್ರಚ್ಛುರಾಕಾಶವದಂತರಂ ಬಹಿ-
ರ್ಭೂತೇಷು ಸಂತಂ ಪುರುಷಂ ವನಸ್ಪತೀನ್ ॥ ೪

ದೃಷ್ಟೋ ವಃ ಕಚ್ಚಿದಶ್ವತ್ಥ ಪ್ಲಕ್ಷ ನ್ಯಗ್ರೋಧ ನೋ ಮನಃ ।
ನಂದಸೂನುರ್ಗತೋ ಹೃತ್ವಾ ಪ್ರೇಮಹಾಸಾವಲೋಕನೈಃ ॥ ೫

ಕಚ್ಚಿತ್ ಕುರಬಕಾಶೋಕನಾಗಪುನ್ನಾಗಚಂಪಕಾಃ ।
ರಾಮಾನುಜೋ ಮಾನಿನೀನಾಮಿತೋ ದರ್ಪಹರಸ್ಮಿತಃ ॥ ೬

---

ಆಕೃಷ್ಟವಾದ ಕಾರಣ ಗೋಪಿಯರು ಕೃಷ್ಣಾತ್ಮಕರೇ ಆಗಿ ಅವನ ನಡೆನುಡಿಗಳನ್ನು ಅನುಕರಿಸತೊಡಗಿದರು (೨). ಆ ಕಾಂತೆಯರು ಕಾಂತನ ಗತಿಸ್ಮಿತಪ್ರೇಕ್ಷಣಭಾಷಣಾದಿಗಳಲ್ಲಿ ಆವಿಷ್ಟಸ್ವರೂಪರಾಗಿದ್ದರು. ಅಬಲೆಯರು ಕೃಷ್ಣನ ಕ್ರೀಡಾವಿಲಾಸಗಳನ್ನು ತಾವೇ ಅನುಕರಿಸುತ್ತ 'ನಾನೇ ಕೃಷ್ಣ, ನಾನೇ ಕೃಷ್ಣ!' ಎಂದು ಒಬ್ಬರಿಗೊಬ್ಬರು ಹೇಳಲಾರಂಭಿಸಿದರು! (೩). ಆಮೇಲೆ ಎಲ್ಲರೂ ಒಟ್ಟುಗೂಡಿ ಕೃಷ್ಣನನ್ನು ಕುರಿತು ಗಟ್ಟಿಯಾಗಿ ಹಾಡುತ್ತ, ಹುಚ್ಚಿಯರಂತೆ ವನದಿಂದ ವನಕ್ಕೆ ಹೋಗಿ ಅವನನ್ನು ಹುಡುಕತೊಡಗಿದರು. ಆಕಾಶದಂತೆ ಸಕಲಪ್ರಾಣಿಗಳ ಒಳಗೂ ಹೊರಗೂ ನೆಲೆಸಿರುವ ಆ ಪರಮಪುರುಷನು ಎಲ್ಲಿದ್ದಾನೆಂದು ಗಿಡಮರಗಳನ್ನು ಕೇಳಿದರು! (೪): "ಓ ಅರಳಿಮರವೆ, ಗೋಣೀಮರವೆ, ಆಲದಮರವೆ, ನಂದನ ಮಗನು ನಲ್ಮೆನಗೆನೋಟಗಳಿಂದ ಮರಳುಮಾಡಿ ನಮ್ಮ ಮನಸ್ಸನ್ನು ಕದ್ದುಕೊಂಡು ಹೋಗಿದ್ದಾನೆ! ಅವನನ್ನು ನೀವು ಕಂಡಿರಾ? (೫). ಹೇ ಕುರಬಕ, ಅಶೋಕ, ನಾಗ, ಪುನ್ನಾಗ, ಚಂಪಕಗಳೆ, ಮಾನಿನಿಯರ ಮದವನ್ನು ಮರ್ದಿಸುವ ಮೆಲ್ನಗೆಯನ್ನು ಬೀರುವ

ಕಚ್ಚಿತ್ತುಲಸಿ ಕಲ್ಯಾಣಿ ಗೋವಿಂದಚರಣಪ್ರಿಯೇ ।
ಸಹ ತ್ವಾಲಿಕುಲೈರ್ಬಿಭ್ರದ್ ದೃಷ್ಟಸ್ತೇಽತಿಪ್ರಿಯೋಽಚ್ಯುತಃ ॥ ೭

ಮಾಲತ್ಯದರ್ಶಿ ವಃ ಕಚ್ಚಿನ್ಮಲ್ಲಿಕೇ ಜಾತಿ ಯೂಥಿಕೇ ।
ಪ್ರೀತಿಂ ವೋ ಜನಯನ್ ಯಾತಃ ಕರಸ್ಪರ್ಶೇನ ಮಾಧವಃ ॥ ೮

ಚೂತಪ್ರಿಯಾಲಪನಸಾಸನಕೋವಿದಾರ-
ಜಂಬ್ವರ್ಕಬಿಲ್ವಬಕುಲಾಮ್ರಕದಂಬನೀಪಾಃ ।
ಯೇಽನ್ಯೇ ಪರಾರ್ಥಭವಕಾ ಯಮುನೋಪಕೂಲಾಃ
ಶಂಸಂತು ಕೃಷ್ಣಪದವೀಂ ರಹಿತಾತ್ಮನಾಂ ನಃ ॥ ೯

ಕಿಂ ತೇ ಕೃತಂ ಕ್ಷಿತಿ ತಪೋ ಬತ ಕೇಶವಾಂಘ್ರಿ-
ಸ್ಪರ್ಶೋತ್ಸವೋತ್ಪುಲಕಿತಾಂಗರುಹೈರ್ವಿಭಾಸಿ ।
ಅಪ್ಯಂಘ್ರಿಸಂಭವ ಉರುಕ್ರಮವಿಕ್ರಮಾದ್ ವಾ
ಆಹೋ ವರಾಹವಪುಷಃ ಪರಿರಂಭಣೇನ ॥ ೧೦

---

ರಾಮಾನುಜನು ಇತ್ತ ಕಾಣಿಸಿದನೆ? (೬). ಹೇ ತುಳಸಿ, ಕಲ್ಯಾಣಿ, ಗೋವಿಂದಚರಣಪ್ರಿಯೆ, ದುಂಬಿಗಳೊಡನೆ ನಿನ್ನನ್ನು ಮುಡಿಯುವ, ನಿನಗೆ ಅತ್ಯಂತಪ್ರಿಯನಾದ ಅಚ್ಯುತನನ್ನು ಕಂಡೆಯಾ? (೭). ಎಲೌ ಮಾಲತಿ, ಮಲ್ಲಿಗೆ, ಜಾತಿ, ಯೂಥಿಕೆ, ಮಾಧವನು ನಿಮ್ಮನ್ನು ಕೈಯಿಂದ ಮುಟ್ಟಿ ಸಂತೋಷವನ್ನುಂಟುಮಾಡುತ್ತ ಇಲ್ಲಿ ಹೋದನೆ? (೮). ಎಲೈ ಚೂತ, ಪ್ರಿಯಾಲ, ಪನಸ, ಆಸನ, ಕೋವಿದಾರ, ಜಂಬು, ಅರ್ಕ, ಬಿಲ್ವ, ಬಕುಲ, ಆಮ್ರ, ಕದಂಬ, ನೀಪ, ಪರೋಪಕ್ಕಾರಕ್ಕಾಗಿ ಹುಟ್ಟಿದ ಯಮುನಾತೀರದ ಎಲ್ಲ ಮರಗಳೆ, ವಿರಹತಪ್ತರಾದ ನಮಗೆ ಕೃಷ್ಣನು ಇರುವ ಸ್ಥಳವನ್ನು ತಿಳಿಸಿರಿ! (೯). ಎಲೌ ಪೃಥ್ವಿ, ನೀನು ಯಾವ ತಪಸ್ಸು ಮಾಡಿದೆ? ಕೇಶವನ ಪಾದ ಸ್ಪರ್ಶವಾಯಿತೆಂಬ ಉತ್ಸವದಿಂದ ರೋಮಾಂಚಿತಳಾಗಿ * ವಿರಾಜಿಸುವೆಯಲ್ಲ! ಈ ಯಮುನಾತೀರದಲ್ಲಿ ಅವನ ಪಾದಸ್ಪರ್ಶವಾಯಿತೆಂದೆ? ವಾಮನಾವತಾರ ದಲ್ಲಿ ಹೆಜ್ಜೆಯಿಟ್ಟಾಗ ಸಕಲಪ್ರದೇಶದಲ್ಲಿಯೂ ಸ್ಪರ್ಶವಾಯಿತೆಂದೆ? ಅಥವಾ

---

* ನೆಲದಮೇಲಿನ ಹುಲ್ಲನ್ನು ನೋಡಿ, ಭೂಮಿಯು ರೋಮಾಂಚಿತಳಾಗಿದ್ದಾಳೆಂದು ಗೋಪಿಯರು ಭಾವಿಸುತ್ತಾರೆ.

**ಅಪ್ಯೇಣಪತ್ನ್ಯುಪಗತಃ ಪ್ರಿಯಯೇಹ ಗಾತ್ರೈ-**
**ಸ್ತನ್ವನ್ ದೃಶಾಂ ಸಖಿ ಸುನಿರ್ವೃತಿಮಚ್ಯುತೋ ವಃ ।**
**ಕಾಂತಾಂಗಸಂಗಕುಚಕುಂಕುಮರಂಜಿತಾಯಾಃ**
**ಕುಂದಸ್ರಜಃ ಕುಲಪತೇರಿಹ ವಾತಿ ಗಂಧಃ ॥ ೧೧**

**ಬಾಹುಂ ಪ್ರಿಯಾಂಸ ಉಪಧಾಯ ಗೃಹೀತಪದ್ಮೋ**
**ರಾಮಾನುಜಸ್ತುಲಸಿಕಾಲಿಕುಲೈರ್ಮದಾಂಧೈಃ ।**
**ಅನ್ವೀಯಮಾನ ಇಹ ವಸ್ತರವಃ ಪ್ರಣಾಮಂ**
**ಕಿಂ ವಾಭಿನಂದತಿ ಚರನ್ ಪ್ರಣಯಾವಲೋಕೈಃ ॥ ೧೨**

**ಪೃಚ್ಛತೇಮಾ ಲತಾ ಬಾಹೂನಪ್ಯಾಶ್ಲಿಷ್ಟಾ ವನಸ್ಪತೇಃ ।**
**ನೂನಂ ತತ್ಕರಜಸ್ಪೃಷ್ಟಾ ಬಿಭ್ರತ್ಯುತ್ಪುಲಕಾನ್ಯಹೋ ॥ ೧೩**

---

ವರಾಹಾವತಾರದಲ್ಲಿ ನಿನ್ನನ್ನು ಆಲಿಂಗಿಸಿಕೊಂಡನೆಂದೆ? (೧೦). ಎಲೌ ಹರಿಣಿ, ಗೆಳತಿ! ಅಚ್ಯುತನು ಒಬ್ಬ ಕಾಂತೆಯೊಂದಿಗೆ ತನ್ನ ಮುಖ, ಬಾಹು ಮುಂತಾದ ಸುಂದರಾಂಗಗಳಿಂದ ನಿಮ್ಮ ಕಣ್ಣುಗಳಿಗೆ ಪರಮಾನಂದವನ್ನುಂಟು ಮಾಡುತ್ತ ಈ ಕಡೆ ಬಂದನೆ? ಏಕೆಂದರೆ, ಇಲ್ಲಿ ಶ್ರೀಕೃಷ್ಣನು ಧರಿಸಿದ ಕಾಂತಾಂಗಸಂಗಕುಚಕುಂಕುಮರಂಜಿತವಾದ ಕುಂದಮಾಲೆಯ ಸುಗಂಧ ಸುಳಿಯುತ್ತಿದೆ! (೧೧). ರಾಮಾನುಜನು ತನ್ನ ಪ್ರಿಯೆಯ ಹೆಗಲಮೇಲೆ ತೋಳನ್ನಿಟ್ಟು ಕೈಯಲ್ಲಿ ಕಮಲವನ್ನು ಹಿಡಿದು ತಿರುಗಾಡುತ್ತ ಇಲ್ಲಿ ಬಂದಿದ್ದಾನೆ! ಅವನ ತುಳಸೀಮಾಲೆಗೆ ಮುತ್ತಿದ ಮತ್ತಮಧುಕರಸಮೂಹಗಳು ಹಿಂಬಾಲಿಸಿರಬೇಕು. ಆಗ ನೀವು ಮಾಡಿದ ನಮಸ್ಕಾರವನ್ನು* ಅವನು ಪ್ರೇಮದೃಷ್ಟಿಗಳಿಂದ ಅಭಿನಂದಿಸಿದನೆ? (೧೨). ಗೆಳತಿಯರೆ, ಈ ಬಳ್ಳಿಗಳನ್ನು ಕೇಳಿರಿ! (ಪತಿಯಾದ) ವೃಕ್ಷದ ತೋಳಿನಲ್ಲಿ ಇವು ಸೇರಿಕೊಂಡಿದ್ದರೂ ಇವುಗಳಿಗೆ ರೋಮಾಂಚಗಳಾದದ್ದು ಹೇಗೆ! ಓಹೋ! ನಿಜವಾಗಿಯೂ ಕೃಷ್ಣನ ನಖಕ್ಷತಗಳಿಂದಲೇ ಈ ಬಳ್ಳಿಗಳು ಪುಲಕಿತವಾಗಿವೆ!" (೧೩).

---

* ಫಲಭಾರದಿಂದ ಮರಗಳು ಬಗ್ಗಿರುವುದನ್ನು ಕಂಡು, ಅವು ಕೃಷ್ಣನಿಗೆ ನಮಸ್ಕರಿಸಿವೆಯೆಂದು ತಿಳಿಯುತ್ತಾರೆ.

**ಇತ್ಯುನ್ಮತ್ತವಚೋಗೋಪ್ಯಃ ಕೃಷ್ಣಾನ್ವೇಷಣಕಾತರಾಃ ।**
**ಲೀಲಾ ಭಗವತಸ್ತಾಸ್ತಾ ಹ್ಯನುಚಕ್ರುಸ್ತದಾತ್ಮಿಕಾಃ ॥ ೧೪**

**ಕಸ್ಯಾಶ್ಚಿತ್ ಪೂತನಾಯಂತ್ಯಾಃ ಕೃಷ್ಣಾಯಂತ್ಯಪಿಬತ್ ಸ್ತನಮ್ ।**
**ತೋಕಾಯಿತ್ವಾ ರುದತ್ಯನ್ಯಾ ಪದಾಹನ್ ಶಕಟಾಯತೀಮ್ ॥ ೧೫**

**ದೈತ್ಯಾಯಿತ್ವಾ ಜಹಾರಾನ್ಯಾಮೇಕಾ ಕೃಷ್ಣಾರ್ಭಭಾವನಾಮ್ ।**
**ರಿಂಗಯಾಮಾಸ ಕಾಪ್ಯಂಘ್ರೀ ಕರ್ಷಂತೀ ಘೋಷನಿಃಸ್ವನೈಃ ॥ ೧೬**

**ಕೃಷ್ಣರಾಮಾಯಿತೇ ದ್ವೇ ತು ಗೋಪಾಯಂತ್ಯಶ್ಚ ಕಾಶ್ಚನ ।**
**ವತ್ಸಾಯತೀಂ ಹಂತಿ ಚಾನ್ಯಾ ತತ್ರೈಕಾ ತು ಬಕಾಯತೀಮ್ ॥ ೧೭**

**ಆಹೂಯ ದೂರಗಾ ಯದ್ವತ್ ಕೃಷ್ಣಸ್ತಮನುಕುರ್ವತೀಮ್ ।**
**ವೇಣುಂ ಕ್ವಣಂತೀಂ ಕ್ರೀಡಂತೀಮನ್ಯಾಃ ಶಂಸಂತಿ ಸಾಧ್ವಿತಿ ॥ ೧೮**

---

ಈ ಪರಿಯಲ್ಲಿ ಹುಚ್ಚುಹುಚ್ಚಾಗಿ ಹಲುಬುತ್ತ ಕೃಷ್ಣನನ್ನು ಹುಡುಕುತ್ತ ತಳಮಳಗೊಂಡ ಗೋಪಿಯರು ಕೃಷ್ಣಾತ್ಮಕರೇ ಆಗಿ, ಆ ಲೀಲಾವತಾರಿಯ ಲೀಲೆಗಳನ್ನು ಅನುಕರಿಸತೊಡಗಿದರು (೧೪). ಅವರಲ್ಲೊಬ್ಬಳು ತಾನೇ ಕೃಷ್ಣನೆಂದುಕೊಂಡು, ಪೂತನೆಯಂತೆ ನಟಿಸಿದ ಇನ್ನೊಬ್ಬಳ ಸ್ತನವನ್ನು ಚೀಪಿದಳು! ಇನ್ನೊಬ್ಬಳು ಶಿಶುವಿನಂತೆ ಮಲಗಿ ಅಳುತ್ತ, ಶಕಟದಂತೆ ನಟಿಸಿದ ಇನ್ನೊಬ್ಬಳನ್ನು ಕಾಲಿಂದ ಒದ್ದಳು! (೧೫). ಒಬ್ಬಳು ತೃಣಾವರ್ತ ದೈತ್ಯನಂತೆ ಬಂದು, ಬಾಲಕೃಷ್ಣನಂತೆ ನಡೆಯುತ್ತಿದ್ದ ಇನ್ನೊಬ್ಬಳನ್ನು ಹೊತ್ತುಕೊಂಡು ಹೋದಳು! ಇನ್ನೊಬ್ಬಳು ಮೊಸರು ಕಡೆಯುವ ಶಬ್ದವನ್ನು ಕೇಳಿದವಳಂತೆ, ಕಾಲೆಳೆಯುತ್ತ ಅಂಬೆಗಾಲಿಂದ ಹರಿದಳು! (೧೬). ಒಬ್ಬಳು ಕೃಷ್ಣನಾದಳು, ಇನ್ನೊಬ್ಬಳು ಬಲರಾಮನಾದಳು. ಇತರ ಗೋಪಿಯರು ಗೊಲ್ಲರ ಹುಡುಗರಾದರು. ವತ್ಸಾಸುರನಂತೆ ಬಂದವಳನ್ನು ಒಬ್ಬಳೂ ಬಕಾಸುರನಂತೆ ಬಂದವಳನ್ನು ಇನ್ನೊಬ್ಬಳೂ ಕೊಂದಂತೆ ಮಾಡಿದರು! (೧೭). ದೂರದಲ್ಲಿರುವ ಹಸುಗಳನ್ನು ಕೃಷ್ಣನು ಕೂಗಿ ಕರೆಯುವಂತೆ ಒಬ್ಬಳು ಕೂಗಿ ಕರೆದಳು! ಕೊಳಲೂದುತ್ತ ಕುಣಿದಳು! ಉಳಿದ ಗೋಪಿಯರು ಸುತ್ತಲೂ ನಿಂತು 'ಭಲಾ, ಭೇಷ್!'

ಕಸ್ಯಾಂಚಿತ್ ಸ್ವಭುಜಂ ನ್ಯಸ್ಯ ಚಲಂತ್ಯಾಹಾಪರಾ ನನು ।
ಕೃಷ್ಣೋಽಹಂ ಪಶ್ಯತ ಗತಿಂ ಲಲಿತಾಮಿತಿ ತನ್ಮನಾಃ ॥ ೧೯

ಮಾ ಭೈಷ್ಟ ವಾತವರ್ಷಾಭ್ಯಾಂ ತತ್ತ್ರಾಣಂ ವಿಹಿತಂ ಮಯಾ ।
ಇತ್ಯುಕ್ತ್ವೈಕೇನ ಹಸ್ತೇನ ಯತಂತ್ಯುನ್ನಿದಧೇಽಂಬರಮ್ ॥ ೨೦

ಆರುಹ್ಯೈಕಾ ಪದಾಽಽಕ್ರಮ್ಯ ಶಿರಸ್ಯಾಹಾಪರಾಂ ನೃಪ ।
ದುಷ್ಟಾಹೇ ಗಚ್ಛ ಜಾತೋಽಹಂ ಖಲಾನಾಂ ನನು ದಂಡಧೃಕ್ ॥ ೨೧

ತತ್ರೈಕೋವಾಚ ಹೇ ಗೋಪಾ ದಾವಾಗ್ನಿಂ ಪಶ್ಯತೋಲ್ಬಣಮ್ ।
ಚಕ್ಷೂಂಷ್ಯಾಶ್ವಪಿದಧ್ವಂ ವೋ ವಿಧಾಸ್ಯೇ ಕ್ಷೇಮಮಂಜಸಾ ॥ ೨೨

ಬದ್ಧಾನ್ಯಯಾ ಸ್ರಜಾ ಕಾಚಿತ್ತನ್ವೀ ತತ್ರ ಉಲೂಖಲೇ ।
ಭೀತಾ ಸುದೃಕ್ ಪಿಧಾಯಾಸ್ಯಂ ಭೇಜೇ ಭೀತಿವಿಡಂಬನಮ್ ॥ ೨೩

ಏವಂ ಕೃಷ್ಣಂ ಪೃಚ್ಛಮಾನಾ ವೃಂದಾವನಲತಾಸ್ತರೂನ್ ।
ವ್ಯಚಕ್ಷತ ವನೋದ್ದೇಶೇ ಪದಾನಿ ಪರಮಾತ್ಮನಃ ॥ ೨೪

---

ಎಂದು ಹೊಗಳಿದರು! (೧೮). ಒಬ್ಬಳು ಇನ್ನೊಬ್ಬಳನ್ನು ತೋಳಿನಿಂದ ತಬ್ಬಿಕೊಂಡು ನಡೆಯುತ್ತ 'ನಾನು ಕೃಷ್ಣ' ನನ್ನ ಲಲಿತವಾದ ನಡಿಗೆಯನ್ನು ನೋಡಿರಿ! – ಎಂದು ಕೃಷ್ಣಭಾವನೆಯಿಂದ ನುಡಿದಳು (೧೯). ಇನ್ನೊಬ್ಬಳು "ಬಿರುಗಾಳಿ ಮಳೆಗಳಿಗೆ ಹೆದರಬೇಡಿರಿ! ಅವುಗಳಿಂದ ನಿಮ್ಮನ್ನು ರಕ್ಷಿಸಿದ್ದೇನೆ!" ಎಂದು ಹೇಳಿ, (ಬೆಟ್ಟವನ್ನೆತ್ತಲು) ಯತ್ನಿಸಿದಂತೆ ಸೀರೆಯ ಸೆರಗನ್ನು ಕೈಯಿಂದ ಎತ್ತಿಹಿಡಿದಳು! (೨೦). ಪರೀಕ್ಷಿತರಾಜ, ಮತ್ತೊಬ್ಬಳು ಇನ್ನೊಬ್ಬ ಗೋಪಿಯ ತಲೆಯನ್ನು ಕಾಲಿಂದ ತುಳಿದು, "ಕೆಟ್ಟಹಾವೆ, ತೊಲಗು ಇಲ್ಲಿಂದ! ಖಳರನ್ನು ದಂಡಿಸುವುದಕ್ಕಾಗಿ ನಾನು ಅವತರಿಸಿದ್ದೇನೆ!" ಎಂದಳು (೨೧). ಅವರಲ್ಲಿ ಇನ್ನೊಬ್ಬಳು "ಎಲೈ ಗೋಪರೆ, ಉಲ್ಬಣವಾದ ಕಾಳ್ಗಿಚ್ಚನ್ನು ನೋಡಿರಿ! ಎಲ್ಲರೂ ಕಣ್ಣುಮುಚ್ಚಿಕೊಳ್ಳಿರಿ. ಒಡನೆಯೇ ನಿಮಗೆ ಕ್ಷೇಮವನ್ನುಂಟುಮಾಡುವೆನು" ಎಂದು ನುಡಿದಳು (೨೨). ಬಾಲಕೃಷ್ಣನಂತೆ ವರ್ತಿಸುತ್ತಿದ್ದ ಒಬ್ಬ ತನ್ವಿಯನ್ನು ಮಗದೊಬ್ಬಳು ಹೂಮಾಲೆಯಿಂದ ಒರಳಿಗೆ ಕಟ್ಟಿದಳು. ಹೆದರಿದಂತೆ ಆ ತನ್ವಿಯು ಸುಂದರನೇತ್ರಗಳುಳ್ಳ ತನ್ನ ಮುಖವನ್ನು ಮುಚ್ಚಿಕೊಂಡು ಭೀತಳಾದಂತೆ ವರ್ತಿಸಿದಳು (೨೩). ಈ ಪ್ರಕಾರವಾಗಿ ನಡೆಯುತ್ತಿದ್ದ ಆ ಗೋಪಿಯರು ವೃಂದಾವನದ ಮರಬಳ್ಳಿಗಳನ್ನು

**ಪದಾನಿ ವ್ಯಕ್ತಮೇತಾನಿ ನಂದಸೂನೋರ್ಮಹಾತ್ಮನಃ ।**
**ಲಕ್ಷ್ಯಂತೇ ಹಿ ಧ್ವಜಾಂಭೋಜವಜ್ರಾಂಕುಶಯವಾದಿಭಿಃ ॥ ೨೫**

**ತೈಸ್ತೈಃ ಪದೈಸ್ತತ್ಪದವೀಮನ್ವಿಚ್ಛಂತ್ಯೋಽಗ್ರತೋಽಬಲಾಃ ।**
**ವಧ್ವಾಃ ಪದೈಃ ಸುಪೃಕ್ತಾನಿ ವಿಲೋಕ್ಯಾರ್ತಾಃ ಸಮಬ್ರುವನ್ ॥ ೨೬**

**ಕಸ್ಯಾಃ ಪದಾನಿ ಚೈತಾನಿ ಯಾತಾಯಾ ನಂದಸೂನುನಾ ।**
**ಅಂಸನ್ಯಸ್ತಪ್ರಕೋಷ್ಠಾಯಾಃ ಕರೇಣೋಃ ಕರಿಣಾ ಯಥಾ ॥ ೨೭**

**ಅನಯಾಽಽರಾಧಿತೋ ನೂನಂ ಭಗವಾನ್ ಹರಿರೀಶ್ವರಃ ।**
**ಯನ್ನೋ ವಿಹಾಯ ಗೋವಿಂದಃ ಪ್ರೀತೋ ಯಾಮನಯದ್ ರಹಃ**

**ಧನ್ಯಾ ಅಹೋ ಅಮೀ ಆಲ್ಯೋ ಗೋವಿಂದಾಂಘ್ರ್ಯಬ್ಜರೇಣವಃ ।**
**ಯಾನ್ ಬ್ರಹ್ಮೇಶೋ ರಮಾ ದೇವೀ ದಧುರ್ಮೂರ್ಧ್ನ್ಯಘನುತ್ತಯೇ**

---

ಕೇಳುತ್ತ ಗೋವಿಂದನನ್ನು ಅರಸುತ್ತಿರಲಾಗಿ, ವನದ ಒಂದುಕಡೆ ಆ ಪರಮಾತ್ಮನ ಹೆಜ್ಜೆಯ ಗುರುತುಗಳನ್ನು ಕಂಡರು (೨೪). "ಅಹೊ! ಇವು ನಂದನಂದನನ ಹೆಜ್ಜೆಗಳು! ಧ್ವಜ, ಪದ್ಮ, ವಜ್ರ, ಅಂಕುಶ, ಯವ ಮುಂತಾದ ಚಿಹ್ನೆಗಳಿಂದ ಆ ಮಹಾತ್ಮನ ಹೆಜ್ಜೆಗಳೇ ಎಂಬುದು ವ್ಯಕ್ತವಾಗುವುದು" ಎಂದುಕೊಂಡರು (೨೫). ಹೀಗೆ ಹೆಜ್ಜೆಯ ಗುರುತುಗಳಿಂದ ಕೃಷ್ಣನನ್ನು ಅರಸುತ್ತ ಹೊರಟ ಆ ಬಲೆಯರು, ಮುಂದೆ ಒಬ್ಬ ತರುಣಿಯ ಹೆಜ್ಜೆಯೊಡನೆ ಅವು ಸಂಮಿಶ್ರವಾದುದನ್ನು ನೋಡಿ ವಿಷಣ್ಣರಾಗಿ ಹೇಳತೊಡಗಿದರು (೨೬): "ಇವು ಯಾವಳ ಹೆಜ್ಜೆಗಳು? ನಂದಸುತನೊಡನೆ ಅವನ ಹೆಗಲಮೇಲೆ ಮೊಳಕೈಯಿಟ್ಟು, ಗಜೇಂದ್ರನೊಡನೆ ಹೆಣ್ಣಾನೆಯಂತೆ ಹೋದವಳು ಯಾರು? (೨೭). ಸತ್ಯವಾಗಿಯೂ ಭಗವಾನ್ ಗೋವಿಂದನು ಇವಳಿಂದ ಸೇವೆಗೊಂಡು ಸಂಪ್ರೀತನಾಗಿ ಇವಳನ್ನು ಏಕಾಂತಸ್ಥಳಕ್ಕೆ ಕರೆದುಕೊಂಡು ಹೋಗಿದ್ದಾನೆ! (೨೮). ಆಹೋ ಸಖಿಯರೆ, ಗೋವಿಂದನ ಪಾದಪದ್ಮದ ಈ ಧೂಳಿಕಣಗಳು ಪುಣ್ಯತಮವಾದವು. ಇವನ್ನು ಬ್ರಹ್ಮನೂ ಶಿವನೂ ಲಕ್ಷ್ಮೀದೇವಿಯೂ ಪಾಪಪರಿಹಾರವಾಗಲೆಂದು (ತಲೆಯಲ್ಲಿ) ಧರಿಸಿದ್ದಾರೆ (೨೯).

ತಸ್ಯಾ ಅಮೂನಿ ನಃ ಕ್ಷೋಭಂ ಕುರ್ವಂತ್ಯುಚ್ಚೈಃ ಪದಾನಿ ಯತ್ ।
ಯೈಕಾಪಹೃತ್ಯ ಗೋಪೀನಾಂ ರಹೋ ಭುಂಕ್ತೇಽಚ್ಯುತಾಧರಮ್ ॥

ನ ಲಕ್ಷ್ಯಂತೇ ಪದಾನ್ಯತ್ರ ತಸ್ಯಾ ನೂನಂ ತೃಣಾಂಕುರೈಃ ।
ಖಿದ್ಯತ್ಸುಜಾತಾಂಘ್ರಿತಲಾಮುನ್ನಿನ್ಯೇ ಪ್ರೇಯಸೀಂ ಪ್ರಿಯಃ ॥ ೩೧

ಇಮಾನ್ಯಧಿಕಮಗ್ನಾನಿ ಪದಾನಿ ವಹತೋ ವಧೂಮ್ ।
ಗೋಪ್ಯಃ ಪಶ್ಯತ ಕೃಷ್ಣಸ್ಯ ಭಾರಾಕ್ರಾಂತಸ್ಯ ಕಾಮಿನಃ ॥ ೩೨

ಅತ್ರಾವರೋಪಿತಾ ಕಾಂತಾ ಪುಷ್ಪಹೇತೋರ್ಮಹಾತ್ಮನಾ ।
ಅತ್ರ ಪ್ರಸೂನಾವಚಯಃ ಪ್ರಿಯಾರ್ಥೇ ಪ್ರೇಯಸಾ ಕೃತಃ ।
ಪ್ರಪದಾಕ್ರಮಣೇ ಏತೇ ಪಶ್ಯತಾಸಕಲೇ ಪದೇ ॥ ೩೩

ಕೇಶಪ್ರಸಾಧನಂ ತ್ವತ್ರ ಕಾಮಿನ್ಯಾಃ ಕಾಮಿನಾ ಕೃತಮ್ ।
ತಾನಿ ಚೂಡಯತಾ ಕಾಂತಾಮುಪವಿಷ್ಟಮಿಹ ಧ್ರುವಮ್ ॥ ೩೪

---

ಆದರೆ ಅವಳೊಬ್ಬಳ ಹೆಜ್ಜೆಗಳು ಮಾತ್ರ ನಮ್ಮ ಮನಸ್ಸನ್ನು ಅತಿಯಾಗಿ ಕಲಕಿಬಿಡುತ್ತಿವೆ! ಗೋಪಿಯರಿಂದ ಅಪಹರಿಸಿ ಒಬ್ಬಳೇ ಏಕಾಂತದಲ್ಲಿ ಅಚ್ಯುತನ ಅಧರವನ್ನು ಸವಿಯುತ್ತಿದ್ದಾಳೆ! (೩೦). ಆಹಾ! ಇಲ್ಲಿ ಆಕೆಯ ಹೆಜ್ಜೆಗುರುತುಗಳು ಕಾಣಿಸುವುದಿಲ್ಲ! ಆಕೆಯ ಕೋಮಲಪಾದಗಳಿಗೆ ಮೊಳೆತ ಹುಲ್ಲು ಚುಚ್ಚಿ ನೋಯುವುದೆಂದು ಪ್ರೇಯಸಿಯನ್ನು ಪ್ರಿಯನು ಎತ್ತಿಕೊಂಡು ಹೋಗಿದ್ದಾನೆ! (೩೧). ವಧುವನ್ನು ಹೊತ್ತಾಗ ಭಾರಾಕ್ರಾಂತನಾದ ಆ ಕಾಮಿಯ ಹೆಜ್ಜೆಗಳು ಆಳವಾಗಿ ಊರಿವೆ. ಗೋಪಿಯರೆ, ನೋಡಿರಿ! ಇಲ್ಲಿ ಆ ಮಹಾತ್ಮನು ಹೂ ಕೀಳುವುದಕ್ಕಾಗಿ ಕಾಂತೆಯನ್ನು ಕೆಳಗಿಳಿಸಿದ್ದಾನೆ! ಇಲ್ಲಿ ನೋಡಿ! ಪ್ರಿಯೆಗಾಗಿ ಪ್ರಿಯನು ಇಲ್ಲಿ ಹೂಗಳನ್ನು ಕಿತ್ತಿದ್ದಾನೆ! ತುದಿಗಾಲನ್ನು ಮಾತ್ರ ಊರಿದ್ದರಿಂದ ಅಪೂರ್ಣವಾದ ಎರಡು ಹೆಜ್ಜೆಗುರುತು ಕಾಣುತ್ತದೆ! (೩೨–೩೩). (ಮುಂಡಿಯೂರಿದ ಗುರುತನ್ನೂ ನಡುವೆ ಇನ್ನೊಬ್ಬಳು ಕುಳಿತ ಗುರುತನ್ನೂ ನೋಡಿ ಗೋಪಿಯರು ಹೇಳುತ್ತಾರೆ) ಇಲ್ಲಿ ಆ ಕಾಮುಕನು ಕಾಮಿನಿಗೆ ಕೇಶಾಲಂಕಾರವನ್ನು ಮಾಡಿದ್ದಾನೆ. ಹೂಗಳನ್ನು ಕಾಂತೆಗೆ

**ರೇಮೇ ತಯಾ ಚಾತ್ಮರತ ಆತ್ಮಾರಾಮೋಽಪ್ಯಖಂಡಿತಃ ।**
**ಕಾಮಿನಾಂ ದರ್ಶಯನ್ ದೈನ್ಯಂ ಸ್ತ್ರೀಣಾಂ ಚೈವ ದುರಾತ್ಮತಾಮ್ ॥**

**ಇತ್ಯೇವಂ ದರ್ಶಯಂತ್ಯಸ್ತಾಶ್ಚೇರುರ್ಗೋಪ್ಯೋ ವಿಚೇತಸಃ ।**
**ಯಾಂ ಗೋಪೀಮನಯತ್ ಕೃಷ್ಣೋ ವಿಹಾಯಾನ್ಯಾಃ ಸ್ತ್ರಿಯೋ ವನೇ ॥ ೩೬**

**ಸಾ ಚ ಮೇನೇ ತದಾತ್ಮಾನಂ ವರಿಷ್ಠಂ ಸರ್ವಯೋಷಿತಾಮ್ ।**
**ಹಿತ್ವಾ ಗೋಪೀಃ ಕಾಮಯಾನಾ ಮಾಮಸೌ ಭಜತೇ ಪ್ರಿಯಃ ॥ ೩೭**

**ತತೋ ಗತ್ವಾ ವನೋದ್ದೇಶಂ ದೃಪ್ತಾ ಕೇಶವಮಬ್ರವೀತ್ ।**
**ನ ಪಾರಯೇಽಹಂ ಚಲಿತುಂ ನಯ ಮಾಂ ಯತ್ರ ತೇ ಮನಃ ॥ ೩೮**

---

ಮುಡಿಸುವಾಗ ಇಲ್ಲಿ ಆತನು ಕುಳಿತಿರುವುದು ನಿಶ್ಚಯ (೩೪). ಆತ್ಮತೃಪ್ತನೂ ಆತ್ಮಾರಾಮನೂ ಆದ ಕೃಷ್ಣನು ಹೆಂಗಸರ ವೈಯಾರಕ್ಕೆ ವಶನಾಗದಿದ್ದರೂ ಕಾಮಿಗಳು ಎಂತಹ ದೀನಸ್ಥಿತಿಗೆ ಇಳಿಯುವರೆಂಬುದನ್ನೂ ಸ್ತ್ರೀಯರು ಎಂತಹ ದುರಾತ್ಮರೆಂಬುದನ್ನೂ ತೋರಿಸಲು* ಅವಳೊಡನೆ ರಮಿಸಿರುವನು" ಎಂದರು (೩೫). ಕೃಷ್ಣನು ಇತರ ಗೋಪವನಿತೆಯರನ್ನು ವನದಲ್ಲಿ ವಿಸರ್ಜಿಸಿ ಯಾವ ಗೋಪಿಯನ್ನು ತನ್ನೊಡನೆ ಕರೆದೊಯ್ದನೋ ಅವಳಿಗೆ ಸಂಬಂಧಿಸಿದಂತೆ ನಾನಾ ಚಿಹ್ನೆಗಳನ್ನು ತೋರಿಸಿ ಮಾತಾಡುತ್ತ ಗೋಪಿಯರು ಖಿನ್ನಮನಸ್ಕರಾಗಿ ಅಲೆದರು (೩೬). ಇತ್ತಲಾಗಿ ಆ ಒಬ್ಬ ಗೋಪಿಯು ಸರ್ವಸ್ತ್ರೀಯರಲ್ಲಿ ತಾನೇ ವರಿಷ್ಠಳೆಂದು ಭಾವಿಸಿದಳು. ಏಕೆಂದರೆ, ಕಾಮಿಸಿ ಬಂದ ಉಳಿದೆಲ್ಲ ಗೋಪಿಯರನ್ನೂ ವರ್ಜಿಸಿ ಪ್ರಿಯನಾದ ಕೃಷ್ಣನು ತನ್ನೊಬ್ಬಳನ್ನೇ ಜೊತೆಗೂಡಿದನೆಂದು ಅವಳು ತಿಳಿದಳು (೩೭). ಅನಂತರ ಸ್ವಲ್ಪದೂರ ವನದಲ್ಲಿ ಹೋಗಿ ಆ ಗರ್ವಿಷ್ಠಳು "ನಾನು ನಡೆಯಲಾರೆ. ನಿನ್ನ ಮನಸ್ಸಿದ್ದೆಡೆಗೆ ನನ್ನನ್ನು ಎತ್ತಿಕೊಂಡು ಹೋಗು!" ಎಂದು ಕೇಶವನಿಗೆ ಹೇಳಿದಳು (೩೮).

---

* ಸ್ತ್ರೀಯನ್ನು ಹೊತ್ತಿರುವುದೂ ಹೂಮುಡಿಸಿರುವುದೂ ದೈನ್ಯದ ಚಿಹ್ನೆ. ಅವನಿಂದ ಸೇವೆ ಮಾಡಿಸಿಕೊಂಡಿರುವುದು ಸ್ತ್ರೀಯ ದೌರಾತ್ಮ್ಯದ ಚಿಹ್ನೆ.

ಏವಮುಕ್ತಃ ಪ್ರಿಯಾಮಾಹ ಸ್ಕಂಧ ಆರುಹ್ಯತಾಮಿತಿ ।
ತತಶ್ಚಾಂತರ್ದಧೇ ಕೃಷ್ಣಃ ಸಾ ವಧೂರನ್ವತಪ್ಯತ ॥ ೩೯

ಹಾ ನಾಥ ರಮಣ ಪ್ರೇಷ್ಠ ಕ್ವಾಸಿ ಕ್ವಾಸಿ ಮಹಾಭುಜ ।
ದಾಸ್ಯಾಸ್ತೇ ಕೃಪಣಾಯಾ ಮೇ ಸಖೇ ದರ್ಶಯ ಸನ್ನಿಧಿಮ್ ॥ ೪೦

ಅನ್ವಿಚ್ಛಂತ್ಯೋ ಭಗವತೋ ಮಾರ್ಗಂ ಗೋಪ್ಯೋಽವಿದೂರತಃ ।
ದದೃಶುಃ ಪ್ರಿಯವಿಶ್ಲೇಷಮೋಹಿತಾಂ ದುಃಖಿತಾಂ ಸಖೀಮ್ ॥ ೪೧

ತಯಾ ಕಥಿತಮಾಕರ್ಣ್ಯ ಮಾನಪ್ರಾಪ್ತಿಂ ಚ ಮಾಧವಾತ್ ।
ಅವಮಾನಂ ಚ ದೌರಾತ್ಮ್ಯಾದ್ ವಿಸ್ಮಯಂ ಪರಮಂ ಯಯುಃ ॥ ೪೨

ತತೋಽವಿಶನ್ ವನಂ ಚಂದ್ರಜ್ಯೋತ್ಸ್ನಾ ಯಾವದ್ ವಿಭಾವ್ಯತೇ ।
ತಮಃ ಪ್ರವಿಷ್ಟಮಾಲಕ್ಷ್ಯ ತತೋ ನಿವವೃತುಃ ಸ್ತ್ರಿಯಃ ॥ ೪೩

ತನ್ಮನಸ್ಕಾಸ್ತದಾಲಾಪಾಸ್ತದ್ವಿಚೇಷ್ಟಾಸ್ತದಾತ್ಮಿಕಾಃ ।
ತದ್ಗುಣಾನೇವ ಗಾಯಂತ್ಯೋ ನಾತ್ಮಾಗಾರಾಣಿ ಸಸ್ಮರುಃ ॥ ೪೪

---

ಆಗ ಕೃಷ್ಣನು "ಆಗಲಿ. ನನ್ನ ಹೆಗಲಮೇಲೆ ಕುಳಿತುಕೊ" ಎಂದನು. ಅವಳು ಹಾಗೆ ಕುಳಿತುಕೊಳ್ಳಲು ಹವಣಿಸುತ್ತಿರುವಾಗ ಕೃಷ್ಣನು ಥಟ್ಟನೆ ಅಂತರ್ಧಾನ ಹೊಂದಿದನು ! ಆ ತರುಣಿಯು ಗೋಳಾಡತೊಡಗಿದಳು (೩೯): "ಹಾ ನಾಥ, ರಮಣ, ಪ್ರಿಯತಮ, ಎಲ್ಲಿರುವೆ ? ಮಹಾಬಾಹು, ಎಲ್ಲಿರುವೆ ? ದೀನಳಾದ ನಿನ್ನ ದಾಸಿಗೆ, ಓ ಮಿತ್ರನೆ, ದರ್ಶನವನ್ನು ಕರುಣಿಸು" ಎಂದು ವಿಲಪಿಸಿದಳು (೪೦). ಸಮೀಪದಲ್ಲಿಯೇ ಭಗವಂತನನ್ನು ಅರಸುತ್ತಿದ್ದ ಈ ಗೋಪಿಯರು ಪ್ರಿಯವಿರಹಮೋಹಿತಳೂ ದುಃಖಿತಳೂ ಆದ ತಮ್ಮ ಸಖಿಯನ್ನು ಕಂಡರು (೪೧). ಮಾಧವನಿಂದ ಅವಳಿಗೆ ಮಾನ್ಯತೆ ದೊರೆತುದನ್ನೂ ತಾನು ದೌರಾತ್ಮ್ಯದಿಂದ ಅವನಿಗೆ ಅವಮಾನ ಮಾಡಿದುದನ್ನೂ ಆಕೆ ಹೇಳಿದಳು. ಅದನ್ನು ಕೇಳಿ ಗೋಪಿಯರು ಬೆಕ್ಕಸಬೆರಗಾದರು (೪೨). ಆಮೇಲೆ ಆ ಸ್ತ್ರೀಯರು ಬೆಳದಿಂಗಳಿರುವವರೆಗೆ ವನವನ್ನು ಹೊಕ್ಕು ಅಲೆದರು. ಕತ್ತಲೆಯಾಗುವುದನ್ನು ಕಂಡು ಹಿಂದಿರುಗಿದರು (೪೩). ಕೃಷ್ಣನಲ್ಲಿ ನೆಟ್ಟಮನಸ್ಸುಳ್ಳವರಾಗಿ, ಅವನ ವಿಷಯವನ್ನೇ ಮಾತಾಡುತ್ತ, ಅವನಂತೆಯೇ ಆಚರಿಸುತ್ತ, ಅವನ ಗುಣಗಳನ್ನೇ ಹಾಡುತ್ತ ಕೃಷ್ಣಾತ್ಮಕರೇ ಆಗಿಬಿಟ್ಟರು ! ಮನೆಮಾರು

ಪುನಃ ಪುಲಿನಮಾಗತ್ಯ ಕಾಲಿಂದ್ಯಾಃ ಕೃಷ್ಣಭಾವನಾಃ ।
ಸಮವೇತಾ ಜಗುಃ ಕೃಷ್ಣಂ ತದಾಗಮನಕಾಂಕ್ಷಿತಾಃ ॥ ೪೫

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಿಂಶಾಧ್ಯಾಯಃ

---

## ಏಕತ್ರಿಂಶಾಧ್ಯಾಯಃ

ಗೋಪ್ಯ ಊಚುಃ—

ಜಯತಿ ತೇಽಧಿಕಂ ಜನ್ಮನಾ ವ್ರಜಃ
ಶ್ರಯತ ಇಂದಿರಾ ಶಶ್ವದತ್ರ ಹಿ ।
ದಯಿತ ದೃಶ್ಯತಾಂ ದಿಕ್ಷು ತಾವಕಾ-
ಸ್ತ್ವಯಿ ಧೃತಾಸವಸ್ತ್ವಾಂ ವಿಚಿನ್ವತೇ ॥ ೧

ಶರದುದಾಶಯೇ ಸಾಧುಜಾತಸತ್-
ಸರಸಿಜೋದರಶ್ರೀಮುಷಾ ದೃಶಾ ।

---

ಗಳನ್ನು ನೆನೆಸಿಕೊಳ್ಳಲಿಲ್ಲ (೪೪). ಮತ್ತೆ ಯಮುನಾತೀರದ ಮರಳುದಿಣ್ಣೆಗೆ ಆಗಮಿಸಿ ಕೃಷ್ಣಭಾವನೆಯರಾಗಿ ಕೃಷ್ಣನ ಆಗಮನವನ್ನು ಬಯಸುತ್ತ ಒಟ್ಟುಗೂಡಿ ಹಾಡಲಾರಂಭಿಸಿದರು (೪೫).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತನೆಯ ಅಧ್ಯಾಯ

---

## ಅಧ್ಯಾಯ ೩೧

### ಗೋಪಿಕಾಗೀತ

ಗೋಪಿಯರು ಹಾಡಿದರು : "ಓ ದಯಿತ–ಗೋವಿಂದ, ನಿನ್ನ ದಯದಿಂದ ಗೋಕುಲವು ಅಧಿಕವಾಗಿ ಘನತೆಯನ್ನೈದಿ ಮೆರೆಯುತ್ತಿದೆ. ಇಂದಿರೆಯು ಬಂದಿಲ್ಲಿ ಎಂದಿಗೂ ನಿಂದಿರುವಳಲ್ಲವೆ? ನಿನಗಾಗಿ ಜೀವಿತವನ್ನು ಹಿಡಿದ ನಿನ್ನವರು ದಿಕ್ಕುದಿಕ್ಕುಗಳಲ್ಲಿ ನಿನ್ನನ್ನು ಅರಸುತ್ತಿದ್ದಾರೆ, ನೋಡು (೧). ಶರತ್ಸಮಯದ ಸರೋವರದಲ್ಲಿ ಸೊಂಪಾಗಿ ಬೆಳೆದ ಸರೋಜದ ಸೊಬಗನ್ನು ಸೂಸುವ

ಸುರತನಾಥ ತೇಽಶುಲ್ಕದಾಸಿಕಾ
ವರದ ನಿಘ್ನತೋ ನೇಹ ಕಿಂ ವಧಃ ॥ ೨

ವಿಷಜಲಾಪ್ಯಯಾದ್ ವ್ಯಾಲರಾಕ್ಷಸಾದ್-
ವರ್ಷಮಾರುತಾದ್ ವೈದ್ಯುತಾನಲಾತ್ ।
ವೃಷಮಯಾತ್ಮಜಾದ್ ವಿಶ್ವತೋಭಯಾ-
ದೃಷಭ ತೇ ವಯಂ ರಕ್ಷಿತಾ ಮುಹುಃ ॥ ೩

ನ ಖಲು ಗೋಪಿಕಾನಂದನೋ ಭವಾ-
ನಖಿಲದೇಹಿನಾಮಂತರಾತ್ಮದೃಕ್ ।
ವಿಖನಸಾರ್ಥಿತೋ ವಿಶ್ವಗುಪ್ತಯೇ
ಸಖ ಉದೇಯಿವಾನ್ ಸಾತ್ವತಾಂ ಕುಲೇ ॥ ೪

ವಿರಚಿತಾಭಯಂ ವೃಷ್ಣಿಧುರ್ಯ ತೇ
ಚರಣಮೀಯುಷಾಂ ಸಂಸೃತೇರ್ಭಯಾತ್ ।

---

ಸುಂದರನಯನದಿಂದ, ಹೇ ಸುರತನಾಥ, ಒತ್ತೆಯಾಳಾದ ನಮ್ಮನ್ನು ಘಾತಿಸಿದರೆ, ವರದ, ಅದು ವಧೆಯೆನಿಸದೆ? (ಕತ್ತಿಯಿಂದ ಕಡಿದರೆ ಮಾತ್ರ ವಧೆಯೆ?) (೨). ವಿಶಮಿಶ್ರಜಲದೊಳಾಗುವ ನಾಶದಿಂದ, ಅಘಾಸುರನಿಂದ, ಬಿರುಗಾಳಿಯಿಂದ, ಜಡಿಮಳೆಯಿಂದ, ಸಿಡಿಲಿಂದ, ವೃಷಭಾಕೃತಿಯ ಅರಿಷ್ಟನಿಂದ, ಮಯಪುತ್ರನಾದ ವ್ಯೋಮಾಸುರನಿಂದ* ಹೀಗೆ ಸರ್ವಭಯದಿಂದಲೂ, ಪುರುಷೋತ್ತಮ, ನಮ್ಮನ್ನು ಸಲಸಲವೂ ರಕ್ಷಿಸಿರುವೆ (೩). ನಿಜವಾಗಿಯೂ ನೀನು ಗೋಪಿಕೆಯಾದ ಯಶೋದೆಯ ತನಯನಲ್ಲ! ನಿಖಿಲದೇಹಿಗಳ ಬುದ್ಧಿಸಾಕ್ಷಿಯಾದ ಆತ್ಮನೇ ನೀನು. ಓ ಗೆಳೆಯ, ಬ್ರಹ್ಮನ ಬೇಡಿಕೆಯನ್ನು ಮನ್ನಿಸಿ ವಿಶ್ವಪಾಲನೆಗಾಗಿ ವೃಷ್ಣಿಕುಲದಲ್ಲಿ ಅವತರಿಸಿಬಂದಿರುವೆ (೪). ವೃಷ್ಣಿವಂಶೋತ್ತಮ, ಸಂಸಾರಭಯದಿಂದ ನಿನ್ನ ಚರಣಕ್ಕೆ ಶರಣಾದವರಿಗೆ ಅಭಯವನ್ನು

---

* ಅರಿಷ್ಟವ್ಯೋಮಾಸುರರ ವಧೆಯ ವೃತ್ತಾಂತವು ಮುಂದೆ ೩೬–೩೭ನೆಯ ಅಧ್ಯಾಯಗಳಲ್ಲಿ ಬರುತ್ತದೆ. ಅದನ್ನು ಈಗಲೇ ಗೋಪಿಯರು ಸ್ಮರಿಸುವುದು ಹೇಗೆಂಬುದು ಚಿಂತನೀಯ. ಅಥವಾ ಈ ವೃತ್ತಾಂತವು ಹಿಂದೆ ನಡೆದುಹೋಗಿದೆ. ಅದರ ವರ್ಣನೆಯು ಮಾತ್ರ ಮುಂದೆ ಬರುವುದೆಂದು ತಿಳಿಯಬೇಕು.

ಕರಸರೋರುಹಂ ಕಾಂತ ಕಾಮದಂ
ಶಿರಸಿ ಧೇಹಿ ನಃ ಶ್ರೀಕರಗ್ರಹಮ್ ॥ ೫

ವ್ರಜಜನಾರ್ತಿಹನ್ ವೀರ ಯೋಷಿತಾಂ
ನಿಜಜನಸ್ಮಯಧ್ವಂಸನಸ್ಮಿತ ।
ಭಜ ಸಖೇ ಭವತ್ಕಿಂಕರೀಃ ಸ್ಮ ನೋ
ಜಲರುಹಾನನಂ ಚಾರು ದರ್ಶಯ ॥ ೬

ಪ್ರಣತದೇಹಿನಾಂ ಪಾಪಕರ್ಶನಂ
ತೃಣಚರಾನುಗಂ ಶ್ರೀನಿಕೇತನಮ್ ।
ಫಣಿಫಣಾರ್ಪಿತಂ ತೇ ಪದಾಂಬುಜಂ
ಕೃಣು ಕೃಚೇಷು ನಃ ಕೃಂಧಿ ಹೃಚ್ಛಯಮ್ ॥ ೭

ಮಧುರಯಾ ಗಿರಾ ವಲ್ಗುವಾಕ್ಯಯಾ
ಬುಧಮನೋಜ್ಞಯಾ ಪುಷ್ಕರೇಕ್ಷಣ ।
ವಿಧಿಕರೀರಿಮಾ ವೀರ ಮುಹ್ಯತೀ-
ರಧರಸೀಧುನಾಽಽಪ್ಯಾಯಯಸ್ವ ನಃ ॥ ೮

---

ನೀಡುವ, ಲಕ್ಷ್ಮಿಯ ಪ್ರಾಣಿಗ್ರಹಣಮಾಡಿರುವ, ಕಾಮದವಾದ ಕರಕಮಲವನ್ನು, ಕಾಂತ, ನಮ್ಮ ತಲೆಯಮೇಲಿರಿಸು (೫). ವ್ರಜದವರ ವಿಪತ್ತನ್ನು ವಿನಾಶಗೊಳಿಸುವ ವೀರನೆ, ನಿನ್ನವರ ಗರ್ವವನ್ನು ನಗೆಯಿಂದ ನಿರ್ಮೂಲಗೊಳಿಸುವ ವಯಸ್ಯನೆ, ನಿನ್ನ ಕಿಂಕರಿಯರನ್ನು ಕೈಹಿಡಿ. ನಿನ್ನ ಅರವಿಂದವದನವನ್ನು ನಾರಿಯರಾದ ನಮಗೆ ತೋರು (೬). ವಂದಿಸಿದವರ ದೋಷವನ್ನು ತೊಳೆಯುವ, ಹುಲ್ಲನ್ನು ತಿನ್ನುವ ಹಸುಗಳ ಹಿಂದೆ ಹೋಗುವ, ಇಂದಿರೆಯ ಮಂದಿರವಾದ, ಹಾವಿನ ಹೆಡೆಯನ್ನು ಹೊಸಕಿದ, ನಿನ್ನ ಪಾದಪದ್ಮವನ್ನು ನಮ್ಮ ಸ್ತನಗಳ ಮೇಲಿರಿಸು; ನಮ್ಮ ಹೃದಯದ ಕಾಮವನ್ನು ಕೊನೆಗಾಣಿಸು (೭). ಸೊಬಗಿನ ಪದರಚನೆಯಿರುವ, ಬುಧಜನರು ಮೆಚ್ಚುವ, ಮಧುರವಾದ ಮಾತಿನಿಂದಲೂ ಅಧರಮಧುವಿನಿಂದಲೂ, ಹೇ ವೀರ–ನೀರಜೇಕ್ಷಣ, ಬವಳಿ

ತವ ಕಥಾಮೃತಂ ತಪ್ತಜೀವನಂ
ಕವಿಭಿರೀಡಿತಂ ಕಲ್ಮಷಾಪಹಮ್ ।
ಶ್ರವಣಮಂಗಲಂ ಶ್ರೀಮದಾತತಂ
ಭುವಿ ಗೃಣಂತಿ ತೇ ಭೂರಿದಾ ಜನಾಃ ॥ ೯

ಪ್ರಹಸಿತಂ ಪ್ರಿಯ ಪ್ರೇಮವೀಕ್ಷಣಂ
ವಿಹರಣಂ ಚ ತೇ ಧ್ಯಾನಮಂಗಲಮ್ ।
ರಹಸಿ ಸಂವಿದೋ ಯಾ ಹೃದಿಸ್ಪೃಶಃ
ಕುಹಕ ನೋ ಮನಃ ಕ್ಷೋಭಯಂತಿ ಹಿ ॥ ೧೦

ಚಲಸಿ ಯದ್ ವ್ರಜಾಚ್ಚಾರಯನ್ ಪಶೂನ್
ನಲಿನಸುಂದರಂ ನಾಥ ತೇ ಪದಮ್ ।
ಶಿಲತೃಣಾಂಕುರೈಃ ಸೀದತೀತಿ ನಃ
ಕಲಿಲತಾಂ ಮನಃ ಕಾಂತ ಗಚ್ಛತಿ ॥ ೧೧

ದಿನಪರಿಕ್ಷಯೇ ನೀಲಕುಂತಲೈ-
ರ್ವನರುಹಾನನಂ ಬಿಭ್ರದಾವೃತಮ್ ।

---

ಬೀಳುತ್ತಿರುವ ಈ ಅಬಲೆಯರನ್ನು ಬದುಕಿಸು (೮). ನಿನ್ನ ಕಥೆಯೊಂದು ಅಮೃತ; ಸಂತಪ್ತರ ಸಂಜೀವನ; ಕವಿಗಳು ಹೊಗಳಿರುವುದು; ಕಲ್ಮಷವನ್ನು ಕರಗಿಸುವುದು; ಶ್ರವಣಮಂಗಳ; ಸುಂದರ; ವಿಶದ. ಇದನ್ನು ಭೂರಿದಾನ ಮಾಡಿರುವ ಪುಣ್ಯಾತ್ಮರು ಹೊಗಳಿ ಹಾಡುವರು (೯). ಓ ನಲ್ಲನೆ! ನಿನ್ನ ನಗು, ನಲ್ಮೆಯ ನೋಟ, ನೆನಸಿದರೆ ಮಂಗಳವೀಯುವ ನಡೆ, ಹೃದಯವನ್ನು ಹಿಡಿದಿಡುವ ರಹಸ್ಯದ ಚೆಲ್ಲಾಟ–ಎಲ್ಲವೂ, ಎಲಾ ಕಿಡಿಗೇಡಿ! ನಮ್ಮ ಮಾನಸವನ್ನು ಮಥಿಸುತ್ತಿವೆ (೧೦). ಹಸುಗಳನ್ನು ಮೇಯಿಸಲು ವ್ರಜದಿಂದ ನೀನು ಹೊರಡುವಾಗ, ನಾಥ, ನಳಿನದಂತೆಸೆಯುವ ನಿನ್ನ ಕೋಮಲಚರಣವು ಕಲ್ಲು ಹುಲ್ಲುಗಳಿಂದ ನಲುಗುವುದೆಂದು, ಮನೋಹರ, ನಮ್ಮ ಮನಸ್ಸು ಮಲಿನವಾಗಿ ಮರುಗುವುದು (೧೧). ಸಂಜೆಯಾದಾಗ ನೀಲಕುಂತಳಗಳಿಂದ ಆವೃತವಾಗಿ ಧೂಳಿಮುಸುಕಿದ ನಿನ್ನ ನಳಿನಾನನವನ್ನು ಕಾಣಿಸಿ, ವೀರ, ಮತ್ತೆ ಮತೆ

ಘನರಜಸ್ವಲಂ ದರ್ಶಯನ್ ಮುಹು-
ರ್ಮನಸಿ ನಃ ಸ್ಮರಂ ವೀರ ಯಚ್ಛಸಿ ॥ ೧೨

ಪ್ರಣತಕಾಮದಂ ಪದ್ಮಜಾರ್ಚಿತಂ
ಧರಣಿಮಂಡನಂ ಧ್ಯೇಯಮಾಪದಿ ।
ಚರಣಪಂಕಜಂ ಶಂತಮಂ ಚ ತೇ
ರಮಣ ನಃ ಸ್ತನೇಷ್ವರ್ಪಯಾಧಿಹನ್ ॥ ೧೩

ಸುರತವರ್ಧನಂ ಶೋಕನಾಶನಂ
ಸ್ವರಿತವೇಣುನಾ ಸುಷ್ಠು ಚುಂಬಿತಮ್ ।
ಇತರರಾಗವಿಸ್ಮಾರಣಂ ನೃಣಾಂ
ವಿತರ ವೀರ ನಸ್ತೇಽಧರಾಮೃತಮ್ ॥ ೧೪

ಅಟತಿ ಯದ್ ಭವಾನಹ್ನಿ ಕಾನನಂ
ತ್ರುಟಿರ್ಯುಗಾಯತೇ ತ್ವಾಮಪಶ್ಯತಾಮ್ ।
ಕುಟಿಲಕುಂತಲಂ ಶ್ರೀಮುಖಂ ಚ ತೇ
ಜಡ ಉದೀಕ್ಷತಾಂ ಪಕ್ಷ್ಮಕೃದ್ ದೃಶಾಮ್ ॥ ೧೫

---

ನಮ್ಮ ಚಿತ್ತದಲ್ಲಿ ಕಾಮವನ್ನು ಕೆರಳಿಸುವೆ (೧೨). ನಮಿಸಿದವರ ನೆನಸನ್ನು ನೆರವೇರಿಸುವ, ವಿಧಿಯಿಂದ ವಂದಿತವಾದ, ಮಹಿಗೆ ಮಂಡನವಾದ, ಕಷ್ಟಕಾಲದಲ್ಲಿ ಇಷ್ಟದವೆಂದು ಧ್ಯಾನಯೋಗ್ಯವಾದ, ಸುಖತಮವಾದ ಚರಣಕಮಲವನ್ನು, ಹೇ ರಮಣ–ಚಿತ್ತಸಂತಾಪಹಾರಿ, ನಮ್ಮ ಸ್ತನಗಳಮೇಲಿರಿಸು (೧೩). ಸುರತವರ್ಧನವೂ ಶೋಕನಾಶನವೂ ನುಡಿಸುವ ಕೊಳಲಿಂದ ಚೆನ್ನಾಗಿ ಚುಂಬಿತವೂ ಜನರಿಗೆ ಇತರ ಭೋಗಸುಖವನ್ನು ಮರೆಸುವುದೂ ಆದ ನಿನ್ನ ಅಧರಾಮೃತವನ್ನು, ವೀರ, ನಮಗೆ ವಿತರಿಸು (೧೪). ಹಗಲು ನೀನು ಅಡವಿಯಲ್ಲಿ ಅಲೆಯುವಾಗ ನಿನ್ನನ್ನು ಕಾಣದವರಿಗೆ ನಿಮಿಷವು ಯುಗವಾಗಿ ಪರಿಣಮಿಸುವುದು. (ಸಂಜೆ) ನಿನ್ನ ಕುಟಿಲಾಲಕ ಪರಿವೃತವಾದ ಶ್ರೀಮುಖವನ್ನು ನೋಡಲು ಹಾತೊರೆಯುವ ಜನರ ಕಣ್ಣಿಗೆ (ಅಡ್ಡಿಯಾಗುವಂತೆ) ರೆಪ್ಪೆ

ಪತಿಸುತಾನ್ವಯಭ್ರಾತೃಬಾಂಧವಾ-
ನತಿವಿಲಂಘ್ಯ ತೇಽಂತ್ಯಚ್ಯುತಾಗತಾಃ ।
ಗತಿವಿದಸ್ತವೋದ್ಗೀತಮೋಹಿತಾಃ
ಕಿತವ ಯೋಷಿತಃ ಕಸ್ತ್ಯಜೇನ್ನಿಶಿ ॥ ೧೬

ರಹಸಿ ಸಂವಿದಂ ಹೃಚ್ಛಯೋದಯಂ
ಪ್ರಹಸಿತಾನನಂ ಪ್ರೇಮವೀಕ್ಷಣಮ್ ।
ಬೃಹದುರಃ ಶ್ರಿಯೋ ವೀಕ್ಷ್ಯ ಧಾಮ ತೇ
ಮುಹುರತಿಸ್ಪೃಹಾ ಮುಹ್ಯತೇ ಮನಃ ॥ ೧೭

ವ್ರಜವನೌಕಸಾಂ ವ್ಯಕ್ತಿರಂಗ ತೇ
ವೃಜಿನಹಂತ್ರ್ಯಲಂ ವಿಶ್ವಮಂಗಲಮ್ ।
ತ್ಯಜ ಮನಾಕ್ ಚ ನಸ್ತ್ವತ್ಸ್ಪೃಹಾತ್ಮನಾಂ
ಸ್ವಜನಹೃದ್ರುಜಾಂ ಯನ್ನಿಷೂದನಮ್ ॥ ೧೮

ಯತ್ತೇ ಸುಜಾತಚರಣಾಂಬುರುಹಂ ಸ್ತನೇಷು
ಭೀತಾಃ ಶನೈಃ ಪ್ರಿಯ ದಧೀಮಹಿ ಕರ್ಕಶೇಷು ।

---

ಯನ್ನು ನಿರ್ಮಿಸಿದ ಬ್ರಹ್ಮನು ಬೆಪ್ಪನೇ ಸರಿ! (೧೫). ಅಚ್ಯುತ, ನಿನ್ನ ಗಾನದಿಂದ ಮೋಹಿತರಾಗಿ ನಾವು ಪತಿಸುತಸೋದರರನ್ನು ಬಾಂಧವರನ್ನೂ ಉಲ್ಲಂಘಿಸಿ, ಹೀಗಾಗುವುದೆಂದು ಬಲ್ಲ ನಿನ್ನ ಬಳಿಗೆ ಬಂದೆವು. ಇಂಥ ಹೆಂಗಸರನ್ನು ನಡುರಾತ್ರಿಯಲ್ಲಿ, ಎಲೆ ದುರುಳ! ಯಾವನು ತ್ಯಜಿಸಿ ಹೋದಾನು? (೧೬). ಮನ್ಮಥನನ್ನು ಮರಕಳಿಸುವ ನಿನ್ನ ಏಕಾಂತದ ಚೆಲ್ಲಾಟ, ನಗುಮುಖ, ಪ್ರೇಮವೀಕ್ಷಣ, ಸೊಬಗಿಗೆ ನೆಲೆಯಾದ ವಿಶಾಲವಕ್ಷಃಸ್ಥಳ–ಇವನ್ನು ನೋಡಿ ಆಸೆ ಅಧಿಕವಾಗುವುದು. ಮನವು ಕಳವಳಿಸುವುದು (೧೭). ವ್ರಜವಾಸಿಗಳಿಗೆ ನಿನ್ನ ಉದಯವು ದುರಿತವನ್ನು ದೂರಮಾಡುವಂತಹದು. ಆಹಾ! ಅದು ವಿಶ್ವಮಂಗಳ. ಹೃದಯವೇದನೆಯನ್ನು ಹೋಗಲಾಡಿಸುವುದು ಯಾವುದೋ ಅದನ್ನು ನಿನ್ನ ನೆನಸಿನಲ್ಲಿರುವ ನಿನ್ನವರಾದ ನಮಗೆ ಕಿಂಚಿತ್ತಾದರೂ ಕೊಡು (೧೮). ಓ ರಮಣ, ರಮಣೀಯವಾದ ನಿನ್ನ ಚರಣಕ್ಕೆ ನೋವಾದೀತೆಂದು ನಮ್ಮ ಕಠಿಣಕುಚಗಳಮೇಲೆ ಅದನ್ನು ಮೆಲ್ಲಮೆಲ್ಲನೆ

**ತೇನಾಟವೀಮಟಸಿ ತದ್ ವ್ಯಥತೇ ನ ಕಿಂಸ್ವಿತ್**
**ಕೂರ್ಪಾದಿಭಿರ್ಭ್ರಮತಿ ಧೀರ್ಭವದಾಯುಷಾಂ ನಃ ॥ ೧೯**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕತ್ರಿಂಶಾಧ್ಯಾಯಃ**

---

## ದ್ವಾತ್ರಿಂಶಾಧ್ಯಾಯಃ

**ಶ್ರೀಶುಕ ಉವಾಚ—**
**ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ ।**
**ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನಲಾಲಸಾಃ ॥ ೧**

**ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।**
**ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ॥ ೨**

---

ಹೆದರುತ್ತ ಇರಿಸಿಕೊಂಡೆವು! ಅಂಥ ಚರಣದಿಂದ ಅಡವಿಯಲ್ಲಿ ಓಡಾಡುವೆಯಲ್ಲ! ಕಲ್ಲು ಹರಳು ಮುಂತಾದವುಗಳಿಂದ ಅದಕ್ಕೆ ನೋವಾಗದೆ? ನಿನಗೆ ಜೀವನವನ್ನರ್ಪಿಸಿದ ನಮ್ಮ ಮನಸ್ಸು ಅದನ್ನು ನೆನೆದು ಮರುಗಿ ಮುಗ್ಗರಿಸುತ್ತಿದೆ" ಎಂದು ಹಲುಬಿದರು (೧೯).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತೊಂದನೆಯ ಅಧ್ಯಾಯ

---

## ಅಧ್ಯಾಯ ೩೨

### ಶ್ರೀಕೃಷ್ಣನು ಗೋಪಿಯರನ್ನು ಸಂತೈಸುವುದು

ಶುಕಮುನಿಗಳು ಹೇಳಿದರು: ಪರೀಕ್ಷಿತರಾಜ, ಈ ಪ್ರಕಾರವಾಗಿ ಗೋಪಿಯರು ಹಾಡುತ್ತ ಬಗೆಬಗೆಯಲ್ಲಿ ಹಲುಬುತ್ತ ಕೃಷ್ಣದರ್ಶನಲಾಲಸೆಯರಾಗಿ, ಗಟ್ಟಿಯಾಗಿ ಅತ್ತರು. ಆಗ ಶೌರಿಯು ಪೀತಾಂಬರವನ್ನುಟ್ಟು ವನಮಾಲಿಯಾಗಿ ಮುಖಾಂಬುಜದಲ್ಲಿ ಮುಗುಳ್ನಗೆ ಬೀರುತ್ತ, (ಜಗನ್ಮೋಹನನಾದ)

ತಂ ವಿಲೋಕ್ಯಾಗತಂ ಪ್ರೇಷ್ಠಂ ಪ್ರೀತ್ಯುತ್ಫುಲ್ಲದೃಶೋಽಬಲಾಃ ।
ಉತ್ತಸ್ಥುರ್ಯುಗಪತ್ ಸರ್ವಾಸ್ತನ್ವಃ ಪ್ರಾಣಮಿವಾಗತಮ್ ॥ ೩

ಕಾಚಿತ್ ಕರಾಂಬುಜಂ ಶೌರೇರ್ಜಗೃಹೇಽಂಜಲಿನಾ ಮುದಾ ।
ಕಾಚಿದ್ ದಧಾರ ತದ್ಬಾಹುಮಂಸೇ ಚಂದನರೂಷಿತಮ್ ॥ ೪

ಕಾಚಿದಂಜಲಿನಾಗೃಹ್ಣಾತ್ತನ್ವೀ ತಾಂಬೂಲಚರ್ವಿತಮ್ ।
ಏಕಾ ತದಂಘ್ರಿಕಮಲಂ ಸಂತಪ್ತಾ ಸ್ತನಯೋರಧಾತ್ ॥ ೫

ಏಕಾ ಭ್ರುಕುಟಿಮಾಬಧ್ಯ ಪ್ರೇಮಸಂರಂಭವಿಹ್ವಲಾ ।
ಘ್ನತೀವೈಕ್ಷತ್ ಕಟಾಕ್ಷೇಪೈಃ ಸಂದಷ್ಟದಶನಚ್ಛದಾ ॥ ೬

ಅಪರಾನಿಮಿಷದ್ದೃಗ್ಭ್ಯಾಂ ಜುಷಾಣಾ ತನ್ಮುಖಾಂಬುಜಮ್ ।
ಆಪೀತಮಪಿ ನಾತೃಪ್ಯತ್ ಸಂತಸ್ತಚ್ಚರಣಂ ಯಥಾ ॥ ೭

---

ಸಾಕ್ಷಾತ್ ಮನ್ಮಥನನ್ನೂ (ಮೋಹಗೊಳಿಸುವ) ಮನ್ಮಥನೆಂಬಂತೆ ಅವರೆದುರಿಗೆ ಪ್ರಕಟವಾದನು (೧–೨). ಪ್ರಿಯತಮನಾದ ಶ್ರೀಕೃಷ್ಣನು ಬಂದುದನ್ನು ಕಂಡು ಗೋಪಿಯರ ಕಣ್ಣುಗಳು ಪ್ರೀತಿಯಿಂದ ಅರಳಿದವು. ಕೈಕಾಲುಗಳಿಗೆ ಹೋದ ಪ್ರಾಣ ಬಂದಂತಾಯಿತು. ಎಲ್ಲರೂ ಥಟ್ಟನೆ ಎದ್ದುನಿಂತರು (೩). ಒಬ್ಬಳು ಪ್ರೀತಿಯಿಂದ ಶೌರಿಯ ಕರಕಮಲವನ್ನು ಎರಡು ಕೈಗಳಿಂದಲೂ ಹಿಡಿದುಕೊಂಡಳು. ಇನ್ನೊಬ್ಬಳು ಚಂದನಭೂಷಿತವಾದ ಅವನ ತೋಳನ್ನು ಹೆಗಲಮೇಲಿರಿಸಿಕೊಂಡಳು (೪). ಮತ್ತೊಬ್ಬ ತನ್ವಿಯು ಅವನ ತಾಂಬೂಲದ ಚರ್ವಿತವನ್ನು ಬೊಗಸೆಯನ್ನೊಡ್ಡಿ ಹಿಡಿದಳು. ವಿರಹತಪ್ತಳಾದ ಮಗದೊಬ್ಬಳು ಶ್ರೀಕೃಷ್ಣನ ಪಾದಕಮಲವನ್ನು ಸ್ತನಗಳಮೇಲಿರಿಸಿಕೊಂಡಳು (೫). ಪ್ರಣಯಕೋಪದಿಂದ ವಿವಶಳಾದ ಮತ್ತೊಬ್ಬಳು ಹುಬ್ಬುಗಂಟಿಕ್ಕಿ ಅವಡುಗಚ್ಚಿ, ಕಟಾಕ್ಷಗಳ ಝಳಪಿನಿಂದ ಅವನನ್ನು ಹೊಡೆಯುವಳೋ ಎಂಬಂತೆ ವೀಕ್ಷಿಸಿದಳು! ಇನ್ನೊಬ್ಬಳು ಎವೆಯಿಕ್ಕದ ನೇತ್ರಗಳಿಂದ, ನೋಡಿದ ಅವನ ಮುಖಾಂಬುಜವನ್ನೇ ನೋಡುತ್ತ, ಸಜ್ಜನರು ಆತನ ಚರಣವನ್ನು ನೋಡಿ ಹೇಗೆ ತೃಪ್ತರಾಗುವುದಿಲ್ಲವೋ ಹಾಗೆ, ತೃಪ್ತಳಾಗಲೇ ಇಲ್ಲ (೬–೭).

*

**ತಂ ಕಾಚಿನ್ನೇತ್ರರಂಧ್ರೇಣ ಹೃದಿಕೃತ್ಯ ನಿಮೀಲ್ಯ ಚ ।**
**ಪುಲಕಾಂಗ್ಯುಪಗುಹ್ಯಾಸ್ತೇ ಯೋಗೀವಾನಂದಸಂಪ್ಲುತಾ ॥ ೮**

**ಸರ್ವಾಸ್ತಾಃ ಕೇಶವಾಲೋಕಪರಮೋತ್ಸವನಿರ್ವೃತಾಃ ॥**
**ಜಹುರ್ವಿರಹಜಂ ತಾಪಂ ಪ್ರಾಜ್ಞಂ ಪ್ರಾಪ್ಯ ಯಥಾ ಜನಾಃ ॥ ೯**

**ತಾಭಿರ್ವಿಧೂತಶೋಕಾಭಿರ್ಭಗವಾನಚ್ಯುತೋ ವೃತಃ ।**
**ವ್ಯರೋಚತಾಧಿಕಂ ತಾತ ಪುರುಷಃ ಶಕ್ತಿಭಿರ್ಯಥಾ ॥ ೧೦**

**ತಾಃ ಸಮಾದಾಯ ಕಾಲಿಂದ್ಯಾ ನಿರ್ವಿಶ್ಯ ಪುಲಿನಂ ವಿಭುಃ ।**
**ವಿಕಸತ್ಕುಂದಮಂದಾರಸುರಭ್ಯನಿಲಷಟ್ಪದಮ್ ॥ ೧೧**

**ಶರಚ್ಚಂದ್ರಾಂಶುಸಂದೋಹಧ್ವಸ್ತದೋಷಾತಮಃ ಶಿವಮ್ ॥**
**ಕೃಷ್ಣಾಯಾ ಹಸ್ತತರಲಾಚಿತಕೋಮಲವಾಲುಕಮ್ ॥ ೧೨**

---

ಒಬ್ಬ ಗೋಪಿಯು ತನ್ನ ನೇತ್ರರಂಧ್ರದಿಂದ ಶ್ರೀಕೃಷ್ಣನನ್ನು ಹೃದಯದೊಳಗೆ ಸೇರಿಸಿ ಕಣ್ಣುಮುಚ್ಚಿ ಮನಸ್ಸಿನಲ್ಲಿ ಆಲಿಂಗಿಸಿಕೊಂಡು ರೋಮಾಂಚಿತಳಾಗಿ ಯೋಗಿಯಂತೆ ಆನಂದದಲ್ಲಿ ಮುಳುಗಿದ್ದಳು (೮). ಆ ಎಲ್ಲ ಗೋಪಿಯರೂ ಕೇಶವನ ದರ್ಶನವೆಂಬ ಮಹೋತ್ಸವದಿಂದ ಸಂಹೃಷ್ಟರಾಗಿ, ಮುಮುಕ್ಷುಗಳು ಈಶ್ವರನನ್ನು ಪಡೆದರೆ ಹೇಗೋ ಹಾಗೆ * ವಿರಹತಾಪವನ್ನು ತ್ಯಜಿಸಿದರು (೯). ಶೋಕರಹಿತರಾದ ಆ ಗೋಪಿಯರಿಂದ ಪರಿವೃತನಾದ ಭಗವಾನ್ ಅಚ್ಯುತನು, ವತ್ಸ–ಪರೀಕ್ಷಿತ, ಶಕ್ತಿದೇವತೆಗಳಿಂದ ಪರಿವೃತನಾದ ಆದಿಪುರುಷನಂತೆ ಅಧಿಕವಾಗಿ ಕಂಗೊಳಿಸಿದನು (೧೦). ಸ್ವಾಮಿಯು ಆ ಗೋಪಿಯರನ್ನು ಕರೆದುಕೊಂಡು ಕಾಳಿಂದೀಪುಳಿನದಲ್ಲಿ ವಿಹರಿಸಿದನು. ಅರಳಿದ ಕುಂದಮಂದಾರಗಳ ಪರಿಮಳವನ್ನು ಹೊತ್ತ ಗಾಳಿ ಪುಳಿನದಲ್ಲಿ ಬೀಸುತ್ತಿತ್ತು. ಗಾಳಿಯೊಡನೆ ದುಂಬಿಗಳು ಮುಸುಕುತ್ತಿದ್ದವು (೧೧). ಶರಚ್ಚಂದ್ರನ ಕಿರಣಸಂದೋಹದಿಂದ ರಾತ್ರಿಯ ಕತ್ತಲೆ ನಶಿಸಿ ಸುಖಕರವಾಗಿತ್ತು. ಕಾಳಿಂದಿಯ ಕೈಗಳೆಂಬ

---

* ಪ್ರಾಜ್ಞಂ ಪ್ರಾಪ್ಯ ಯಥಾ ಜನಾಃ—ಎಂದು ಮೂಲವಿದೆ. "ಸಂಸಾರಿಗಳು ಬ್ರಹ್ಮಜ್ಞನನ್ನು ಪಡೆದಂತೆ, ವಿಶ್ವತೈಜಸಾವಸ್ಥೆಯಲ್ಲಿರುವ ಜೀವರು ಸುಷುಪ್ತಿಯಲ್ಲಿ ಪ್ರಾಜ್ಞನನ್ನು ಸೇರಿದಂತೆ" ಎಂದು ಇನ್ನೂ ಎರಡು ಅರ್ಥಗಳನ್ನು ಹೇಳಬಹುದು.

ತದ್ದರ್ಶನಾಹ್ಲಾದವಿಧೂತಹೃದ್ರುಜೋ
ಮನೋರಥಾಂತಂ ಶ್ರುತಯೋ ಯಥಾ ಯಯುಃ ।
ಸ್ವೈರುತ್ತರೀಯೈಃ ಕುಚಕುಂಕುಮಾಂಕಿತೈ-
ರಚೀಕ್ಲೃಪನ್ನಾಸನಮಾತ್ಮಬಂಧವೇ ॥ ೧೩

ತತ್ರೋಪವಿಷ್ಟೋ ಭಗವಾನ್ ಸ ಈಶ್ವರೋ
ಯೋಗೇಶ್ವರಾಂತರ್ಹೃದಿ ಕಲ್ಪಿತಾಸನಃ ।
ಚಕಾಸ ಗೋಪೀಪರಿಷದ್ಗತೋಽರ್ಚಿತ-
ಸ್ತ್ರೈಲೋಕ್ಯಲಕ್ಷ್ಮ್ಯೇಕಪದಂ ವಪುರ್ದಧತ್ ॥ ೧೪

ಸಭಾಜಯಿತ್ವಾ ತಮನಂಗದೀಪನಂ
ಸಹಾಸಲೀಲೇಕ್ಷಣವಿಭ್ರಮಭ್ರುವಾ ।
ಸಂಸ್ಪರ್ಶನೇನಾಂಕಕೃತಾಂಘ್ರಿಹಸ್ತಯೋಃ
ಸಂಸ್ತುತ್ಯ ಈಷತ್ಕುಪಿತಾ ಬಭಾಷಿರೇ ॥ ೧೫

---

ಅಲೆಗಳಿಂದ ಹಾಸಲ್ಪಟ್ಟ ಮೃದುವಾದ ಮರಳಿರುವ ಪುಳಿನದಲ್ಲಿ ಅಚ್ಯುತನು ಅಬಲೆಯರೊಡನೆ ವಿಹರಿಸುತ್ತ ವಿರಾಜಿಸಿದನು (೧೨). ಆ ಸ್ತ್ರೀಯರು ಭಗವದ್ದರ್ಶನದ ಆನಂದದಿಂದ ಹೃದಯದಾಹವನ್ನು ಪರಿಹರಿಸಿಕೊಂಡು, ಶ್ರುತಿಗಳಂತೆ* ತಮ್ಮ ಮನೋರಥದ ಕೊನೆಯನ್ನು ಮುಟ್ಟಿದರು. ಕುಚಕುಂಕುಮಾಂಕಿತವಾದ ಉತ್ತರೀಯಗಳನ್ನು ಹಾಸಿ ಆತ್ಮಬಂಧುವಾದ ಅಚ್ಯುತನಿಗೆ ಆಸನವನ್ನು ಕಲ್ಪಿಸಿದರು (೧೩). ಯೋಗೇಶ್ವರರ ಹೃದಯ ಮಧ್ಯದಲ್ಲಿ ಯಾರಿಗೆ ಪೀಠವು ಕಲ್ಪಿತವಾಗುವುದೋ ಅಂತಹ ಪೂಜ್ಯನಾದ ಆ ಪರಮೇಶ್ವರನು ಮೂರುಲೋಕಗಳ ಸೌಂದರ್ಯಸಾರವಾದ ರೂಪನ್ನು ಧರಿಸಿ ಗೋಪಿಯರ ಸಭೆಯ ನಡುವೆ ಅವರ ಉತ್ತರೀಯದ ಮೇಲೆ ಕುಳಿತು ವಿರಾಜಿಸಿದನು! (೧೪). ಶ್ರೀಕೃಷ್ಣನು ಅವರ ತೊಡೆಯ ಮೇಲೆ ಕೈಕಾಲುಗಳನ್ನು ನೀಡಿಕೊಂಡಿದ್ದನು. ಗೋಪಿಯರು ಅವನ್ನು ಮುಟ್ಟುತ್ತ, ನಗುತ್ತ, ಲೀಲೆಯಿಂದ ನೋಡುತ್ತ, ವೈಯಾರದಿಂದ ಹುಬ್ಬನ್ನು ಕುಣಿಸುತ್ತ, ಅನಂಗವರ್ಧನ

---

* ಕರ್ಮಕಾಂಡದಲ್ಲಿ ಪರಮೇಶ್ವರನನ್ನು ಕಾಣಲಾರದ ಶ್ರುತಿಗಳು ಜ್ಞಾನಕಾಂಡದಲ್ಲಿ ಅವನನ್ನು ಕಂಡು ಮನೋರಥವನ್ನು ಪಡೆಯುವಂತೆ—ಎಂದು ಅಭಿಪ್ರಾಯ.

ಗೋಪ್ಯ ಊಚುಃ—

**ಭಜತೋಽನುಭಜಂತ್ಯೇಕ ಏಕ ಏತದ್ವಿಪರ್ಯಯಮ್ ।**
**ನೋಭಯಾಂಶ್ಚ ಭಜಂತ್ಯೇಕ ಏತನ್ನೋ ಬ್ರೂಹಿ ಸಾಧು ಭೋಃ ॥**

ಶ್ರೀಭಗವಾನುವಾಚ—

**ಮಿಥೋ ಭಜಂತಿ ಯೇ ಸಖ್ಯಃ ಸ್ವಾರ್ಥೈಕಾಂತೋದ್ಯಮಾ ಹಿ ತೇ ।**
**ನ ತತ್ರ ಸೌಹೃದಂ ಧರ್ಮಃ ಸ್ವಾರ್ಥಾರ್ಥಂ ತದ್ಧಿ ನಾನ್ಯಥಾ ॥ ೧೭**

**ಭಜಂತ್ಯಭಜತೋ ಯೇ ವೈ ಕರುಣಾಃ ಪಿತರೋ ಯಥಾ ।**
**ಧರ್ಮೋ ನಿರಪವಾದೋಽತ್ರ ಸೌಹೃದಂ ಚ ಸುಮಧ್ಯಮಾಃ ॥ ೧೮**

**ಭಜತೋಽಪಿ ನ ವೈ ಕೇಚಿದ್ ಭಜಂತ್ಯಭಜತಃ ಕುತಃ ।**
**ಆತ್ಮಾರಾಮಾ ಹ್ಯಾಪ್ತಕಾಮಾ ಅಕೃತಜ್ಞಾ ಗುರುದ್ರುಹಃ ॥ ೧೯**

---

ನಾದ ಆತನನ್ನು ಆದರಿಸಿ ಹೊಗಳಿ ಹುಸಿಮುನಿಸಿನಿಂದ ಹೀಗೆ ಕೇಳಿದರು(೧೫): "ಲೋಕದಲ್ಲಿ ಕೆಲವರು ತಮ್ಮನ್ನು ಆಶ್ರಯಿಸತಕ್ಕವರನ್ನು ಅದಕ್ಕೆ ತಕ್ಕಂತೆ ಅನುಸರಿಸಿ ಉಪಕರಿಸುತ್ತಾರೆ. ಕೆಲವರು ಇದಕ್ಕೆ ವಿಪರೀತವಾಗಿ ಅನುಸರಿಸದೆ ಇರುವವರನ್ನು ಹಿಂಬಾಲಿಸುತ್ತಾರೆ. ಇನ್ನು ಕೆಲವರು ಯಾರನ್ನೂ ಉಪಕರಿಸು ವುದೇ ಇಲ್ಲ! ಗೋವಿಂದ, ಇದೇಕೆ? ಸರಿಯಾಗಿ ನಮಗೆ ಹೇಳು!" ಎಂದರು (೧೬). ಅದಕ್ಕೆ ಭಗವಂತನು ಹೀಗೆಂದನು: "ಗೆಳತಿಯರೆ, (ಉಪಕಾರ ಪ್ರತ್ಯುಪಕಾರದೃಷ್ಟಿಯಿಂದ) ಯಾರು ಅನ್ಯೋನ್ಯವಾಗಿ ಆಶ್ರಯಿಸುತ್ತಾರೋ ಅವರು ಸ್ವಾರ್ಥೈಕಪರಾಯಣರು. ಅದರಲ್ಲಿ ಸ್ನೇಹವೂ ಇಲ್ಲ; ಧರ್ಮವೂ ಇಲ್ಲ. ಅವರ ಉದ್ಯಮ ಸ್ವಾರ್ಥಕ್ಕಾಗಿ, ಬೇರೆಯಲ್ಲ (೧೭). ಉಪಕರಿಸದೆ ಇರತಕ್ಕವರಿಗೆ ಯಾರು ನೆರವು ನೀಡುತ್ತಾರೋ ಅವರು ಕರುಣಾಶಾಲಿಗಳು; ಅವರು ತಂದೆತಾಯಿಗಳಿದ್ದಂತೆ. ಸುಂದರಿಯರೆ, ಇದರಲ್ಲಿ ಧರ್ಮವು ನಿರ್ಬಾಧ ವಾಗಿ ಉಂಟು. ಸ್ನೇಹವೂ ಉಂಟು (೧೮). ತಮ್ಮನ್ನು ಅನುಸರಿಸತಕ್ಕವರಿಗೂ ಕೆಲವರು ಉಪಕಾರಮಾಡುವುದಿಲ್ಲ. ಇನ್ನು ಅನುಸರಿಸದವರಿಗೆ ಮಾಡು ವುದುಂಟೆ? ಅಂಥವರು ಆತ್ಮಾರಾಮ, ಆಪ್ತಕಾಮ, ಅಕೃತಜ್ಞ, ಗುರುದ್ರೋಹಿ

ನಾಹಂ ತು ಸಖ್ಯೋ ಭಜತೋಽಪಿ ಜಂತೂನ್
ಭಜಾಮ್ಯಮೀಷಾಮನುವೃತ್ತಿವೃತ್ತಯೇ ।
ಯಥಾಧನೋ ಲಬ್ಧಧನೇ ವಿನಷ್ಟೇ
ತಚ್ಚಿಂತಯಾನ್ಯನ್ನಿಭೃತೋ ನ ವೇದ ॥ ೨೦

ಏವಂ ಮದರ್ಥೋಜ್ಝಿತಲೋಕವೇದ-
ಸ್ವಾನಾಂ ಹಿ ವೋ ಮಯ್ಯನುವೃತ್ತಯೇಽಬಲಾಃ ।
ಮಯಾ ಪರೋಕ್ಷಂ ಭಜತಾ ತಿರೋಹಿತಂ
ಮಾಸೂಯಿತುಂ ಮಾರ್ಹಥ ತತ್ ಪ್ರಿಯಂ ಪ್ರಿಯಾಃ ॥

---

ಗಳೆಂದು ನಾಲ್ಕು ವಿಧ! * (೧೯). ನಾನಾದರೋ, ಗೆಳತಿಯರೆ, ಭಜಿಸತಕ್ಕ ಜನರನ್ನೂ ಅನುಸರಿಸತಕ್ಕವನಲ್ಲ! ಅವರು ನನ್ನನ್ನು ಭಜಿಸುವುದು ನಿರಂತರವಾಗಿ ಮುಂದುವರಿಯಲೆಂಬುದು ನನ್ನ ಉದ್ದೇಶ! ಹೇಗೆಂದರೆ, ದೊರಕಿದ ಹಣವೂ ನಷ್ಟವಾದರೆ ಬಡವನು ಅದರ ಚಿಂತೆಯಲ್ಲಿ ಮುಳುಗಿರುತ್ತಾನೆ, ಇನ್ನೊಂದನ್ನು ಗಮನಿಸುವುದಿಲ್ಲ (೨೦). ಹಾಗೆಯೇ ನನಗೋಸ್ಕರ ಲೋಕ ವೇದಗಳನ್ನೂ ಬಂಧುಗಳನ್ನೂ† ಪರಿತ್ಯಜಿಸಿ ಬಂದಿರುವ ನಿಮ್ಮ ಧ್ಯಾನವು ನನ್ನಲ್ಲಿ ನಿರಂತರವಾಗಿ ಮುಂದುವರಿಯಲೆಂದು, ಅಬಲೆಯರೆ, ನಾನು ಹೀಗೆ ಮಾಡಿದೆನು. ನಿಮಗೆ ಕಾಣಿಸದೆ ನಿಮ್ಮ ಪ್ರೇಮಾಲಾಪಗಳನ್ನು ಕೇಳುತ್ತಿದ್ದರೂ ಅಂತರ್ಧಾನವಾಗಿಯೇ ಇದ್ದೆನು. ಆದ್ದರಿಂದ, ಪ್ರಿಯರೆ, ನಿಮಗೆ ಹಿತವಾದು

---

* ಆತ್ಮಾರಾಮ = ಬಾಹ್ಯದೃಷ್ಟಿಯೇ ಇಲ್ಲದ ಯೋಗಿ. ಆಪ್ತಕಾಮ = ಬಾಹ್ಯದೃಷ್ಟಿ ಇದ್ದರೂ ಫಲಭೋಗದ ಅಪೇಕ್ಷೆ ಇಲ್ಲದವನು. ಅಕೃತಜ್ಞ = ಕೃತಜ್ಞತೆ ಇಲ್ಲದ ಮೂಢ. ಗುರುದ್ರೋಹಿ = ಉಪಕರಿಸಿದವನು ಗುರುಸಮಾನನಾಗಿದ್ದರೂ ಪ್ರತ್ಯುಪಕಾರ ಮಾಡದ ಕಠೋರಸ್ವಭಾವದವನು.

† ಜನರಾಡುವ ಸ್ತುತಿನಿಂದೆಗಳನ್ನು ಗಮನಿಸದೆ ಇದ್ದುದರಿಂದ ಲೋಕವನ್ನೂ, ಧರ್ಮಾಧರ್ಮಗಳನ್ನು ಗಮನಿಸದೆ ಇದ್ದುದರಿಂದ ವೇದವನ್ನೂ, ಬಂಧುಸ್ನೇಹವನ್ನು ತೊರೆದದ್ದರಿಂದ ಬಂಧುಗಳನ್ನೂ ಗೋಪಿಯರು ಪರಿತ್ಯಜಿಸಿದಂತಾಯಿತು. ಭಗವಂತನು ಹಿಂದೆ ಹೇಳಿದ ಆತ್ಮಾರಾಮಾದಿಗಳಲ್ಲಿ ತಾನು ಯಾರೂ ಅಲ್ಲವೆಂದೂ ಸರ್ವಾತಿಗನೆಂದೂ ತಿಳಿಸಿದ್ದಾನೆ.

ನ ಪಾರಯೇಽಹಂ ನಿರವದ್ಯಸಂಯುಜಾಂ
ಸ್ವಸಾಧುಕೃತ್ಯಂ ವಿಬುಧಾಯುಷಾಪಿ ವಃ ।
ಯಾ ಮಾಭಜನ್ ದುರ್ಜರಗೇಹಶೃಂಖಲಾಃ
ಸಂವೃಶ್ಚ್ಯ ತದ್ ವಃ ಪ್ರತಿಯಾತು ಸಾಧುನಾ ॥ ೨೨

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಾತ್ರಿಂಶಾಧ್ಯಾಯಃ



ದನ್ನು ದೋಷವೆಂದೆಣಿಸಬೇಡಿರಿ (೨೧). ದೋಷವರ್ಜಿತವಾಗಿ ಮಾಡಿರುವ ನಿಮ್ಮ ಈ ಸತ್ಕಾರ್ಯಕ್ಕೆ ಪ್ರತ್ಯುಪಕಾರ ಮಾಡಲು ಒಬ್ಬ ದೇವತೆಯ ಆಯುಸ್ಸಿನಿಂದಲೂ ಆಗದು. ದುಸ್ತ್ಯಜವಾದ ಮನೆಮಾರುಗಳ ಬಂಧನವನ್ನು ಕಿತ್ತೊಗೆದು ನನ್ನನ್ನು ಭಜಿಸಿದ್ದೀರಿ. ಈಗ ನೀವು ಮಾಡಿದ ಒಳಿತಿಗೆ ನಿಮ್ಮ ಒಳಿತೇ ಪ್ರತಿಫಲ" ಎಂದನು (೨೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತೆರಡನೆಯ ಅಧ್ಯಾಯ



## ತ್ರಯಸ್ತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಇತ್ಥಂ ಭಗವತೋ ಗೋಪ್ಯಃ ಶ್ರುತ್ವಾ ವಾಚಃ ಸುಪೇಶಲಾಃ ।
ಜಹುರ್ವಿರಹಜಂ ತಾಪಂ ತದಂಗೋಪಚಿತಾಶಿಷಃ ॥ ೧

ತತ್ರಾರಭತ ಗೋವಿಂದೋ ರಾಸಕ್ರೀಡಾಮನುವ್ರತೈಃ ।
ಸ್ತ್ರೀರತ್ನೈರನ್ವಿತಃ ಪ್ರೀತೈರನ್ಯೋನ್ಯಾಬದ್ಧಬಾಹುಭಿಃ ॥ ೨

ರಾಸೋತ್ಸವಃ ಸಂಪ್ರವೃತ್ತೋ ಗೋಪೀಮಂಡಲಮಂಡಿತಃ ।
ಯೋಗೇಶ್ವರೇಣ ಕೃಷ್ಣೇನ ತಾಸಾಂ ಮಧ್ಯೇ ದ್ವಯೋರ್ದ್ವಯೋಃ ।
ಪ್ರವಿಷ್ಟೇನ ಗೃಹೀತಾನಾಂ ಕಂಠೇ ಸ್ವನಿಕಟಂ ಸ್ತ್ರಿಯಃ ॥ ೩

### ಅಧ್ಯಾಯ ೩೩

#### ರಾಸಕ್ರೀಡೆ

ಹೀಗೆ ಭಗವಂತನಾಡಿದ ಮೃದುನುಡಿಗಳನ್ನು ಕೇಳಿದ ಗೋಪಿಯರು ಅವನ ಅಂಗಸಂಗದಿಂದಾದ ಸಮೃದ್ಧಿಯುಳ್ಳವರಾಗಿ ತಮ್ಮ ವಿರಹವೇದನೆಯನ್ನು ತ್ಯಜಿಸಿದರು (೧). ಅಲ್ಲಿ ಗೋವಿಂದನು ಅನುವ್ರತರೂ ಸಂಪ್ರೀತರೂ ಒಬ್ಬರತೋಳನ್ನೊಬ್ಬರು ತೆಕ್ಕೆಯಲ್ಲಿ ಹಿಡಿದವರೂ ಆದ ಆ ಸ್ತ್ರೀರತ್ನಗಳಿಂದ ಸಮೇತನಾಗಿ ರಾಸಕ್ರೀಡೆಯನ್ನಾರಂಭಿಸಿದನು* (೨). ಮಂಡಲಾಕಾರವಾಗಿ ನಿಂತ ಗೋಪಿಯರಿಂದ ಮಂಡಿತವಾದ ರಾಸಕ್ರೀಡೆಯು ಪ್ರಾರಂಭವಾಯಿತು. ತನ್ನ ಬಳಿಯಲ್ಲಿದ್ದು ತನ್ನನ್ನು ಆಲಂಗಿಸಿಕೊಂಡಿರುವನೆಂದು ಎಲ್ಲ ಸ್ತ್ರೀಯರೂ ತಿಳಿಯಲೆಂದು, ಅಚಿಂತ್ಯಶಕ್ತಿಯುಳ್ಳ ಯೋಗೇಶ್ವರನಾದ ಶ್ರೀಕೃಷ್ಣನು ಗೋಪಿಯರ ಮಧ್ಯದಲ್ಲಿ ಇಬ್ಬರಿಬ್ಬರ ನಡುವೆ ಇದ್ದು ಗೋಪಿಯರ ಕಂಠವನ್ನು

---

* ರಾಸಕ್ರೀಡೆ = ಅನೇಕ ನರ್ತಕಿಯರೊಡನೆ ಮಾಡುವ ನೃತ್ಯವಿಶೇಷ.

ಯಂ ಮನ್ಯೇರನ್ ನಭಸ್ತಾವದ್ ವಿಮಾನಶತಸಂಕುಲಮ್ ।
ದಿವೌಕಸಾಂ ಸದಾರಾಣಾಮೌತ್ಸುಕ್ಯಾಪಹೃತಾತ್ಮನಾಮ್ ॥ ೪

ತತೋ ದುಂದುಭಯೋ ನೇದುರ್ನಿಪೇತುಃ ಪುಷ್ಪವೃಷ್ಟಯಃ ।
ಜಗುರ್ಗಂಧರ್ವಪತಯಃ ಸಸ್ತ್ರೀಕಾಸ್ತದ್ಯಶೋಽಮಲಮ್ ॥ ೫

ವಲಯಾನಾಂ ನೂಪುರಾಣಾಂ ಕಿಂಕಿಣೀನಾಂ ಚ ಯೋಷಿತಾಮ್ ।
ಸಪ್ರಿಯಾಣಾಮಭೂಚ್ಛಬ್ದಸ್ತುಮುಲೋ ರಾಸಮಂಡಲೇ ॥ ೬

ತತ್ರಾತಿಶುಶುಭೇ ತಾಭಿರ್ಭಗವಾನ್ ದೇವಕೀಸುತಃ ।
ಮಧ್ಯೇ ಮಣೀನಾಂ ಹೈಮಾನಾಂ ಮಹಾಮರಕತೋ ಯಥಾ ॥ ೭

ಪಾದನ್ಯಾಸೈರ್ಭುಜವಿಧುತಿಭಿಃ ಸಸ್ಮಿತೈರ್ಭ್ರೂವಿಲಾಸೈ-
ರ್ಭಜ್ಯನ್ಮಧ್ಯೈಶ್ಚಲಕುಚಪಟೈಃ ಕುಂಡಲೈರ್ಗಂಡಲೋಲೈಃ ।
ಸ್ವಿದ್ಯನ್ಮುಖ್ಯಃ ಕಬರರಶನಾಗ್ರಂಥಯಃ ಕೃಷ್ಣವಧ್ವೋ
ಗಾಯಂತ್ಯಸ್ತಂ ತಡಿತ ಇವ ತಾ ಮೇಘಚಕ್ರೇ ವಿರೇಜುಃ ॥ ೮

---

ಉಭಯಬಾಹುಗಳಿಂದ ಆಲಂಗಿಸಿಕೊಂಡಿದ್ದನು (೩). ರಾಸಕ್ರೀಡೆಯನ್ನು ವೀಕ್ಷಿಸಲು ತವಕಗೊಂಡ ದೇವತೆಗಳು ತಮ್ಮ ಮಡದಿಯರೊಡನೆ ಆಗಮಿಸಲಾಗಿ, ಆಕಾಶವು ನೂರಾರು ದೇವವಿಮಾನಗಳಿಂದ ತುಂಬಿತು (೪). ಆಗ ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಗಳು ಸುರಿದವು. ಗಂಧರ್ವಶ್ರೇಷ್ಠರು ಮಡದಿಯರೊಡನೆ ಭಗವಂತನ ವಿಮಲಕೀರ್ತಿಯನ್ನು ಹಾಡಿದರು (೫). ಪ್ರಿಯನಾದ ಕೃಷ್ಣನೊಡನಿದ್ದ ಆ ತರುಣಿಯರ ಕೈಬಳೆ ಕಾಲ್ಬಳೆ ಕಿರುಗೆಜ್ಜೆಗಳ ಝಣಝಣಕಾರವು ರಾಸಮಂಡಲದಲ್ಲಿ ಸಂಮಿಶ್ರವಾಗಿ ಹರಡಿತು (೬). ಗೋಪಿಯರೊಡಗೂಡಿದ ದೇವಕೀತನಯನು, ಹಾರದಲ್ಲಿ ಬಂಗಾರದ ಮಣಿಗಳ ನಡುನಡುವೆ ಪೋಣಿಸಿರುವ ಉಜ್ಜ್ವಲವಾದ ಮರಕತಮಣಿಯಂತೆ ವಿರಾಜಿಸಿದನು (೭). ಚರಣವಿನ್ಯಾಸ, ಕರಚಾಲನೆ, ಮುಗುಳ್ನಗೆ, ಹುಬ್ಬುಗಳ ವಿಲಾಸ, ಬಾಗುವ ನಡು, ಚಲಿಸುವ ಕುಚಗಳು ಮತ್ತು ವಸ್ತ್ರಗಳು, ಗಂಡಸ್ಥಳದಲ್ಲಿ ಅಲ್ಲಾಡುವ ಕುಂಡಲಗಳು–ಇವುಗಳಿಂದ ರಂಜಿಸುವ ಕೃಷ್ಣಕಾಮಿನಿಯರು, ಮುಖವು ಬೆವರುತ್ತಿರಲು, ಮುಡಿ ಮತ್ತು ನಡುಪಟ್ಟಿಗಳ ಗಂಟು ಸಡಿಲುತ್ತಿರಲು, ಶ್ರೀಕೃಷ್ಣನನ್ನು ಕುರಿತು ಹಾಡುತ್ತ, ಮೇಘಮಂಡಲದೊಡ

ಉಚ್ಚೈರ್ಜಗುರ್ನೃತ್ಯಮಾನಾ ರಕ್ತಕಂಠ್ಯೋ ರತಿಪ್ರಿಯಾಃ ।
ಕೃಷ್ಣಾಭಿಮರ್ಶಮುದಿತಾ ಯದ್ಗೀತೇನೇದಮಾವೃತಮ್ ॥ ೯

ಕಾಚಿತ್ ಸಮಂ ಮುಕುಂದೇನ ಸ್ವರಜಾತೀರಮಿಶ್ರಿತಾಃ ।
ಉನ್ನಿನ್ಯೇ ಪೂಜಿತಾ ತೇನ ಪ್ರೀಯತಾ ಸಾಧು ಸಾಧ್ವಿತಿ ।
ತದೇವ ಧ್ರುವಮುನ್ನಿನ್ಯೇ ತಸ್ಯೈ ಮಾನಂ ಚ ಬಹ್ವದಾತ್ ॥ ೧೦

ಕಾಚಿತ್ ರಾಸಪರಿಶ್ರಾಂತಾ ಪಾರ್ಶ್ವಸ್ಥಸ್ಯ ಗದಾಭೃತಃ ।
ಜಗ್ರಾಹ ಬಾಹುನಾ ಸ್ಕಂಧಂ ಶ್ಲಥದ್ವಲಯಮಲ್ಲಿಕಾ ॥ ೧೧

ತತ್ರೈಕಾಂಸಗತಂ ಬಾಹುಂ ಕೃಷ್ಣಸ್ಯೋತ್ಪಲಸೌರಭಮ್ ।
ಚಂದನಾಲಿಪ್ತಮಾಘ್ರಾಯ ಹೃಷ್ಟರೋಮಾ ಚುಚುಂಬ ಹ ॥ ೧೨

ಕಸ್ಯಾಶ್ಚಿನ್ನಾಟ್ಯವಿಕ್ಷಿಪ್ತಕುಂಡಲತ್ವಿಷಮಂಡಿತಮ್ ।
ಗಂಡಂ ಗಂಡೇ ಸಂದಧತ್ಯಾ ಅದಾತ್ತಾಂಬೂಲಚರ್ವಿತಮ್ ॥ ೧೩

---

ನಿರುವ ಮಿಂಚುಗಳಂತೆ ಮಿಂಚುತ್ತಿದ್ದರು (೮). ರತಿಪ್ರಿಯರೂ ಕೃಷ್ಣಸಂಸ್ಪರ್ಶ ಸುಖಿತರೂ ಆದ ಗೋಪಿಕೆಯರು ನರ್ತಿಸುತ್ತ ನಾನಾರಾಗಾನುರಂಜಿತಕಂಠಿಯ ರಾಗಿ ಉಚ್ಚಕಂಠದಿಂದ ಹಾಡಿದರು. ಯಾವಾತನ ಹಾಡು ಈ ವಿಶ್ವವನ್ನು ವ್ಯಾಪಿಸಿದೆಯೋ ಅವನನ್ನು ಕುರಿತು ಹಾಡಿದರು (೯). ಒಬ್ಬಳು ಮುಕುಂದ ನೊಡನೆ ಹಾಡುತ್ತ ಅಸಂಕೀರ್ಣವಾದ ಷಡ್ಜಾದಿಸ್ವರಾಲಾಪಗಳನ್ನೆತ್ತಲು, ಮೆಚ್ಚಿದ ಮುಕುಂದನು 'ಭಲೆ ಭಲೆ' ಎನ್ನುತ್ತ ಅವಳಿಗನುಗುಣವಾಗಿ ಧ್ರುವ ವೆಂಬ ತಾಳವನ್ನು ಹಾಕುತ್ತ ಸ್ವರಾಲಾಪವನ್ನೇರಿಸಿದನು (೧೦). ಒಬ್ಬಳು ರಾಸನೃತ್ಯದಿಂದ ಬಳಲಿ ಜಾರುವ ಬಳೆ ಮತ್ತು ಉದಿರುವ ಮಲ್ಲಿಗೆಹೂಗಳಿರುವ ತನ್ನ ತೋಳನ್ನು ಬಳಿಯಲ್ಲಿದ್ದ ಮುಕುಂದನ ಹೆಗಲಮೇಲಿರಿಸಿದಳು (೧೧). ಇನ್ನೊಬ್ಬಳು, ತನ್ನ ಹೆಗಲಮೇಲಿದ್ದ ಚಂದನಲಿಪ್ತವಾದ ಶ್ರೀಕೃಷ್ಣನ ಭುಜವು ನೈದಿಲೆಯ ಸುಗಂಧವನ್ನು ಸೂಸುತ್ತಿರಲು, ಅದನ್ನು ಮೂಸಿ ಮುತ್ತುಕೊಟ್ಟಳು (೧೨). ಶ್ರೀಕೃಷ್ಣನು ನಾಟ್ಯವಾಡುವಾಗ ಚಲಿಸಿದ ಕುಂಡಲಗಳ ಕಾಂತಿಯಿಂದ ಮಂಡಿತವಾದ ಅವನ ಕೆನ್ನೆಯನ್ನು ತನ್ನ ಕೆನ್ನೆಗೆ ಒತ್ತಿಕೊಂಡ ಒಬ್ಬ ಗೋಪಿಗೆ

ನೃತ್ಯಂತೀ ಗಾಯತೀ ಕಾಚಿತ್ ಕೂಜನ್ನೂಪುರಮೇಖಲಾ ।
ಪಾರ್ಶ್ವಸ್ಥಾಚ್ಯುತಹಸ್ತಾಬ್ಜಂ ಶ್ರಾಂತಾಧಾತ್ ಸ್ತನಯೋಃ ಶಿವಮ್ ॥

ಗೋಪ್ಯೋ ಲಬ್ಧ್ವಾಚ್ಯುತಂ ಕಾಂತಂ ಶ್ರಿಯ ಏಕಾಂತವಲ್ಲಭಮ್ ।
ಗೃಹೀತಕಂಠ್ಯಸ್ತದ್ದೋರ್ಭ್ಯಾಂ ಗಾಯಂತ್ಯಸ್ತಂ ವಿಜಹ್ರಿರೇ ॥ ೧೫

ಕರ್ಣೋತ್ಪಲಾಲಕವಿಟಂಕಕಪೋಲಘರ್ಮ-
ವಕ್ತ್ರಶ್ರಿಯೋ ವಲಯನೂಪುರಘೋಷವಾದ್ಯೈಃ ।
ಗೋಪ್ಯಃ ಸಮಂ ಭಗವತಾ ನನೃತುಃ ಸ್ವಕೇಶ-
ಸ್ರಸ್ತಸ್ರಜೋ ಭ್ರಮರಗಾಯಕರಾಸಗೋಷ್ಠ್ಯಾಮ್ ॥

ಏವಂ ಪರಿಷ್ವಂಗಕರಾಭಿಮರ್ಶ-
ಸ್ನಿಗ್ಧೇಕ್ಷಣೋದ್ದಾಮವಿಲಾಸಹಾಸೈಃ ।
ರೇಮೇ ರಮೇಶೋ ವ್ರಜಸುಂದರೀಭಿ-
ರ್ಯಥಾರ್ಭಕಃ ಸ್ವಪ್ರತಿಬಿಂಬವಿಭ್ರಮಃ ॥ ೧೭

---

ಅವನು ತಾಂಬೂಲಚರ್ವಿತವನ್ನಿತ್ತನು (೧೩). ಕಾಲಂದುಗೆ ಡಾಬುಗಳು ಧ್ವನಿಗೈಯುತ್ತಿರಲು ಕುಣಿಯುತ್ತ ಹಾಡುತ್ತ ಬಳಿಯಲ್ಲಿದ್ದವಳೊಬ್ಬಳು ಬಳಲಿ, ಸುಖಕರವಾದ ಅಚ್ಯುತನ ಕರಕಮಲವನ್ನು ತನ್ನ ಸ್ತನಗಳ ಮೇಲೆ ಇಟ್ಟುಕೊಂಡಳು (೧೪). ಲಕ್ಷ್ಮೀದೇವಿಗೆ ಮಾತ್ರ ವಲ್ಲಭನಾದ ಅಚ್ಯುತನನ್ನು ಗೋಪಿಯರು ಕಾಂತನನ್ನಾಗಿ ಪಡೆದಿದ್ದರು. ಆತನು ಕೈಗಳಿಂದ ಕಂಠವನ್ನಾಲಂಗಿಸಿಕೊಂಡಿರಲಾಗಿ ಅವರು ಹಾಡುತ್ತ (ಯಥೇಷ್ಟವಾಗಿ) ವಿಹರಿಸಿದರು (೧೫). (ಗಂಧರ್ವಕಿಂನರಾದಿಗಳು ದಿಗ್ಭ್ರಾಂತರಾಗಲು) ರಾಸಗೋಷ್ಠಿಯಲ್ಲಿ ದುಂಬಿಗಳೇ ಹಾಡುಗಾರರಾದರು! ಕೈಬಳೆ, ಕಾಲ್ಬಳೆ, ಕಿರುಗೆಜ್ಜೆಗಳೇ ವಾದ್ಯಗಳಾದವು! ಕಿವಿಯಲ್ಲಿ ಮುಡಿದ ನೈದಿಲೆ, ಮುಂಗುರುಳಿಂದ ಭೂಷಿತವಾದ ಕಪೋಲ ಮತ್ತು ಬೆವರುಹನಿಗಳಿಂದ ಗೋಪಿಯರ ಮುಖಗಳು ಅಪೂರ್ವ ಕಾಂತಿಯನ್ನು ಪಡೆದಿರಲು, ಮುಡಿದ ಮಾಲೆ ತಲೆಗೂದಲಿಂದ ಜಾರಿಬೀಳುತ್ತಿರಲು, ಅವರು ಶ್ರೀಕೃಷ್ಣನೊಡನೆ ನರ್ತಿಸಿದರು (೧೬). ಹೀಗೆಯೇ ರಮಾಪತಿಯಾದ ಭಗವಂತನೂ ಸಹ ಆಲಿಂಗನ, ಕರಸ್ಪರ್ಶ, ಸ್ನೇಹ ತುಂಬಿದ ನೋಟ, ಉದ್ದಾಮವಿಲಾಸ, ಹಾಸಗಳನ್ನೆಸಗುತ್ತ, ಬಾಲಕನು ತನ್ನ ಪ್ರತಿಬಿಂಬ

ತದಂಗಸಂಗಪ್ರಮುದಾಕುಲೇಂದ್ರಿಯಾಃ
ಕೇಶಾನ್ ದುಕೂಲಂ ಕುಚಪಟ್ಟಿಕಾಂ ವಾ ।
ನಾಂಜಃ ಪ್ರತಿವ್ಯೋಢುಮಲಂ ವ್ರಜಸ್ತ್ರಿಯೋ
ವಿಸ್ರಸ್ತಮಾಲಾಭರಣಾಃ ಕುರೂದ್ವಹ ॥ ೧೮

ಕೃಷ್ಣವಿಕ್ರೀಡಿತಂ ವೀಕ್ಷ್ಯ ಮುಮುಹುಃ ಖೇಚರಸ್ತ್ರಿಯಃ ।
ಕಾಮಾರ್ದಿತಾಃ ಶಶಾಂಕಶ್ಚ ಸಗಣೋ ವಿಸ್ಮಿತೋಽಭವತ್ ॥ ೧೯

ಕೃತ್ವಾ ತಾವಂತಮಾತ್ಮಾನಂ ಯಾವತೀರ್ಗೋಪಯೋಷಿತಃ ।
ರೇಮೇ ಸ ಭಗವಾಂಸ್ತಾಭಿರಾತ್ಮಾರಾಮೋಽಪಿ ಲೀಲಯಾ ॥ ೨೦

ತಾಸಾಮತಿವಿಹಾರೇಣ ಶ್ರಾಂತಾನಾಂ ವದನಾನಿ ಸಃ ।
ಪ್ರಾಮೃಜತ್ ಕರುಣಃ ಪ್ರೇಮ್ಣಾ ಶಂತಮೇನಾಂಗ ಪಾಣಿನಾ ॥ ೨೧

---

ಗಳೊಡನೆ* ಕ್ರೀಡಿಸುವಂತೆ, ವ್ರಜಸುಂದರಿಯರೊಡನೆ ನರ್ತಿಸುತ್ತ ಕ್ರೀಡಿಸಿದನು (೧೭). ಅವನ ಅಂಗಸಂಗದಿಂದ ಆನಂದತುಂದಿಲರಾದ ವ್ರಜಸುಂದರಿಯರು ವಿವಶೇಂದ್ರಿಯರಾಗಿ ತಮ್ಮ ತಲೆಗೂದಲನ್ನಾಗಲಿ, ದುಕೂಲವನ್ನಾಗಲಿ, ಸ್ತನಪಟ್ಟಿಕೆಯನ್ನಾಗಲಿ ಸರಿಪಡಿಸಿಕೊಳ್ಳಲು ಸಮರ್ಥರಾಗಲಿಲ್ಲ. ಪರೀಕ್ಷಿತ ರಾಜ, ಅವರ ಮಾಲೆಗಳೂ ಒಡವೆಗಳೂ ಜಾರಿ ಅಸ್ತವ್ಯಸ್ತವಾದವು (೧೮). ಶ್ರೀಕೃಷ್ಣನ ಲೀಲಾವಿನೋದವನ್ನು ನೋಡಿ ಅಪ್ಸರೆಯರು ಕಾಮಾರ್ತರಾಗಿ ವಿವಶರಾದರು. ಚಂದ್ರನು ತಾರಾಗಣಸಮೇತನಾಗಿ ಅಚ್ಚರಿಗೊಂಡನು (೧೯). ಎಷ್ಟು ಮಂದಿ ಗೋಪಿಯರಿದ್ದರೋ ಅಷ್ಟು ಸಂಖ್ಯೆಯಲ್ಲಿ ತನ್ನನ್ನು ನಿರ್ಮಿಸಿಕೊಂಡು ಭಗವಂತನು ಸ್ವಯಂ ಆತ್ಮಾರಾಮನಾಗಿದ್ದರೂ ಲೀಲೆಗಾಗಿ ಕ್ರೀಡಿಸಿದನು (೨೦). ಅತಿಯಾಗಿ ನರ್ತಿಸಿದ್ದರಿಂದ ಬಳಲಿಹೋದ ವ್ರಜಸ್ತ್ರೀಯರ ಮುಖಗಳನ್ನು ಕರುಣಾಮಯನಾದ ಗೋವಿಂದನು ಸುಖತಮವಾದ ತನ್ನ

---

* ಬಾಲಕನ ರೂಪವೇ ಪ್ರತಿಬಿಂಬದಲ್ಲಿ ಕಾಣುವಂತೆ ಭಗವಂತನ ಒಂದಂಶವಾದ ಸೌಂದರ್ಯಲಾವಣ್ಯಕಲಾಕೌಶಲಗಳು ಗೋಪಿಯರಲ್ಲಿ ಕಾಣಿಸಿದವು—ಎಂದು ಅಭಿಪ್ರಾಯ.

ಗೋಪ್ಯಃ ಸ್ಫುರತ್ಪುರಟಕುಂಡಲಕುಂತಲತ್ವಿಡ್-
ಗಂಡಶ್ರಿಯಾ ಸುಧಿತಹಾಸನಿರೀಕ್ಷಣೇನ ।
ಮಾನಂ ದಧತ್ಯ ಋಷಭಸ್ಯ ಜಗುಃ ಕೃತಾನಿ
ಪುಣ್ಯಾನಿ ತತ್ಕರರುಹಸ್ಪರ್ಶಪ್ರಮೋದಾಃ ॥ ೨೨

ತಾಭಿರ್ಯುತಃ ಶ್ರಮಮಪೋಹಿತುಮಂಗಸಂಗ-
ಘೃಷ್ಟಸ್ರಜಃ ಸ ಕುಚಕುಂಕುಮರಂಜಿತಾಯಾಃ ।
ಗಂಧರ್ವಪಾಲಿಭಿರನುದ್ರುತ ಆವಿಶದ್ ವಾಃ
ಶ್ರಾಂತೋ ಗಜೀಭಿರಿಭರಾಡಿವ ಭಿನ್ನಸೇತುಃ ॥ ೨೩

ಸೋಽಂಭಸ್ಯಲಂ ಯುವತಿಭಿಃ ಪರಿಷಿಚ್ಯಮಾನಃ
ಪ್ರೇಮ್ಣೇಕ್ಷಿತಃ ಪ್ರಹಸತೀಭಿರಿತಸ್ತತೋಽಂಗ ।
ವೈಮಾನಿಕೈಃ ಕುಸುಮವರ್ಷಿಭಿರೀಡ್ಯಮಾನೋ
ರೇಮೇ ಸ್ವಯಂ ಸ್ವರತಿರತ್ರ ಗಜೇಂದ್ರಲೀಲಃ ॥ ೨೪

---

ಕೈಯಿಂದಲೇ, ಆಹಾ! ಪ್ರೇಮದಿಂದ ಒರಸಿದನು (೨೧). ಆತನ ಉಗುರಿನ ಸ್ಪರ್ಶದಿಂದ ಪ್ರಮೋದಗೊಂಡ ಗೋಪಿಕೆಯರು ಬಂಗಾರದ ಕಿವಿಯೋಲೆ ಮುಂಗುರುಳುಗಳ ಕಾಂತಿಯಿಂದ ಶೋಭಿಸುವ ಕಪೋಲಸ್ಥಲಗಳಿಂದೊಪ್ಪುತ್ತ, ಅಮೃತದಂತಿರುವ ಮುಗುಳ್ನಗೆಯ ನೋಟದಿಂದ ಆ ಪುರುಷೋತ್ತಮನನ್ನು ಆದರಿಸುತ್ತ, ಅವನ ಪುಣ್ಯಚರಿತೆಗಳನ್ನು ಹಾಡಿದರು (೨೨). ಅನಂತರ ಪರಿಶ್ರಾಂತನಾದ ಗೋವಿಂದನು ಆಯಾಸವನ್ನು ಪರಿಹರಿಸಿಕೊಳ್ಳುವುದ ಕ್ಕೋಸ್ಕರ ಗೋಪಿಯರೊಡಗೂಡಿ, ಹೆಣ್ಣಾನೆಗಳಿಂದ ಸಮೇತನಾದ ಗಜೇಂದ್ರ ನಂತೆ, (ಯಮುನಾ ನದಿಯ) ನೀರಿಗೆ ಇಳಿದನು. ಗೋಪಿಯರ ಕುಚಕುಂಕುಮ ದಿಂದ ರಂಜಿತವೂ ಅಂಗಸಂಗದಿಂದ ಸಂಮರ್ದಿತವೂ ಆದ ಹೂಮಾಲೆಗೆ ಮುಸುಕುವ, ಗಂಧರ್ವರಂತೆ ಹಾಡುವ, ದುಂಬಿಗಳು ಅವನನ್ನು ಹಿಂಬಾಲಿಸಿ ದವು. ದಡವನ್ನೊಡೆದ ಗಜೇಂದ್ರನಂತೆ ಗೋವಿಂದನು ಲೋಕವೇದ ಮರ್ಯಾದೆಯನ್ನು ಭೇದಿಸಿದ್ದನು! (೨೩). ನದಿಯ ನೀರಲ್ಲಿ ನೀರೆಯರು ನೇಹದಿಂದ ನಗುತ್ತ ನೀರನ್ನು ಅವನಮೇಲೆ ಸುತ್ತಲೂ ಎರಚತೊಡಗಿದರು. ವಿಮಾನದಲ್ಲಿದ್ದ ದೇವತೆಗಳು ಹೂಮಳೆಗರೆಯುತ್ತ ಹೊಗಳುತ್ತಿದ್ದರು. ಅಬ್ಬ!

ತತಶ್ಚ ಕೃಷ್ಣೋಪವನೇ ಜಲಸ್ಥಲ-
ಪ್ರಸೂನಗಂಧಾನಿಲಜುಷ್ಟದಿಕ್ತಟೇ ।
ಚಚಾರ ಭೃಂಗಪ್ರಮದಾಗಣಾವೃತೋ
ಯಥಾ ಮದಚ್ಯುದ್ ದ್ವಿರದಃ ಕರೇಣುಭಿಃ ॥ ೨೪

ಏವಂ ಶಶಾಂಕಾಂಶುವಿರಾಜಿತಾ ನಿಶಾಃ
ಸ ಸತ್ಯಕಾಮೋಽನುರತಾಬಲಾಗಣಃ ।
ಸಿಷೇವ ಆತ್ಮನ್ಯವರುದ್ಧಸೌರತಃ
ಸರ್ವಾಃ ಶರತ್ಕಾವ್ಯಕಥಾರಸಾಶ್ರಯಾಃ ॥ ೨೬

ರಾಜೋವಾಚ—

ಸಂಸ್ಥಾಪನಾಯ ಧರ್ಮಸ್ಯ ಪ್ರಶಮಾಯೇತರಸ್ಯ ಚ ।
ಅವತೀರ್ಣೋ ಹಿ ಭಗವಾನಂಶೇನ ಜಗದೀಶ್ವರಃ ॥ ೨೭

ಸ ಕಥಂ ಧರ್ಮಸೇತೂನಾಂ ವಕ್ತಾ ಕರ್ತಾಭಿರಕ್ಷಿತಾ ।
ಪ್ರತೀಪಮಾಚರದ್ ಬ್ರಹ್ಮನ್ ಪರದಾರಾಭಿಮರ್ಶನಮ್ ॥ ೨೮

---

ಸ್ವಯಂ ಆತ್ಮಾರಾಮನಾಗಿದ್ದರೂ ಭಗವಂತನು ಗಜೇಂದ್ರಲೀಲೆಯನ್ನನುಕರಿಸಿ ಜಲಕೇಳಿಯನ್ನಾಡಿದನು (೨೪). ಆಮೇಲೆ ಜಲನೆಲದ ಹೂಗಳ ಪರಿಮಳವನ್ನು ಹೊತ್ತ ಗಾಳಿ ಬೀಸುವ ದಿಕ್ತಟವುಳ್ಳ ಯಮುನೋಪವನದಲ್ಲಿ ದುಂಬಿಗಳ ಮತ್ತು ಹೆಣ್ಣುಗಳ ಗುಂಪಿನೊಡನೆ, ಹೆಣ್ಣಾನೆಗಳೊಡನಿರುವ ಮದವಿಳಿದ ಗಜರಾಜನಂತೆ ಸುತ್ತಾಡಿದನು (೨೫). ಈ ಪ್ರಕಾರದಲ್ಲಿ ಸತ್ಯಕಾಮನಾದ ಮುಕುಂದನು ಅನುರಕ್ತರಾದ ಅಬಲೆಯರೊಡನೆ ಶರತ್ಸಮಯದಲ್ಲಿಯೂ ಕಾವ್ಯಕಥೆಯಲ್ಲಿಯೂ ಪ್ರಸಿದ್ಧವಿರುವ ಶೃಂಗಾರರಸಮಯವಾದ ಬೆಳ್ದಿಂಗಳಿನ ರಾತ್ರಿಗಳೆಲ್ಲವನ್ನೂ ಸೇವಿಸಿದನು. ಆದರೂ ತನ್ನಲ್ಲಿ ಅಸ್ಖಲಿತವೀರ್ಯನಾಗಿಯೇ ಇದ್ದನು (೨೬). ಆಗ ಪರೀಕ್ಷಿತರಾಜನು ಶುಕಮುನಿಗಳನ್ನು ಕೇಳಿದನು : " ಮುನಿಗಳೆ, ಜಗದೀಶ್ವರನಾದ ಭಗವಂತನು ಧರ್ಮಸಂಸ್ಥಾಪನೆಗಾಗಿಯೂ ಅಧರ್ಮವಿನಾಶಕ್ಕಾಗಿಯೂ ಒಂದಂಶದಿಂದ ಶ್ರೀಕೃಷ್ಣನಾಗಿ ಅವತರಿಸಿದ ನಲ್ಲವೆ ? (೨೭). ಧರ್ಮಸೇತುಗಳ ಉಪದೇಶಕನೂ ಕರ್ತನೂ ರಕ್ಷಕನೂ ಆದ ಆತನೇ, ಋಷಿಗಳೆ, ಪರಸ್ತ್ರೀಸಂಗವೆಂಬ ಈ ಪಾಪಕೃತ್ಯವನ್ನು ಹೇಗೆ ಆಚರಿಸಿ

**ಆಪ್ತಕಾಮೋ ಯದುಪತಿಃ ಕೃತವಾನ್ ವೈ ಜುಗುಪ್ಸಿತಮ್ ।**
**ಕಿಮಭಿಪ್ರಾಯ ಏತಂ ನಃ ಸಂಶಯಂ ಛಿಂಧಿ ಸುವ್ರತ ॥ ೨೯**

**ಶ್ರೀಶುಕ ಉವಾಚ—**
**ಧರ್ಮವ್ಯತಿಕ್ರಮೋ ದೃಷ್ಟ ಈಶ್ವರಾಣಾಂ ಚ ಸಾಹಸಮ್ ।**
**ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ॥**

**ನೈತತ್ ಸಮಾಚರೇಜ್ಜಾತು ಮನಸಾಪಿ ಹ್ಯನೀಶ್ವರಃ ।**
**ವಿನಶ್ಯತ್ಯಾಚರನ್ ಮೌಢ್ಯಾದ್ಯಥಾ ರುದ್ರೋಽಬ್ಧಿಜಂ ವಿಷಮ್ ॥ ೩೧**

**ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಂ ಕ್ವಚಿತ್ ।**
**ತೇಷಾಂ ಯತ್ ಸ್ವವಚೋಯುಕ್ತಂ ಬುದ್ಧಿಮಾಂಸ್ತತ್**
**ಸಮಾಚರೇತ್ ॥ ೩೨**

**ಕುಶಲಾಚರಿತೇನೈಷಾಮಿಹ ಸ್ವಾರ್ಥೋ ನ ವಿದ್ಯತೇ ।**
**ವಿಪರ್ಯಯೇಣ ವಾನರ್ಥೋ ನಿರಹಂಕಾರಿಣಾಂ ಪ್ರಭೋ ॥ ೩೩**

---

ದನು? ಯದುಪತಿಯಾದ ಶ್ರೀಕೃಷ್ಣನು ಆಪ್ತಕಾಮ–ಯಾವ ಕಾಮನೆಯೂ ಇಲ್ಲದವನು. ಅಂಥವನು ಜುಗುಪ್ಸಿತವಾದ ಈ ಹೇಯಕೃತ್ಯವನ್ನು ಮಾಡಿದನಲ್ಲ, ಇದರ ಅಭಿಪ್ರಾಯವಾದರೂ ಏನು? ನಮಗೆ ಬಂದಿರುವ ಈ ಸಂಶಯವನ್ನು ಪರಿಹರಿಸಿರಿ" ಎಂದನು (೨೮–೨೯). ಶುಕಮುನಿಗಳು ಹೇಳಿದರು: ಪರೀಕ್ಷಿತ, ಈಶ್ವರರಾದವರು ಧರ್ಮಮಾರ್ಗವನ್ನು ಉಲ್ಲಂಘಿಸಿರುವುದೂ ಸಾಹಸಕೃತ್ಯವನ್ನಾಚರಿಸಿರುವುದೂ ಕಂಡುಬಂದಿದೆ. ಅತ್ಯಂತ ತೇಜಸ್ವಿಗಳಿಗೆ ಅದು ದೋಷಾವಹವಲ್ಲ. ಸರ್ವವನ್ನೂ ನುಂಗಿ ನೊಣೆಯಬಲ್ಲ ಬೆಂಕಿಯಿದ್ದಂತೆ ಅವರು (೩೦). ಆದರೆ ಈಶ್ವರನಲ್ಲದವನು ಅದನ್ನು ಎಂದಿಗೂ ಮನಸ್ಸಿನಲ್ಲಿಯೂ ಸಹ ಆಚರಿಸಬಾರದು. ಮೌಢ್ಯದಿಂದ ಆಚರಿಸಿದರೆ ಅವನ ಸರ್ವನಾಶವಾಗುವುದು. ರುದ್ರನಲ್ಲದವನು ಸಮುದ್ರದಲ್ಲಿ ಹುಟ್ಟಿದ ಹಾಲಾಹಲವನ್ನು ಕುಡಿದಂತಾದೀತು (೩೧). ಈಶ್ವರರಾದವರ ಉಪದೇಶವಚನವು ಸತ್ಯ (ಅದರಂತೆ ನಡೆಯಬೇಕು). ಆದರೆ ಅವರ ಆಚರಣೆ ಕೆಲವುವೇಳೆ ಮಾತ್ರ ಯುಕ್ತವಾದುದು. ಉಪದೇಶಕ್ಕೆ ಅನುಗುಣವಾದ ಅವರ ಯಾವ ಆಚರಣೆಯುಂಟೋ ಅದರಂತೆ ಬುದ್ಧಿವಂತನು ನಡೆದುಕೊಳ್ಳಬೇಕು (೩೨). ಮಹಾರಾಜ, ಅಹಂಕಾರವನ್ನು ಗೆದ್ದಿರುವ ಈಶ್ವರರಿಗೆ ಧರ್ಮಾಚರಣೆಯಿಂದ ಆಗಬೇಕಾದ ಸ್ವಾರ್ಥವೂ ಇಲ್ಲ.

ಕಿಮುತಾಖಿಲಸತ್ತ್ವಾನಾಂ ತಿರ್ಯಙ್ಮರ್ತ್ಯದಿವೌಕಸಾಮ್ ।
ಈಶಿತುಶ್ಚೇಶಿತವ್ಯಾನಾಂ ಕುಶಲಾಕುಶಲಾನ್ವಯಃ ॥ ೩೪

ಯತ್ಪಾದಪಂಕಜಪರಾಗನಿಷೇವತೃಪ್ತಾ
ಯೋಗಪ್ರಭಾವವಿಧುತಾಖಿಲಕರ್ಮಬಂಧಾಃ ।
ಸ್ವೈರಂ ಚರಂತಿ ಮುನಯೋಽಪಿ ನ ನಹ್ಯಮಾನಾ-
ಸ್ತಸ್ಯೇಚ್ಛಯಾಽಽತ್ತವಪುಷಃ ಕುತ ಏವ ಬಂಧಃ ॥ ೩೫

ಗೋಪೀನಾಂ ತತ್ಪತೀನಾಂ ಚ ಸರ್ವೇಷಾಮೇವ ದೇಹಿನಾಮ್ ।
ಯೋಽಂತಶ್ಚರತಿ ಸೋಽಧ್ಯಕ್ಷಃ ಕ್ರೀಡನೇನೇಹ ದೇಹಭಾಕ್ ॥ ೩೬

ಅನುಗ್ರಹಾಯ ಭೂತಾನಾಂ ಮಾನುಷಂ ದೇಹಮಾಸ್ಥಿತಃ ।
ಭಜತೇ ತಾದೃಶೀಃ ಕ್ರೀಡಾ ಯಾಃ ಶ್ರುತ್ವಾ ತತ್ಪರೋ ಭವೇತ್ ॥ ೩೭

---

ವಿರುದ್ಧವಾಗಿ ಅಧರ್ಮವನ್ನಾಚರಿಸಿದರೆ ಅನರ್ಥವೂ ಇಲ್ಲ (೩೩). ಹೀಗಿರುವಾಗ ದೇವ ಮರ್ತ್ಯ ತಿರ್ಯಗ್‌ಜಾತಿಗಳ ಸಕಲ ಜೀವಿಗಳೂ ಯಾವನ ಆಜ್ಞೆಗೆ ಒಳಪಟ್ಟಿವೆಯೋ ಅಂಥ ಪರಮೇಶ್ವರನಿಗೆ ಪಾಪಪುಣ್ಯಗಳ ಸಂಬಂಧ ಎಲ್ಲಿಂದ ಬಂದೀತು? (೩೪). ಯಾರ ಪಾದಪದ್ಮದ ಪರಾಗವನ್ನು ಸೇವಿಸಿ ಸಂತೃಪ್ತರಾದ ಭಕ್ತರಿದ್ದಾರೋ, ಯೋಗಮಹಿಮೆಯಿಂದ ನಿಖಿಲಕರ್ಮಬಂಧವನ್ನೂ ನೀಗಿಕೊಂಡ ಜ್ಞಾನಿಗಳಾದ ಮುನಿಗಳಿದ್ದಾರೋ ಅವರೂ ಸಹ ಸ್ವೈರವಾಗಿ ನಡೆದುಕೊಂಡರೂ ಕರ್ಮಬಂಧನಕ್ಕೆ ಸಿಲುಕದಿರುವಾಗ, ಸ್ವೇಚ್ಛೆಯಿಂದ ಶರೀರಧಾರಣ ಮಾಡಿದ ಆ ಪರಮಾತ್ಮನಿಗೆ ಬಂಧವೆಲ್ಲಿಯದು? (೩೫). ಗೋಪಿಯರ, ಗೋಪಿಯರ ಗಂಡಂದಿರ, ಸಕಲದೇಹಿಗಳ ದೇಹದಲ್ಲಿ ಅಂತರ್ಯಾಮಿಯಾಗಿದ್ದು ಬುದ್ಧಿಸಾಕ್ಷಿಯಾದವನು ಲೀಲೆಗಾಗಿ ದೇಹವನ್ನು ಧರಿಸಿದ್ದನು* (೩೬). ಜನರು ತನ್ನ ಲೀಲೆಗಳನ್ನು ಕೇಳಿ ತಲ್ಲೀನರಾಗಿ ಶ್ರೇಯಸ್ಸನ್ನು ಪಡೆಯಲೆಂದು ಜೀವಿಗಳ ಅನುಗ್ರಹಕ್ಕಾಗಿಯೇ ಆತನು ಮಾನುಷದೇಹವನ್ನು

---

* ಗೋಪಿಯರ ದೇಹದಲ್ಲಿಯೂ ಸದಾ ಅಂತರ್ಯಾಮಿಯಾದವನಿಗೆ ಗೋಪಿಯರು ಪರಸ್ತ್ರೀಯರೆಂಬುದೇ ಸರಿಯಲ್ಲ—ಎಂದು ಅಭಿಪ್ರಾಯ.

ನಾಸೂಯನ್ ಖಲು ಕೃಷ್ಣಾಯ ಮೋಹಿತಾಸ್ತಸ್ಯ ಮಾಯಯಾ ।
ಮನ್ಯಮಾನಾಃ ಸ್ವಪಾರ್ಶ್ವಸ್ಥಾನ್ ಸ್ವಾನ್ ಸ್ವಾನ್ ದಾರಾನ್
ವ್ರಜೌಕಸಃ ॥ ೩೮

ಬ್ರಹ್ಮರಾತ್ರ ಉಪಾವೃತ್ತೇ ವಾಸುದೇವಾನುಮೋದಿತಾಃ ।
ಅನಿಚ್ಛಂತ್ಯೋ ಯಯುರ್ಗೋಪ್ಯಃ ಸ್ವಗೃಹಾನ್ ಭಗವತ್ಪ್ರಿಯಾಃ ॥

ವಿಕ್ರೀಡಿತಂ ವ್ರಜವಧೂಭಿರಿದಂ ಚ ವಿಷ್ಣೋಃ
ಶ್ರದ್ಧಾನ್ವಿತೋಽನುಶೃಣುಯಾದಥ ವರ್ಣಯೇದ್ ಯಃ ।
ಭಕ್ತಿಂ ಪರಾಂ ಭಗವತಿ ಪ್ರತಿಲಭ್ಯ ಕಾಮಂ
ಹೃದ್ರೋಗಮಾಶ್ವಪಹಿನೋತ್ಯಚಿರೇಣ ಧೀರಃ ॥ ೪೦

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಯಸ್ತ್ರಿಂಶಾಧ್ಯಾಯಃ

---

ಧರಿಸಿ ಅಂಥ ಲೀಲೆಗಳನ್ನು ನಡೆಸುತ್ತಾನೆ* (೩೭). ಅಲ್ಲದೆ ಶ್ರೀಕೃಷ್ಣನ ಮಾಯೆಯಿಂದ ಮೋಹಿತರಾದ ವ್ರಜವಾಸಿಗಳು ತಮ್ಮ ಬಳಿಯಲ್ಲಿ ತಮ್ಮ ತಮ್ಮ ಮಡದಿಯರು ಇದ್ದಾರೆಂದೇ ತಿಳಿದು ಕೃಷ್ಣನಲ್ಲಿ ದೋಷವನ್ನೆಣಿಸಲಿಲ್ಲ† (೩೮). (ರಾತ್ರಿ ಕಳೆದು) ಬ್ರಾಹ್ಮಮುಹೂರ್ತವು ಬರಲಾಗಿ ವಾಸುದೇವನು ಗೋಪಿಯರನ್ನು ಬೀಳ್ಕೊಂಡನು. ಭಗವತ್ಪ್ರಿಯರಾದ ಗೋಪಿಯರು ಇಚ್ಛೆ ಇಲ್ಲದಿದ್ದರೂ ತಮ್ಮ ಮನೆಗಳಿಗೆ ತೆರಳಿದರು (೩೯). ವ್ರಜಾಂಗನೆಯರೊಡನೆ ನಡೆಸಿದ ವಿಷ್ಣುವಿನ ಈ ಲೀಲೆಯನ್ನು ಯಾವನು ಶ್ರದ್ಧೆಯಿಂದ ಆಲಿಸುವನೋ, ಯಾವನು ವರ್ಣಿಸಿ ಹೇಳುವನೋ ಆ ಪ್ರಾಜ್ಞನು ಭಗವಂತನಲ್ಲಿ ದೃಢವಾದ ಭಕ್ತಿಯನ್ನು ಪಡೆದು ಹೃದಯರೋಗವೆನಿಸಿದ ಕಾಮವನ್ನು ನೀಗುವನು (೪೦).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತುಮೂರನೆಯ ಅಧ್ಯಾಯ

---

* ಶೃಂಗಾರರಸದಿಂದ ಆಕೃಷ್ಟರೂ ಅತ್ಯಂತ ಬಾಹ್ಯದೃಷ್ಟಿಯುಳ್ಳವರೂ ಆದ ಗೋಪಿಯರು ತನ್ನ ಧ್ಯಾನದಲ್ಲಿ ಮುಳುಗಲೆಂಬುದು ಭಗವಂತನ ಆಶಯ.

† ಶ್ರೀಕೃಷ್ಣನು ಮಾಯಾಗೋಪಿಯರನ್ನು ನಿರ್ಮಿಸಿ ವ್ರಜವಾಸಿಗಳ ಬಳಿ ಇರಿಸಿದ್ದನು. ಇಂಥ ಶಕ್ತಿ ಇದ್ದವರು ಅಧರ್ಮವನ್ನಾಚರಿಸಲಿ!—ಎಂದು ಅಭಿಪ್ರಾಯ.

## ಚತುಸ್ತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಏಕದಾ ದೇವಯಾತ್ರಾಯಾಂ ಗೋಪಾಲಾ ಜಾತಕೌತುಕಾಃ ।
ಅನೋಭಿರನಡುದ್ಯುಕ್ತೈಃ ಪ್ರಯಯುಸ್ತೇಽಂಬಿಕಾವನಮ್ ॥ ೧

ತತ್ರ ಸ್ನಾತ್ವಾ ಸರಸ್ವತ್ಯಾಂ ದೇವಂ ಪಶುಪತಿಂ ವಿಭುಮ್ ।
ಆನರ್ಚುರರ್ಹಣೈರ್ಭಕ್ತ್ಯಾ ದೇವೀಂ ಚ ನೃಪತೇಽಂಬಿಕಾಮ್ ॥ ೨

ಗಾವೋ ಹಿರಣ್ಯಂ ವಾಸಾಂಸಿ ಮಧು ಮಧ್ವನ್ನಮಾದೃತಾಃ ।
ಬ್ರಾಹ್ಮಣೇಭ್ಯೋ ದದುಃ ಸರ್ವೇ ದೇವೋ ನಃ ಪ್ರೀಯತಾಮಿತಿ ॥ ೩

ಊಷುಃ ಸರಸ್ವತೀತೀರೇ ಜಲಂ ಪ್ರಾಶ್ಯ ಧೃತವ್ರತಾಃ ।
ರಜನೀಂ ತಾಂ ಮಹಾಭಾಗಾ ನಂದಸುನಂದಕಾದಯಃ ॥ ೪

## ಅಧ್ಯಾಯ ೩೪

ನಂದನನ್ನು ಹೆಬ್ಬಾವಿನಿಂದ ರಕ್ಷಿಸುವುದು. ಶಾಪವಿಮುಕ್ತನಾದ
ವಿದ್ಯಾಧರನಿಗೆ ಸ್ವರೂಪಪ್ರಾಪ್ತಿ. ಶಂಖಚೂಡನ ನಿಗ್ರಹ

ಶುಕಮಹರ್ಷಿಗಳು ಹೇಳಿದರು: ಒಮ್ಮೆ ದೇವರ ಜಾತ್ರೆಯೊಂದು ನಡೆಯಿತು. ಆದರಲ್ಲಿ ತವಕಗೊಂಡ ಗೋಪಾಲರು ಎತ್ತುಗಳನ್ನು ಹೂಡಿದ ಬಂಡಿಗಳಲ್ಲಿ ಕುಳಿತು ಅಂಬಿಕಾವನಕ್ಕೆ ಹೋದರು (೧). ರಾಜ, ಅವರು ಸರಸ್ವತೀ ನದಿಯಲ್ಲಿ ಸ್ನಾನಮಾಡಿ ವಿಭುವಾದ ಪಶುಪತಿ ದೇವನನ್ನೂ ಅಂಬಿಕಾದೇವಿಯನ್ನೂ ಪೂಜಾಸಾಮಗ್ರಿಗಳೊಡನೆ ಭಕ್ತಿಯಿಂದ ಅರ್ಚಿಸಿದರು (೨). ಆಮೇಲೆ ಎಲ್ಲರೂ ಗೋವು, ಸುವರ್ಣ, ವಸ್ತ್ರ, ಮಧುರವಾದ ಜೇನುಮಿಶ್ರಿತವಾದ ಅನ್ನ—ಇವುಗಳನ್ನು 'ಪರಮಾತ್ಮನು ಸಂಪ್ರೀತನಾಗಲಿ' ಎಂದು ಬ್ರಾಹ್ಮಣರಿಗೆ ದಾನಮಾಡಿದರು (೩). ನಂದ, ಸುನಂದಕನೇ ಮೊದಲಾದ ಮಹಾಭಾಗರಾದ ಗೋಪಾಲರು ವ್ರತನಿಷ್ಠೆಯಿಂದ ಜಲಪ್ರಾಶನ ಮಾಡಿ

ಕಶ್ಚಿನ್ಮಹಾನಹಿಸ್ತಸ್ಮಿನ್ ವಿಪಿನೇಽತಿಬುಭುಕ್ಷಿತಃ ।
ಯದೃಚ್ಛಯಾಽಽಗತೋ ನಂದಂ ಶಯಾನಮುರಗೋಽಗ್ರಸೀತ್ ॥ ೫

ಸ ಚುಕ್ರೋಶಾಹಿನಾ ಗ್ರಸ್ತಃ ಕೃಷ್ಣ ಕೃಷ್ಣ ಮಹಾನಯಮ್ ।
ಸರ್ಪೋ ಮಾಂ ಗ್ರಸತೇ ತಾತ ಪ್ರಪನ್ನಂ ಪರಿಮೋಚಯ ॥ ೬

ತಸ್ಯ ಚಾಕ್ರಂದಿತಂ ಶ್ರುತ್ವಾ ಗೋಪಾಲಾಃ ಸಹಸೋತ್ಥಿತಾಃ ।
ಗ್ರಸ್ತಂ ಚ ದೃಷ್ಟ್ವಾ ವಿಭ್ರಾಂತಾಃ ಸರ್ಪಂ ವಿವ್ಯಧುರುಲ್ಮುಕೈಃ ॥ ೭

ಅಲಾತೈರ್ದಹ್ಯಮಾನೋಽಪಿ ನಾಮುಂಚತ್ತಮುರಂಗಮಃ ।
ತಮಸ್ಪೃಶತ್ ಪದಾಭ್ಯೇತ್ಯ ಭಗವಾನ್ ಸಾತ್ವತಾಂ ಪತಿಃ ॥ ೮

ಸ ವೈ ಭಗವತಃ ಶ್ರೀಮತ್ಪಾದಸ್ಪರ್ಶಹತಾಶುಭಃ ।
ಭೇಜೇ ಸರ್ಪವಪುರ್ಹಿತ್ವಾ ರೂಪಂ ವಿದ್ಯಾಧರಾರ್ಚಿತಮ್ ॥ ೯

ತಮಪೃಚ್ಛದ್ಧೃಷೀಕೇಶಃ ಪ್ರಣತಂ ಸಮುಪಸ್ಥಿತಮ್ ।
ದೀಪ್ಯಮಾನೇನ ವಪುಷಾ ಪುರುಷಂ ಹೇಮಮಾಲಿನಮ್ ॥ ೧೦

---

ಆ ರಾತ್ರಿ ಸರಸ್ವತೀತೀರದಲ್ಲಿ ಬೀಡು ಬಿಟ್ಟರು (೪). ಆ ಕಾಡಿನಲ್ಲಿ ಬಹಳ ಹಸಿವಿನಿಂದ ಹಾತೊರೆಯುತ್ತಿದ್ದ ಒಂದು ದೊಡ್ಡ ಹಾವು ಅಲೆಯುತ್ತ ಬಂದು, ಮಲಗಿದ್ದ ನಂದನನ್ನು ನುಂಗತೊಡಗಿತು (೫). ಭುಜಗಗ್ರಸ್ತನಾದ ನಂದನು ಅರಚತೊಡಗಿದನು. "ಹಾ ಕೃಷ್ಣ, ಕೃಷ್ಣ, ಒಂದು ಮಹಾಸರ್ಪವು ನನ್ನನ್ನು ನುಂಗುತ್ತಿದೆ! ವತ್ಸ, ಶರಣಾಗಿದ್ದೇನೆ, ಬಿಡಿಸು!" ಎಂದು ಕೂಗಿಕೊಂಡನು (೬). ಅವನ ಅರಚಾಟವನ್ನು ಕೇಳಿ ಗೊಲ್ಲರು ದಡಾರನೆ ಎದ್ದು ಬಂದು, ಭುಜಗಗ್ರಸ್ತನಾದ ನಂದನನ್ನು ನೋಡಿ ದಿಗ್ಭ್ರಾಂತರಾದರು. ಕೊಳ್ಳಿಗಳಿಂದ ಹಾವನ್ನು ತಿವಿದರು (೭). ಬೆಂಕಿಕೊಳ್ಳಿಗಳಿಂದ ಸುಟ್ಟರೂ ಸಹ ಸರ್ಪವು ನಂದನನ್ನು ಬಿಡಲಿಲ್ಲ. ಅಷ್ಟರಲ್ಲಿ ಯದುಪತಿಯಾದ ಶ್ರೀಕೃಷ್ಣನು ಆಗಮಿಸಿ ಹಾವನ್ನು ಕಾಲಿಂದ ಒದ್ದನು. ಭಗವಂತನ ಶ್ರೀಪಾದದ ಸ್ಪರ್ಶವಾದೊಡನೆ ಹಾವಿನ ಪಾಪಕರ್ಮವು ನಶಿಸಿತು. ಅದು ಸರ್ಪದೇಹವನ್ನು ತ್ಯಜಿಸಿ ವಿದ್ಯಾಧರನ ರೂಪವನ್ನು ಧರಿಸಿತು! (೮–೯). ಹೇಮಮಾಲೆಯನ್ನು ಧರಿಸಿ ತೊಳತೊಳಗುವ ದಿವ್ಯಶರೀರಿಯಾದ ಆ ವಿದ್ಯಾಧರನು ಶ್ರೀಕೃಷ್ಣನಿಗೆ ನಮಸ್ಕರಿಸಿದನು. ಆಗ ಹೃಷೀಕೇಶನು ಅವನನ್ನು ಕುರಿತು "ಅಯ್ಯಾ, ನೀನು ಯಾರು? ದಿವ್ಯ

ಕೋ ಭವಾನ್ ಪರಯಾ ಲಕ್ಷ್ಮ್ಯಾ ರೋಚತೇಽದ್ಭುತದರ್ಶನಃ ।
ಕಥಂ ಜುಗುಪ್ಸಿತಾಮೇತಾಂ ಗತಿಂ ವಾ ಪ್ರಾಪಿತೋಽವಶಃ ॥ ೧೧

ಸರ್ಪ ಉವಾಚ—

ಅಹಂ ವಿದ್ಯಾಧರಃ ಕಶ್ಚಿತ್ ಸುದರ್ಶನ ಇತಿ ಶ್ರುತಃ ।
ಶ್ರಿಯಾ ಸ್ವರೂಪಸಂಪತ್ತ್ಯಾ ವಿಮಾನೇನಾಚರಂ ದಿಶಃ ॥ ೧೨

ಋಷೀನ್ ವಿರೂಪಾನಂಗಿರಸಃ ಪ್ರಾಹಸಂ ರೂಪದರ್ಪಿತಃ ।
ತೈರಿಮಾಂ ಪ್ರಾಪಿತೋ ಯೋನಿಂ ಪ್ರಲಬ್ಧೈಃ ಸ್ವೇನ ಪಾಪ್ಮನಾ ॥

ಶಾಪೋ ಮೇಽನುಗ್ರಹಾಯೈವ ಕೃತಸ್ತೈಃ ಕರುಣಾತ್ಮಭಿಃ ।
ಯದಹಂ ಲೋಕಗುರುಣಾ ಪದಾ ಸ್ಪೃಷ್ಟೋ ಹತಾಶುಭಃ ॥ ೧೪

ತಂ ತ್ವಾಹಂ ಭವಭೀತಾನಾಂ ಪ್ರಪನ್ನಾನಾಂ ಭಯಾಪಹಮ್ ।
ಆಪೃಚ್ಛೇ ಶಾಪನಿರ್ಮುಕ್ತಃ ಪಾದಸ್ಪರ್ಶಾದಮೀವಹನ್ ॥ ೧೫

ಪ್ರಪನ್ನೋಽಸ್ಮಿ ಮಹಾಯೋಗಿನ್ ಮಹಾಪುರುಷ ಸತ್ಪತೇ ।
ಅನುಜಾನೀಹಿ ಮಾಂ ದೇವ ಸರ್ವಲೋಕೇಶ್ವರೇಶ್ವರ ॥ ೧೬

---

ಕಾಂತಿಯಿಂದ ಬೆಳಗುತ್ತಿರುವೆ. ನಿನ್ನ ನೋಟ ಅಚ್ಚರಿಯನ್ನುಂಟುಮಾಡುತ್ತಿದೆ. ನೀನು ಪರಾಧೀನನಾಗಿ ಜುಗುಪ್ಸಿತವಾದ ಈ ಹಾವಿನ ಜನ್ಮವನ್ನು ಪಡೆದದ್ದಾದರೂ ಹೇಗೆ?" ಎಂದು ಕೇಳಿದನು (೧೦-೧೧). ಸರ್ಪವಾಗಿದ್ದ ವಿದ್ಯಾಧರನು ಹೇಳಿದನು: "ನಾನು ಸುದರ್ಶನನೆಂಬ ವಿದ್ಯಾಧರ. ರೂಪಸಂಪತ್ತಿನ ಮದದಿಂದ ವಿಮಾನವನ್ನೇರಿ ದಿಕ್ಕುದಿಕ್ಕುಗಳಲ್ಲಿ ಅಲೆಯುತ್ತಿದ್ದೆನು (೧೨). ರೂಪದರ್ಪಿತನಾದ ನಾನು ಕುರೂಪಿಗಳಾದ ಆಂಗಿರಸಋಷಿಗಳನ್ನು ಅಪಹಾಸ್ಯಮಾಡಿದೆನು. ಹಾಗೆ ಅಪಹಾಸ್ಯ ಮಾಡಲ್ಪಟ್ಟ ಋಷಿಗಳಿಂದ ನನ್ನ ಪಾಪಕೃತ್ಯದ ನಿಮಿತ್ತವಾಗಿ ಈ ಜನ್ಮವನ್ನು ಪಡೆದೆನು (೧೩). ಕರುಣಾತ್ಮರಾದ ಆ ಮುನಿಗಳು ನನ್ನ ಅನುಗ್ರಹಕ್ಕಾಗಿಯೇ ಶಾಪವನ್ನಿತ್ತರು! ಏಕೆಂದರೆ, ಆ ಶಾಪದ ದೆಸೆಯಿಂದಲೇ ಲೋಕೇಶ್ವರನ ಪಾದಸ್ಪರ್ಶವಾಗಿ ನಾನು ಪವಿತ್ರನಾದೆನು (೧೪). ಹೇ ಪಾಪನಾಶನ, ನಿನ್ನ ಪಾದಸ್ಪರ್ಶದಿಂದ ಶಾಪಮುಕ್ತನಾಗಿರುವ ನಾನು ಸಂಸಾರಭಯದಿಂದ ಶರಣಾಗತರಾದವರ ಭಯವನ್ನು ಬಿಡಿಸುವ ನಿನ್ನನ್ನು ಬೀಳ್ಕೊಡುವೆನು (೧೫). ಹೇ ಮಹಾಯೋಗಿ, ಮಹಾಪುರುಷ, ಸಜ್ಜನರಿಗೊಡೆಯ, ಸರ್ವಲೋಕೇಶ್ವರೇಶ್ವರ, ದೇವ, ಶರಣಾಗಿದ್ದೇನೆ.

ಬ್ರಹ್ಮದಂಡಾದ್ ವಿಮುಕ್ತೋಽಹಂ ಸದ್ಯಸ್ತೇಽಚ್ಯುತ ದರ್ಶನಾತ್ ।
ಯನ್ನಾಮ ಗೃಹ್ಣನ್ನಖಿಲಾನ್ ಶ್ರೋತೄನಾತ್ಮಾನಮೇವ ಚ ।
ಸದ್ಯಃ ಪುನಾತಿ ಕಿಂ ಭೂಯಸ್ತಸ್ಯ ಸ್ಪೃಷ್ಟಃ ಪದಾ ಹಿ ತೇ ॥ ೧೭

ಇತ್ಯನುಜ್ಞಾಪ್ಯ ದಾಶಾರ್ಹಂ ಪರಿಕ್ರಮ್ಯಾಭಿವಂದ್ಯ ಚ ।
ಸುದರ್ಶನೋ ದಿವಂ ಯಾತಃ ಕೃಚ್ಛ್ರಾನ್ನಂದಶ್ಚ ಮೋಚಿತಃ ॥ ೧೮

ನಿಶಾಮ್ಯ ಕೃಷ್ಣಸ್ಯ ತದಾತ್ಮವೈಭವಂ
ವ್ರಜೌಕಸೋ ವಿಸ್ಮಿತಚೇತಸಸ್ತತಃ ।
ಸಮಾಪ್ಯ ತಸ್ಮಿನ್ ನಿಯಮಂ ಪುನರ್ವ್ರಜಂ
ನೃಪಾ ಯಯುಸ್ತತ್ ಕಥಯಂತ ಆದೃತಾಃ ॥ ೧೯

ಕದಾಚಿದಥ ಗೋವಿಂದೋ ರಾಮಶ್ಚಾದ್ಭುತವಿಕ್ರಮಃ ।
ವಿಜಹ್ರತುರ್ವನೇ ರಾತ್ರ್ಯಾಂ ಮಧ್ಯಗೌ ವ್ರಜಯೋಷಿತಾಮ್ ॥ ೨೦

ಉಪಗೀಯಮಾನೌ ಲಲಿತಂ ಸ್ತ್ರೀಜನೈರ್ಬದ್ಧಸೌಹೃದೈಃ ।
ಸ್ವಲಂಕೃತಾನುಲಿಪ್ತಾಂಗೌ ಸ್ರಗ್ವಿಣೌ ವಿರಜೋಽಂಬರೌ ॥ ೨೧

---

ಅನುಮತಿಯನ್ನು ನೀಡು (೧೬). ಅಚ್ಯುತ, ನಿನ್ನ ದರ್ಶನವಾದೊಡನೆ ಬ್ರಹ್ಮ ಶಾಪದಿಂದ ವಿಮುಕ್ತನಾದೆನು. ಯಾರ ನಾಮವನ್ನು ನುಡಿಯುವವನು ಅಖಿಲ ಶ್ರೋತೃವರ್ಗವನ್ನೂ ತನ್ನನ್ನೂ ಒಡನೆಯೇ ಪವಿತ್ರಗೊಳಿಸುವನೋ ಅಂಥ ನಿನ್ನ ಪಾದಸ್ಪರ್ಶವನ್ನು ಪಡೆದ ನಾನು ಪವಿತ್ರನಾದೆನೆಂದು ಹೇಳಬೇಕೆ!" (೧೭). ಹೀಗೆ ನುಡಿದು ಸುದರ್ಶನನು ಶ್ರೀಕೃಷ್ಣನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಅಪ್ಪಣೆಯನ್ನು ಪಡೆದು ದೇವಲೋಕಕ್ಕೆ ಹೋದನು. ಹೀಗೆ ನಂದನಿಗೆ ವಿಪತ್ತಿನಿಂದ ಬಿಡುಗಡೆಯಾಯಿತು (೧೮). ಶ್ರೀಕೃಷ್ಣನ ಆತ್ಮಶಕ್ತಿ ವೈಭವವನ್ನು ವೀಕ್ಷಿಸಿ ವ್ರಜವಾಸಿಗಳು ವಿಸ್ಮಿತರಾದರು. ಅನಂತರ ತಮ್ಮ ವ್ರತವನ್ನು ಸಮಾಪ್ತಿಗೊಳಿಸಿ, ಪರೀಕ್ಷಿತರಾಜ, ಆ ವೃತ್ತಾಂತವನ್ನು ಆದರ ದಿಂದ ಹೇಳಿಕೊಳ್ಳುತ್ತ ವ್ರಜಕ್ಕೆ ಹಿಂದಿರುಗಿದರು (೧೯). ಆಮೇಲೆ ಒಂದು ರಾತ್ರಿ ಗೋವಿಂದನೂ ಅದ್ಭುತ ಬಲಶಾಲಿಯಾದ ರಾಮನೂ ವನದಲ್ಲಿ ಗೋಪಿ ಯರ ನಡುವೆ ವಿನೋದದಿಂದಿದ್ದರು. ಇಬ್ಬರೂ ಶುಭ್ರವಾದ ವಸ್ತ್ರವನ್ನು ಧರಿಸಿ ಅಲಂಕೃತರಾಗಿ ಚಂದನಾದಿಲೇಪನಗಳನ್ನು ಹಚ್ಚಿಕೊಂಡು ಹೂಮಾಲೆಯನ್ನು

ನಿಶಾಮುಖಂ ಮಾನಯಂತಾವುದಿತೋಡುಪತಾರಕಮ್ ॥
ಮಲ್ಲಿಕಾಗಂಧಮತ್ತಾಲಿ ಜುಷ್ಟಂ ಕುಮುದವಾಯುನಾ ॥ ೨೨

ಜಗತುಃ ಸರ್ವಭೂತಾನಾಂ ಮನಃಶ್ರವಣಮಂಗಲಮ್ ।
ತೌ ಕಲ್ಪಯಂತೌ ಯುಗಪತ್ ಸ್ವರಮಂಡಲಮೂರ್ಛಿತಮ್ ॥ ೨೩

ಗೋಪ್ಯಸ್ತದ್ಗೀತಮಾಕರ್ಣ್ಯ ಮೂರ್ಛಿತಾ ನಾವಿದನ್ ನೃಪ ।
ಸ್ರಂಸದ್ದುಕೂಲಮಾತ್ಮಾನಂ ಸ್ರಸ್ತಕೇಶಸ್ರಜಂ ತತಃ ॥ ೨೪

ಏವಂ ವಿಕ್ರೀಡತೋಃ ಸ್ವೈರಂ ಗಾಯತೋಃ ಸಂಪ್ರಮತ್ತವತ್ ।
ಶಂಖಚೂಡ ಇತಿ ಖ್ಯಾತೋ ಧನದಾನುಚರೋಽಭ್ಯಗಾತ್ ॥ ೨೫

ತಯೋರ್ನಿರೀಕ್ಷತೋ ರಾಜಂಸ್ತನ್ನಾಥಂ ಪ್ರಮದಾಜನಮ್ ।
ಕ್ರೋಶಂತಂ ಕಾಲಯಾಮಾಸ ದಿಶ್ಯುದೀಚ್ಯಾಮಶಂಕಿತಃ ॥ ೨೬

ಕ್ರೋಶಂತಂ ಕೃಷ್ಣ ರಾಮೇತಿ ವಿಲೋಕ್ಯ ಸ್ವಪರಿಗ್ರಹಮ್ ।
ಯಥಾ ಗಾ ದಸ್ಯುನಾ ಗ್ರಸ್ತಾ ಭ್ರಾತರಾವನ್ವಧಾವತಾಮ್ ॥ ೨೭

---

ಹಾಕಿಕೊಂಡಿದ್ದರು. ಅವರಲ್ಲಿ ಪ್ರೀತಿಯುಳ್ಳ ಗೋಪಿಯರು ಅವರನ್ನು ಕುರಿತು ಮಂಜುಳವಾಗಿ ಹಾಡುತ್ತಿದ್ದರು (೨೦–೨೧). ಚಂದ್ರನೂ ತಾರೆಗಳೂ ಉದಿಸಿರಲಾಗಿ, ಮಲ್ಲಿಗೆಯ ಪರಿಮಳದಿಂದ ಮದಿಸಿದ ದುಂಬಿಗಳು ಮುಸುಕುತ್ತಿರಲಾಗಿ, ನೈದಿಲೆಯ ಗಾಳಿ ಸುಳಿಯುತ್ತಿರಲಾಗಿ, ರಾಮಕೃಷ್ಣರು ರಾತ್ರಿಯ ಸೊಬಗನ್ನು ಮೆಚ್ಚಿ ವರ್ಣಿಸುತ್ತಿದ್ದರು (೨೨). ಆಗ ಅವರಿಬ್ಬರೂ ಸ್ವರಮಂಡಲದ ಮೂರ್ಛನೆಯನ್ನು ಏಕಕಾಲದಲ್ಲಿ ಕಲ್ಪಿಸುತ್ತ ಸಮಸ್ತಪ್ರಾಣಿಗಳ ಮನಸ್ಸಿಗೂ ಕಿವಿಗೂ ಮಂಗಳಕರವಾಗುವಂತೆ ಹಾಡಲಾರಂಭಿಸಿದರು (೨೩). ಪರೀಕ್ಷಿತ ರಾಜ, ಗೋಪಿಯರು ಆ ಗಾನವನ್ನಾಲಿಸಿ ಮೈಮರೆತರು. ಉಟ್ಟಸೀರೆ ಜಾರಿದುದೂ ಮುಡಿದಮಾಲೆ ಕಳಚಿದುದೂ ಅವರಿಗೆ ಅರಿವಾಗಲಿಲ್ಲ! (೨೪). ಹೀಗೆ ಅವರಿಬ್ಬರು ಕ್ರೀಡಿಸುತ್ತ ಮೈಮರೆತವರಂತೆ ಹಾಡುತ್ತಿರಲು, ಕುಬೇರನ ಅನುಚರನಾದ ಶಂಖಚೂಡ ಎಂಬ ಯಕ್ಷನು ಅಲ್ಲಿಗೆ ಬಂದನು. ರಾಮಕೃಷ್ಣರು ನೋಡುತ್ತಿರುವಾಗಲೇ, ಅವರನ್ನಾಶ್ರಯಿಸಿದ ಗೋಪಿಯರು ಅರಚುತ್ತಿರುವಾಗಲೇ, ಆ ಪ್ರಮದೆಯರನ್ನು ನಿರ್ಭಯದಿಂದ ಯಕ್ಷನು ಉತ್ತರದಿಕ್ಕಿಗೆ ಬಲಾತ್ಕಾರವಾಗಿ ಎಳೆದುಕೊಂಡು ಹೋದನು! (೨೫–೨೬). ತಮ್ಮನ್ನು ಆಶ್ರಯಿಸಿದ್ದ ಸ್ತ್ರೀಯರು, ಹುಲಿಯಿಂದ ಆಕ್ರಮಿಸಲ್ಪಟ್ಟ ಹಸುಗಳಂತೆ, 'ಕೃಷ್ಣ!

ಮಾ ಭೈಷ್ಟೇತ್ಯಭಯಾರಾವೌ ಶಾಲಹಸ್ತೌ ತರಸ್ವಿನೌ ।
ಆಸೇದತುಸ್ತಂ ತರಸಾ ತ್ವರಿತಂ ಗುಹ್ಯಕಾಧಮಮ್ ॥ ೨೮

ಸ ವೀಕ್ಷ್ಯ ತಾವನುಪ್ರಾಪ್ತೌ ಕಾಲಮೃತ್ಯೂ ಇವೋದ್ವಿಜನ್ ।
ವಿಸೃಜ್ಯ ಸ್ತ್ರೀಜನಂ ಮೂಢಃ ಪ್ರಾದ್ರವಜ್ಜೀವಿತೇಚ್ಛಯಾ ॥ ೨೯

ತಮನ್ವಧಾವದ್ ಗೋವಿಂದೋ ಯತ್ರ ಯತ್ರ ಸ ಧಾವತಿ ।
ಜಿಹೀರ್ಷುಸ್ತಚ್ಛಿರೋರತ್ನಂ ತಸ್ಥೌ ರಕ್ಷನ್ ಸ್ತ್ರಿಯೋ ಬಲಃ ॥ ೩೦

ಅವಿದೂರ ಇವಾಭ್ಯೇತ್ಯ ಶಿರಸ್ತಸ್ಯ ದುರಾತ್ಮನಃ ।
ಜಹಾರ ಮುಷ್ಟಿನೈವಾಂಗ ಸಹಚೂಡಾಮಣಿಂ ವಿಭುಃ ॥ ೩೧

ಶಂಖಚೂಡಂ ನಿಹತ್ಯೈವಂ ಮಣಿಮಾದಾಯ ಭಾಸ್ವರಮ್ ।
ಅಗ್ರಜಾಯಾದದಾತ್ ಪ್ರೀತ್ಯಾ ಪಶ್ಯಂತೀನಾಂ ಚ ಯೋಷಿತಾಮ್ ॥

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತುಸ್ತ್ರಿಂಶಾಧ್ಯಾಯಃ

---

ರಾಮ!' ಎಂದು ಅರಚಲಾಗಿ, ಈ ಸೋದರರು ಶಂಖಚೂಡನ ಬೆನ್ನಟ್ಟಿ ಹೋದರು (೨೭). ಶಾಲವೃಕ್ಷದಂತೆ ದೀರ್ಘಬಾಹುಗಳಾದ ರಾಮಕೃಷ್ಣರು "ಹೆದರಬೇಡಿರಿ!" ಎಂದು ಅಭಯವಚನವನ್ನು ನುಡಿದು ವೇಗದಿಂದ ಧಾವಿಸುತ್ತ, ಬಹುಬೇಗನೆ ಮುಂದೆ ಹೋದ ಯಕ್ಷಾಧಮನ ಸಮೀಪವನ್ನೈದಿದರು (೨೮). ಅವರಿಬ್ಬರೂ ಕಾಲಮೃತ್ಯುಗಳಂತೆ ಸಮೀಪಿಸಿದ್ದನ್ನು ನೋಡಿ ಹೆದರಿದ ಯಕ್ಷನು ಸ್ತ್ರೀಯರನ್ನು ಕೈಬಿಟ್ಟು ದಿಙ್ಮೂಢನಾಗಿ ಬದುಕುವ ಬಯಕೆಯಿಂದ ಓಡಿಹೋದನು (೨೯). ಗೋವಿಂದನು ಯಕ್ಷನನ್ನು ಹಿಡಿದು ಅವನ ಶಿರೋರತ್ನವನ್ನು ತರಬೇಕೆಂದು ಅವನು ಎತ್ತ ಎತ್ತ ಓಡಿದರೂ ಅತ್ತ ಅತ್ತ ಯಕ್ಷನ ಬೆನ್ನಟ್ಟಿ ಹೋದನು. ಬಲರಾಮನು ಗೋಪಿಯರಿಗೆ ಕಾವಲಾಗಿ ನಿಂತನು (೩೦). ಸ್ವಲ್ಪ ದೂರ ಹೋಗುವಷ್ಟರಲ್ಲಿಯೇ ಶ್ರೀಕೃಷ್ಣನು ದುರಾತ್ಮನಾದ ಯಕ್ಷನ ತಲೆಯನ್ನು ಮುಷ್ಟಿಯಿಂದ ಕುಟ್ಟಿ ಶಿರೋರತ್ನದೊಡನೆ ಶಿರಸ್ಸನ್ನೂ ಒಯ್ದನು (೩೧). ಹೀಗೆ ಗೋವಿಂದನು ಶಂಖಚೂಡನನ್ನು ಕೊಂದು ಜಗಜಗಿಸುವ ಶಿರೋರತ್ನವನ್ನು ತಂದು, ಗೋಪಿಯರು ನೋಡುತ್ತಿರುವಾಗಲೇ ಅದನ್ನು ಅಣ್ಣನಿಗೆ ಪ್ರೀತಿಯಿಂದ ಒಪ್ಪಿಸಿದನು (೩೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತುನಾಲ್ಕನೆಯ ಅಧ್ಯಾಯ

## ಪಂಚತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ

**ಗೋಪ್ಯಃ ಕೃಷ್ಣೇ ವನಂ ಯಾತೇ ತಮನುದ್ರುತಚೇತಸಃ ।**
**ಕೃಷ್ಣಲೀಲಾಃ ಪ್ರಗಾಯಂತ್ಯೋ ನಿನ್ಯುರ್ದುಃಖೇನ ವಾಸರಾನ್ ॥ ೧**

ಗೋಪ್ಯ ಊಚುಃ—

**ವಾಮಬಾಹುಕೃತವಾಮಕಪೋಲೋ**
**ವಲ್ಗಿತಭ್ರುರಧರಾರ್ಪಿತವೇಣುಮ್ ।**
**ಕೋಮಲಾಂಗುಲಿಭಿರಾಶ್ರಿತಮಾರ್ಗಂ**
**ಗೋಪ್ಯ ಈರಯತಿ ಯತ್ರ ಮುಕುಂದಃ ॥ ೨**

**ವ್ಯೋಮಯಾನವನಿತಾಃ ಸಹ ಸಿದ್ಧೈ-**
**ರ್ವಿಸ್ಮಿತಾಸ್ತದುಪಧಾರ್ಯ ಸಲಜ್ಜಾಃ ।**
**ಕಾಮಮಾರ್ಗಣಸಮರ್ಪಿತಚಿತ್ತಾಃ**
**ಕಶ್ಮಲಂ ಯಯುರಪಸ್ಮೃತನೀವ್ಯಃ ॥ ೩**

## ಅಧ್ಯಾಯ ೩೫

ಶ್ರೀಕೃಷ್ಣನು ಗೋವುಗಳನ್ನು ಮೇಯಿಸುವುದಕ್ಕಾಗಿ ವನಕ್ಕೆ ಹೋದಾಗ,
ಗೋಪಿಯರು ಅವನ ಗುಣಗಾನಮಾಡುವುದು

ಹಗಲು ಶ್ರೀಕೃಷ್ಣನು (ಗೋಪಾಲನೆಗೋಸ್ಕರ) ವನಕ್ಕೆ ನಿರ್ಗಮಿಸಿದಾಗ ಗೋಪಿಯರ ಮನಸ್ಸು ಅವನ ಹಿಂದೆಯೇ ಓಡುತ್ತಿತ್ತು. ಕೃಷ್ಣಲೀಲೆಗಳನ್ನು ಹಾಡುತ್ತ ದುಃಖದಿಂದ ಅವರು ಹಗಲನ್ನು ಕಳೆಯುತ್ತಿದ್ದರು (೧). ಗೋಪಿಯರು ಹಾಡುತ್ತಿದ್ದರು: "ಎಡಗೈಯನ್ನು ಎಡಗೆನ್ನೆಗೆ ತಾಗಿಸಿ, ಸ್ವರರಂಧ್ರಗಳಿರುವ ಕೊಳಲನ್ನು ಕೆಳದುಟಿಗೆ ತಗುಲಿಸಿ, ಹುಬ್ಬುಗಳನ್ನು ಕುಣಿಸುತ್ತ ಮುಕುಂದನು ಕೋಮಲಾಂಗುಲಿಗಳಿಂದ ಕೊಳಲು ನುಡಿಸುವಾಗ, ಗೋಪಿಯರೆ, ಸಿದ್ಧರೊಡನೆ ವಿಮಾನದಲ್ಲಿರುವ ದೇವವನಿತೆಯರು ವಿಸ್ಮಿತರಾಗಿ ಅದನ್ನು ಆಲಿಸುತ್ತಿದ್ದರು. ಮನಸ್ಸು ಮನ್ಮಥನ ಮಾರ್ಗಣಕ್ಕೆ ಮಣಿಯಲು ಲಜ್ಜಿತರಾದರು. ಸೀರೆಯ ಗಂಟು ಸಡಲಿದುದನ್ನು ಸ್ಮರಿಸದೆ ವೈಮರೆತರು ! (೨–೩).

ಹಂತ ಚಿತ್ರಮಬಲಾಃ ಶೃಣುತೇದಂ
ಹಾರಹಾಸ ಉರಸಿ ಸ್ಥಿರವಿದ್ಯುತ್ ।
ನಂದಸೂನುರಯಮಾರ್ತಜನಾನಾಂ
ನರ್ಮದೋ ಯರ್ಹಿ ಕೂಜಿತವೇಣುಃ ॥ ೪

ವೃಂದಶೋ ವ್ರಜವೃಷಾ ಮೃಗಗಾವೋ
ವೇಣುವಾದ್ಯಹೃತಚೇತಸ ಆರಾತ್ ।
ದಂತದಷ್ಟಕವಲಾ ಧೃತಕರ್ಣಾ
ನಿದ್ರಿತಾ ಲಿಖಿತಚಿತ್ರಮಿವಾಸನ್ ॥ ೫

ಬರ್ಹಿಣಸ್ತಬಕಧಾತುಪಲಾಶೈ-
ರ್ಬದ್ಧಮಲ್ಲಪರಿಬರ್ಹವಿಡಂಬಃ ।
ಕರ್ಹಿಚಿತ್ ಸಬಲ ಆಲಿ ಸ ಗೋಪೈ-
ರ್ಗಾಃ ಸಮಾಹ್ವಯತಿ ಯತ್ರ ಮುಕುಂದಃ ॥ ೬

ತರ್ಹಿ ಭಗ್ನಗತಯಃ ಸರಿತೋ ವೈ
ತತ್ಪದಾಂಬುಜರಜೋಽನಿಲನೀತಮ್ ।

---

ಅಬ್ಬ ! ಅಬಲೆಯರೆ, ಈ ವಿಸ್ಮಯವನ್ನಾಲಿಸಿರಿ ! ಮುತ್ತಿನ ಮಾಲೆಯಂತೆ ಸುತ್ತಲೂ ಅವನ ನಗು ಹರಡಿರಲು, ವಕ್ಷಃಸ್ಥಳದಲ್ಲಿ ಮಿಂಚಿನ ಕಾಂತಿ ಮಿಂಚುತ್ತಿರಲು, ಆರ್ತರಿಗೆ ಆನಂದವನ್ನೀಯುವ ನಂದನಂದನನು ವೇಣುವಾದನ ಮಾಡುವಾಗ ದೂರದಲ್ಲಿರುವ ವ್ರಜದ ವೃಷಭಗಳೂ ಮೃಗಗಳೂ ಗೋವುಗಳೂ ವೇಣುವಾದನಕ್ಕೆ ಮರುಳಾದವು. ಹಿಂಡುಹಿಂಡಾಗಿ ನೆರೆದವು. ಮೆಲ್ಲುವ ಹುಲ್ಲಿನ ಹಿಡಿಯನ್ನು ಹಲ್ಲಿನಲ್ಲಿ ಹಿಡಿದು, ಕಿವಿಗಳನ್ನು ನಿಮಿರಿಸಿ ಅಲ್ಲಿಯೇ ನಿದ್ರಿಸುವುವೋ, ಬರೆದ ಚಿತ್ರಗಳೋ ಎಂಬಂತಾದವು ! (೪–೫). ನವಿಲು ಗರಿಯ ಗೊಂಚಲು, ಗೈರಿಕಧಾತು, ಚಿಗುರೆಲೆಗಳಿಂದ ಜಟ್ಟಿಯ ವೇಷವನ್ನು ಧರಿಸಿ ಬಲರಾಮಸಹಿತನಾದ ಮುಕುಂದನು ಗೋಪರೊಡನೆ ಸೇರಿ ಹಸುಗಳನ್ನು ಕೂಗಿ ಕರೆಯುತ್ತಿದ್ದರೆ, ಗೆಳತಿ, ಹೊಳೆಗಳು ಹರಿಯದೆ ನಿಂತವು ! ಅವನ ಪಾದ ಕಮಲದ ರೇಣುವನ್ನು ಗಾಳಿ ಹಾರಿಸಿ ತಂದೀತೆ–ಎಂದು ಹಾರೈಸಿದವು ! ಆದರೆ ನಮ್ಮಂತೆ ನದಿಗಳೂ ಹೆಚ್ಚು ಪುಣ್ಯ ಮಾಡಿಲ್ಲ ! ಪ್ರೇಮದಿಂದ ಭುಜತರಂಗ

ಸ್ಪೃಹಯತೀರ್ವಯಮಿವಾಬಹುಪುಣ್ಯಾಃ
 ಪ್ರೇಮವೇಪಿತಭುಜಾಃ ಸ್ತಿಮಿತಾಪಃ ॥ ೭

ಅನುಚರೈಃ ಸಮನುವರ್ಣಿತವೀರ್ಯ
 ಆದಿಪೂರುಷ ಇವಾಚಲಭೂತಿಃ ।
ವನಚರೋ ಗಿರಿತಟೇಷು ಚರಂತೀ-
 ರ್ವೇಣುನಾಽಽಹ್ವಯತಿ ಗಾಃ ಸ ಯದಾ ಹಿ ॥ ೮

ವನಲತಾಸ್ತರವ ಆತ್ಮನಿ ವಿಷ್ಣುಂ
 ವ್ಯಂಜಯಂತ್ಯ ಇವ ಪುಷ್ಪಫಲಾಢ್ಯಾಃ ।
ಪ್ರಣತಭಾರವಿಟಪಾ ಮಧುಧಾರಾಃ
 ಪ್ರೇಮಹೃಷ್ಟತನವಃ ಸಸೃಜುಃ ಸ್ಮ ॥ ೯

ದರ್ಶನೀಯತಿಲಕೋ ವನಮಾಲಾ-
 ದಿವ್ಯಗಂಧತುಲಸೀಮಧುಮತ್ತೈಃ ।
ಅಲಿಕುಲೈರಲಘುಗೀತಮಭೀಷ್ಟ-
 ಮಾದ್ರಿಯನ್ ಯರ್ಹಿ ಸಂಧಿತವೇಣುಃ ॥ ೧೦

---

ಗಳನ್ನು ನೀಡಿದರೂ ದೊರೆಯಲಿಲ್ಲ. ಕಡೆಗೆ ನೀರುಚಲಿಸದಂತೆ ನದಿಗಳು ಸುಮ್ಮನೆ ನಿಂತವು! ಅಷ್ಟೆ! (೬–೭). ನಿಶ್ಚಲವಾದ ಶ್ರೀಯುಳ್ಳ ಆದಿಪುರುಷನಂತೆ ಅನುಚರರಿಂದ ಸ್ತುತಿಸಲ್ಪಡುತ್ತ ವನದಲ್ಲಿ ಸಂಚರಿಸುವ ಗೋವಿಂದನು ಗಿರಿತಟಗಳಲ್ಲಿ ಮೇಯುವ ಹಸುಗಳನ್ನು ಕೊಳಲೂದಿ ಕರೆದಾಗ, ವನಲತೆಗಳೂ ವೃಕ್ಷಗಳೂ ಹೃದಯದಲ್ಲಿ ವಿಷ್ಣು ಅಭಿವ್ಯಕ್ತನಾದನೆಂಬ ಚಿಹ್ನೆಯನ್ನು ವ್ಯಂಜಿಸಿದವೋ ಎಂಬಂತೆ ತೋರಿದವು. ಭಾರದಿಂದ ಕೊಂಬೆಗಳು ಬಳುಕುತ್ತಿರಲು ಪುಷ್ಪಫಲಗಳಿಂದ ಸಮೃದ್ಧವಾದವು. ಪ್ರೇಮರೋಮಾಂಚಿತಗಳಾಗಿ ಮಧುಧಾರೆಗಳನ್ನು ಸುರಿಸಿದವು* (೮–೯). ವನಮಾಲೆಯಲ್ಲಿರುವ ದಿವ್ಯ ಗಂಧದ ತುಳಸಿಯ ಮಧುವನ್ನುಂಡು ಮದಿಸಿದ ದುಂಬಿಗಳು ಉಚ್ಚಸ್ವರದಿಂದ

---

* ಯಾರಿಗೆ ವಿಷ್ಣುಸಾಕ್ಷಾತ್ಕಾರವಾಗಿದೆಯೋ ಅವರಲ್ಲಿ ವಿಶಿಷ್ಟವಾದ ಒಂದು ತೇಜಸ್ಸು ಹೊಮ್ಮುವುದು. ಹೃದಯದಲ್ಲಿ ಆನಂದವು ತುಂಬುವುದು. ಮಧುಧಾರೆಯಂತಹ ವಾಗಮೃತವನ್ನು ಅವರು ಹರಿಸುವರು. ಈ ಲಕ್ಷಣವು ತರುಲತೆಗಳಲ್ಲಿ ಕಾಣಿಸಿತು—ಎಂದು ಅಭಿಪ್ರಾಯ.

ಸರಸಿ ಸಾರಸಹಂಸವಿಹಂಗಾ-
ಶ್ಚಾರುಗೀತಹೃತಚೇತಸ ಏತ್ಯ ।
ಹರಿಮುಪಾಸತ ತೇ ಯತಚಿತ್ತಾ
ಹಂತ ಮೀಲಿತದೃಶೋ ಧೃತಮೌನಾಃ ॥ ೧೧

ಸಹಬಲಃ ಸ್ರಗವತಂಸವಿಲಾಸಃ
ಸಾನುಷು ಕ್ಷಿತಿಭೃತೋ ವ್ರಜದೇವ್ಯಃ ।
ಹರ್ಷಯನ್ ಯರ್ಹಿ ವೇಣುರವೇಣ
ಜಾತಹರ್ಷ ಉಪರಂಭತಿ ವಿಶ್ವಮ್ ॥ ೧೨

ಮಹದತಿಕ್ರಮಣಶಂಕಿತಚೇತಾ
ಮಂದಮಂದಮನುಗರ್ಜತಿ ಮೇಘಃ ।
ಸುಹೃದಮಭ್ಯವರ್ಷತ್ ಸುಮನೋಭಿ-
ಶ್ಛಾಯಯಾ ಚ ವಿದಧತ್ ಪ್ರತಪತ್ರಮ್ ॥ ೧೩

ವಿವಿಧಗೋಪಚರಣೇಷು ವಿದಗ್ಧೋ
ವೇಣುವಾದ್ಯ ಉರುಧಾ ನಿಜಶಿಕ್ಷಾಃ ।

---

ಹಾಡುತ್ತಿರಲು, ಅದು ತನಗೆ ಅನುಕೂಲವೆಂದು ಆದರಿಸಿ, ಹಣೆಯಲ್ಲಿ ಸುಂದರ ವಾದ ತಿಲಕವನ್ನು ಧರಿಸಿದ ಶ್ರೀಹರಿಯು ಕೊಳಲೂದಿದರೆ, ಕೊಳದಲ್ಲಿರುವ ಸಾರಸಹಂಸಾದಿಜಲಪಕ್ಷಿಗಳು ಆ ಮಧುರಗೀತಕ್ಕೆ ಮರುಳಾಗುತ್ತವೆ! ಅವು ಅಲ್ಲಿಯೇ ಮನಸ್ಸಿಟ್ಟು ಕಣ್ಣುಮುಚ್ಚಿ ಮೌನದಿಂದ ಗೀತವನ್ನಾಲಿಸುತ್ತ ಹರಿಯನ್ನು ಓಲೈಸುತ್ತವೆ! (೧೦–೧೧). ಓ ವ್ರಜದೇವಿಯರಾದ ಗೋಪಿಯರೆ, ಅವನು ಶಿರಸ್ಸಿನಲ್ಲಿ ಮುಡಿದ ಮಾಲೆಯ ವಿಲಾಸವುಳ್ಳವನಾಗಿ ಬೆಟ್ಟದ ತಪ್ಪಲುಗಳಲ್ಲಿ ಬಲರಾಮನೊಡನೆ ನಡೆಯುತ್ತ, ಹರ್ಷದಿಂದ ಕೊಳಲೂದಿ ಹರ್ಷಗೊಳಿಸುತ್ತ ಕೊಳಲ ನಾದದಿಂದ ವಿಶ್ವವನ್ನು ತುಂಬುವಾಗ, ಮೇಘವು ಆ ಮಹಾತ್ಮನನ್ನು ಅತಿಕ್ರಮಿಸಿ ಹೋಗಲು ಹೆದರಿ ನಿಲ್ಲುತ್ತದೆ! ಮೆಲ್ಲಮೆಲ್ಲನೆ ಕೊಳಲ ನಾದಕ್ಕೆ ಅನುಗುಣವಾಗಿ ಗುಡುಗುತ್ತದೆ! ಲೋಕಮಿತ್ರನಾದ ಕೃಷ್ಣನ ಮೇಲೆ ಹೂಮಳೆ ಸುರಿಸುತ್ತದೆ! ಕೊಡೆಯಾಗಿ ನೆರಳೀಯುತ್ತದೆ! (೧೨–೧೩). ಹೇ ಸಾಧ್ವಿ–ಯಶೋದೆ, ನಿನ್ನ ಮಗನು ಗೋಪಾಲರಾಡುವ ನಾನಾಬಗೆಯ

ತವ ಸುತಃ ಸತಿ ಯದಾಧರಬಿಂಬೇ
ದತ್ತವೇಣುರನಯತ್ ಸ್ವರಜಾತೀಃ ॥ ೧೪

ಸವನಶಸ್ತದುಪಧಾರ್ಯ ಸುರೇಶಾಃ
ಶಕ್ರಶರ್ವಪರಮೇಷ್ಠಿಪುರೋಗಾಃ ।
ಕವಯ ಆನತಕಂಧರಚಿತ್ತಾಃ
ಕಶ್ಮಲಂ ಯಯುರನಿಶ್ಚಿತತತ್ತ್ವಾಃ ॥ ೧೫

ನಿಜಪದಾಬ್ಜದಲೈರ್ಧ್ವಜವಜ್ರ-
ನೀರಜಾಂಕುಶವಿಚಿತ್ರಲಲಾಮೈಃ ।
ವ್ರಜಭುವಃ ಶಮಯನ್ ಸುರತೋದಂ
ವರ್ಷ್ಮಧುರ್ಯಗತಿರೀರಿತವೇಣುಃ ॥ ೧೬

ವ್ರಜತಿ ತೇನ ವಯಂ ಸವಿಲಾಸ-
ವೀಕ್ಷಣಾರ್ಪಿತಮನೋಭವವೇಗಾಃ ।
ಕುಜಗತಿಂ ಗಮಿತಾ ನ ವಿದಾಮಃ
ಕಶ್ಮಲೇನ ಕಬರಂ ವಸನಂ ವಾ ॥ ೧೭

---

ಕ್ರೀಡೆಗಳಲ್ಲಿ ನಿಪುಣನಾಗಿದ್ದಾನೆ. ವೇಣುವಾದನದಲ್ಲಂತೂ ತಾನಾಗಿಯೇ ಕಲಿತು ಪ್ರವೀಣನಾಗಿದ್ದಾನೆ. ಅಧರಬಿಂಬದಲ್ಲಿ ಕೊಳಲಿಟ್ಟು ಮಂದ್ರಮಧ್ಯ ತಾರಗಳಲ್ಲಿ ವಿವಿಧ ಸ್ವರಾಲಾಪಗಳನ್ನು ನುಡಿಸತೊಡಗಿದನೆಂದರೆ, ಇಂದ್ರ ಶಿವ ಬ್ರಹ್ಮಾದಿದೇವತೆಗಳು ಅತ್ತಕಡೆ ತಲೆಬಾಗಿಸಿ ಮನಸ್ಸಿಟ್ಟು ಕೇಳುವರು. ಸ್ವತಃ ಸಂಗೀತವಿದ್ವಾಂಸರಾದರೂ ಸ್ವರಾಲಾಪಗಳ ಭೇದವನ್ನರಿಯಲಾರದೆ ಮೂಢರಾಗುವರು! (೧೪–೧೫). ಧ್ವಜ, ವಜ್ರ, ತಾವರೆ, ಅಂಕುಶ ಮುಂತಾದ ವಿವಿಧ ಲಕ್ಷಣಗಳಿರುವ ತನ್ನ ಪಾದಗಳೆಂಬ ತಾವರೆಯ ದಳಗಳನ್ನು ನೆಲದ ಮೇಲಿಡುತ್ತ, ಗೋಕುಲದ ನೆಲಕ್ಕೆ ದನಗಳ ಗೊರಸುಗಳಿಂದಾದ ನೋವನ್ನು ಶಾಂತಿಗೊಳಿಸುತ್ತ, ಕೃಷ್ಣನು ಕೊಳಲೂದುತ್ತ ಗಜಗಮನದಿಂದ ಹೊರಡುವನು. ಆಗ ಅವನ ವಿಲಾಸವೀಕ್ಷಣಗಳಿಂದ ನಾವು ಮನ್ಮಥಾವಿಷ್ಟರಾಗಿ ಮರಗಳಂತೆ ಅಲ್ಲಾಡದೆ ನಿಲ್ಲುವೆವು! ಮುಡಿ ಸಡಿಲಿತೆ, ಸೀರೆ ಜಾರಿತೆ ಎಂಬುದೂ

ಮಣಿಧರಃ ಕ್ವಚಿದಾಗಣಯನ್ ಗಾಃ
ಮಾಲಯಾ ದಯಿತಗಂಧತುಲಸ್ಯಾಃ ।
ಪ್ರಣಯಿನೋಽನುಚರಸ್ಯ ಕದಾಂಸೇ
ಪ್ರಕ್ಷಿಪನ್ ಭುಜಮಗಾಯತ ಯತ್ರ ॥ ೧೮

ಕ್ವಣಿತವೇಣುರವವಂಚಿತಚಿತ್ತಾಃ
ಕೃಷ್ಣಮನ್ವಸತ ಕೃಷ್ಣಗೃಹಿಣ್ಯಃ ।
ಗುಣಗಣಾರ್ಣಮನುಗತ್ಯ ಹರಿಣ್ಯೋ
ಗೋಪಿಕಾ ಇವ ವಿಮುಕ್ತಗೃಹಾಶಾಃ ॥ ೧೯

ಕುಂದದಾಮಕೃತಕೌತುಕವೇಷೋ
ಗೋಪಗೋಧನವೃತೋ ಯಮುನಾಯಾಮ್ ।
ನಂದಸೂನುರನಘೇ ತವ ವತ್ಸೋ
ನರ್ಮದಃ ಪ್ರಣಯಿನಾಂ ವಿಜಹಾರ ॥ ೨೦

ಮಂದವಾಯುರುಪವಾತ್ಯನುಕೂಲಂ
ಮಾನಯನ್ ಮಲಯಜಸ್ಪರ್ಶೇನ ।

---

ನಮಗೆ ಅರಿವಾಗದು! (೧೬–೧೭). ಪ್ರಿಯವಾದ ಪರಿಮಳವನ್ನು ಬೀರುವ ತುಳಸೀಮಾಲೆಯನ್ನು ಧರಿಸಿ, ಮಣಿಗಳಿಂದ ಗೋವುಗಳನ್ನು ಎಣಿಸುತ್ತ, ಪ್ರಣಯಿಯಾದ ಸಹಚರನ ಹೆಗಲಮೇಲೆ ಭುಜವನ್ನಿಟ್ಟು ಹಾಡುವಾಗ, ವೇಣು ವಾದನದಿಂದ ಮೋಹಗೊಂಡ ಕೃಷ್ಣಗೃಹಿಣಿಯರು–ಕೃಷ್ಣಮೃಗದ ಮಡದಿಯ ರಾದ ಹೆಣ್ಣುಜಿಂಕೆಗಳು, ಮನೆಮಾರಿನ ಆಸೆಯನ್ನು ತೊರೆದ ಕೃಷ್ಣಕಾಂತೆಯ ರಾದ ಗೋಪಿಯರಂತೆ, ಗುಣಗಣಾರ್ಣವನಾದ ಕೃಷ್ಣನ ಸುತ್ತಲೂ ನೆರೆಯು ವುವು! (೧೮–೧೯). ಓ ಪುಣ್ಯಶಾಲಿನಿ–ಯಶೋದೆ, ನಿನ್ನ ಮಗನು–ನಂದ ತನಯನು ಕುಂದಕುಸುಮಗಳಿಂದ ಕೌತುಕವೇಷವನ್ನು ಧರಿಸಿ ಗೋಪಾಲ ಗೋವುಗಳಿಂದ ಪರಿವೃತನಾಗಿ ಪ್ರಣಯಿಗಳಿಗೆ ವಿನೋದವನ್ನೀಯುತ್ತ ಯಮುನಾತೀರದಲ್ಲಿ ಕ್ರೀಡಿಸುವಾಗ, ಮಂದಮಾರುತನು ಬೀಸುವನು. ಕೃಷ್ಣನು ತೊಡೆದುಕೊಂಡಿರುವ ಚಂದನದ ಗಂಧವನ್ನು ಸಂಮಾನಿಸಿ ಮಾರುತನು ಹೊತ್ತು ಅಲೆಯುವನು! ಗಂಧರ್ವಾದಿಗಳು ವಾದ್ಯಗೀತಪುಷ್ಪ

ವಂದಿನಸ್ತಮುಪದೇವಗಣಾ ಯೇ
ವಾದ್ಯಗೀತಬಲಿಭಿಃ ಪರಿವವ್ರುಃ ॥ ೨೧

ವತ್ಸಲೋ ವ್ರಜಗವಾಂ ಯದಗಧ್ರೋ
ವಂದ್ಯಮಾನಚರಣಃ ಪಥಿ ವೃದ್ಧೈಃ ।
ಕೃತ್ಸ್ನಗೋಧನಮುಪೋಹ್ಯ ದಿನಾಂತೇ
ಗೀತವೇಣುರನುಗೇಡಿತಕೀರ್ತಿಃ ॥ ೨೨

ಉತ್ಸವಂ ಶ್ರಮರುಚಾಪಿ ದೃಶೀನಾ-
ಮುನ್ನಯನ್ ಖುರರಜಶ್ಛುರಿತಸ್ರಕ್ ।
ದಿತ್ಸಯೈತಿ ಸುಹೃದಾಶಿಷ ಏಷ
ದೇವಕೀಜಠರಭೂರುಡುರಾಜಃ ॥ ೨೩

ಮದವಿಘೂರ್ಣಿತಲೋಚನ ಈಷನ್-
ಮಾನದಃ ಸ್ವಸುಹೃದಾಂ ವನಮಾಲೀ ।
ಬದರಪಾಂಡುವದನೋ ಮೃದುಗಂಡಂ
ಮಂಡಯನ್ ಕನಕಕುಂಡಲಲಕ್ಷ್ಮ್ಯಾ ॥ ೨೪

ವೃಷ್ಟಿಗಳಿಂದ ಸುತ್ತುವರಿಯುವರು! (೨೦–೨೧). ಗೋವರ್ಧನಧಾರಿಯಾಗಿ ಗೋಕುಲದವರಿಗೂ ಗೋವುಗಳಿಗೂ ವತ್ಸಲನಾಗಿರುವ ಕೃಷ್ಣನು ಸಂಜೆಯಲ್ಲಿ ಎಲ್ಲ ಗೋವುಗಳನ್ನೂ ಕೂಡಿಸಿಕೊಂಡು, ದಾರಿಯಲ್ಲಿ ಹಿರಿಯರಾದ ಬ್ರಹ್ಮಾದಿಗಳಿಂದಲೂ ವಂದಿತಚರಣನಾಗಿ, ಜೊತೆಗಾರರಿಂದ ಸಂಸ್ತುತನಾಗಿ, ಕೊಳಲೂದುತ್ತ ಹಿಂದಿರುಗುವನು. ದನಗಳ ಗೊರಸಿನಿಂದೆದ್ದ ಧೂಳಿಂದ ಮಾಲೆ ಮಾಸಿದ್ದರೂ ಬಳಲಿದ್ದರೂ ಕಾಂತಿವಿಶೇಷದಿಂದ ಕಣ್ಣುಗಳಿಗೆ ಹಬ್ಬವನ್ನೀಯುವನು. ದೇವಕೀಗರ್ಭಸಂಭೂತನಾದ* ಈ ಚಂದ್ರಮನು ಮಿತ್ರರ ಮನೋರಥವನ್ನು ಪೂರೈಸಲು ಹಿಂದಿರುಗಿ ಬರುವನು (೨೨–೨೩). ಕನಕಕುಂಡಲ ಕಾಂತಿಯು ಮೃದುಕಪೋಲದ ಮೇಲೆ ಮಿನುಗುವುದರಿಂದ ಮಾಗಿದ ಬದರಫಲ

* 'ಪ್ರಾಗಯಂ ವಸುದೇವಸ್ಯ ಕ್ವಚಿಜ್ಜಾತಸ್ತವಾತ್ಮಜಃ' (೨೬–೧೭) ಎಂದು ಗರ್ಗರು ತಿಳಿಸಿದ್ದರಿಂದ ಅಥವಾ ಬೇರೊಂದು ನಿಮಿತ್ತದಿಂದ ಕೃಷ್ಣನು ವಸುದೇವ ದೇವಕಿಯರ ಮಗನೆಂಬುದು ಗೋಪಿಯರಿಗೆ ಗೊತ್ತಾಗಿದೆ—ಎಂದು ಊಹಿಸಬಹುದು.

**ಯದುಪತಿರ್ದ್ವಿರದರಾಜವಿಹಾರೋ**
**ಯಾಮಿನೀಪತಿರಿವೈಷ ದಿನಾಂತೇ ।**
**ಮುದಿತವಕ್ತ್ರ ಉಪಯಾತಿ ದುರಂತಂ**
**ಮೋಚಯನ್ ವ್ರಜಗವಾಂ ದಿನತಾಪಂ ॥ ೨೫**

ಶ್ರೀಶುಕ ಉವಾಚ—
**ಏವಂ ವ್ರಜಸ್ತ್ರಿಯೋ ರಾಜನ್ ಕೃಷ್ಣಲೀಲಾ ನು ಗಾಯತೀಃ ।**
**ರೇಮಿರೇಽಹಃಸು ತಚ್ಚಿತ್ತಾಸ್ತನ್ಮನಸ್ಕಾ ಮಹೋದಯಾಃ ॥ ೨೬**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚತ್ರಿಂಶಾಧ್ಯಾಯಃ



ದಂತೆ ವಿಶದವದನನಾದ ವನಮಾಲಿಯು ಮದದಿಂದ ಸ್ವಲ್ಪ ಚಲಿಸುವ ನೇತ್ರವುಳ್ಳವನಾಗಿ, ಗೆಳೆಯರಿಗೆ ಹೆಮ್ಮೆಯನ್ನುಂಟುಮಾಡುತ್ತ ಗಜರಾಜನ ನಡಿಗೆಯಿಂದ, ಇದೊ, ಬರುತ್ತಿದ್ದಾನೆ! ಹಸನ್ಮುಖನಾದ ಯದುಪತಿಯು ಗೋಕುಲದ ಗೋವುಗಳಂತಿರುವ ನಮ್ಮ ದುರ್ದಮವಾದ ದಿನತಾಪವನ್ನು ದಿನಾಂತದಲ್ಲಿ ಶಾಂತಗೊಳಿಸುತ್ತ ಚಂದ್ರನಂತೆ ಬರುತ್ತಿದ್ದಾನೆ!" ಎಂದು ಹೇಳುತ್ತಿದ್ದರು (೨೪–೨೫). ಈ ರೀತಿಯಲ್ಲಿ, ಪರೀಕ್ಷಿತರಾಜ, ಭಾಗ್ಯಶಾಲಿನಿಯರಾದ ಗೋಪಿಯರು ಕೃಷ್ಣಲೀಲೆಯನ್ನು ಕೊಂಡಾಡುತ್ತ ಕೃಷ್ಣಜೀವಿತೆಯರಾಗಿ ಅವನಲ್ಲಿಯೇ ನೆಟ್ಟ ಸಂಕಲ್ಪವುಳ್ಳವರಾಗಿ ಹಗಲಿನಲ್ಲಿಯೂ ವಿಹರಿಸುತ್ತಿದ್ದರು * (೨೬).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತೈದನೆಯ ಅಧ್ಯಾಯ



* ಈ ಅಧ್ಯಾಯದಲ್ಲಿ ಗೋಪೀಗೀತವು ಯುಗ್ಮದಲ್ಲಿ—ಎರಡೆರಡು ಶ್ಲೋಕಗಳಿಗೆ ಒಂದು ಗೀತವಾಗಿ ಮುಗಿಯುವುದರಿಂದ ಇದಕ್ಕೆ ಯುಗ್ಮಗೀತವೆಂದು ಹೆಸರಿದೆ.

# ಷಟ್ತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಅಥ ತರ್ಹ್ಯಾಗತೋ ಗೋಷ್ಠಮರಿಷ್ಟೋ ವೃಷಭಾಸುರಃ ।
ಮಹೀಂ ಮಹಾಕಕುತ್ಕಾಯಃ ಕಂಪಯನ್ ಖುರವಿಕ್ಷತಾಮ್ ॥ ೧

ರಂಭಮಾಣಃ ಖರತರಂ ಪದಾ ಚ ವಿಲಿಖನ್ ಮಹೀಮ್ ।
ಉದ್ಯಮ್ಯ ಪುಚ್ಛಂ ವಪ್ರಾಣಿ ವಿಷಾಣಾಗ್ರೇಣ ಚೋದ್ಧರನ್ ॥ ೨

ಕಿಂಚಿತ್ ಕಿಂಚಿಚ್ಛಕೃನ್ಮುಂಚನ್ ಮೂತ್ರಯನ್ ಸ್ತಬ್ಧಲೋಚನಃ ।
ಯಸ್ಯ ನಿರ್ಹ್ರಾದಿತೇನಾಂಗ ನಿಷ್ಠುರೇಣ ಗವಾಂ ನೃಣಾಮ್ ॥ ೩

ಪತಂತ್ಯಕಾಲತೋ ಗರ್ಭಾಃ ಸ್ರವಂತಿ ಸ್ಮ ಭಯೇನ ವೈ ।
ನಿರ್ವಿಶಂತಿ ಘನಾ ಯಸ್ಯ ಕಕುದ್ಯಚಲಶಂಕಯಾ ॥ ೪

## ಅಧ್ಯಾಯ ೩೬

ಅರಿಷ್ಟಾಸುರವಧೆ. ಕೃಷ್ಣನನ್ನು ಮಧುರೆಗೆ ಕರೆತರುವಂತೆ
ಕಂಸನು ಅಕ್ರೂರನಿಗೆ ಹೇಳುವುದು

ಹೀಗಿರುವಾಗ ಅರಿಷ್ಟನೆಂಬ ಅಸುರನು ಉನ್ನತವಾದ ಹೆಗಲುಳ್ಳ ಬೃಹತ್ಕಾಯದ ವೃಷಭಾಕೃತಿಯನ್ನು ತಳೆದು, ಖುರಗಳಿಂದ ಕೆರೆದು ಭೂಮಿಯನ್ನು ಅಲ್ಲಾಡಿಸುವನೋ ಎಂಬಂತೆ ಗೋಕುಲಕ್ಕೆ ಬಂದನು (೧). ಕರ್ಕಶವಾಗಿ ಹೂಂಕರಿಸುತ್ತ, ಕಾಲಿಂದ ನೆಲವನ್ನು ಸೀಳುತ್ತ, ಬಾಲವನ್ನೆತ್ತಿಕೊಂಡು ಕೊಂಬುಗಳಿಂದ ದಿಣ್ಣೆಗಳನ್ನು ಕಿತ್ತೆಸೆಯುತ್ತ ಬಂದನು (೨). ಆ ವೃಷಭಾಸುರನು ಆಗಾಗ ಸಗಣಿ ಹಾಕುತ್ತ, ಮೂತ್ರವನ್ನು ಹೊಯ್ಯುತ್ತ, ಕಣ್ಣರಳಿಸಿ ಕಠೋರವಾಗಿ ಗುಟುರು ಹಾಕಿದರೆ, ಅಬ್ಬ ! ಹಸುಗಳಿಗಾಗಲಿ ಹೆಂಗಸರಿಗಾಗಲಿ ಭೀತಿಯಿಂದ ಅಕಾಲದಲ್ಲಿ ಗರ್ಭನಿಸ್ರಾವವಾದೀತು ! ಅದರ ಹಿಳಲನ್ನು

ತಂ ತೀಕ್ಷ್ಣಶೃಂಗಮುದ್ವೀಕ್ಷ್ಯಗೋಪ್ಯೋ ಗೋಪಾಶ್ಚ ತತ್ರಸುಃ ।
ಪಶವೋ ದುದ್ರುವುರ್ಭೀತಾ ರಾಜನ್ ಸಂತ್ಯಜ್ಯ ಗೋಕುಲಮ್ ॥ ೫

ಕೃಷ್ಣ ಕೃಷ್ಣೇತಿ ತೇ ಸರ್ವೇ ಗೋವಿಂದಂ ಶರಣಂ ಯಯುಃ ।
ಭಗವಾನಪಿ ತದ್ ವೀಕ್ಷ್ಯ ಗೋಕುಲಂ ಭಯವಿದ್ರುತಮ್ ॥ ೬

ಮಾ ಭೈಷ್ಟೇತಿ ಗಿರಾऽऽಶ್ವಾಸ್ಯ ವೃಷಾಸುರಮುಪಾಹ್ವಯತ್ ।
ಗೋಪಾಲೈಃ ಪಶುಭಿರ್ಮಂದ ತ್ರಾಸಿತೈಃ ಕಿಮುಸತ್ತಮ ॥ ೭

ಬಲದರ್ಪಹಾಹಂ ದುಷ್ಟಾನಾಂ ತ್ವದ್ವಿಧಾನಾಂ ದುರಾತ್ಮನಾಮ್ ।
ಇತ್ಯಾಸ್ಫೋಟ್ಯಾಚ್ಯುತೋऽರಿಷ್ಟಂ ತಲಶಬ್ದೇನ ಕೋಪಯನ್ ॥ ೮

ಸಖ್ಯುರಂಸೇ ಭುಜಾಭೋಗಂ ಪ್ರಸಾರ್ಯಾವಸ್ಥಿತೋ ಹರಿಃ ।
ಸೋऽಪ್ಯೇವಂ ಕೋಪಿತೋऽರಿಷ್ಟಃ ಖುರೇಣಾವನಿಮುಲ್ಲಿಖನ್ ॥ ೯

---

ಬೆಟ್ಟವೆಂದು ಭಾವಿಸಿ ಮೋಡಗಳು ಬೀಡುಬಿಟ್ಟಾವು ! (೩–೪). ಚೂಪನೆಯ ಕೊಂಬುಗಳಿದ್ದ ಆ ಗೂಳಿಯನ್ನು ನೋಡಿ ಗೋಪಗೋಪಿಯರು ತತ್ತರಿಸಿ ಹೋದರು. ಪಶುಗಳು ಹೆದರಿ, ರಾಜ, ಗೋಕುಲವನ್ನು ಬಿಟ್ಟು ಓಡಿದವು (೫). "ಕೃಷ್ಣ ! ಕೃಷ್ಣ !" ಎಂದು ಕೂಗುತ್ತ ಎಲ್ಲರೂ ಗೋವಿಂದನಿಗೆ ಶರಣಾದರು. ಭಗವಂತನು ಭಯದಿಂದ ತತ್ತರಿಸಿದ ಗೋಕುಲವನ್ನು ನೋಡಿ "ಹೆದರಬೇಡಿರಿ" ಎಂದು ಧೈರ್ಯಹೇಳಿ ವೃಷಭಾಸುರನನ್ನು ಎದುರಿಸಿದನು. "ಎಲೆ ಮೂಢ, ಗೊಲ್ಲರನ್ನೂ ಗೋವುಗಳನ್ನೂ ಹೆದರಿಸುವುದರಿಂದ ಏನಾದೀತು? ದುರುಳ! ನಿನ್ನಂಥ ದುಷ್ಟರ–ದುರ್ಬುದ್ಧಿಯವರ ಬಲದರ್ಪಗಳನ್ನು ಅಡಗಿಸತಕ್ಕವನು ನಾನು!" ಎಂದು ಅಚ್ಯುತನು ನುಡಿದು ತನ್ನ ಭುಜವನ್ನು ಚಪ್ಪರಿಸಿ ಅರಿಷ್ಟನನ್ನು ಮತ್ತಷ್ಟು ರೇಗಿಸಿದನು (೬–೮). ಹೀಗೆ ಹೇಳಿ ಶ್ರೀಕೃಷ್ಣನು ತನ್ನ ಮಿತ್ರನ ಹೆಗಲಮೇಲೆ ಹಾವಿನ ದೇಹದಂತೆ ನೀಳವಾದ ತನ್ನ ಭುಜವನ್ನು ನೀಡಿ ನಿಂತುಕೊಂಡನು. ರೇಗಿಸಲ್ಪಟ್ಟ ಅರಿಷ್ಟಾಸುರನು ಗೊರಸಿನಿಂದ ನೆಲವನ್ನು ಸೀಳುತ್ತ, ನಿಮಿರಿದ ಬಾಲದಿಂದ ಮೇಘಮಂಡಲವನ್ನು ಅಲ್ಲಾಡಿಸುತ್ತ ಕ್ರೋಧದಿಂದ

ಉದ್ಯತ್ಪುಚ್ಛಭ್ರಮನ್ಮೇಘಃ ಕ್ರುದ್ಧಃ ಕೃಷ್ಣಮುಪಾದ್ರವತ್ ।
ಅಗ್ರನ್ಯಸ್ತವಿಷಾಣಾಗ್ರಃ ಸ್ತಬ್ಧಾಸೃಗ್ಲೋಚನೋಽಚ್ಯುತಮ್ ।
ಕಟಾಕ್ಷಿಪ್ಯಾದ್ರವತ್ತೂರ್ಣಮಿಂದ್ರಮುಕ್ತೋಽಶನಿರ್ಯಥಾ ॥ ೧೦

ಗೃಹೀತ್ವಾ ಶೃಂಗಯೋಸ್ತಂ ವಾ ಅಷ್ಟಾದಶ ಪದಾನಿ ಸಃ ।
ಪ್ರತ್ಯಪೋವಾಹ ಭಗವಾನ್ ಗಜಃ ಪ್ರತಿಗಜಂ ಯಥಾ ॥ ೧೧

ಸೋಽಪವಿದ್ಧೋ ಭಗವತಾ ಪುನರುತ್ಥಾಯ ಸತ್ವರಃ ।
ಆಪತತ್ ಸ್ವಿನ್ನಸರ್ವಾಂಗೋ ನಿಃಶ್ವಸನ್ ಕ್ರೋಧಮೂರ್ಚ್ಛಿತಃ ॥ ೧೨

ತಮಾಪತಂತಂ ಸ ನಿಗೃಹ್ಯ ಶೃಂಗಯೋಃ
ಪದಾ ಸಮಾಕ್ರಮ್ಯ ನಿಪಾತ್ಯ ಭೂತಲೇ ।
ನಿಷ್ಪೀಡಯಾಮಾಸ ಯಥಾಽಽರ್ದ್ರಮಂಬರಂ
ಕೃತ್ವಾ ವಿಷಾಣೇನ ಜಘಾನ ಸೋಽಪತತ್ ॥ ೧೩

ಅಸೃಗ್ ವಮನ್ ಮೂತ್ರಶಕೃತ್ ಸಮುತ್ಸೃಜನ್
ಕ್ಷಿಪಂಶ್ಚ ಪಾದಾನನವಸ್ಥಿತೇಕ್ಷಣಃ ।

---

ಕೃಷ್ಣನಮೇಲೆ ನುಗ್ಗಿದನು (೯). ಕೊಂಬುಗಳ ತುದಿಯನ್ನು ಮುಂದೆ ಚಾಚಿ, ಸ್ತಬ್ಧವಾದ ಕೆಂಗಣ್ಣುಗಳಿಂದ ಓರೆಯಾಗಿ ನೋಡುತ್ತ, ಇಂದ್ರನು ಸಿಡಿಸಿದ ಸಿಡಿಲಿನಂತೆ ರಭಸದಿಂದ ನುಗ್ಗಿಬಂದನು (೧೦). ಕೃಷ್ಣನು ಅವನ ಎರಡು ಕೊಂಬುಗಳನ್ನು ಹಿಡಿದು, ಆನೆಯು ಎದುರಾಳಿಯಾದ ಆನೆಯನ್ನು ತಳ್ಳುವಂತೆ, ವೃಷಭನನ್ನು ಹದಿನೆಂಟು ಹೆಜ್ಜೆಗಳಷ್ಟು ದೂರ ಹಿಂದಕ್ಕೆ ತಳ್ಳಿ ಉರುಳಿಸಿದನು (೧೧). ಹೀಗೆ ಉರುಳಿಸಲ್ಪಟ್ಟ ವೃಷಭಾಸುರನು ಮೇಲೆದ್ದು, ಮೈಯಲ್ಲಿ ಬೆವರು ಹರಿಯುತ್ತಿರಲು, ಕ್ರೋಧಾವಿಷ್ಟನಾಗಿ ಬುಸುಗುಟ್ಟುತ್ತ ಮತ್ತೆ ಓಡಿಬಂದನು. ಓಡುತ್ತ ಬಂದ ಅವನ ಕೊಂಬುಗಳನ್ನು ಅಚ್ಯುತನು ಹಿಡಿದು, ಕಾಲಿನಿಂದ ಒದೆದು ನೆಲದಮೇಲುರುಳಿಸಿ, ಒದ್ದೆಯ ಬಟ್ಟೆಯನ್ನು ಹಿಂಡುವಂತೆ ಅವನನ್ನು ಹಿಂಡಿ, ಕೊಂಬನ್ನು ಕಿತ್ತು ಅದರಿಂದಲೇ ಅಸುರನನ್ನು ಬಡಿದು ಉರುಳಿಸಿದನು (೧೨–೧೩). ವೃಷಭನು ನೆತ್ತರನ್ನು ಕಕ್ಕುತ್ತ, ಉಚ್ಚೆಸಗಣಿಗಳನ್ನು ವಿಸರ್ಜಿಸುತ್ತ, ಕಾಲುಗಳನ್ನು ಮಿಟುಕುತ್ತ, ಕಣ್ಣುಗಳನ್ನು ತಿರುಗಿಸುತ್ತ, ಕಷ್ಟದಿಂದ

ಜಗಾಮ ಕೃಚ್ಛ್ರಂ ನಿರ್ಋತೇರಥ ಸ್ವಯಂ
ಪುಷ್ಪೈಃ ಕಿರಂತೋ ಹರಿಮೀಡಿರೇ ಸುರಾಃ ॥ ೧೪

ಏವಂ ಕಕುದ್ಮಿನಂ ಹತ್ವಾ ಸ್ತೂಯಮಾನಃ ಸ್ವಜಾತಿಭಿಃ ।
ವಿವೇಶ ಗೋಷ್ಠಂ ಸಬಲೋ ಗೋಪೀನಾಂ ನಯನೋತ್ಸವಃ ॥ ೧೫

ಅರಿಷ್ಟೇ ನಿಹತೇ ದೈತ್ಯೇ ಕೃಷ್ಣೇನಾದ್ಭುತಕರ್ಮಣಾ ।
ಕಂಸಾಯಾಥಾಹ ಭಗವಾನ್ ನಾರದೋ ದೇವದರ್ಶನಃ ॥ ೧೬

ಯಶೋದಾಯಾಃ ಸುತಾಂ ಕನ್ಯಾಂ ದೇವಕ್ಯಾಃ ಕೃಷ್ಣಮೇವ ಚ ।
ರಾಮಂ ಚ ರೋಹಿಣೀಪುತ್ರಂ ವಸುದೇವೇನ ಬಿಭ್ಯತಾ ॥ ೧೭

ನ್ಯಸ್ತೌ ಸ್ವಮಿತ್ರೇ ನಂದೇ ವೈ ಯಾಭ್ಯಾಂ ತೇ ಪುರುಷಾ ಹತಾಃ ।
ನಿಶಮ್ಯ ತದ್ ಭೋಜಪತಿಃ ಕೋಪಾತ್ ಪ್ರಚಲಿತೇಂದ್ರಿಯಃ ॥ ೧೮

---

ಮೃತ್ಯುವಿನ ಮನೆಗೆ ಸಾಗಿದನು. ಇತ್ತ ದೇವತೆಗಳು ಹೂಮಳೆ ಸುರಿಸುತ್ತ ಶ್ರೀಕೃಷ್ಣನನ್ನು ಸ್ತುತಿಸಿದರು (೧೪). ಹೀಗೆ ವೃಷಭಾಸುರನನ್ನು ಸಂಹರಿಸಿ, ತನ್ನವರಿಂದ ಸ್ತುತಿಸಲ್ಪಡುತ್ತ, ಗೋಪಿಯರಿಗೆ ನಯನೋತ್ಸವವನ್ನುಂಟು ಮಾಡುತ್ತ ಗೋವಿಂದನು ಬಲರಾಮನೊಡನೆ ಗೋಕುಲವನ್ನು ಪ್ರವೇಶಿಸಿದನು (೧೫). ಅದ್ಭುತಕರ್ಮನಾದ ಶ್ರೀಕೃಷ್ಣನು ಅರಿಷ್ಟಾಸುರನನ್ನು ವಧಿಸಲಾಗಿ, ದಿವ್ಯಜ್ಞಾನಿಗಳಾದ ಭಗವಾನ್ ನಾರದಮುನಿಗಳು ಕಂಸನನ್ನು ಕಂಡು ಹೀಗೆಂದರು (೧೬): "ಅಯ್ಯಾ ಕಂಸ, ದೇವಕಿಯ ಅಷ್ಟಮಗರ್ಭದ ಕನ್ಯೆಯೆಂದು ಯಾರನ್ನು ತಿಳಿದಿದ್ದೆಯೋ ಅವಳು ಯಶೋದೆಯ ಮಗಳು! ಯಶೋದೆಯ ಮಗನೆಂದು ಪ್ರಸಿದ್ಧನಾದ ಕೃಷ್ಣನು ವಾಸ್ತವವಾಗಿ ದೇವಕಿಯ ಮಗ! ರಾಮನು ವಸುದೇವಪತ್ನಿಯಾದ ರೋಹಿಣಿಯ ಮಗ. ನಿನಗೆ ಹೆದರಿದ ವಸುದೇವನು ತನ್ನ ಮಿತ್ರನಾದ ನಂದಗೋಪನಲ್ಲಿ ಅವರನ್ನು ನಿಕ್ಷೇಪವಾಗಿಟ್ಟದ್ದನು! ಆ ರಾಮಕೃಷ್ಣರೇ ನಿನ್ನ ಕಡೆಯವರನ್ನು ಕೊಂದಿದ್ದಾರೆ!" ಎಂದು ತಿಳಿಸಿದರು (೧೭). ಅದನ್ನು ಕೇಳಿದೊಡನೆ ಭೋಜಪತಿಯಾದ ಕಂಸನು ಕೆರಳಿದನು. ಅವನ ಸಕಲೇಂದ್ರಿಯಗಳೂ ವಿಚಲಿತವಾದವು. ವಸುದೇವನನ್ನು

**ನಿಶಾತಮುಸಿಮಾದತ್ತ ವಸುದೇವಜಿಘಾಂಸಯಾ ।**
**ನಿವಾರಿತೋ ನಾರದೇನ ತತ್ಸುತೌ ಮೃತ್ಯುಮಾತ್ಮನಃ ॥ ೧೯**

**ಜ್ಞಾತ್ವಾ ಲೋಹಮಯೈಃ ಪಾಶೈರ್ಬಬಂಧ ಸಹ ಭಾರ್ಯಯಾ ।**
**ಪ್ರತಿಯಾತೇ ತು ದೇವರ್ಷೌ ಕಂಸ ಆಭಾಷ್ಯ ಕೇಶಿನಮ್ ॥ ೨೦**

**ಪ್ರೇಷಯಾಮಾಸ ಹನ್ಯೇತಾಂ ಭವತಾ ರಾಮಕೇಶವೌ ।**
**ತತೋ ಮುಷ್ಟಿಕಚಾಣೂರಶಲತೋಶಲಕಾದಿಕಾನ್ ॥ ೨೧**

**ಅಮಾತ್ಯಾನ್ ಹಸ್ತಿಪಾಂಶ್ಚೈವ ಸಮಾಹೂಯಾಹ ಭೋಜರಾಟ್ ।**
**ಭೋ ಭೋ ನಿಶಮ್ಯತಾಮೇತದ್ ವೀರಚಾಣೂರಮುಷ್ಟಿಕೌ ॥ ೨೨**

**ನಂದವ್ರಜೇ ಕಿಲಾಸಾತೇ ಸುತಾವಾನಕದುಂದುಭೇಃ ।**
**ರಾಮಕೃಷ್ಣೌ ತತೋ ಮಹ್ಯಂ ಮೃತ್ಯುಃ ಕಿಲ ನಿದರ್ಶಿತಃ ॥ ೨೩**

---

ಕೊಲ್ಲಬೇಕೆಂದು ಹರಿತವಾದ ಕತ್ತಿಯನ್ನು ಹಿರಿದನು (೧೮). (ವಸುದೇವನನ್ನು ಕೊಂದರೆ ರಾಮಕೃಷ್ಣರು ಓಡಿಹೋಗಬಹುದು. ಆದ್ದರಿಂದ ಆ ಹುಡುಗರನ್ನೇ ಉಪಾಯದಿಂದ ಕೊಲ್ಲುವುದು ಯುಕ್ತ!–ಎಂದು ಹೇಳಿ) ನಾರದರು ಕಂಸನನ್ನು ತಡೆದರು. ವಸುದೇವನ ಮಕ್ಕಳು ತನಗೆ ಮೃತ್ಯುವೆಂದರಿತ ಕಂಸನು ವಸುದೇವನನ್ನೂ ಅವನ ಪತ್ನಿಯಾದ ದೇವಕಿಯನ್ನೂ ಕಬ್ಬಿಣದ ಸಂಕೋಲೆಗಳಿಂದ ಬಂಧಿಸಿದನು (೧೯). ದೇವರ್ಷಿಗಳಾದ ನಾರದರು ನಿರ್ಗಮಿಸಲು, ಕಂಸನು ಕೇಶಿಯೆಂಬ ದೈತ್ಯನೊಡನೆ ಮಾತನಾಡಿ, ರಾಮನನ್ನೂ ಕೃಷ್ಣನನ್ನೂ ನೀನು ವಧಿಸೆಂದು ತಿಳಿಸಿ ಅವನನ್ನು ಕಳಿಸಿದನು (೨೦). ಅನಂತರ ಭೋಜೇಂದ್ರನಾದ ಕಂಸನು ಮುಷ್ಟಿಕ, ಚಾಣೂರ, ಶಲ, ತೋಶಲ—ಮುಂತಾದ ಮಲ್ಲರನ್ನೂ ಮಂತ್ರಿಗಳನ್ನೂ ಮಾವುತರನ್ನೂ ಕರೆಸಿ ಹೇಳಿದನು (೨೧): "ಎಲೈ ವೀರರೆ, ಚಾಣೂರಮುಷ್ಟಿಕರೆ, ಕೇಳಿರಿ. ವಸುದೇವನ ಮಕ್ಕಳಾದ ರಾಮ, ಕೃಷ್ಣ–ಎಂಬಿಬ್ಬರು ನಂದಗೋಪನ ವ್ರಜದಲ್ಲಿ ಇದ್ದಾರಂತೆ. ಅವರಿಂದ ನನಗೆ ಮೃತ್ಯು ಒದಗುವುದೆಂದು ತಿಳಿಸಲಾಗಿದೆ. ಅವರಿಬ್ಬರು ಇಲ್ಲಿಗೆ ಬಂದಾಗ ನೀವು ಜಟ್ಟಿಕಾಳಗವನ್ನಾಡಿ ಅವರನ್ನು ಕೊಂದುಹಾಕಿರಿ! (೨೨–೨೩).

**ಭವದ್ಭ್ಯಾಮಿಹ ಸಂಪ್ರಾಪ್ತೌ ಹನ್ಯೇತಾಂ ಮಲ್ಲಲೀಲಯಾ ।**
**ಮಂಚಾಃ ಕ್ರಿಯಂತಾಂ ವಿವಿಧಾ ಮಲ್ಲರಂಗಪರಿಶ್ರಿತಾಃ ।**
**ಪೌರಾ ಜಾನಪದಾಃ ಸರ್ವೇ ಪಶ್ಯಂತು ಸ್ವೈರಸಂಯುಗಮ್ ॥ ೨೪**

**ಮಹಾಮಾತ್ರ ತ್ವಯಾ ಭದ್ರ ರಂಗದ್ವಾರ್ಯುಪನೀಯತಾಮ್ ।**
**ದ್ವಿಪಃ ಕುವಲಯಾಪೀಡೋ ಜಹಿ ತೇನ ಮಮಾಹಿತೌ ॥ ೨೫**

**ಆರಭ್ಯತಾಂ ಧನುರ್ಯಾಗಶ್ಚತುರ್ದಶ್ಯಾಂ ಯಥಾವಿಧಿ ।**
**ವಿಶಸಂತು ಪಶೂನ್ ಮೇಧ್ಯಾನ್ ಭೂತರಾಜಾಯ ಮೀಢುಷೇ ॥ ೨೬**

**ಇತ್ಯಾಜ್ಞಾಪ್ಯಾರ್ಥತಂತ್ರಜ್ಞ ಆಹೂಯ ಯದುಪುಂಗವಮ್ ।**
**ಗೃಹೀತ್ವಾ ಪಾಣಿನಾ ಪಾಣಿಂ ತತೋಽಕ್ರೂರಮುವಾಚ ಹ ॥ ೨೭**

**ಭೋ ಭೋ ದಾನಪತೇ ಮಹ್ಯಂ ಕ್ರಿಯತಾಂ ಮೈತ್ರಮಾದೃತಃ ।**
**ನಾನ್ಯಸ್ತ್ವತ್ತೋ ಹಿತತಮೋ ವಿದ್ಯತೇ ಭೋಜವೃಷ್ಣಿಷು ॥ ೨೮**

---

ಮಲ್ಲಯುದ್ಧಕ್ಕಾಗಿ ರಂಗಸ್ಥಳವನ್ನು ನಿರ್ಮಿಸಿ ನಾನಾಬಗೆಯ ಉತ್ತುಂಗ ಪೀಠಗಳನ್ನು ಸ್ಥಾಪಿಸತಕ್ಕದ್ದು. ಎಲ್ಲ ಪೌರರೂ ರಾಷ್ಟ್ರದ ಪ್ರಜೆಗಳೂ ಒಂದು ಸ್ವಚ್ಛಂದದ ಈ ಕುಸ್ತಿಯನ್ನು ನೋಡಲಿ ! (೨೪). ಭದ್ರ–ಮಹಾಮಾತ್ರ,* ಕುವಲಯಾಪೀಡವೆಂಬ ಆನೆಯನ್ನು ರಂಗದ್ವಾರದಲ್ಲಿ ತಂದು ನಿಲ್ಲಿಸಿರು. ನನ್ನ ವೈರಿಗಳಾದ ಅವರಿಬ್ಬರನ್ನು ಆನೆಯಿಂದ ಕೊಲ್ಲಿಸು (೨೫). ಚತುರ್ದಶಿಯ ದಿನ ಧನುರ್ಯಾಗವು ವಿಧಿವತ್ತಾಗಿ ಆರಂಭವಾಗಲಿ. ವರದನಾದ ಭೂತರಾಜನಿಗೆ ಅರ್ಹವಾದ ಪಶುಗಳನ್ನು ಬಲಿಯಾಗಿ ಅರ್ಪಿಸತಕ್ಕದ್ದು" (೨೬). ಈ ಪ್ರಕಾರವಾಗಿ ಅರ್ಥತಂತ್ರಜ್ಞನಾದ ಕಂಸನು ಆಜ್ಞಾಪಿಸಿದನು. ಬಳಿಕ ಯದುಪುಂಗವನಾದ ಅಕ್ರೂರನನ್ನು ಕರೆದು ಅವನ ಕೈಹಿಡಿದುಕೊಂಡು ಹೀಗೆಂದನು: "ಅಯ್ಯಾ ದಾನಪತಿ–ಅಕ್ರೂರ, ನನಗೋಸ್ಕರ ಒಂದು ಸ್ನೇಹಕಾರ್ಯವನ್ನು ಮನಸ್ಸಿಟ್ಟು ಮಾಡಬೇಕು. ಭೋಜವೃಷ್ಣಿಕುಲಗಳಲ್ಲಿ ನನಗೆ ನಿನಗಿಂತ ಹೆಚ್ಚಿನ ಹಿತಕಾರಿ ಮತ್ತೊಬ್ಬನಿಲ್ಲ (೨೭–೨೮).

---

* ಮಹಾಮಾತ್ರ = ಮಾವುತರ ಅಧಿಪತಿ.

ಅತಸ್ತ್ವಾಮಾಶ್ರಿತಃ ಸೌಮ್ಯ ಕಾರ್ಯಗೌರವಸಾಧನಮ್ ।
ಯಥೇಂದ್ರೋ ವಿಷ್ಣುಮಾಶ್ರಿತ್ಯ ಸ್ವಾರ್ಥಮಧ್ಯಗಮದ್ ವಿಭುಃ ॥ ೨೯

ಗಚ್ಛ ನಂದವ್ರಜಂ ತತ್ರ ಸುತಾವಾನಕದುಂದುಭೇಃ ।
ಆಸಾತೇ ತಾವಿಹಾನೇನ ರಥೇನಾನಯ ಮಾ ಚಿರಮ್ ॥ ೩೦

ನಿಸೃಷ್ಟಃ ಕಿಲ ಮೇ ಮೃತ್ಯುರ್ದೇವೈರ್ವೈಕುಂಠಸಂಶ್ರಯೈಃ ।
ತಾವಾನಯ ಸಮಂ ಗೋಪೈರ್ನಂದಾದ್ಯೈಃ ಸಾಭ್ಯುಪಾಯನೈಃ ॥ ೩೧

ಘಾತಯಿಷ್ಯ ಇಹಾನೀತೌ ಕಾಲಕಲ್ಪೇನ ಹಸ್ತಿನಾ ।
ಯದಿ ಮುಕ್ತೌ ತತೋ ಮಲ್ಲೈರ್ಘಾತಯೇ ವೈದ್ಯುತೋಪಮೈಃ ॥

ತಯೋರ್ನಿಹತಯೋಸ್ತಪ್ತಾನ್ ವಸುದೇವಪುರೋಗಮಾನ್ ।
ತದ್ಬಂಧೂನ್ ನಿಹನಿಷ್ಯಾಮಿ ವೃಷ್ಣಿಭೋಜದಶಾರ್ಹಕಾನ್ ॥ ೩೩

ಉಗ್ರಸೇನಂ ಚ ಪಿತರಂ ಸ್ಥವಿರಂ ರಾಜ್ಯಕಾಮುಕಮ್ ।
ತದ್ಭ್ರಾತರಂ ದೇವಕಂ ಚ ಯೇ ಚಾನ್ಯೇ ವಿದ್ವಿಷೋ ಮಮ ॥ ೩೪

---

ಆದ್ದರಿಂದ, ಸೌಮ್ಯ, ಒಂದು ಕಾರ್ಯಗೌರವವನ್ನು ಸಾಧಿಸತಕ್ಕವನೆಂದು ನಿನ್ನನ್ನು ಆಶ್ರಯಿಸಿದ್ದೇನೆ. ಪ್ರಭುವಾದ ಇಂದ್ರನು ಉಪೇಂದ್ರನಾದ ವಿಷ್ಣುವನ್ನಾಶ್ರಯಿಸಿ ಇಷ್ಟಾರ್ಥವನ್ನು ಸಾಧಿಸಿಕೊಂಡಂತೆ ಇದು (೨೯). ನೀನು ನಂದಗೋಪನ ಗೋಕುಲಕ್ಕೆ ಹೋಗು. ಅಲ್ಲಿ ವಸುದೇವನ ಇಬ್ಬರು ಮಕ್ಕಳಿರುವರಷ್ಟೆ, ಅವರನ್ನು ಈ ರಥದಲ್ಲಿ ಕರೆದುಕೊಂಡು ಬಾ, ತಡಮಾಡಬೇಡ (೩೦). ದೇವತೆಗಳು ವಿಷ್ಣುವನ್ನಾಶ್ರಯಿಸಿ ಅವರಿಬ್ಬರನ್ನು ನನ್ನ ಮೃತ್ಯುವೆಂದು ಸೃಜಿಸಿದ್ದಾರಂತೆ. ಕಾಣಿಕೆಯೊಡನೆ ಬರಬೇಕೆಂದು ನಂದಾದಿ ಗೋಪರಿಗೆ ತಿಳಿಸಿ ಅವರೊಡನೆ ಆ ಹುಡುಗರನ್ನು ಕರೆದುಕೊಂಡು ಬಾ (೩೧). ಅವರಿಬ್ಬರನ್ನು ಕರೆತಂದರೆ, ಯಮನಂತಿರುವ ಆನೆಯಿಂದ ಅವರನ್ನು ಕೊಲ್ಲಿಸುವೆನು! ಒಂದು ವೇಳೆ ಅದರಿಂದ ತಪ್ಪಿಸಿಕೊಂಡರೆ, ಸಿಡಿಲುಗಳಂತೆರಗುವ ಜಟ್ಟಿಗಳಿಂದ ಅವರನ್ನು ವಿಧ್ವಂಸಗೊಳಿಸುವೆನು! (೩೨). ಆ ಇಬ್ಬರನ್ನು ವಧಿಸಿದ ಮೇಲೆ, ವೃಷ್ಣಿ ಭೋಜ ದಶಾರ್ಹಕುಲದಲ್ಲಿ ಅವರ ಬಂಧುಗಳಾದ ವಸುದೇವಾದಿಗಳೆಲ್ಲರನ್ನೂ ಹಿಂಸೆಗೆ ಒಳಪಡಿಸಿ ಕೊಲ್ಲುವೆನು! (೩೩). ತಂದೆಯೆನಿಸಿರುವ ರಾಜ್ಯಕಾಮುಕನಾದ ಮುದಿಗೊಡ್ಡು ಉಗ್ರಸೇನನನ್ನೂ ಅವನ

**ತತಶ್ಚೈಷಾ ಮಹೀ ಮಿತ್ರ ಭವಿತ್ರೀ ನಷ್ಟಕಂಟಕಾ ।**
**ಜರಾಸಂಧೋ ಮಮ ಗುರುರ್ದ್ವಿವಿದೋ ದಯಿತಃ ಸಖಾ ॥ ೩೫**

**ಶಂಬರೋ ನರಕೋ ಬಾಣೋ ಮಯ್ಯೇವ ಕೃತಸೌಹೃದಾಃ ।**
**ತೈರಹಂ ಸುರಪಕ್ಷೀಯಾನ್ ಹತ್ವಾ ಭೋಕ್ಷ್ಯೇ ಮಹೀಂ ನೃಪಾನ್ ॥**

**ಏತಜ್ಜ್ಞಾತ್ವಾಽಽನಯ ಕ್ಷಿಪ್ರಂ ರಾಮಕೃಷ್ಣಾವಿಹಾರ್ಭಕೌ ।**
**ಧನುರ್ಮಖನಿರೀಕ್ಷಾರ್ಥಂ ದ್ರಷ್ಟುಂ ಯದುಪುರಶ್ರಿಯಮ್ ॥ ೩೭**

ಅಕ್ರೂರ ಉವಾಚ—

**ರಾಜನ್ ಮನೀಷಿತಂ ಸಧ್ರ್ಯಕ್ ತವ ಸ್ವಾವದ್ಯಮಾರ್ಜನಮ್ ।**
**ಸಿದ್ಧ್ಯಸಿದ್ಧ್ಯೋಃ ಸಮಂ ಕುರ್ಯಾದ್ ದೈವಂ ಹಿ ಫಲಸಾಧನಮ್ ॥**

**ಮನೋರಥಾನ್ ಕರೋತ್ಯುಚ್ಚೈರ್ಜನೋ ದೈವಹತಾನಪಿ ।**
**ಯುಜ್ಯತೇ ಹರ್ಷಶೋಕಾಭ್ಯಾಂ ತಥಾಪ್ಯಾಜ್ಞಾಂ ಕರೋಮಿ ತೇ ॥**

---

ಸೋದರ ದೇವಕನನ್ನೂ ನನ್ನ ವೈರಿಗಳಾಗಿ ಇನ್ನು ಯಾರು ಯಾರಿದ್ದಾರೋ ಅವರೆಲ್ಲರನ್ನೂ ವಧಿಸುವೆನು (೩೪). ಆಮೇಲೆ, ಮಿತ್ರ, ಈ ಭೂಮಿಯು ನಿಷ್ಕಂಟಕವಾಗುವುದು. ಜರಾಸಂಧನು ನನಗೆ ಗುರು–ಮಾವ; ದ್ವಿವಿದನು ಪ್ರಿಯಸಖ. ಶಂಬರ, ನರಕ, ಬಾಣ–ಇವರೆಲ್ಲರೂ ನನ್ನಲ್ಲಿ ಸೌಹಾರ್ದವನ್ನಿಟ್ಟಿದ್ದಾರೆ. ಅವರ ಸಹಾಯದಿಂದ ನಾನು ದೇವಪಕ್ಷಕ್ಕೆ ಸೇರಿದ ರಾಜರೆಲ್ಲರನ್ನೂ ನಿರ್ಮೂಲಮಾಡಿ ಭೂಮಂಡಲವನ್ನು ಭೋಗಿಸುವೆನು! (೩೫–೩೬). ಇದೆಲ್ಲವನ್ನೂ ಗಮನಿಸಿ, ಹುಡುಗರಾದ ರಾಮಕೃಷ್ಣರನ್ನು ಶೀಘ್ರವಾಗಿ ಕರೆದುಕೊಂಡು ಬಾ. ಧನುರ್ಯಾಗವನ್ನು ನೋಡುವುದಕ್ಕೂ ಯದುಪುರವಾದ ಮಧುರೆಯ ಸೊಬಗನ್ನು ವೀಕ್ಷಿಸುವುದಕ್ಕೂ ಬರಬೇಕೆಂದು ಹೇಳು" ಎಂದನು (೩೭). ಆಗ ಅಕ್ರೂರನು "ಮಹಾರಾಜ, ವಿಪತ್ತನ್ನು ಪರಿಹರಿಸಿಕೊಳ್ಳಬೇಕೆಂಬ ನಿನ್ನ ಆಲೋಚನೆ ಸಮೀಚೀನವಾಗಿದೆ. ಸಿದ್ಧಿಸಲಿ–ಸಿದ್ಧಿಸದಿರಲಿ, ಅಭಿನಿವೇಶವಿಲ್ಲದೆ ಸಮಬುದ್ಧಿಯಿಂದ ಆಚರಿಸಬೇಕು. ದೈವವೇ ಫಲವನ್ನು ಕೊಡತಕ್ಕುದು (೩೮). ಮನುಷ್ಯನು ದೈವಹತವಾದ ದೊಡ್ಡದೊಡ್ಡ ಮನೋರಥಗಳನ್ನು ಸಂಕಲ್ಪಿಸಿಕೊಳ್ಳುತ್ತಾನೆ. ಆದ್ದರಿಂದಲೇ ಹರ್ಷಶೋಕಗಳಿಗೆ ಒಳಗಾಗುತ್ತಾನೆ. ಆದರೂ ನಿನ್ನ ಆಜ್ಞೆಯನ್ನು ನಡೆಸುವೆನು" ಎಂದನು (೩೯).

ಶ್ರೀಶುಕ ಉವಾಚ—

ಏವಮಾದಿಶ್ಯ ಚಾಕ್ರೂರಂ ಮಂತ್ರಿಣಶ್ಚ ವಿಸೃಜ್ಯ ಸಃ ।
ಪ್ರವಿವೇಶ ಗೃಹಂ ಕಂಸಸ್ತಥಾಕ್ರೂರಃ ಸ್ವಮಾಲಯಮ್ ॥ ೪೦

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಟ್‌ತ್ರಿಂಶಾಧ್ಯಾಯಃ

---

## ಸಪ್ತತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಕೇಶೀ ತು ಕಂಸಪ್ರಹಿತಃ ಖುರೈರ್ಮಹೀಂ
ಮಹಾಹಯೋ ನಿರ್ಜರಯನ್ ಮನೋಜವಃ ।
ಸಟಾವಧೂತಾಭ್ರವಿಮಾನಸಂಕುಲಂ
ಕುರ್ವನ್ ನಭೋ ಹೇಷಿತಭೀಷಿತಾಖಿಲಃ ॥ ೧

---

ಕಂಸನು ಹೀಗೆ ಆಜ್ಞೆಯನ್ನಿತ್ತು ಅಕ್ರೂರನನ್ನೂ ಮಂತ್ರಿಗಳನ್ನೂ ವಿಸರ್ಜಿಸಿ ಅರಮನೆಯೊಳಗೆ ಹೋದನು. ಇತ್ತ ಅಕ್ರೂರನು ತನ್ನ ಮನೆಗೆ ತೆರಳಿದನು (೪೦).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತಾರನೆಯ ಅಧ್ಯಾಯ

---

## ಅಧ್ಯಾಯ ೩೭

ಕೇಶಿವಧೆ, ನಾರದರ ಸ್ತುತಿ, ವ್ಯೋಮಾಸುರಸಂಹಾರ

ಕಂಸನಿಂದ ಪ್ರೇಷಿತನಾದ ಕೇಶಿಯೆಂಬ ಅಸುರನು ದೊಡ್ಡ ಅಶ್ವದ ರೂಪವನ್ನು ತಳೆದು, ಖುರಗಳಿಂದ ಮಹೀತಳವನ್ನು ಸೀಳುತ್ತ, ಕೇಸರಗಳಿಂದ ಆಕಾಶದಲ್ಲಿರುವ ಮೋಡಗಳನ್ನೂ ವಿಮಾನಗಳನ್ನೂ ತಳ್ಳುತ್ತ, ಕೆನೆತದಿಂದ ಸಕಲರಿಗೂ ಭೀತಿಯನ್ನುಂಟುಮಾಡುತ್ತ, ಮನೋವೇಗದಿಂದ ಗೋಕುಲಕ್ಕೆ

ವಿಶಾಲನೇತ್ರೋ ವಿಕಟಾಸ್ಯಕೋಟರೋ
ಬೃಹದ್ಗಲೋ ನೀಲಮಹಾಂಬುದೋಪಮಃ ।
ದುರಾಶಯಃ ಕಂಸಹಿತಂ ಚಿಕೀರ್ಷುರ್-
ವ್ರಜಂ ಸ ನಂದಸ್ಯ ಜಗಾಮ ಕಂಪಯನ್ ॥ ೨

ತಂ ತ್ರಾಸಯಂತಂ ಭಗವಾನ್ ಸ್ವಗೋಕುಲಂ
ತದ್ಧೇಷಿತೈರ್ವಾಲವಿಘೂರ್ಣಿತಾಂಬುದಮ್ ।
ಆತ್ಮಾನಮಾಜೌ ಮೃಗಯಂತಮಗ್ರಣೀ-
ರುಪಾಹ್ವಯತ್ ಸ ವ್ಯನದನ್ಮೃಗೇಂದ್ರವತ್ ॥ ೩

ಸ ತಂ ನಿಶಾಮ್ಯಾಭಿಮುಖೋ ಮುಖೇನ ಖಂ
ಪಿಬನ್ನಿವಾಭ್ಯದ್ರವದತ್ಯಮರ್ಷಣಃ ।
ಜಘಾನ ಪದ್ಭ್ಯಾಮರವಿಂದಲೋಚನಂ
ದುರಾಸದಶ್ಚಂಡಜವೋ ದುರತ್ಯಯಃ ॥ ೪

---

ಬಂದನು (೧). "ಅಶ್ವರೂಪದ ಅಸುರನಿಗೆ ದೊಡ್ಡ ಕಣ್ಣುಗಳೂ, ವಿಕಟವಾದ ಮುಖವೆಂಬ ಪೊಟರೆಯೂ, ಬೃಹತ್ತಾದ ಕತ್ತೂ ಇದ್ದವು. ಕಪ್ಪಾದ ಮಹಾ ಮೇಘದಂತೆ ಕಾಣುತ್ತಿದ್ದನು. ದುರುಳನಾದ ಆ ಕೇಶಿಯು ಕಂಸನಿಗೆ ಹಿತವನ್ನು ಮಾಡುವ ಉದ್ದೇಶದಿಂದ ಗೋಕುಲವನ್ನು ನಡುಗಿಸುತ್ತ ಅಲ್ಲಿಗೆ ಬಂದನು"* (೨). ಶ್ರೀಕೃಷ್ಣನು ಅವನನ್ನು ಕಂಡನು. ಕೆನೆತಗಳಿಂದ ಗೋಕುಲವನ್ನು ಹೆದರಿಸುತ್ತ, ಬಾಲದ ಚಾಲನೆಯಿಂದ ಮೋಡಗಳನ್ನು ಅಲುಗಿಸುತ್ತ, ಹೊಡೆದಾಟಕ್ಕಾಗಿ ತನ್ನನ್ನು ಅರಸುತ್ತಿದ್ದ ಅಶ್ವವನ್ನು ನೋಡಿ ಅದರೆದುರಿಗೆ ನಿಂತು, ತನ್ನ ಬಳಿಗೆ ಬರುವಂತೆ ಆಹ್ವಾನಿಸಿದನು. ಒಡನೆಯೇ ಅಸುರನು ಸಿಂಹದಂತೆ ಗರ್ಜಿಸಿದನು (೩). ಎದುರಿಗೆ ನಿಂತ ಗೋವಿಂದನನ್ನು ನೋಡಿ ಅತ್ಯುಗ್ರ ಕೋಪದ ಅಶ್ವಾಸುರನು ಗಗನವನ್ನು ಕುಡಿಯುವಂತೆ ಬಾಯ್ದೆರೆದು, ಹಿಡಿಯಲೂ ತಡೆಯಲೂ ಅಸಾಧ್ಯವಾದ ರೀತಿಯಲ್ಲಿ ಚಂಡವೇಗದಿಂದ ಓಡಿಬಂದು

---

* ಶ್ರೀಧರೀಯ ವ್ಯಾಖ್ಯಾನದ ಪ್ರಕಾರ ಈ ಎರಡನೆಯ ಶ್ಲೋಕವು ಮೂಲದಲ್ಲಿಲ್ಲ.

ತದ್ ವಂಚಯಿತ್ವಾ ತಮಧೋಕ್ಷಜೋ ರುಷಾ
ಪ್ರಗೃಹ್ಯ ದೋರ್ಭ್ಯಾಂ ಪರಿವಿಧ್ಯ ಪಾದಯೋಃ ।
ಸಾವಜ್ಞಮುತ್ಸೃಜ್ಯ ಧನುಃಶತಾಂತರೇ
ಯಥೋರಗಂ ತಾರ್ಕ್ಷ್ಯಸುತೋ ವ್ಯವಸ್ಥಿತಃ ॥ ೫

ಸ ಲಬ್ಧಸಂಜ್ಞಃ ಪುನರುತ್ಥಿತೋ ರುಷಾ
ವ್ಯಾದಾಯ ಕೇಶೀ ತರಸಾಽಽಪತದ್ಧರಿಮ್ ।
ಸೋಽಪ್ಯಸ್ಯ ವಕ್ತ್ರೇ ಭುಜಮುತ್ತರಂ ಸ್ಮಯನ್
ಪ್ರವೇಶಯಾಮಾಸ ಯಥೋರಗಂ ಬಿಲೇ ॥ ೬

ದಂತಾ ನಿಪೇತುರ್ಭಗವದ್ಭುಜಸ್ಪೃಶ-
ಸ್ತೇ ಕೇಶಿನಸ್ತಪ್ತಮಯಃಸ್ಪೃಶೋ ಯಥಾ ।
ಬಾಹುಶ್ಚ ತದ್ದೇಹಗತೋ ಮಹಾತ್ಮನೋ
ಯಥಾಽಽಮಯಃ ಸಂವವೃಧೇ ಉಪೇಕ್ಷಿತಃ ॥ ೭

ಸಮೇಧಮಾನೇನ ಸ ಕೃಷ್ಣಬಾಹುನಾ
ನಿರುದ್ಧವಾಯುಶ್ಚರಣಾಂಶ್ಚ ವಿಕ್ಷಿಪನ್ ।

---

ಅರವಿಂದನೇತ್ರನನ್ನು (ಹಿಂಗಾಲುಗಳಿಂದ) ಒದೆದನು (೪). ಆದರೆ ಅಧೋಕ್ಷಜನು ಅವನ ಒದೆತವನ್ನು ತಪ್ಪಿಸಿಕೊಂಡು ಕುಪಿತನಾಗಿ, ಅಶ್ವದ ಎರಡು ಹಿಂಗಾಲುಗಳನ್ನು ಮುಷ್ಟಿಗಳಿಂದ ಲೆಕ್ಕಿಸದೆ ಹಿಡಿದು, ಗರುಡನು ಸರ್ಪವನ್ನೆತ್ತುವಂತೆ ಎತ್ತಿ ಗಿರ್ರನೆ ತಿರುಗಿಸಿ, ನೂರು ಬಿಲ್ಲುಗಳ ದೂರ ಎಸೆದು, ತನ್ನ ಸ್ಥಳದಲ್ಲಿ ನಿಂತುಕೊಂಡನು (೫). ಮೂರ್ಛಿತನಾದ ಕೇಶಿಯು ಎಚ್ಚೆತ್ತು ಎದ್ದು ಕೋಪದಿಂದ ಬಾಯ್ದೆರೆದು ಮತ್ತೆ ಶ್ರೀಕೃಷ್ಣನ ಕಡೆಗೆ ವೇಗದಿಂದ ಧಾವಿಸಿ ಬಂದನು. ಶ್ರೀಕೃಷ್ಣನು ಮುಗುಳ್ನಗೆ ಬೀರುತ್ತ ಅವನ ಬಾಯಲ್ಲಿ ತನ್ನ ಎಡ ತೋಳನ್ನು, ಬಿಲದಲ್ಲಿ ಸರ್ಪವು ತೂರುವಂತೆ ತೂರಿಸಿದನು !(೬). ಭಗವಂತನ ತೋಳನ್ನು ಕಚ್ಚಲು ಯತ್ನಿಸಿದ ಕೇಶಿಯ ಹಲ್ಲುಗಳು, ಉರಿಯುವ ಕಬ್ಬಿಣವನ್ನು ಮುಟ್ಟಿದಂತಾಗಿ ಉದುರಿಹೋದವು ! ಅವನ ದೇಹದಲ್ಲಿ ತೂರಿದ ಆ ಮಹಾತ್ಮನ ತೋಳು, ಉಪೇಕ್ಷಿತವಾದ ಜಲೋದರರೋಗದಂತೆ ಉಬ್ಬಿತು (೭). ಶ್ರೀಕೃಷ್ಣನ ಬಾಹು ಉಬ್ಬುತ್ತಿರಲು ಅಶ್ವದ ಉಸಿರು ಕಟ್ಟಿತು. ಅದು

ಪ್ರಸ್ವಿನ್ನಗಾತ್ರಃ ಪರಿವೃತ್ತಲೋಚನಃ
ಪಪಾತ ಲೇಂಡಂ ವಿಸೃಜನ್ ಕ್ಷಿತೌ ವ್ಯಸುಃ ॥ ೮

ತದ್ದೇಹತಃ ಕರ್ಕಟಿಕಾಫಲೋಪಮಾದ್
ವ್ಯಸೋರಪಾಕೃಷ್ಯ ಭುಜಂ ಮಹಾಭುಜಃ ।
ಅವಿಸ್ಮಿತೋಽಯತ್ನಹತಾರಿರುತ್ಸ್ಮಯೈಃ
ಪ್ರಸೂನವರ್ಷೈರ್ದಿವಿಷದ್ಭಿರೀಡಿತಃ ॥ ೯

ದೇವರ್ಷಿರುಪಸಂಗಮ್ಯ ಭಾಗವತಪ್ರವರೋ ನೃಪ ।
ಕೃಷ್ಣಮಕ್ಲಿಷ್ಟಕರ್ಮಾಣಂ ರಹಸ್ಯೇತದಭಾಷತ ॥ ೧೦

ಕೃಷ್ಣ ಕೃಷ್ಣಾಪ್ರಮೇಯಾತ್ಮನ್ ಯೋಗೇಶ ಜಗದೀಶ್ವರ ।
ವಾಸುದೇವಾಖಿಲಾವಾಸ ಸಾತ್ವತಾಂ ಪ್ರವರ ಪ್ರಭೋ ॥ ೧೧

ತ್ವಮಾತ್ಮಾ ಸರ್ವಭೂತಾನಾಮೇಕೋ ಜ್ಯೋತಿರಿವೈಧಸಾಮ್ ।
ಗೂಢೋ ಗುಹಾಶಯಃ ಸಾಕ್ಷೀ ಮಹಾಪುರುಷ ಈಶ್ವರಃ ॥ ೧೨

---

ಕಾಲುಗಳನ್ನು ಮೀಟುತ್ತ ಒದ್ದಾಡತೊಡಗಿತು. ಮೈ ಬೆವರಿತು. ಕಣ್ಣಾಲಿಗಳು ತಿರುಗಿದವು. ಲದ್ದಿಯನ್ನು ಹಾಕುತ್ತ ನೆಲದಮೇಲೆ ಸತ್ತು ಒರಗಿತು (೮). ಕರಬೂಜದ ಹಣ್ಣಿನಂತೆ ಬಿರಿದು ಪ್ರಾಣವನ್ನು ನೀಗಿದ ಕೇಶಿಯ ದೇಹದಿಂದ ಮಹಾಭುಜನಾದ ಗೋವಿಂದನು ತನ್ನ ತೋಳನ್ನು ಎಳೆದುಕೊಂಡನು. ಶ್ರಮವಿಲ್ಲದೆ ಶತ್ರುವನ್ನು ಸಂಹರಿಸಿದರೂ ಅವನು ಗರ್ವಿತನಾಗಲಿಲ್ಲ. ಅಚ್ಚರಿಗೊಂಡ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿ ಸ್ತೋತ್ರಮಾಡಿದರು (೯). ಪರೀಕ್ಷಿತ ರಾಜ, ತರುವಾಯ ಭಾಗವತೋತ್ತಮರಾದ ದೇವರ್ಷಿನಾರದರು ಆಗಮಿಸಿ, ಧರ್ಮಸ್ಥಾಪಕನಾದ ಶ್ರೀಕೃಷ್ಣನನ್ನು ರಹಸ್ಯವಾಗಿ ಕಂಡು ಹೀಗೆಂದರು (೧೦): "ಹೇ ಕೃಷ್ಣ, ಕೃಷ್ಣ, ಅಪ್ರಮೇಯಸ್ವರೂಪನೆ, ಯೋಗೇಶ್ವರ, ಜಗದೀಶ್ವರ, ವಾಸುದೇವ, ಸರ್ವಾಶ್ರಯ, ಸಾತ್ವತೋತ್ತಮ, ಸ್ವಾಮಿ, ನೀನು ಸರ್ವಭೂತಗಳಲ್ಲಿಯೂ ಅನುಸ್ಯೂತನಾದ ಅದ್ವಿತೀಯ ಆತ್ಮನಾಗಿರುವೆ, ಸೌದೆಗಳಲ್ಲಿ ಅಗ್ನಿ ಇರುವಂತೆ. ಹೃದಯಗುಹೆಯಲ್ಲಿ ನೆಲೆಸಿರುವ ನೀನು ಗೂಢನಾಗಿರುವೆ. ಎಲ್ಲರ ಬುದ್ಧಿಗೆ ಸಾಕ್ಷಿಯಾದವನು ನೀನು. ಮಹಾಪುರುಷನೂ ನಿಯಾಮಕನೂ

ಆತ್ಮನಾಽಽತ್ಮಾಶ್ರಯಃ ಪೂರ್ವಂ ಮಾಯಯಾ ಸಸೃಜೇ ಗುಣಾನ್ ।
ತೈರಿದಂ ಸತ್ಯಸಂಕಲ್ಪಃ ಸೃಜಸ್ಯತ್ಸ್ಯವಸೀಶ್ವರಃ ॥ ೧೩

ಸ ತ್ವಂ ಭೂಧರಭೂತಾನಾಂ ದೈತ್ಯಪ್ರಮಥರಕ್ಷಸಾಮ್ ।
ಅವತೀರ್ಣೋ ವಿನಾಶಾಯ ಸೇತೂನಾಂ ರಕ್ಷಣಾಯ ಚ ॥ ೧೪

ದಿಷ್ಟ್ಯಾ ತೇ ನಿಹತೋ ದೈತ್ಯೋ ಲೀಲಯಾಯಂ ಹಯಾಕೃತಿಃ ।
ಯಸ್ಯ ಹೇಷಿತಸಂತ್ರಸ್ತಾಸ್ತ್ಯಜಂತ್ಯನಿಮಿಷಾ ದಿವಮ್ ॥ ೧೫

ಚಾಣೂರಂ ಮುಷ್ಟಿಕಂ ಚೈವಂ ಮಲ್ಲಾನನ್ಯಾಂಶ್ಚ ಹಸ್ತಿನಮ್ ।
ಕಂಸಂ ಚ ನಿಹತಂ ದ್ರಕ್ಷ್ಯೇ ಪರಶ್ವೋಽಹನಿ ತೇ ವಿಭೋ ॥ ೧೬

ತಸ್ಯಾನು ಶಂಖಯವನಮುರಾಣಾಂ ನರಕಸ್ಯ ಚ ।
ಪಾರಿಜಾತಾಪಹರಣಮಿಂದ್ರಸ್ಯ ಚ ಪರಾಜಯಮ್ ॥ ೧೭

ಉದ್ವಾಹಂ ವೀರಕನ್ಯಾನಾಂ ವೀರ್ಯಶುಲ್ಕಾದಿಲಕ್ಷಣಮ್ ।
ನೃಗಸ್ಯ ಮೋಕ್ಷಣಂ ಪಾಪಾದ್ ದ್ವಾರಕಾಯಾಂ ಜಗತ್ಪತೇ ॥ ೧೮

---

ಆಗಿದ್ದೀಯೆ (೧೧–೧೨). ಸಾಧನಾಂತರವನ್ನು ಬಯಸದೆ ಸ್ವತಂತ್ರನಾದ ನೀನು ನಿನ್ನಿಂದಲೇ ಮಾಯಾಶಕ್ತಿಯ ಮೂಲಕ ಗುಣತ್ರಯವನ್ನು ಮೊದಲು ಸೃಷ್ಟಿಸಿದೆ. ಆ ಗುಣಗಳಿಂದ ವಿಶ್ವವನ್ನು ಸೃಷ್ಟಿಸುವೆ, ಸಂಹರಿಸುವೆ, ಪಾಲಿಸುವೆ. ನೀನು ಸತ್ಯಸಂಕಲ್ಪ (ಬಾಹ್ಯಸಾಧನಗಳು ನಿನಗೆ ಬೇಕಿಲ್ಲ). ಆದ್ದರಿಂದಲೇ ಈಶ್ವರ (೧೩). ಅಂಥ ನೀನು ರಾಜರೆನಿಸಿಕೊಂಡಿರುವ ದೈತ್ಯರನ್ನೂ ದುರಳರನ್ನೂ ರಾಕ್ಷಸರನ್ನೂ ಸಂಹರಿಸುವುದಕ್ಕೋಸ್ಕರ ಮತ್ತು ಧರ್ಮಸೇತುಗಳನ್ನು ರಕ್ಷಿಸುವುದಕ್ಕೋಸ್ಕರ ಅವತರಿಸಿದ್ದೀಯೆ (೧೪). ಅಶ್ವಾಕೃತಿಯಲ್ಲಿ ಬಂದ ದೈತ್ಯನನ್ನು ನೀನು ಲೀಲೆಯಿಂದ ವಧಿಸಿರುವುದು ಸಂತೋಷಕರವಾಗಿದೆ. ಅವನ ಕೆನೆತಕ್ಕೆ ಹೆದರಿಯೇ ದೇವತೆಗಳು ಸ್ವರ್ಗವನ್ನು ಬಿಟ್ಟು ಓಡುತ್ತಿದ್ದರು! (೧೫). ಹೇ ಸ್ವಾಮಿ, ನಾಡಿದ್ದು ಹಗಲು ಚಾಣೂರಮುಷ್ಟಿಕರೇ ಮೊದಲಾದ ಮಲ್ಲರನ್ನೂ, ಆನೆಯನ್ನೂ, ಕಂಸನನ್ನೂ ಸಹ ನೀನು ಸಂಹರಿಸುವುದನ್ನೂ ನಾನು ನೋಡಲಿರುವೆನು! (೧೬). ಅನಂತರ ಶಂಖಾಸುರ (ಪಂಚಜನ), ಕಾಲಯವನ, ಮುರ, ನರಕಾಸುರ–ಇವರ ವಧೆಯಾಗುವುದು. ಪಾರಿಜಾತವೃಕ್ಷದ ಅಪಹಾರವೂ ಇಂದ್ರನ ಪರಾಜಯವೂ ಸಂಭವಿಸುವುದು (೧೭). ವೀರ್ಯಶುಲ್ಕವನ್ನಿತ್ತು ವೀರಕನ್ಯೆಯರ ವಿವಾಹ ನಡೆಯುವುದು. ಜಗದೊಡೆಯ, ದ್ವಾರಕೆ

ಸ್ಯಮಂತಕಸ್ಯ ಚ ಮಣೇರಾದಾನಂ ಸಹ ಭಾರ್ಯಯಾ ।
ಮೃತಪುತ್ರಪ್ರದಾನಂ ಚ ಬ್ರಾಹ್ಮಣಸ್ಯ ಸ್ವಧಾಮತಃ ॥ ೧೯

ಪೌಂಡ್ರಕಸ್ಯ ವಧಂ ಪಶ್ಚಾತ್ ಕಾಶಿಪುರ್ಯಾಶ್ಚ ದೀಪನಮ್ ।
ದಂತವಕ್ತ್ರಸ್ಯ ನಿಧನಂ ಚೈದ್ಯಸ್ಯ ಚ ಮಹಾಕ್ರತೌ ॥ ೨೦

ಯಾನಿ ಚಾನ್ಯಾನಿ ವೀರ್ಯಾಣಿ ದ್ವಾರಕಾಮಾವಸನ್ ಭವಾನ್ ।
ಕರ್ತಾ ದ್ರಕ್ಷ್ಯಾಮ್ಯಹಂ ತಾನಿ ಗೇಯಾನಿ ಕವಿಭಿರ್ಭುವಿ ॥ ೨೧

ಅಥ ತೇ ಕಾಲರೂಪಸ್ಯ ಕ್ಷಪಯಿಷ್ಣೋರಮುಷ್ಯ ವೈ ।
ಅಕ್ಷೌಹಿಣೀನಾಂ ನಿಧನಂ ದ್ರಕ್ಷ್ಯಾಮ್ಯರ್ಜುನಸಾರಥೇಃ ॥ ೨೨

ವಿಶುದ್ಧವಿಜ್ಞಾನಘನಃ ಸ್ವಸಂಸ್ಥಯಾ
ಸಮಾಪ್ತಸರ್ವಾರ್ಥಮಮೋಘವಾಂಛಿತಮ್ ।

---

ಯಲ್ಲಿ ನೃಗನಿಗೆ ಪಾಪದಿಂದಾದ ಶಾಪದ ವಿಮೋಚನೆಯಾಗುವುದು. ಸ್ಯಮಂತಕ ಮಣಿಯನ್ನು (ಜಾಂಬವತಿಯೆಂಬ) ಪತ್ನಿಯೊಡನೆ ತರುವುದು, ಬ್ರಾಹ್ಮಣನ ಮೃತಪುತ್ರನನ್ನು ಅವನಿದ್ದ ಯಮಲೋಕದಿಂದ ಕರೆತರುವುದು, ಪೌಂಡ್ರಕನ ವಧೆ, ಕಾಶೀಪುರದ ದಹನ, ದಂತವಕ್ರನ ಮರಣ, ರಾಜಸೂಯಯಾಗದಲ್ಲಿ ಶಿಶುಪಾಲನ ವಧೆ–ಇವು ನಡೆಯುತ್ತವೆ * (೧೮–೨೦). ನೀನು ದ್ವಾರಕೆಯಲ್ಲಿ ವಾಸವಾಗಿದ್ದು ಇನ್ನೂ ಅನೇಕ ಪರಾಕ್ರಮಕಾರ್ಯಗಳನ್ನು ನಡೆಸುವೆ. ಕವಿಗಳು ಭೂಮಿಯಲ್ಲಿ ಹೊಗಳಿ ಹಾಡುವ ಅವೆಲ್ಲವನ್ನೂ ನಾನು ನೋಡಲಿರುವೆನು! (೨೧). ಅಲ್ಲದೆ ಭೂಭಾರವನ್ನು ಕ್ಷಪಿಸಬೇಕೆಂದಿರುವ ಕಾಲರೂಪನಾದ ನೀನು ಪಾರ್ಥಸಾರಥಿಯಾಗಿ ನಡೆಸುವ ಅಕ್ಷೌಹಿಣಿಗಟ್ಟಲೆ ಸೇನೆಯ ವಿಧ್ವಂಸನವನ್ನೂ ನೋಡುವೆನು! (೨೨). ಹೇ ಸ್ವಾಮಿ, ಕೇವಲಜ್ಞಾನಮೂರ್ತಿಯೂ ಪರಮಾನಂದವೆಂಬ ಸ್ವಸ್ವರೂಪಸ್ಥಿತಿಯಿಂದ ಸರ್ವಾರ್ಥಗಳನ್ನು ಪಡೆದಿರುವ ಆಪ್ತಕಾಮನೂ ಸಫಲವಾದ ಇಷ್ಟಾರ್ಥವುಳ್ಳ ಸತ್ಯಸಂಕಲ್ಪನೂ ಮಾಯೆಯಿಂದಾದ ಗುಣಪ್ರವಾಹವನ್ನು ಚಿಚ್ಛಕ್ತಿಯೆಂಬ ತೇಜಸ್ಸಿನಿಂದ ನಿತ್ಯವಾಗಿ ನಿವರ್ತಿಸಿಕೊಂಡವನೂ ನಿರತಿಶಯಐಶ್ವರ್ಯಶಾಲಿಯಾದ ಭಗವಂತನೂ ಆದ ನಿನಗೆ

---

* ಇವುಗಳಲ್ಲಿ ಯಾವುದಾದಮೇಲೆ ಯಾವುದು ಎಂಬ ಕ್ರಮ ವಿವಕ್ಷಿತವಾಗಿಲ್ಲ.

ಸ್ವತೇಜಸಾ ನಿತ್ಯನಿವೃತ್ತಮಾಯಾ-
ಗುಣಪ್ರವಾಹಂ ಭಗವಂತಮೀಮಹಿ ॥ ೨೩

ತ್ವಾಮೀಶ್ವರಂ ಸ್ವಾಶ್ರಯಮಾತ್ಮಮಾಯಯಾ
ವಿನಿರ್ಮಿತಾಶೇಷವಿಶೇಷಕಲ್ಪನಮ್ ।
ಕ್ರೀಡಾರ್ಥಮದ್ಯಾತ್ತಮನುಷ್ಯವಿಗ್ರಹಂ
ನತೋಽಸ್ಮಿ ಧುರ್ಯಂ ಯದುವೃಷ್ಣಿಸಾತ್ವತಾಮ್ ॥ ೨೪

ಶ್ರೀಶುಕ ಉವಾಚ—

ಏವಂ ಯದುಪತಿಂ ಕೃಷ್ಣಂ ಭಾಗವತಪ್ರವರೋ ಮುನಿಃ ।
ಪ್ರಣಿಪತ್ಯಾಭ್ಯನುಜ್ಞಾತೋ ಯಯೌ ತದ್ದರ್ಶನೋತ್ಸವಃ ॥ ೨೫

ಭಗವಾನಪಿ ಗೋವಿಂದೋ ಹತ್ವಾ ಕೇಶಿನಮಾಹವೇ ।
ಪಶೂನಪಾಲಯತ್ ಪಾಲೈಃ ಪ್ರೀತೈರ್ವ್ರಜಸುಖಾವಹಃ ॥ ೨೬

ಏಕದಾ ತೇ ಪಶೂನ್ ಪಾಲಾಶ್ಚಾರಯಂತೋಽದ್ರಿಸಾನುಷು ।
ಚಕ್ರುರ್ನಿಲಾಯನಕ್ರೀಡಾಶ್ಚೋರಪಾಲಾಪದೇಶತಃ ॥ ೨೭

---

ಶರಣಾಗುತ್ತೇವೆ (೨೩). ಈಶ್ವರನೂ ಸ್ವತಂತ್ರನೂ ನಿನ್ನ ಮಾಯೆಯಿಂದ ಮಹದಾದಿಸಮಸ್ತಪ್ರಪಂಚವನ್ನು ನಿರ್ಮಿಸಿದವನೂ ಈಗ ಲೀಲೆಗಾಗಿ ಮನುಷ್ಯ ದೇಹವನ್ನು ತಳೆದು ಯದುವೃಷ್ಣಿಸಾತ್ವತಕುಲದಲ್ಲಿ ಅಗ್ರಣಿಯೂ ಆಗಿರುವ ನಿನಗೆ ತಲೆಬಾಗಿದ್ದೇನೆ" ಎಂದರು (೨೪). ಈ ಪ್ರಕಾರವಾಗಿ ಭಗವದ್ಭಕ್ತರಲ್ಲಿ ಶ್ರೇಷ್ಠರಾದ ನಾರದಮುನಿಗಳು ನುಡಿದು ನಮಸ್ಕರಿಸಿ ಶ್ರೀಕೃಷ್ಣನಿಂದ ಅನುಜ್ಞೆಯನ್ನು ಪಡೆದು ಅವನ ದರ್ಶನವಾದುದಕ್ಕಾಗಿ ಆನಂದಿಸುತ್ತ ತೆರಳಿದರು(೨೫). ಭಗವಾನ್ ಗೋವಿಂದನು ಯುದ್ಧದಲ್ಲಿ ಕೇಶಿಯನ್ನು ಕೊಂದನಷ್ಟೆ. ಆಮೇಲೆ ಸಂಪ್ರೀತರಾದ ಗೋಪಾಲರೊಡನೆ ಸೇರಿ ವ್ರಜಕ್ಕೆ ಆನಂದವನ್ನುಂಟುಮಾಡುತ್ತ ಪಶುಪಾಲನೆಯಲ್ಲಿ ತೊಡಗಿದನು (೨೬). ಒಂದು ಸಲ* ಆ ಗೋಪಬಾಲಕರು ಬೆಟ್ಟದ ತಪ್ಪಲುಗಳಲ್ಲಿ ಪಶುಗಳನ್ನು ಮೇಯಿಸುತ್ತಿರುವಾಗ 'ಚೋರಪಾಲಾ'

---

* ಒಂದು ಸಲ = ಕೇಶಿವಧೆಯು ನಡೆದಮೇಲೆ ಅದೇ ದಿನ. ಅಥವಾ ವ್ಯೋಮಾಸುರ ಸಂಹಾರವು ಹಿಂದೆ ನಡೆದುಹೋಗಿದೆಯೆಂದೂ ಪ್ರಾಸಂಗಿಕವಾಗಿ ಈಗ ವರ್ಣಿಸಲಾಗುವುದೆಂದೂ ತಿಳಿಯಬೇಕು. ಶಂಖಚೂಡವಧೆಗಿಂತ ಮೊದಲೇ ವ್ಯೋಮವೃತ್ತಾಂತವು ಕೆಲವು ಪುಸ್ತಕಗಳಲ್ಲಿ ಇದೆಯೆಂದು ಶ್ರೀಧರೀಯದಲ್ಲಿ ಬರೆದಿದೆ.

**ತತ್ರಾಸನ್ ಕತಿಚಿಚ್ಚೋರಾಃ ಪಾಲಾಶ್ಚ ಕತಿಚಿನ್ನೃಪ ।**
**ಮೇಷಾಯಿತಾಶ್ಚ ತತ್ರೈಕೇ ವಿಜಹ್ರುರಕುತೋಭಯಾಃ ॥ ೨೮**

**ಮಯಪುತ್ರೋ ಮಹಾಮಾಯೋ ವ್ಯೋಮೋ ಗೋಪಾಲವೇಷಧೃತ್ ।**
**ಮೇಷಾಯಿತಾನಪೋವಾಹ ಪ್ರಾಯಶ್ಚೋರಾಯಿತೋ ಬಹೂನ್ ॥**

**ಗಿರಿದರ್ಯಾಂ ವಿನಿಕ್ಷಿಪ್ಯ ನೀತಂ ನೀತಂ ಮಹಾಸುರಃ ।**
**ಶಿಲಯಾ ಪಿದಧೇ ದ್ವಾರಂ ಚತುಃಪಂಚಾವಶೇಷಿತಾಃ ॥ ೩೦**

**ತಸ್ಯ ತತ್ ಕರ್ಮ ವಿಜ್ಞಾಯ ಕೃಷ್ಣಃ ಶರಣದಃ ಸತಾಮ್ ।**
**ಗೋಪಾನ್ ನಯಂತಂ ಜಗ್ರಾಹ ವೃಕಂ ಹರಿರಿವೌಜಸಾ ॥ ೩೧**

**ಸ ನಿಜಂ ರೂಪಮಾಸ್ಥಾಯ ಗಿರೀಂದ್ರಸದೃಶಂ ಬಲೀ ।**
**ಇಚ್ಛನ್ ವಿಮೋಕ್ತುಮಾತ್ಮಾನಂ ನಾಶಕ್ನೋದ್ ಗ್ರಹಣಾತುರಃ ॥ ೩೨**

---

ಎಂಬ ಹೆಸರಿನ ಅಡಗಿಕೊಳ್ಳುವ ಒಂದು ಆಟವನ್ನಾಡಿದರು (೨೭). ಪರೀಕ್ಷಿತ ರಾಜ, ಅವರಲ್ಲಿ ಕೆಲವರು 'ಚೋರ'ರಾದರು. ಕೆಲವರು 'ಪಾಲ'ರಾದರು. ಇನ್ನು ಕೆಲವರು 'ಕುರಿ'ಗಳಾದರು! ಹೀಗೆ ನಿರ್ಭೀತಿಯಿಂದ ಆಡುತ್ತಿದ್ದರು. (೨೮). ಆಗ ಮಯಪುತ್ರನೂ ಮಹಾಮಾಯಾವಿಯೂ ಆದ ವ್ಯೋಮನೆಂಬ ಅಸುರನು ಗೊಲ್ಲರ ವೇಷದಲ್ಲಿ ಒಂದು 'ಚೋರ'ರೊಡನೆ ಸೇರಿ 'ಚೋರ'ನಂತೆ ನಟಿಸುತ್ತಿದ್ದನು. ಅವನು ಕುರಿಗಳಂತೆ ನಟಿಸುತ್ತಿದ್ದ ಬಹುಮಂದಿ ಗೋಪರನ್ನು ಅಪಹರಿಸಿಕೊಂಡು ಹೋದನು(೨೯). ಆ ವ್ಯೋಮಾಸುರನು ಒಬ್ಬೊಬ್ಬರನ್ನಾಗಿ ಗೋಪರನ್ನು ಅಪಹರಿಸಿ ಗಿರಿಗುಹೆಗಳಲ್ಲಿ ನೂಕಿ ಬಂಡೆಯಿಂದ ಬಾಗಿಲನ್ನು ಮುಚ್ಚಿಬಿಡುತ್ತಿದ್ದನು! ಹೀಗೆ ನಡೆಯಲು ಕಡೆಯಲ್ಲಿ ನಾಲ್ಕೈದು ಗೋಪರು ಉಳಿದರು! (೩೦). ಸಜ್ಜನರಿಗೆ ಆಶ್ರಯದಾತನಾದ ಕೃಷ್ಣನಿಗೆ ಆತನ ಚೇಷ್ಟೆ ತಿಳಿಯಿತು. ಗೋಪರನ್ನೊಯ್ಯುತ್ತಿದ್ದ ಅಸುರನನ್ನು, ಸಿಂಹವು ತೋಳವನ್ನು ಹಿಡಿಯುವಂತೆ, ಗಪ್ಪನೆ ಹಿಡಿದನು. ಅಪಹಾರದಲ್ಲಿ ನಿರತನಾಗಿದ್ದ ಬಲಿಷ್ಠನಾದ ವ್ಯೋಮಾಸುರನು ಪರ್ವತಾಕಾರದ ನಿಜರೂಪವನ್ನು ಧರಿಸಿ ತಪ್ಪಿಸಿಕೊಳ್ಳಲು ಹೆಣಗಿದನು. ಆದರೆ ಸಾಧ್ಯವಾಗಲಿಲ್ಲ (೩೧–೩೨).

**ತಂ ನಿಗೃಹ್ಯಾಚ್ಯುತೋ ದೋರ್ಭ್ಯಾಂ ಪಾತಯಿತ್ವಾ ಮಹೀತಲೇ ।**
**ಪಶ್ಯತಾಂ ದಿವಿ ದೇವಾನಾಂ ಪಶುಮಾರಮಮಾರಯತ್ ॥ ೩೩**

**ಗುಹಾಪಿಧಾನಂ ನಿರ್ಭಿದ್ಯ ಗೋಪಾನ್ ನಿಃಸಾರ್ಯ ಕೃಚ್ಛ್ರತಃ ।**
**ಸ್ತೂಯಮಾನಃ ಸುರೈರ್ಗೋಪೈಃ ಪ್ರವಿವೇಶ ಸ್ವಗೋಕುಲಮ್ ॥ ೩೪**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತತ್ರಿಂಶಾಧ್ಯಾಯಃ



ಅಚ್ಯುತನು ಕೈಗಳಿಂದ ಅವನನ್ನು ಬಲವಾಗಿ ಹಿಡಿದು ನೆಲದಮೇಲುರುಳಿಸಿ, ಗಗನದಲ್ಲಿ ದೇವತೆಗಳು ನೋಡುತ್ತಿರಲು, ಪಶುವನ್ನು ಕೊಂದಂತೆ ಅಸುರನನ್ನು ಅದುಮಿ ಕೊಂದನು (೩೩). ಅನಂತರ ಗುಹೆಯ ಬಂಡೆಯನ್ನು ತಳ್ಳಿಹಾಕಿ ಒಳಗಿದ್ದ ಗೋಪರನ್ನು ಕಷ್ಟದಿಂದ ಪಾರುಮಾಡಿ, ಸುರರಿಂದಲೂ ಗೋಪಾಲರಿಂದಲೂ ಸ್ತುತಿಸಲ್ಪಡುತ್ತ ಗೋಕುಲಕ್ಕೆ ಹೋದನು (೩೪).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತೇಳನೆಯ ಅಧ್ಯಾಯ



## ಅಷ್ಟಾತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಅಕ್ರೂರೋಽಪಿ ಚ ತಾಂ ರಾತ್ರಿಂ ಮಧುಪುರ್ಯಾಂ ಮಹಾಮತಿಃ ।
ಉಷಿತ್ವಾ ರಥಮಾಸ್ಥಾಯ ಪ್ರಯಯೌ ನಂದಗೋಕುಲಮ್ ॥ ೧

ಗಚ್ಛನ್ ಪಥಿ ಮಹಾಭಾಗೋ ಭಗವತ್ಯಂಬುಜೇಕ್ಷಣೇ ।
ಭಕ್ತಿಂ ಪರಾಮುಪಗತ ಏವಮೇತದಚಿಂತಯತ್ ॥ ೨

ಕಿಂ ಮಯಾಽಽಚರಿತಂ ಭದ್ರಂ ಕಿಂ ತಪ್ತಂ ಪರಮಂ ತಪಃ ।
ಕಿಂ ವಾಥಾಪ್ಯರ್ಹತೇ ದತ್ತಂ ಯದ್ ದ್ರಕ್ಷ್ಯಾಮ್ಯದ್ಯ ಕೇಶವಮ್ ॥

ಮಮೈತದ್ ದುರ್ಲಭಂ ಮನ್ಯ ಉತ್ತಮಶ್ಲೋಕದರ್ಶನಮ್ ।
ವಿಷಯಾತ್ಮನೋ ಯಥಾ ಬ್ರಹ್ಮಕೀರ್ತನಂ ಶೂದ್ರಜನ್ಮನಃ ॥ ೪

### ಅಧ್ಯಾಯ ೩೮

ಕಂಸನ ಆಜ್ಞೆಯಂತೆ ಅಕ್ರೂರನು ಗೋಕುಲಕ್ಕೆ ಆಗಮಿಸುವುದು.
ರಾಮಕೃಷ್ಣರಿಂದ ಅವನಿಗೆ ಸತ್ಕಾರ

ಶುಕಮಹರ್ಷಿಗಳು ಹೇಳಿದರು : ಇತ್ತಲಾಗಿ ಮಹಾಪ್ರಾಜ್ಞನಾದ ಅಕ್ರೂರನಾದರೋ ಆ ರಾತ್ರಿಯನ್ನು ಮಧುರೆಯಲ್ಲಿ ಕಳೆದು, (ಮಾರನೆಯ ದಿನ ಪ್ರಾತಃಕಾಲ) ರಥವನ್ನೇರಿ ನಂದಗೋಕುಲಕ್ಕೆ ಪ್ರಯಾಣಮಾಡಿದನು (೧). ಭಗವಂತನಾದ ಪುಂಡರೀಕಾಕ್ಷನಲ್ಲಿ ಅತಿಶಯವಾದ ಭಕ್ತಿಯನ್ನಿಟ್ಟಿದ್ದ ಆ ಮಹಾಭಾಗನು ಪ್ರಯಾಣಮಾಡುತ್ತ ದಾರಿಯಲ್ಲಿ ಹೀಗೆ ಆಲೋಚಿಸುತ್ತಿದ್ದನು (೨) : ಏನೆಂದರೆ, "ನಾನು ಎಂತಹ ಪುಣ್ಯವನ್ನು ಮಾಡಿರಬೇಕು ! ಎಂತಹ ತೀವ್ರವಾದ ತಪಸ್ಸನ್ನಾಚರಿಸಿರಬೇಕು ! ಅಥವಾ ಯೋಗ್ಯಪಾತ್ರನಿಗೆ ಯಾವ ಮಹಾದಾನವನ್ನು ಮಾಡಿರಬಹುದು ! ಈ ದಿನ ನನಗೆ ಕೇಶವನ ದರ್ಶನವಾಗುವುದು ! (೩). ವಿಷಯಲೋಲುಪ್ತಿಯಿಂದ ತುಂಬಿದ ಕೀಳುಜನ್ಮದವನಿಗೆ ವೇದೋಚ್ಚಾರಣೆಯು ದುರ್ಲಭವಾದಂತೆ, ನನಗೆ ಆ ಉತ್ತಮಶ್ಲೋಕನ ದರ್ಶನವು

ಮೈವಂ ಮಮಾಧಮಸ್ಯಾಪಿ ಸ್ಯಾದೇವಾಚ್ಯುತದರ್ಶನಮ್ ।
ಹ್ರಿಯಮಾಣಃ ಕಾಲನದ್ಯಾ ಕ್ವಚಿತ್ತರತಿ ಕಶ್ಚನ ॥ ೫

ಮಮಾದ್ಯಾಮಂಗಲಂ ನಷ್ಟಂ ಫಲವಾಂಶ್ಚೈವ ಮೇ ಭವಃ ।
ಯನ್ನಮಸ್ಯೇ ಭಗವತೋ ಯೋಗಿಧ್ಯೇಯಾಂಘ್ರಿಪಂಕಜಮ್ ॥ ೬

ಕಂಸೋ ಬತಾದ್ಯಾಕೃತ ಮೇಽತ್ಯನುಗ್ರಹಂ
ದ್ರಕ್ಷ್ಯೇಽಂಘ್ರಿಪದ್ಮಂ ಪ್ರಹಿತೋಽಮುನಾ ಹರೇಃ ।
ಕೃತಾವತಾರಸ್ಯ ದುರತ್ಯಯಂ ತಮಃ
ಪೂರ್ವೇಽತರನ್ ಯನ್ನಖಮಂಡಲತ್ವಿಷಾ ॥ ೭

ಯದರ್ಚಿತಂ ಬ್ರಹ್ಮಭವಾದಿಭಿಃ ಸುರೈಃ
ಶ್ರಿಯಾ ಚ ದೇವ್ಯಾ ಮುನಿಭಿಃ ಸಸಾತ್ವತೈಃ ।
ಗೋಚಾರಣಾಯಾನುಚರೈಶ್ಚರದ್ ವನೇ
ಯದ್ ಗೋಪಿಕಾನಾಂ ಕುಚಕುಂಕುಮಾಂಕಿತಮ್ ॥ ೮

---

ದುರ್ಲಭವೆಂದೇ ತಿಳಿಯುತ್ತೇನೆ (೪). ಹಾಗಾಗದು; ಅಧಮನಾದ ನನಗೂ ಅಚ್ಯುತದರ್ಶನ ಆಗಿಯೇ ಆಗುವುದು! ಕರ್ಮವಶದಿಂದ ಕಾಲನದಿಯ ಸೆಳೆತಕ್ಕೆ ಸಿಕ್ಕಿದರೂ ಒಬ್ಬನಲ್ಲದಿದ್ದರೆ ಒಬ್ಬನು ದಡವನ್ನು ಸೇರಿಯಾನು! (೫). ಇಂದು ನನ್ನ ಸಕಲ ಅಮಂಗಳವೂ ನಾಶವಾಯಿತು. ನನ್ನ ಜನ್ಮ ಸಾರ್ಥಕವಾಯಿತು. ಯೋಗಿಗಳು ಯಾವಾತನ ಪಾದಪಂಕಜವನ್ನು ಧ್ಯಾನಿಸುವರೋ ಆ ಭಗವಂತನನ್ನು ಕಂಡು ನಮಸ್ಕರಿಸಲಿದ್ದೇನೆ! (೬). ಆಹಾ! ಕಂಸನು ನನಗೆ ದೊಡ್ಡ ಅನುಗ್ರಹವನ್ನೇ ಮಾಡಿದನು. ಅವನು ಕಳಿಸಿದ್ದರಿಂದಲ್ಲವೆ ಅವತರಿಸಿ ಬಂದಿರುವ ಶ್ರೀಹರಿಯ ಪಾದಪದ್ಮವನ್ನು ನಾನು ನೋಡುವುದು? ಆತನ ಪಾದಪದ್ಮದ ಉಗುರಿನ ಕಾಂತಿಯೊಂದರಿಂದಲೇ ಪೂರ್ವಜರಾದ ಅಂಬರೀಷಾದಿಗಳು ದುರ್ಭೇದ್ಯವಾದ ಅಜ್ಞಾನದ ಕತ್ತಲೆಯನ್ನು ದಾಟಿದರು (೭). ಯಾವುದು ಬ್ರಹ್ಮಶಿವಾದಿ ಸುರರಿಂದ ಸಮರ್ಚಿತವೋ ಲಕ್ಷ್ಮೀದೇವಿಯಿಂದ ಸಂಪೂಜಿತವೋ ಮುನಿಗಳಿಂದಲೂ ಸಾತ್ವತರಿಂದಲೂ ಸಂಮಾನಿತವೋ ಯಾವುದು ಅನುಚರರಾದ ಗೋಪರೊಡನೆ ಗೋವುಗಳನ್ನು ಮೇಯಿಸಲು ವನದಲ್ಲಿ ಸಂಚರಿಸುವುದೋ ಗೋಪಿಕೆಯರ ಕುಚಕುಂಕುಮದಿಂದ ಅಂಕಿತ

*

ದ್ರಕ್ಷ್ಯಾಮಿ ನೂನಂ ಸುಕಪೋಲನಾಸಿಕಂ
ಸ್ಮಿತಾವಲೋಕಾರುಣಕಂಜಲೋಚನಮ್ ।
ಮುಖಂ ಮುಕುಂದಸ್ಯ ಗುಡಾಲಕಾವೃತಂ
ಪ್ರದಕ್ಷಿಣಂ ಮೇ ಪ್ರಚರಂತಿ ವೈ ಮೃಗಾಃ ॥ ೯

ಅಪ್ಯದ್ಯ ವಿಷ್ಣೋರ್ಮನುಜತ್ವಮೀಯುಷೋ
ಭಾರಾವತಾರಾಯ ಭುವೋ ನಿಜೇಚ್ಛಯಾ ।
ಲಾವಣ್ಯಧಾಮ್ನೋ ಭವಿತೋಪಲಂಭನಂ
ಮಹ್ಯಂ ನ ನ ಸ್ಯಾತ್ ಫಲಮಂಜಸಾ ದೃಶಃ ॥ ೧೦

ಯ ಈಕ್ಷಿತಾಹಂರಹಿತೋಽಪ್ಯಸತ್ಸತೋಃ
ಸ್ವತೇಜಸಾಪಾಸ್ತತಮೋಭಿದಾಭ್ರಮಃ ।
ಸ್ವಮಾಯಯಾಽಽತ್ಮನ್ ರಚಿತೈಸ್ತದೀಕ್ಷಯಾ
ಪ್ರಾಣಾಕ್ಷಧೀಭಿಃ ಸದನೇಷ್ವಭೀಯತೇ ॥ ೧೧

---

ವಾದುದೋ ಅಂತಹ ಪಾದಪದ್ಮವನ್ನು ನೋಡುವೆನು! (೮). ಸುಂದರವಾದ ಕೆನ್ನೆ, ಮೂಗು, ಮುಗುಳ್ನಗೆಯ ನೋಟ, ಕೆಂದಾವರೆಯಂತಹ ಕಣ್ಣು—ಇವು ಗಳಿಂದ ಮನೋಹರವಾದ, ಗುಂಗುರುಕೂದಲಿಂದ ಆವೃತವಾದ, ಮುಕುಂದನ ಮುಖವನ್ನು ವೀಕ್ಷಿಸುವೆನು. ಓಹೊ! ಮೃಗಗಳು ಪ್ರದಕ್ಷಿಣಾಕಾರದಲ್ಲಿ ಸುಳಿಯುತ್ತಿವೆ! ನಾನು ವೀಕ್ಷಿಸುವುದು ನಿಶ್ಚಿತ! (೯). ಭೂಭಾರವನ್ನಿಳಿಸು ವುದಕ್ಕಾಗಿ ತನ್ನ ಇಚ್ಛೆಯಂತೆ ಮನುಷ್ಯಾವತಾರಮಾಡಿರುವ ವಿಷ್ಣುವಿನ ಲಾವಣ್ಯಪೂರ್ಣವಾದ ಆಕೃತಿಯ ದರ್ಶನವು ಇಂದು ನನಗೆ ಲಭಿಸೀತೆ? ನನಗೆ ಕಣ್ಣಿದ್ದುದಕ್ಕೆ ತಕ್ಕ ಫಲವು ನಿಶ್ಚಯವಾಗಿ ದೊರಕೀತೆ? (೧೦). ಯಾವಾತನು ಕಾರ್ಯಕಾರಣಗಳಾದ ಅಸತ್ ಸತ್ ಇವುಗಳ ಈಕ್ಷಿತೃವಾದರೂ ಅಹಂಕಾರ ರಹಿತನೋ, ಅವಿದ್ಯೆ, ಅದರಿಂದಾಗುವ ಭೇದಜ್ಞಾನ, ಅದರಿಂದಾಗುವ ಭ್ರಮೆ— ಇವನ್ನು ತನ್ನ ಚಿಚ್ಛಕ್ತಿಯಿಂದ ತಳ್ಳಿರುವನೋ, ಯಾವಾತನು ತನ್ನ ಮಾಯೆ ಯಿಂದ—ಅದರ ಈಕ್ಷಣಮಾತ್ರದಿಂದಲೇ, ತನ್ನಲ್ಲಿ ರಚಿತರಾದ ಪ್ರಾಣ ಇಂದ್ರಿಯ ಬುದ್ಧಿಗಳುಳ್ಳ ಜೀವರಿಗೆ, ಮಾಯೆಯಿಂದಲೇ ರಚಿತನಾದ ತಾನು ಗೋಪರ ಗೃಹಗಳಲ್ಲಿ ಪ್ರಾಪ್ತನಾಗುವನೋ (ಆತನನ್ನು ನಾನು ಈ ದಿನ

ಯಸ್ಯಾಖಿಲಾಮೀವಹಭಿಃ ಸುಮಂಗಲೈ-
ರ್ವಾಚೋ ವಿಮಿಶ್ರಾ ಗುಣಕರ್ಮಜನ್ಮಭಿಃ ।
ಪ್ರಾಣಂತಿ ಶುಂಭಂತಿ ಪುನಂತಿ ವೈ ಜಗದ್
ಯಾಸ್ತದ್ವಿರಕ್ತಾಃ ಶವಶೋಭನಾ ಮತಾಃ ॥ ೧೨

ಸ ಚಾವತೀರ್ಣಃ ಕಿಲ ಸಾತ್ವತಾನ್ವಯೇ
ಸ್ವಸೇತುಪಾಲಾಮರವರ್ಯಶರ್ಮಕೃತ್ ।
ಯಶೋ ವಿತನ್ವನ್ ವ್ರಜ ಆಸ್ತ ಈಶ್ವರೋ
ಗಾಯಂತಿ ದೇವಾ ಯದಶೇಷಮಂಗಲಮ್ ॥ ೧೩

ತಂ ತ್ವದ್ಯ ನೂನಂ ಮಹತಾಂ ಗತಿಂ ಗುರುಂ
ತ್ರೈಲೋಕ್ಯಕಾಂತಂ ದೃಶಿಮನ್ಮಹೋತ್ಸವಮ್ ।
ರೂಪಂ ದಧಾನಂ ಶ್ರಿಯ ಈಪ್ಸಿತಾಸ್ಪದಂ
ದ್ರಕ್ಷ್ಯೇ ಮಮಾಸನ್ನುಷಸಃ ಸುದರ್ಶನಾಃ ॥ ೧೪

---

ನೋಡುವೆನು!) (೧೧). ಪಾಪಹಾರಿಗಳೂ ಸುಮಂಗಳಕಾರಿಗಳೂ ಆದ ಯಾವಾತನ ಗುಣ–ಕರ್ಮ–ಜನ್ಮಗಳನ್ನು ವರ್ಣಿಸುವ ನುಡಿಗಳು ಜಗತ್ತನ್ನು ಉಜ್ಜೀವನಗೊಳಿಸುತ್ತವೆಯೋ, ಜಗತ್ತಿಗೆ ಒಂದು ಪ್ರಕಾಶವನ್ನು ನೀಡುತ್ತವೆಯೋ, ಪಾವನಗೊಳಿಸುತ್ತವೆಯೋ ಮತ್ತು ಯಾವ ನುಡಿಗಳಲ್ಲಿ ಆಸಕ್ತಿಯಿಲ್ಲದವರು ಹೆಣಗಳಿಗೆ ಸಮಾನರೆಂದು ಸಜ್ಜನರು ತಿಳಿದಿದ್ದಾರೋ (ಆತನನ್ನು ನಾನು ಈ ದಿನ ನೋಡುವೆನು!) (೧೨). ತಾನು ನಿರ್ಮಿಸಿದ ಧರ್ಮಸೇತುಗಳನ್ನು ಪಾಲಿಸುವ ಅಮರರಿಗೂ ಸಜ್ಜನರಿಗೂ ನೆಮ್ಮದಿಯನ್ನುಂಟುಮಾಡುವುದಕ್ಕಾಗಿ ಆ ಈಶ್ವರನು ಸಾತ್ವತಕುಲದಲ್ಲಿ ಅವತರಿಸಿ, ತನ್ನ ಕೀರ್ತಿಯನ್ನು ವಿಸ್ತರಿಸುತ್ತ ವ್ರಜದಲ್ಲಿ ಇದ್ದಾನೆ. ಸಮಸ್ತ ಮಂಗಳಕರವಾದ ಅವನ ಕೀರ್ತಿಯನ್ನು ದೇವತೆಗಳು ಹಾಡುತ್ತಾರೆ (೧೩). ಆತನನ್ನು ಈ ದಿನ ನಿಶ್ಚಯವಾಗಿ ನೋಡುವೆನು! ಕಣ್ಣಿದ್ದವರಿಗೆ ಮಹೋತ್ಸವವನ್ನುಂಟುಮಾಡವುದೂ ಲಕ್ಷ್ಮಿಗೆ ಪ್ರೀತಿಯ ನಿಲ್ದಾಣವೂ ಜಗನ್ಮನೋಹರವೂ ಆದ ರೂಪವನ್ನು ಧರಿಸಿರುವ, ಮಹಾತ್ಮರಿಗೆ ಗತಿಯೂ ಗುರುವೂ ಆದವನನ್ನು ಈ ದಿನ ನೋಡುವೆನು!

ಅಥಾವರೂಢಃ ಸಪದೀಶಯೋ ರಥಾತ್
ಪ್ರಧಾನಪುಂಸೋರ್ಶ್ಚರಣಂ ಸ್ವಲಬ್ಧಯೇ ।
ಧಿಯಾ ಧೃತಂ ಯೋಗಿಭಿರಪ್ಯಹಂ ಧ್ರುವಂ
ನಮಸ್ಯ ಆಭ್ಯಾಂ ಚ ಸಖೀನ್ ವನೌಕಸಃ ॥ ೧೫

ಅಪ್ಯಂಘ್ರಿಮೂಲೇ ಪತಿತಸ್ಯ ಮೇ ವಿಭುಃ
ಶಿರಸ್ಯಧಾಸ್ಯನ್ನಿಜಹಸ್ತಪಂಕಜಮ್ ।
ದತ್ತಾಭಯಂ ಕಾಲಭುಜಂಗರಂಹಸಾ
ಪ್ರೋದ್ವೇಜಿತಾನಾಂ ಶರಣೈಷಿಣಾಂ ನೃಣಾಮ್ ॥ ೧೬

ಸಮರ್ಹಣಂ ಯತ್ರ ನಿಧಾಯ ಕೌಶಿಕ-
ಸ್ತಥಾ ಬಲಿಶ್ಚಾಪ ಜಗತ್ರಯೇಂದ್ರತಾಮ್ ।
ಯದ್ ವಾ ವಿಹಾರೇ ವ್ರಜಯೋಷಿತಾಂ ಶ್ರಮಂ
ಸ್ಪರ್ಶೇನ ಸೌಗಂಧಿಕಗಂಧ್ಯಪಾನುದತ್ ॥ ೧೭

ನ ಮಯ್ಯುಪೈಷ್ಯತ್ಯರಿಬುದ್ಧಿಮಚ್ಯುತಃ
ಕಂಸಸ್ಯ ದೂತಃ ಪ್ರಹಿತೋಽಪಿ ವಿಶ್ವದೃಕ್ ।

---

ಇಂದು ನನಗೆ ಸುಪ್ರಭಾತವಾಯಿತು! (೧೪). ರಥದಿಂದ ಇಳಿದೊಡನೆ ನಾನು ಪ್ರಧಾನಪುರುಷರೂ ಈಶ್ವರರೂ ಆದ ರಾಮಕೃಷ್ಣರ ಚರಣಕ್ಕೆ, ಯೋಗಿಗಳೂ ಸಹ ಆತ್ಮಲಾಭಕ್ಕಾಗಿ ಬುದ್ಧಿಯಿಂದ ಮಾತ್ರ ಗ್ರಹಿಸಿದ ಚರಣಕ್ಕೆ, (ಸಾಕ್ಷಾತ್ತಾಗಿ) ನಮಸ್ಕರಿಸುವೆನು! (೧೫). ಪಾದಮೂಲದಲ್ಲಿ ಅಡ್ಡಬಿದ್ದ ನನ್ನ ತಲೆಯಮೇಲೆ ಆ ಸ್ವಾಮಿಯು ತನ್ನ ಕರಕಮಲವನ್ನು–ಕಾಲಸರ್ಪದ ರಭಸಕ್ಕೆ ಅಂಜಿ ಶರಣಾಗತರಾದ ಜನರಿಗೆ ಅಭಯವನ್ನಿತ್ತ ಕರಕಮಲವನ್ನು, ಇರಿಸಬಹುದಲ್ಲವೆ? (೧೬). ಯಾವ ಕೈಗೆ ಇಂದ್ರನೂ ಬಲಿಚಕ್ರವರ್ತಿಯೂ ಅರ್ಘ್ಯವನ್ನಿತ್ತು ಪೂಜಿಸಿ ಮೂರುಲೋಕದ ಒಡೆಯರಾದರೋ, ಸೌಗಂಧಿಕಪುಷ್ಪದ ಸುಗಂಧವನ್ನು ಬೀರುವ ಯಾವ ಕೈ ಸ್ಪರ್ಶಮಾತ್ರದಿಂದ ರಾಸಕ್ರೀಡೆಯಲ್ಲಿ ವ್ರಜಸ್ತ್ರೀಯರ ಆಯಾಸವನ್ನು ಪರಿಹರಿಸಿತೋ ಆ ಕೈಯನ್ನು ನನ್ನ ಶಿರಸ್ಸಿನ ಮೇಲೆ ಇರಿಸಿಯಾನಲ್ಲವೆ? (೧೭). ನಾನು ಕಂಸನಿಂದ ಪ್ರೇಷಿತನಾದ ದೂತನಾದರೂ ಸರ್ವಜ್ಞನಾದ ಅಚ್ಯುತನು ನನ್ನಲ್ಲಿ ಶತ್ರುವೆಂಬ ಭಾವನೆಯನ್ನು

ಯೋಽಂತರ್ಬಹಿಶ್ಚೇತಸ ಏತದೀಹಿತಂ
ಕ್ಷೇತ್ರಜ್ಞ ಈಕ್ಷತ್ಯಮಲೇನ ಚಕ್ಷುಷಾ ॥ ೧೮

ಅಪ್ಯಂಘ್ರಿಮೂಲೇಽವಹಿತಂ ಕೃತಾಂಜಲಿಂ
ಮಾಮೀಕ್ಷಿತಾ ಸಸ್ಮಿತಮಾರ್ದ್ರಯಾ ದೃಶಾ ।
ಸಪದ್ಯಪಧ್ವಸ್ತಸಮಸ್ತಕಿಲ್ಬಿಷೋ
ವೋಢಾ ಮುದಂ ವೀತವಿಶಂಕ ಊರ್ಜಿತಾಮ್ ॥ ೧೯

ಸುಹೃತ್ತಮಂ ಜ್ಞಾತಿಮನನ್ಯದೈವತಂ
ದೋರ್ಭ್ಯಾಂ ಬೃಹದ್ಭ್ಯಾಂ ಪರಿರಪ್ಸ್ಯತೇಽಥ ಮಾಮ್ ।
ಆತ್ಮಾ ಹಿ ತೀರ್ಥೀಕ್ರಿಯತೇ ತದೈವ ಮೇ
ಬಂಧಶ್ಚ ಕರ್ಮಾತ್ಮಕ ಉಚ್ಛ್ವಸಿತ್ಯತಃ ॥ ೨೦

ಲಬ್ಧಾಂಗಸಂಗಂ ಪ್ರಣತಂ ಕೃತಾಂಜಲಿಂ
ಮಾಂ ವಕ್ಷ್ಯತೇಽಕ್ರೂರ ತತೇತ್ಯುರುಶ್ರವಾಃ ।
ತದಾ ವಯಂ ಜನ್ಮಭೃತೊ ಮಹೀಯಸಾ
ನೈವಾದೃತೋ ಯೋ ಧಿಗಮುಷ್ಯ ಜನ್ಮ ತತ್ ॥ ೨೧

---

ತಳೆಯಲಾರ. ಅಂತರ್ಯಾಮಿಯಾದ ಆತನು ನನ್ನ ಅಂತರಂಗದ ಒಳಗಿನ ಮತ್ತು ಹೊರಗಿನ ಕ್ರಿಯೆಗಳೆಲ್ಲವನ್ನೂ ನಿರ್ಮಲನೇತ್ರದಿಂದ ನೋಡಿ ಅರಿತಿರುವನು (೧೮). ಅವನ ಪಾದತಳದಲ್ಲಿ ಕೃಪೆಗಾಗಿ ಅಂಜಲಿಯೊಡ್ಡಿನಿಂತ ನನ್ನನ್ನು ಶ್ರೀಕೃಷ್ಣನು ಮುಗುಳ್ನಗೆಬೀರುತ್ತ ಕರುಣಾರ್ದ್ರವಾದ ದೃಷ್ಟಿಯಿಂದ ನೋಡಿಯಾನೆ? ನೋಡಿದೊಡನೆ ನನ್ನ ಸಮಸ್ತ ಕಿಲ್ಬಿಷಗಳೂ ತೊಡೆದುಹೋಗುವುವು! ನಾನು ಪರಮಾನಂದವನ್ನು ಹೊಂದಿ ನಿಶ್ಚಿಂತನಾಗುವೆನು (೧೯). ಅವನಿಗೆ ಅತ್ಯಂತ ಆಪ್ತನೂ ಬಂಧುವೂ ಅವನೇ ದೇವತೆಯೆಂದು ನಂಬಿದವನೂ ಆದ ನನ್ನನ್ನು, ತನ್ನ ನೀಳವಾದ ತೋಳುಗಳಿಂದ ಆಲಿಂಗಿಸಿಕೊಳ್ಳುವನು! ಆಗ ಈ ದೇಹವು ಪವಿತ್ರವಾಗುವುದು. ಕರ್ಮಬಂಧದ ಬಿಗಿ ಸಡಲಿ ಈ ದೇಹವು ಉಸಿರಾಡೀತು! (೨೦). ಆಲಿಂಗಿಸಲ್ಪಟ್ಟ ನಾನು ತಲೆಬಾಗಿ ಕೈಮುಗಿದು ನಿಂತಿರಲು, ಆ ಕೀರ್ತಿಶಾಲಿಯು 'ಅಪ್ಪಾ–ಅಕ್ರೂರ!' ಎಂದು ಮಾತಾಡಿಸುವನು. ಆಗಲೇ ನಾನು ಹುಟ್ಟಿದ್ದು ಸಾರ್ಥಕ! ಆ ಮಹಾತ್ಮನು ಯಾರನ್ನು

ನ ತಸ್ಯ ಕಶ್ಚಿದ್ ದಯಿತಃ ಸುಹೃತ್ತಮೋ
ನ ಚಾಪ್ರಿಯೋ ದ್ವೇಷ್ಯ ಉಪೇಕ್ಷ್ಯ ಏವ ವಾ ।
ತಥಾಪಿ ಭಕ್ತಾನ್ ಭಜತೇ ಯಥಾ ತಥಾ
ಸುರದ್ರುಮೋ ಯದ್ವದುಪಾಶ್ರಿತೋಽರ್ಥದಃ ॥ ೨೨

ಕಿಂಚಾಗ್ರಜೋ ಮಾವನತಂ ಯದೂತ್ತಮಃ
ಸ್ಮಯನ್ ಪರಿಷ್ವಜ್ಯ ಗೃಹೀತಮಂಜಲೌ ।
ಗೃಹಂ ಪ್ರವೇಶ್ಯಾಪ್ತಸಮಸ್ತಸತ್ಕೃತಂ
ಸಂಪ್ರಕ್ಷ್ಯತೇ ಕಂಸಕೃತಂ ಸ್ವಬಂಧುಷು ॥ ೨೩

ಶ್ರೀಶುಕ ಉವಾಚ—

ಇತಿ ಸಂಚಿಂತಯನ್ ಕೃಷ್ಣಂ ಶ್ವಫಲ್ಕತನಯೋಽಧ್ವನಿ ।
ರಥೇನ ಗೋಕುಲಂ ಪ್ರಾಪ್ತಃ ಸೂರ್ಯಶ್ಚಾಸ್ತಗಿರಿಂ ನೃಪ ॥ ೨೪

ಪದಾನಿ ತಸ್ಯಾಖಿಲಲೋಕಪಾಲ-
ಕಿರೀಟಜುಷ್ಟಾಮಲಪಾದರೇಣೋಃ ।

---

ಆದರಿಸಿ ಮಾತಾಡಿಸುವುದಿಲ್ಲವೋ ಅವನ ಜನ್ಮಕ್ಕೆ ಧಿಕ್ಕಾರ! (೨೧). ವಾಸ್ತವದಲ್ಲಿ ಆತನಿಗೆ ಪ್ರಿಯನೂ ಇಲ್ಲ, ಅಪ್ರಿಯನೂ ಇಲ್ಲ. ಸ್ನೇಹಿತನೂ ಇಲ್ಲ, ವೈರಿಯೂ ಇಲ್ಲ. ಉಪೇಕ್ಷಣೀಯನೂ ಇಲ್ಲ. ಆದರೂ, ಆಶ್ರಯಿಸಿದವರಿಗೆ ಕಲ್ಪವೃಕ್ಷವು ಫಲವೀಯುವಂತೆ, ಭಕ್ತರಿಗೆ ಇಷ್ಟಾರ್ಥವನ್ನು ನೀಡುತ್ತಾನೆ (೨೨). ಅಲ್ಲದೆ ಯದೂತ್ತಮನೂ ಕೃಷ್ಣಾಗ್ರಜನೂ ಆದ ಬಲರಾಮನು ನಮಸ್ಕರಿಸಿದ ನನ್ನನ್ನು ನಗುತ್ತ ಆಲಿಂಗಿಸಿ, ಕೈಮುಗಿದ ಕೈಯನ್ನು ಹಿಡಿದು ಮನೆಯೊಳಗೆ ಕರೆದೊಯ್ಯುವನು. ನನಗೆ ಅತಿಥಿಸತ್ಕಾರವನ್ನು ನೀಡಿ, ತನ್ನ ಬಂಧುಗಳ ವಿಷಯದಲ್ಲಿ ಕಂಸನ ಕೃತ್ಯವನ್ನು ಕುರಿತು ಪ್ರಶ್ನೆಯನ್ನೆತ್ತುವನು" ಎಂದುಕೊಂಡನು (೨೩). ಪರೀಕ್ಷಿತರಾಜ, ಈ ರೀತಿಯಾಗಿ ಶ್ವಫಲ್ಕನ ಪುತ್ರನಾದ ಅಕ್ರೂರನು ದಾರಿಯಲ್ಲಿ ಶ್ರೀಕೃಷ್ಣನ ವಿಷಯವಾಗಿ ಆಲೋಚಿಸುತ್ತ ರಥದಲ್ಲಿ ಪ್ರಯಾಣಮಾಡಿ ಗೋಕುಲವನ್ನು ಸೇರಿದನು. ಅಷ್ಟು ಹೊತ್ತಿಗೆ ಸೂರ್ಯನು ಅಸ್ತಂಗತನಾದನು (೨೪). ಸಮಸ್ತಲೋಕಪಾಲರೂ ತಮ್ಮ ಕಿರೀಟಗಳಲ್ಲಿ ಯಾವಾತನ ನಿರ್ಮಲಪಾದರೇಣುಗಳನ್ನು ಮುಡಿದಿರುವರೋ

ದದರ್ಶ ಗೋಷ್ಠೇ ಕ್ಷಿತಿಕೌತುಕಾನಿ
ವಿಲಕ್ಷಿತಾನ್ಯಬ್ಜ ಯವಾಂಕುಶಾದ್ಯೈಃ ॥ ೨೫

ತದ್ದರ್ಶನಾಹ್ಲಾದವಿವೃದ್ಧಸಂಭ್ರಮಃ
ಪ್ರೇಮ್ಣೋರ್ಧ್ವರೋಮಾಶ್ರುಕಲಾಕುಲೇಕ್ಷಣಃ ।
ರಥಾದವಸ್ಕಂದ್ಯ ಸ ತೇಷ್ವಚೇಷ್ಟತ
ಪ್ರಭೋರಮೂನ್ಯಂಘ್ರಿರಜಾಂಸ್ಯಹೋ ಇತಿ ॥ ೨೬

ದೇಹಂಭೃತಾಮಿಯಾನರ್ಥೋ ಹಿತ್ವಾ ದಂಭಂ ಭಿಯಂ ಶುಚಮ್ ।
ಸಂದೇಶಾದ್ ಯೋ ಹರೇರ್ಲಿಂಗದರ್ಶನಶ್ರವಣಾದಿಭಿಃ ॥ ೨೭

ದದರ್ಶ ಕೃಷ್ಣಂ ರಾಮಂ ಚ ವ್ರಜೇ ಗೋದೋಹನಂ ಗತೌ ।
ಪೀತನೀಲಾಂಬರಧರೌ ಶರದಂಬುರುಹೇಕ್ಷಣೌ ॥ ೨೮

ಕಿಶೋರೌ ಶ್ಯಾಮಲಶ್ವೇತೌ ಶ್ರೀನಿಕೇತೌ ಬೃಹದ್ಭುಜೌ ।
ಸುಮುಖೌ ಸುಂದರವರೌ ಬಾಲದ್ವಿರದವಿಕ್ರಮೌ ॥ ೨೯

---

ಆ ಶ್ರೀಕೃಷ್ಣನ ಹೆಜ್ಜೆಯ ಗುರುತುಗಳನ್ನು ಅಕ್ರೂರನು ವ್ರಜದಲ್ಲಿ ಕಂಡನು. ಕಮಲ, ಯವ, ಅಂಕುಶ–ಮೊದಲಾದ ಚಿಹ್ನೆಗಳಿಂದ ಆ ಗುರುತುಗಳು ಭೂಮಿಗೆ ಭೂಷಣವಾಗಿ ಗೋಚರಿಸಿದವು (೨೫). ಅವುಗಳ ದರ್ಶನದಿಂದ ಅಕ್ರೂರನಿಗೆ ಹರ್ಷವಾಗಿ ಸಂಭ್ರಮವು ಉಕ್ಕಿತು. ಪ್ರೇಮದಿಂದ ಅವನ ರೋಮಗಳು ನಿಮಿರಿದವು. ಆನಂದಬಾಷ್ಪವು ಕಣ್ಣಲ್ಲಿ ಮಿಡಿಯಿತು. ಅವನು ರಥದಿಂದ ಧುಮುಕಿ "ಆಹಾ! ಇವು ನನ್ನ ಸ್ವಾಮಿಯ ಪಾದಧೂಳಿಗಳು" ಎನ್ನುತ್ತ ಧೂಳಿಯಲ್ಲಿ ಹೊರಳಾಡಿದನು! (೨೬). ಪರೀಕ್ಷಿತರಾಜ, ಕಂಸನ ಸಂದೇಶವಾದ ಮೇಲೆ ಅಕ್ರೂರನಿಗೆ ಶ್ರೀಹರಿಯ ಚಿಹ್ನದರ್ಶನಶ್ರವಣಾದಿಗಳಿಂದ ಯಾವ ಮಾನಸಿಕ ಸ್ಥಿತಿಯುಂಟಾಯಿತೋ ಅದೇ ಪುರುಷಾರ್ಥವೆನ್ನುವುದು. ಠಕ್ಕುತನ, ಭಯ, ಶೋಕಗಳನ್ನು ವರ್ಜಿಸಿ ಆ ಮಾನಸಸ್ಥಿತಿಯನ್ನು ಪಡೆದುಕೊಳ್ಳುವುದು ದೇಹವೆತ್ತಿದವರ ಪರಮಲಕ್ಷ್ಯ (೨೭). ಅನಂತರ ಅಕ್ರೂರನು ವ್ರಜದಲ್ಲಿ ಮುಂದೆ ಹೋಗಿ ಹಾಲುಕರೆಯುವ ಸ್ಥಳದಲ್ಲಿದ್ದ ಶ್ರೀಕೃಷ್ಣನನ್ನೂ ಬಲರಾಮನನ್ನೂ ನೋಡಿದನು. ಒಬ್ಬನು ಪೀತಾಂಬರವನ್ನೂ ಇನ್ನೊಬ್ಬನು ನೀಲಾಂಬರವನ್ನೂ ಉಟ್ಟಿದ್ದರು. ಶರತ್ಕಾಲದ ತಾವರೆಯಂತೆ ಅವರ ನೇತ್ರಗಳಿದ್ದವು (೨೮). ಕಿಶೋರವಯಸ್ಸಿನವರೂ ಶ್ಯಾಮಲ–ಶ್ವೇತವರ್ಣದವರೂ ತೇಜೋನಿಧಿಗಳೂ

ಧ್ವಜವಜ್ರಾಂಕುಶಾಂಭೋಜೈಶ್ಚಿಹ್ನಿತೈರಂಘ್ರಿಭಿರ್ವ್ರಜಮ್ ।
ಶೋಭಯಂತೌ ಮಹಾತ್ಮಾನಾವನುಕ್ರೋಶಸ್ಮಿತೇಕ್ಷಣೌ ॥ ೩೦

ಉದಾರರುಚಿರಕ್ರೀಡೌ ಸ್ರಗ್ವಿಣೌ ವನಮಾಲಿನೌ ।
ಪುಣ್ಯಗಂಧಾನುಲಿಪ್ತಾಂಗೌ ಸ್ನಾತೌ ವಿರಜವಾಸಸೌ ॥ ೩೧

ಪ್ರಧಾನಪುರುಷಾವಾದ್ಯೌ ಜಗದ್ಧೇತೂ ಜಗತ್ಪತೀ ।
ಅವತೀರ್ಣೌ ಜಗತ್ಯರ್ಥೇ ಸ್ವಾಂಶೇನ ಬಲಕೇಶವೌ ॥ ೩೨

ದಿಶೋ ವಿತಿಮಿರಾ ರಾಜನ್ ಕುರ್ವಾಣೌ ಪ್ರಭಯಾ ಸ್ವಯಾ ।
ಯಥಾ ಮಾರಕತಃ ಶೈಲೋ ರೌಪ್ಯಶ್ಚ ಕನಕಾಚಿತೌ ॥ ೩೩

ರಥಾತ್ತೂರ್ಣಮವಪ್ಲುತ್ಯ ಸೋಽಕ್ರೂರಃ ಸ್ನೇಹವಿಹ್ವಲಃ ।
ಪಪಾತ ಚರಣೋಪಾಂತೇ ದಂಡವದ್ ರಾಮಕೃಷ್ಣಯೋಃ ॥ ೩೪

ಭಗವದ್ದರ್ಶನಾಹ್ಲಾದಬಾಷ್ಪಪರ್ಯಾಕುಲೇಕ್ಷಣಃ ।
ಪುಲಕಾಚಿತಾಂಗ ಔತ್ಕಂಠ್ಯಾತ್ ಸ್ವಾಖ್ಯಾನೇ ನಾಶಕನ್ನೃಪ ॥ ೩೫

---

ವಿಶಾಲಭುಜರೂ ಮನೋಜ್ಞವಾದ ಮುಖವುಳ್ಳವರೂ ಅತ್ಯಂತ ಸುಂದರರೂ ಮರಿಯಾನೆಗಳಂತೆ ಪರಾಕ್ರಮಿಗಳೂ (೨೯) ಧ್ವಜ, ವ್ರಜ, ಅಂಕುಶ, ಕಮಲ –ಮುಂತಾದ ಚಿಹ್ನೆಗಳಿಂದ ಕೂಡಿದ ಪಾದಗಳಿಂದ ವ್ರಜವನ್ನು ಶೋಭೆಗೊಳಿಸ ತಕ್ಕವರೂ ಮಹಾತ್ಮರೂ ಅನುಕಂಪೆಯ ನಗೆಯಿಂದ ಭೂಷಿತನೇತ್ರರೂ (೩೦) ಉದಾರವೂ ಮನೋಹರವೂ ಆದ ಕ್ರೀಡಾವಿಲಾಸವುಳ್ಳವರೂ ರತ್ನಹಾರಧಾರಿ ಗಳೂ ವನಮಾಲಿಗಳೂ ಶ್ರೇಷ್ಠವಾದ ಗಂಧವನ್ನು ಮೈಗೆ ಹಚ್ಚಿಕೊಂಡವರೂ ಸ್ನಾನಮಾಡಿ ಶುಚಿಯಾದವರೂ ಶುಭ್ರವಸ್ತ್ರೋಪೇತರೂ (೩೧) ಪ್ರಧಾನ ಪುರುಷರೂ ಜಗತ್ತಿನ ಆದಿಕಾರಣರೂ ಜಗದೀಶ್ವರರೂ ಭೂಭಾರಹರಣಕ್ಕಾಗಿ ಅಂಶದಿಂದ ಮೂರ್ತಿಭೇದವನ್ನು ತಳೆದವರೂ ಆದ ಶ್ರೀಕೃಷ್ಣಬಲರಾಮರನ್ನು ಅಕ್ರೂರನು ಕಂಡನು (೩೨). ರಾಜ, ಸುವರ್ಣಭೂಷಿತವಾದ ಮರಕತಶೈಲ ದಂತೆ, ಬೆಳ್ಳಿಯ ಬೆಟ್ಟದಂತೆ, ತಮ್ಮ ಪ್ರಭೆಯಿಂದ ದಿಕ್ಕುಗಳನ್ನು ಬೆಳಗುತ್ತಿದ್ದ ಅವರನ್ನು ಅಕ್ರೂರನು ನೋಡಿದನು (೩೩). ಒಡನೆಯೇ ಅಕ್ರೂರನು ರಥ ದಿಂದ ಧುಮುಕಿ ಪ್ರೇಮವಿಹ್ವಲನಾಗಿ ರಾಮಕೃಷ್ಣರ ಪಾದಗಳ ಬಳಿ ದಂಡ ದಂತೆ ಬಿದ್ದು ನಮಸ್ಕರಿಸಿದನು (೩೪). ಭಗವದ್ದರ್ಶನದಿಂದ ಒತ್ತರಿಸಿದ ಆನಂದ ಬಾಷ್ಪಗಳು ಅವನ ಕಣ್ಣಲ್ಲಿ ತುಳುಕಿದವು. ಸರ್ವಾಂಗಗಳೂ ಪುಳಕಿತವಾದವು.

ಭಗವಾಂಸ್ತಮಭಿಪ್ರೇತ್ಯ ರಥಾಂಗಾಂಕಿತಪಾಣಿನಾ ।
ಪರಿರೇಭೇಽಭ್ಯುಪಾಕೃಷ್ಯ ಪ್ರೀತಃ ಪ್ರಣತವತ್ಸಲಃ ॥ ೩೬

ಸಂಕರ್ಷಣಶ್ಚ ಪ್ರಣತಮುಪಗುಹ್ಯ ಮಹಾಮನಾಃ ।
ಗೃಹೀತ್ವಾ ಪಾಣಿನಾ ಪಾಣೀ ಅನಯತ್ ಸಾನುಜೋ ಗೃಹಮ್ ॥

ಪೃಷ್ಟ್ವಾಽಥ ಸ್ವಾಗತಂ ತಸ್ಮೈ ನಿವೇದ್ಯ ಚ ವರಾಸನಮ್ ।
ಪ್ರಕ್ಷಾಲ್ಯ ವಿಧಿವತ್ ಪಾದೌ ಮಧುಪರ್ಕಾರ್ಹಣಮಾಹರತ್ ॥ ೩೮

ನಿವೇದ್ಯ ಗಾಂ ಚಾತಿಥಯೇ ಸಂವಾಹ್ಯ ಶ್ರಾಂತಮಾದೃತಃ ।
ಅನ್ನಂ ಬಹುಗುಣಂ ಮೇಧ್ಯಂ ಶ್ರದ್ಧಯೋಪಾಹರದ್ ವಿಭುಃ ॥ ೩೯

ತಸ್ಮೈ ಭುಕ್ತವತೇ ಪ್ರೀತ್ಯಾ ರಾಮಃ ಪರಮಧರ್ಮವಿತ್ ।
ಮುಖವಾಸೈರ್ಗಂಧಮಾಲ್ಯೈಃ ಪರಾಂ ಪ್ರೀತಿಂ ವ್ಯಧಾತ್ ಪುನಃ ॥

ಪಪ್ರಚ್ಛ ಸತ್ಕೃತಂ ನಂದಃ ಕಥಂ ಸ್ಥ ನಿರನುಗ್ರಹೇ ।
ಕಂಸೇ ಜೀವತಿ ದಾಶಾರ್ಹ ಸೌನಪಾಲಾ ಇವಾವಯಃ ॥ ೪೧

---

ಸಂಭ್ರಮಭರದಲ್ಲಿ ತನ್ನ ಹೆಸರು ಹೇಳಲೂ ಅವನಿಗೆ ಸಾಧ್ಯವಾಗಲಿಲ್ಲ! (೩೫). ಭಕ್ತವತ್ಸಲನಾದ ಭಗವಂತನು ಎಲ್ಲವನ್ನೂ ಅರಿತು ಸಂಪ್ರೀತನಾಗಿ ಸುದರ್ಶನ ಚಕ್ರಾಂಕಿತವಾದ ಕೈಯಿಂದ ಅಕ್ರೂರನನ್ನು ಬರಸೆಳೆದು ಅಪ್ಪಿಕೊಂಡನು(೩೬). ತನಗೆ ವಂದಿಸಿದ ಅಕ್ರೂರನ ಎರಡುಕೈಗಳನ್ನೂ ಮಹಾತ್ಮನಾದ ಸಂಕರ್ಷಣನು (ಬಲರಾಮನು) ಹಿಡಿದುಕೊಂಡು ತನ್ನ ತಮ್ಮನೊಡನೆ ಅವನನ್ನು ಮನೆಗೆ ಕರೆದೊಯ್ದನು (೩೭). ಬಲರಾಮನು ಅಕ್ರೂರನಿಗೆ ಸ್ವಾಗತವನ್ನು ಬಯಸಿ, ಉತ್ತಮ ಪೀಠದಲ್ಲಿ ಕುಳ್ಳಿರಿಸಿ, ವಿಧಿವತ್ತಾಗಿ ಪಾದಗಳನ್ನುತೊಳೆದು ಮಧುಪರ್ಕದಿಂದ ಸತ್ಕರಿಸಿದನು. ಅತಿಥಿಗೆ ಗೋವನ್ನರ್ಪಿಸಿ, ಬಳಲಿದ್ದ ಅವನ ಪಾದಗಳನ್ನು ಆದರದಿಂದ ನೀವಿ, ನಾನಾವಿಧದ ಪವಿತ್ರಾನ್ನವನ್ನು ಶ್ರದ್ಧೆಯಿಂದರ್ಪಿಸಿ ಭೋಜನಮಾಡಿಸಿದನು (೩೮–೩೯). ಅಕ್ರೂರನು ಭೋಜನಮಾಡಿದಮೇಲೆ ಪರಮಧರ್ಮಜ್ಞನಾದ ಬಲರಾಮನು ಅವನಿಗೆ ತಾಂಬೂಲಾದಿಮುಖವಾಸಗಳನ್ನಿತ್ತು ಗಂಧಮಾಲ್ಯಗಳನ್ನರ್ಪಿಸಿ ಬಹಳ ಸಂತೋಷಪಡಿಸಿದನು (೪೦). ಹೀಗೆ ಸತ್ಕೃತನಾದ ಅವನನ್ನು ಕುರಿತು ನಂದಗೋಪನು "ಅಕ್ರೂರ, ನಿರ್ದಯನಾದ ಕಂಸನು ಜೀವಿಸಿರುವಾಗ ಅವನ ಬಳಿ, ಕಟುಕನ ಕಾವಲಲ್ಲಿರುವ ಕುರಿಗಳಂತೆ

ಯೋಽವಧೀತ್ ಸ್ವಸ್ವಸುಸ್ತೋಕಾನ್ ಕ್ರೋಶಂತ್ಯಾ ಅಸುತೃಪ್ ಖಲಃ
ಕಿಂ ನು ಸ್ವಿತ್ತತ್ಪ್ರಜಾನಾಂ ವಃ ಕುಶಲಂ ವಿಮೃಶಾಮಹೇ ॥ ೪೨

ಇತ್ಥಂ ಸೂನೃತಯಾ ವಾಚಾ ನಂದೇನ ಸುಸಭಾಜಿತಃ ।
ಅಕ್ರೂರಃ ಪರಿಪೃಷ್ಟೇನ ಜಹಾವಧ್ವಪರಿಶ್ರಮಮ್ ॥ ೪೩

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಾತ್ರಿಂಶಾಧ್ಯಾಯಃ



ಹೇಗೆ ಇದ್ದೀರಿ! (೪೧). ತನ್ನ ತಂಗಿಯ ಮಕ್ಕಳನ್ನು, ಗೋಳಾಡುತ್ತಿದ್ದ ಅವಳೆದುರಿಗೇ ಕೊಂದುಹಾಕಿದ ಪರಮನೀಚ ಅವನು. ಇನ್ನೊಬ್ಬರ ಪ್ರಾಣಗಳನ್ನೇ ತರ್ಪಣಕೊಡತಕ್ಕವನು! ಹೀಗಿರುವಾಗ ಅವನ ಪ್ರಜೆಗಳಾದ ನಿಮ್ಮ ಕುಶಲವನ್ನು ಏನೆಂದು ವಿಚಾರಿಸೋಣ!" ಎಂದು ಕೇಳಿದನು (೪೨). ಹೀಗೆ ಪ್ರಿಯವೂ ಸತ್ಯವೂ ಆದ ಸಂಭಾಷಣೆಯನ್ನು ನಡೆಸಿ ನಂದನಿಂದ ಸತ್ಕೃತನಾದ ಅಕ್ರೂರನಿಗೆ ಮಾರ್ಗಶ್ರಮವು ಕಳೆಯಿತು (೪೩).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತೆಂಟನೆಯ ಅಧ್ಯಾಯ



## ಏಕೋನಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

**ಸುಖೋಪವಿಷ್ಟಃ ಪರ್ಯಂಕೇ ರಾಮಕೃಷ್ಣೋರುಮಾನಿತಃ ।**
**ಲೇಭೇ ಮನೋರಥಾನ್ ಸರ್ವಾನ್ ಪಥಿ ಯಾನ್ ಸ ಚಕಾರ ಹ ॥ ೧**

**ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ ।**
**ತಥಾಪಿ ತತ್ಪರಾ ರಾಜನ್ನ ಹಿ ವಾಂಛಂತಿ ಕಿಂಚನ ॥ ೨**

**ಸಾಯಂತನಾಶನಂ ಕೃತ್ವಾ ಭಗವಾನ್ ದೇವಕೀಸುತಃ ।**
**ಸುಹೃತ್ಸು ವೃತ್ತಂ ಕಂಸಸ್ಯ ಪಪ್ರಚ್ಛಾನ್ಯಚ್ಚಿಕೀರ್ಷಿತಮ್ ॥ ೩**

ಶ್ರೀಭಗವಾನುವಾಚ—

**ತಾತ ಸೌಮ್ಯಾಗತಃ ಕಚ್ಚಿತ್ ಸ್ವಾಗತಂ ಭದ್ರಮಸ್ತು ವಃ ।**
**ಅಪಿ ಸ್ವಜ್ಞಾತಿಬಂಧೂನಾಮನಮೀವಮನಾಮಯಮ್ ॥ ೪**

## ಅಧ್ಯಾಯ ೩೯

ಶ್ರೀಕೃಷ್ಣ ಬಲರಾಮರು ಮಧುರೆಗೆ ಹೊರಡುವುದು. ಗೋಪಿಯರ ವಿಲಾಪ.
ಯಮುನೆಯಲ್ಲಿ ಅಕ್ರೂರನಿಗೆ ವೈಕುಂಠದರ್ಶನ

ಬಲರಾಮಶ್ರೀಕೃಷ್ಣರಿಂದ ವಿಶೇಷವಾಗಿ ಸತ್ಕೃತನಾದ ಅಕ್ರೂರನು ಮಂಚದ ಮೇಲೆ ಸುಖವಾಗಿ ಕುಳಿತುಕೊಂಡಿದ್ದನು. ದಾರಿಯಲ್ಲಿ ಅವನು ನೆನೆಸಿಕೊಂಡ ಮನೋರಥಗಳೆಲ್ಲವೂ ಸಂದವು (೧). ಲಕ್ಷ್ಮೀನಿವಾಸನಾದ ಭಗವಂತನು ಪ್ರಸನ್ನನಾದರೆ ಯಾವುದು ಅಲಭ್ಯವಾದೀತು? ಆದರೂ, ರಾಜ, ಭಗವದ್ಭಕ್ತರು ಏನನ್ನೂ ಬಯಸುವುದಿಲ್ಲ (೨). ರಾತ್ರಿ ಭೋಜನವಾದಮೇಲೆ ದೇವಕೀತನಯನು ಅಕ್ರೂರನನ್ನು ಕುರಿತು, ಸ್ನೇಹಿತರ ವಿಷಯದಲ್ಲಿ ಕಂಸನ ವರ್ತನೆ ಹೇಗಿದೆಯೆಂದೂ ಅವನು ಇನ್ನೇನು ಮಾಡಲಿರುವನೆಂದೂ ವಿಚಾರಿಸಿದನು(೩). ಭಗವಂತನು ಹೇಳಿದ್ದೇನೆಂದರೆ: "ಅಪ್ಪಾ–ಸೌಮ್ಯ, ಸುಖವಾಗಿ ಪ್ರಯಾಣ ಮಾಡಿ ಬಂದಿದ್ದೀಯೆ. ನಿನಗೆ ಶುಭವಾಗಲಿ. ನಿನ್ನ ಜ್ಞಾತಿಗಳಿಗೂ ಬಾಂಧವ

**ಕಿಂ ನು ನಃ ಕುಶಲಂ ಪೃಚ್ಛೇ ಏಧಮಾನೇ ಕುಲಾಮಯೇ ।**
**ಕಂಸೇ ಮಾತುಲನಾಮ್ನ್ಯಂಗ ಸ್ವಾನಾಂ ನಸ್ತತ್ಪ್ರಜಾಸು ಚ ॥ ೫**

**ಅಹೋ ಅಸ್ಮದಭೂದ್ ಭೂರಿ ಪಿತ್ರೋರ್ವೃಜಿನಮಾರ್ಯಯೋಃ ।**
**ಯದ್ಧೇತೋಃ ಪುತ್ರಮರಣಂ ಯದ್ಧೇತೋರ್ಬಂಧನಂ ತಯೋಃ ॥ ೬**

**ದಿಷ್ಟ್ಯಾದ್ಯ ದರ್ಶನಂ ಸ್ವಾನಾಂ ಮಹ್ಯಂ ವಃ ಸೌಮ್ಯ ಕಾಂಕ್ಷಿತಮ್ ।**
**ಸಂಜಾತಂ ವರ್ಣ್ಯತಾಂ ತಾತ ತವಾಗಮನಕಾರಣಮ್ ॥ ೭**

ಶ್ರೀಶುಕ ಉವಾಚ—

**ಪೃಷ್ಟೋ ಭಗವತಾ ಸರ್ವಂ ವರ್ಣಯಾಮಾಸ ಮಾಧವಃ ।**
**ವೈರಾನುಬಂಧಂ ಯದುಷು ವಸುದೇವವಧೋದ್ಯಮಮ್ ॥ ೮**

**ಯತ್ಸಂದೇಶೋ ಯದರ್ಥಂ ವಾ ದೂತಃ ಸಂಪ್ರೇಷಿತಃ ಸ್ವಯಮ್ ।**
**ಯದುಕ್ತಂ ನಾರದೇನಾಸ್ಯ ಸ್ವಜನ್ಮಾನಕದುಂದುಭೇಃ ॥ ೯**

---

ರಿಗೂ ಕುಶಲವೆ ? ಆರೋಗ್ಯವೆ ? (೪). ಸೋದರಮಾವನೆನಿಸಿಕೊಂಡಿರುವ ಕಂಸನು ನಮ್ಮ ಕುಲದ ರೋಗವಾಗಿ ಬೆಳೆಯುತ್ತಿರುವಾಗ, ನಮ್ಮವರಿಗಾಗಲಿ ಅವನ ಪ್ರಜೆಗಳಿಗಾಗಲಿ ಕುಶಲವನ್ನು ತಾನೇ ಏನೆಂದು ಕೇಳಲಿ? (೫). ಪೂಜ್ಯರಾದ ತಾಯಿತಂದೆಗಳಿಗೆ ನಮ್ಮಿಂದ ಬಹಳ ಕಷ್ಟ ಒದಗಿತು. ಅಯ್ಯೋ, ನನಗೋಸ್ಕರ ಪುತ್ರರ ವಧೆಯನ್ನು ಕಾಣಬೇಕಾಯಿತು. ನನಗೋಸ್ಕರ ಅವರು ಸೆರೆಮನೆವಾಸವನ್ನನುಭವಿಸಬೇಕಾಯಿತು (೬). ಸೌಮ್ಯ, ಈ ದಿನ ಬಂಧುಗಳಾದ ನಿಮ್ಮ ದರ್ಶನವಾದುದು ನಮ್ಮ ಭಾಗ್ಯ. ನಮ್ಮ ಅಪೇಕ್ಷೆ ಕೈಗೂಡಿತು. ತಾತ, ನೀನು ಬಂದ ಕಾರಣವೇನು, ಹೇಳೋಣವಾಗಲಿ" ಎಂದನು (೭). ಶ್ರೀಕೃಷ್ಣನು ಹೀಗೆ ಕೇಳಲಾಗಿ ಮಧುವಂಶದವನಾದ ಅಕ್ರೂರನು ಎಲ್ಲವನ್ನೂ ವಿವರಿಸಿ ಹೇಳಿದನು. ಯಾದವರಲ್ಲಿ ಕಂಸನಿಗಿರುವ ದೀರ್ಘದ್ವೇಷವನ್ನೂ ವಸುದೇವನನ್ನು ಅವನು ಕೊಲ್ಲಲು ಉದ್ಯೋಗಿಸಿದುದನ್ನೂ ತಿಳಿಸಿದನು(೮). ಕಂಸನ ಸಂದೇಶ, ಯಾವುದಕ್ಕಾಗಿ ತಾನು ದೂತನಾಗಿ ಕಳಿಸಲ್ಪಟ್ಟನೋ ಆ ಕಾರಣ, ಕೃಷ್ಣನು ವಸುದೇವನ ಮಗನೆಂದು ನಾರದರು ಹೇಳಿದ ವೃತ್ತಾಂತ–ಇವೆಲ್ಲ

ಶ್ರುತ್ವಾಕ್ರೂರವಚಃ ಕೃಷ್ಣೋ ಬಲಶ್ಚ ಪರವೀರಹಾ ।
ಪ್ರಹಸ್ಯ ನಂದಂ ಪಿತರಂ ರಾಜ್ಞಾಽಽದಿಷ್ಟಂ ವಿಜಜ್ಞತುಃ ॥ ೧೦

ಗೋಪಾನ್ ಸಮಾದಿಶತ್ ಸೋಽಪಿ ಗೃಹ್ಯತಾಂ ಸರ್ವಗೋರಸಃ ।
ಉಪಾಯನಾನಿ ಗೃಹ್ಣೀಧ್ವಂ ಯುಜ್ಯಂತಾಂ ಶಕಟಾನಿ ಚ ॥ ೧೧

ಯಾಸ್ಯಾಮಃ ಶ್ವೋ ಮಧುಪುರೀಂ ದಾಸ್ಯಾಮೋ ನೃಪತೇ ರಸಾನ್।
ದ್ರಕ್ಷ್ಯಾಮಃ ಸುಮಹತ್ ಪರ್ವ ಯಾಂತಿ ಜಾನಪದಾಃ ಕಿಲ ।
ಏವಮಾಘೋಷಯತ್ ಕ್ಷತ್ತ್ರಾ ನಂದಗೋಪಃ ಸ್ವಗೋಕುಲೇ ॥ ೧೨

ಗೋಪ್ಯಸ್ತಾಸ್ತದುಪಶ್ರುತ್ಯ ಬಭೂವುರ್ವ್ಯಥಿತಾ ಭೃಶಮ್ ।
ರಾಮಕೃಷ್ಣೌ ಪುರೀಂ ನೇತುಮಕ್ರೂರಂ ವ್ರಜಮಾಗತಮ್ ॥ ೧೩

ಕಾಶ್ಚಿತ್ತತ್ಕೃತಹೃತ್ತಾಪಶ್ವಾಸಮ್ಲಾನಮುಖಶ್ರಿಯಃ ।
ಸ್ರಂಸದ್ದುಕೂಲವಲಯಕೇಶಗ್ರಂಥ್ಯಶ್ಚ ಕಾಶ್ಚನ ॥ ೧೪

ಅನ್ಯಾಶ್ಚ ತದನುಧ್ಯಾನನಿವೃತ್ತಾಶೇಷವೃತ್ತಯಃ ।
ನಾಭ್ಯಜಾನನ್ನಿಮಂ ಲೋಕಮಾತ್ಮಲೋಕಂ ಗತಾ ಇವ ॥ ೧೫

---

ವನ್ನೂ ವಿವರಿಸಿದನು (೯). ಅಕ್ರೂರನ ಮಾತನ್ನು ಕೇಳಿ ಶ್ರೀಕೃಷ್ಣನೂ ಶತ್ರು ಸಂಹಾರಿಯಾದ ಬಲರಾಮನೂ ನಕ್ಕು, ರಾಜನ ಆದೇಶವನ್ನು ತಂದೆಯಾದ ನಂದನಿಗೆ ತಿಳಿಸಿದರು (೧೦). ನಂದಗೋಪನು ಕೂಡಲೇ ಗೋಪರಿಗೆ ಆಜ್ಞೆ ಯನ್ನಿತ್ತನು: “ಎಲ್ಲ ಬಗೆಯ ಕ್ಷೀರಾದಿದ್ರವ್ಯಗಳನ್ನೂ ಕಾಣಿಕೆಗಳನ್ನೂ ತೆಗೆದು ಕೊಳ್ಳಿರಿ. ಬಂಡಿಗಳನ್ನು ಹೂಡಿರಿ. ನಾಳೆ ಮಧುರೆಗೆ ನಾವು ಹೋಗಬೇಕು. ರಾಜನಿಗೆ ಘೃತಾದಿರಸದ್ರವ್ಯಗಳನ್ನು ಒಪ್ಪಿಸಬೇಕು. ಅಲ್ಲಿ ದೊಡ್ಡ ಉತ್ಸವ ವನ್ನು ನೋಡಲಿದ್ದೇವೆ. ರಾಷ್ಟ್ರದ ಜನರೆಲ್ಲರೂ ಮಧುರೆಗೆ ಹೋಗುತ್ತಾರಂತೆ” ಎಂದು ನಂದನು ಪ್ರಜಾರಕ್ಷಣಾಧಿಕಾರಿಯಿಂದ ಗೋಕುಲದಲ್ಲಿ ಘೋಷಣೆಮಾಡಿಸಿ ದನು(೧೧–೧೨). ರಾಮಕೃಷ್ಣರನ್ನು ರಾಜಧಾನಿಗೆ ಕರೆದೊಯ್ಯಲು ಅಕ್ರೂರನು ವ್ರಜಕ್ಕೆ ಬಂದಿದ್ದಾನೆಂಬ ಸುದ್ದಿಯನ್ನು ಕೇಳಿ ಗೋಪಿಯರು ಅತ್ಯಂತದುಃಖಿತ ರಾದರು (೧೩). ಶ್ರೀಕೃಷ್ಣನು ಹೋಗುವನೆಂದು ಹೃದಯತಾಪದ ನಿಟ್ಟುಸಿರಿ ನಿಂದ ಕೆಲವರ ಮುಖಕಾಂತಿ ಮಾಸಿತು. (ವಿರಹದುಃಖದಿಂದ ಕೃಶರಾದ) ಕೆಲವರ ದುಕೂಲವೂ ಕೈಬಳೆಗಳೂ ಸಡಿಲಿದವು (೧೪). ಕೆಲವರಿಗೆ ಶ್ರೀಕೃಷ್ಣ ಧ್ಯಾನದಿಂದ ಚಕ್ಷುರಾದಿ ಇಂದ್ರಿಯವ್ಯಾಪಾರಗಳು ನಿಂತುಹೋಗಲು, ಆತ್ಮ

ಸ್ಮರಂತ್ಯಶ್ಚಾಪರಾಃ ಶೌರೇರನುರಾಗಸ್ಮಿತೇರಿತಾಃ ।
ಹೃದಿಸ್ಪೃಶಶ್ಚಿತ್ರಪದಾ ಗಿರಃ ಸಂಮುಮುಹುಃ ಸ್ತ್ರಿಯಃ ॥ ೧೬

ಗತಿಂ ಸುಲಲಿತಾಂ ಚೇಷ್ಟಾಂ ಸ್ನಿಗ್ಧಹಾಸಾವಲೋಕನಮ್ ।
ಶೋಕಾಪಹಾನಿ ನರ್ಮಾಣಿ ಪ್ರೋದ್ದಾಮಚರಿತಾನಿ ಚ ॥ ೧೭

ಚಿಂತಯಂತ್ಯೋ ಮುಕುಂದಸ್ಯ ಭೀತಾ ವಿರಹಕಾತರಾಃ ।
ಸಮೇತಾಃ ಸಂಘಶಃ ಪ್ರೋಚುರಶ್ರುಮುಖ್ಯೋಽಚ್ಯುತಾಶಯಾಃ ॥

ಗೋಪ್ಯ ಊಚುಃ—

ಅಹೋ ವಿಧಾತಸ್ತವ ನ ಕ್ವಚಿದ್ ದಯಾ
ಸಂಯೋಜ್ಯ ಮೈತ್ರ್ಯಾ ಪ್ರಣಯೇನ ದೇಹಿನಃ ।
ತಾಂಶ್ಚಾಕೃತಾರ್ಥಾನ್ ವಿಯುನಂಕ್ಷ್ಯಪಾರ್ಥಕಂ
ವಿಕ್ರೀಡಿತಂ ತೇಽರ್ಭಕಚೇಷ್ಟಿತಂ ಯಥಾ ॥ ೧೯

ಯಸ್ತ್ವಂ ಪ್ರದರ್ಶ್ಯಾಸಿತಕುಂತಲಾವೃತಂ
ಮುಕುಂದವಕ್ತ್ರಂ ಸುಕಪೋಲಮುನ್ನಸಮ್ ।

---

ಲೋಕವನ್ನು ಸೇರಿದವರಂತೆ ಅವರು ಈ ಲೋಕದ ಸ್ಮರಣೆ ಇಲ್ಲದವರಾದರು! (೧೫). ಶೌರಿಯು ಅನುರಾಗದಿಂದ ಮುಗುಳ್ನಗೆ ಬೀರುತ್ತ ಹೇಳುತ್ತಿದ್ದ ಮನೋಜ್ಞವಾದ ವಿವಿಧ ನುಡಿಗಳನ್ನು ಸ್ಮರಿಸಿಕೊಂಡು ಕೆಲವು ಸ್ತ್ರೀಯರು ಮೂರ್ಛಿತರಾದರು (೧೬). ಮುಕುಂದನ ಲಲಿತವಾದ ನಡಿಗೆ, ಚೇಷ್ಟೆ, ಸ್ನೇಹಪೂರ್ಣವಾದ ನಗು ನೋಟಗಳನ್ನೂ ಶೋಕಹಾರಿಗಳಾದ ವಿನೋದದ ಮಾತುಗಳನ್ನೂ ಉದಾರಚರಿತಗಳನ್ನೂ ಸ್ಮರಿಸಿಕೊಂಡು ಅವನಲ್ಲಿ ನೆಟ್ಟಮನಸ್ಸುಳ್ಳ ಗೋಪಿಯರು ವಿರಹಕಾತರರಾಗಿ ಹೆದರಿ ಗುಂಪುಗುಂಪಾಗಿ ಸೇರಿ ಕಣ್ಣೀರಿಡುತ್ತ ಹೀಗೆಂದರು (೧೭–೧೮). "ಅಯ್ಯೊ ವಿಧಿಯೆ! ನಿನಗೆ ಸ್ವಲ್ಪವೂ ಕರುಣೆ ಇಲ್ಲ! ಹಿತಕರವಾದ ಪ್ರೇಮವನ್ನೊಡ್ಡಿ ಜನರನ್ನು ಕೂಡಿಸುವೆ; ಅವರು ಕೃತಾರ್ಥರಾಗುವುದಕ್ಕೆ ಮೊದಲೇ ಮತ್ತೆ ಅಗಲಿಸುವೆ! ನಿನ್ನ ಚೇಷ್ಟೆ ಮಕ್ಕಳಾಟದಂತೆ ಅರ್ಥವಿಲ್ಲದ್ದು! (೧೯). ಕಪ್ಪಾದ ಗುಂಗುರುಕೂದಲು, ಸುಂದರವಾದ ಕೆನ್ನೆ, ಮಾಟವಾದ ಮೂಗು, ಕಂಡೊಡನೆ ದುಃಖವನ್ನು ಪರಿಹರಿಸುವ ಮುಗ್ಧಸ್ಮಿತ–ಇವುಗಳಿಂದ ಸುಂದರವಾದ ಮುಕುಂದನ ಮುಖ

ಶೋಕಾಪನೋದಸ್ಮಿತಲೇಶಸುಂದರಂ
ಕರೋಷಿ ಪಾರೋಕ್ಷ್ಯಮಸಾಧು ತೇ ಕೃತಮ್ ॥ ೨೦

ಕ್ರೂರಸ್ತ್ವಮಕ್ರೂರಸಮಾಖ್ಯಯಾ ಸ್ಮ ನ-
ಶ್ಚಕ್ಷುರ್ಹಿ ದತ್ತಂ ಹರಸೇ ಬತಾಜ್ಞವತ್ ।
ಯೇನೈಕದೇಶೇಽಖಿಲಸರ್ಗಸೌಷ್ಠವಂ
ತ್ವದೀಯಮದ್ರಾಕ್ಷ್ಮ ವಯಂ ಮಧುದ್ವಿಷಃ ॥ ೨೧

ನ ನಂದಸೂನುಃ ಕ್ಷಣಭಂಗಸೌಹೃದಃ
ಸಮೀಕ್ಷತೇ ನಃ ಸ್ವಕೃತಾತುರಾ ಬತ ।
ವಿಹಾಯ ಗೇಹಾನ್ ಸ್ವಜನಾನ್ ಸುತಾನ್ ಪತೀಂ-
ಸ್ತದ್ದಾಸ್ಯಮದ್ಧೋಪಗತಾ ನವಪ್ರಿಯಃ ॥ ೨೨

ಸುಖಂ ಪ್ರಭಾತಾ ರಜನೀಯಮಾಶಿಷಃ
ಸತ್ಯಾ ಬಭೂವುಃ ಪುರಯೋಷಿತಾಂ ಧ್ರುವಮ್ ।
ಯಾಃ ಸಂಪ್ರವಿಷ್ಟಸ್ಯ ಮುಖಂ ವ್ರಜಸ್ಪತೇಃ
ಪಾಸ್ಯಂತ್ಯಪಾಂಗೋತ್ಕಲಿತಸ್ಮಿತಾಸವಮ್ ॥ ೨೩

---

ವನ್ನು ನಮಗೆ ಕಾಣಿಸಿ, ಮತ್ತೆ ಅದು ಕಾಣಿಸದಂತೆ ಮಾಡುತ್ತಿರುವೆ. ನಿನ್ನ ಕೆಲಸ ಅಯುಕ್ತವಾದುದು! (೨೦). ಎಲೈ ಬ್ರಹ್ಮನೆ, ನೀನು ಕ್ರೂರನಾದವನು! ಅಕ್ರೂರನೆಂಬ ಹೆಸರಿಂದ ಬಂದು, ನೀನೇ ನಮಗೆ ಕೊಟ್ಟಿರುವ ಕಣ್ಣನ್ನು, ಏನೂ ಗೊತ್ತಿಲ್ಲದವನಂತೆ ಕಿತ್ತುಕೊಂಡು ಹೋಗುತ್ತಿರುವೆಯಲ್ಲ! ಸೃಷ್ಟಿಮಾಡುವ ನಿನ್ನ ಸಮಸ್ತ ಕೌಶಲವನ್ನೂ ಶ್ರೀಕೃಷ್ಣನ ಕಣ್ಣು, ಮೂಗು ಮೊದಲಾದ ಒಂದೊಂದು ಅಂಗದಲ್ಲಿ, ನೀನು ಕೊಟ್ಟ ಕಣ್ಣಿಂದಲೇ ನಾವು ನೋಡಿದೆವು! (೨೧). ಅಯ್ಯೋ! ಸಖಿಯರೆ! ನಂದತನಯನ ಸ್ನೇಹ ಕ್ಷಣಭಂಗುರ! ಅವನಿಗಾಗಿ ಹಾತೊರೆಯುತ್ತ ಮನೆಮಾರುಗಳನ್ನೂ ಬಂಧುಗಳನ್ನೂ ಮಕ್ಕಳನ್ನೂ ಗಂಡಂದಿರನ್ನೂ ವರ್ಜಿಸಿ ದಾಸಿಯರಾಗಿರುವ ನಮ್ಮನ್ನು ಅವನು ಗಮನಿಸುವುದೇ ಇಲ್ಲ. ಹೊಸಹೊಸದರಲ್ಲಿ ಆತನಿಗೆ ಪ್ರೀತಿಯುಂಟು! (೨೨). ಆಹಾ! ಈ ದಿನ ಮಥುರಾನಗರದ ತರುಣಿಯರಿಗೆ ರಾತ್ರಿ ಕಳೆದು ಸುಪ್ರಭಾತವಾಯಿತು! ಹಿರಿಯರ ಆಶೀರ್ವಾದಗಳು ಅವರಿಗೆ ಫಲಿಸಿದವು! ವ್ರಜದೊಡೆಯನಾದ ಮುಕುಂದನು

ತಾಸಾಂ ಮುಕುಂದೋ ಮಧುಮಂಜುಭಾಷಿತೈ-
ರ್ಗೃಹೀತಚಿತ್ತಃ ಪರವಾನ್ ಮನಸ್ವ್ಯಪಿ ।
ಕಥಂ ಪುನರ್ನಃ ಪ್ರತಿಯಾಸ್ಯತೇಽಬಲಾ
ಗ್ರಾಮ್ಯಾಃ ಸಲಜ್ಜಸ್ಮಿತವಿಭ್ರಮೈರ್ಭ್ರಮನ್ ॥ ೨೪

ಅದ್ಯ ಧ್ರುವಂ ತತ್ರ ದೃಶೋ ಭವಿಷ್ಯತೇ
ದಾಶಾರ್ಹಭೋಜಾಂಧಕವೃಷ್ಣಿಸಾತ್ವತಾಮ್ ।
ಮಹೋತ್ಸವಃ ಶ್ರೀರಮಣಂ ಗುಣಾಸ್ಪದಂ
ದ್ರಕ್ಷ್ಯಂತಿ ಯೇ ಚಾಧ್ವನಿ ದೇವಕೀಸುತಮ್ ॥ ೨೫

ಮೈತದ್ವಿಧಸ್ಯಾಕರುಣಸ್ಯ ನಾಮ ಭೂ-
ದಕ್ರೂರ ಇತ್ಯೇತದತೀವ ದಾರುಣಃ ।
ಯೋಽಸಾವನಾಶ್ವಾಸ್ಯ ಸುದುಃಖಿತಂ ಜನಂ
ಪ್ರಿಯಾತ್ಪ್ರಿಯಂ ನೇಷ್ಯತಿ ಪಾರಮಧ್ವನಃ ॥ ೨೬

---

ನಗರವನ್ನು ಪ್ರವೇಶಿಸಿದಾಗ, ಅಪಾಂಗವೀಕ್ಷಣದಿಂದೊಸರುವ ಮುಗುಳ್ನಗೆಯ ಮದ್ಯವನ್ನು ಸೂಸುವ ಅವನ ಮುಖವನ್ನು ಪುರವನಿತೆಯರು ಹೀರುವರು! (೨೩). ಮುಕುಂದನಿಗೆ ಇಲ್ಲಿ ಅನ್ಯಬಂಧುಗಳಿದ್ದರೂ ಅವನು ಧೀರನಾದರೂ ನಗರವನಿತೆಯರ ಮಧುರಮಂಜುಳಭಾಷಿತಗಳಿಂದ ವಶೀಕೃತಚಿತ್ತನಾಗುವನು. ಅವರ ನಾಚಿಕೆ, ನಗು, ವೈಯಾರಗಳಿಗೆ ಮನಸೋತ ಕೃಷ್ಣನು, ಅಯ್ಯೋ ಅಬಲೆಯರೆ! ಹಳ್ಳಿಯ ಹೆಂಗಸರಾದ ನಮ್ಮ ಬಳಿಗೆ ಮತ್ತೆ ಬರುವನೆ? (೨೪). ಅಲ್ಲಿರುವ ದಾಶಾರ್ಹಭೋಜ ಅಂಧಕ ವೃಷ್ಣಿ ಸಾತ್ವತರೆಲ್ಲರ ನೇತ್ರಗಳಿಗೆ ಇಂದು ಮಹೋತ್ಸವವಾಗುವುದು. ದಾರಿಯಲ್ಲಿಯೂ ಸಹ ಶ್ರೀರಮಣನೂ ಗುಣಗಳ ಗಣಿಯೂ ಆದ ದೇವಕೀಸುತನನ್ನು ಯಾರು ನೋಡುವರೋ ಅವರಿಗೂ ಉತ್ಸವ! (೨೫). ಶೋಕತಪ್ತರಾದ ಜನರನ್ನು ಸಂತೈಸದೆ, ಪ್ರಿಯವಾದ ಪ್ರಾಣಕ್ಕಿಂತಲೂ ಪ್ರಿಯನಾದವನನ್ನು ಅಷ್ಟು ದೂರ ಆ ದಾರುಣನು ಕರೆದೊಯ್ಯುವನಲ್ಲ, ನಿಷ್ಕರುಣನಾದ ಅಂಥ ಕ್ರೂರನಿಗೆ ಅಕ್ರೂರನೆಂಬ ಹೆಸರೇ ಸರಿಯಲ್ಲ,

ಅನಾರ್ದ್ರಧೀರೇಷ ಸಮಾಸ್ಥಿತೋ ರಥಂ
ತಮನ್ವಮೀ ಚ ತ್ವರಯಂತಿ ದುರ್ಮದಾಃ ।
ಗೋಪಾ ಅನೋಭಿಃ ಸ್ಥವಿರೈರುಪೇಕ್ಷಿತಂ
ದೈವಂ ಚ ನೋಽದ್ಯ ಪ್ರತಿಕೂಲಮೀಹತೇ ॥ ೨೭

ನಿವಾರಯಾಮಃ ಸಮುಪೇತ್ಯ ಮಾಧವಂ
ಕಿಂ ನೋಽಕರಿಷ್ಯನ್ ಕುಲವೃದ್ಧಬಾಂಧವಾಃ ।
ಮುಕುಂದಸಂಗಾನ್ನಿಮಿಷಾರ್ಧದುಸ್ತ್ಯಜಾದ್
ದೈವೇನ ವಿಧ್ವಂಸಿತದೀನಚೇತಸಾಮ್ ॥ ೨೮

ಯಸ್ಯಾನುರಾಗಲಲಿತಸ್ಮಿತವಲ್ಗುಮಂತ್ರ-
ಲೀಲಾವಲೋಕಪರಿರಂಭಣರಾಸಗೋಷ್ಠ್ಯಾಮ್ ।
ನೀತಾಃ ಸ್ಮ ನಃ ಕ್ಷಣಮಿವ ಕ್ಷಣದಾ ವಿನಾ ತಂ
ಗೋಪ್ಯಃ ಕಥಂ ನ್ವತಿತರೇಮ ತಮೋ ದುರಂತಮ್ ॥

ಯೋಽಹ್ನಃ ಕ್ಷಯೇ ವ್ರಜಮನಂತಸಖಃ ಪರೀತೋ
ಗೋಪೈರ್ವಿಶನ್ ಖುರರಜಶ್ಛುರಿತಾಲಕಸ್ರಕ್ ।

---

ಆ ಹೆಸರು ಇರಬಾರದಾಗಿತ್ತು! (೨೬). ಅದೋ! ಕರಗದ ಕಠೋರಚಿತ್ತನು (ಕೃಷ್ಣನು) ರಥವನ್ನೇರಿದನು! ಮದಾಂಧರಾದ ಈ ಗೋಪರು ಬಂಡಿಗಳನ್ನು ತಂದು ತ್ವರೆಪಡಿಸುತ್ತಿದ್ದಾರೆ! ಮುದುಕರು ಉಪೇಕ್ಷೆಯಿಂದ ಸುಮ್ಮನಿದ್ದಾರೆ. ಒಟ್ಟಿನಲ್ಲಿ ದೈವವು ನಮಗೆ ಪ್ರತಿಕೂಲವನ್ನೇ ಮಾಡುತ್ತಿದೆ! (೨೭). ಒಟ್ಟಿಗೆ ಹೋಗಿ ಮುಕುಂದನನ್ನು ಅಡ್ಡಗಟ್ಟಿ ತಡೆದುಬಿಡೋಣವೆ? ಕುಲವೃದ್ಧರಾಗಲಿ ಬಾಂಧವರಾಗಲಿ ನಮಗೆ ಏನು ಮಾಡುವರು? ಅರ್ಧನಿಮಿಷವೂ ಬಿಡಲು ಸಾಧ್ಯವಿಲ್ಲದ ಮುಕುಂದಸಂಗವನ್ನು ದುರ್ದೈವವು ವಿಧ್ವಂಸಗೊಳಿಸಿದ್ದರಿಂದ ದೀನರಾದ ನಮಗೆ ಯಾರಿಂದ ಏನಾದೀತು? (ಸಾವಿಗೂ ನಾವು ಅಂಜತಕ್ಕವರಲ್ಲ!) (೨೮). ಯಾವಾತನ ಅನುರಾಗ, ಲಲಿತಸ್ಮಿತ, ಮಧುರಸಂಭಾಷಣೆ, ಲೀಲಾವಲೋಕನ, ಆಲಿಂಗನಗಳಿಂದ ರಾಸಗೋಷ್ಠಿಯಲ್ಲಿ ಒಂದು ಕ್ಷಣದಂತೆ ರಾತ್ರಿಗಳನ್ನು ಕಳೆದೆವೋ ಆತನಿಲ್ಲದೆ, ಗೋಪಿಯರೆ, ಈ ದುರಂತವಾದ ದುಃಖವನ್ನು ಹೇಗೆ ದಾಟೋಣ? (೨೯). ಸಂಜೆಯಾಗಲು ಗೋಪರಿಂದ ಪರಿವೃತನಾಗಿ ಬಲರಾಮನೊಡನೆ ವ್ರಜವನ್ನು ಪ್ರವೇಶಿಸುತ್ತ, ದನಗಳ ಕಾಲ್ಗೊರಸುಗಳಿಂದೆದ್ದ

*

ವೇಣುಂ ಕ್ವಣನ್ ಸ್ಮಿತಕಟಾಕ್ಷನಿರೀಕ್ಷಣೇನ
ಚಿತ್ತಂ ಕ್ಷಿಣೋತ್ಯಮುಮೃತೇ ನು ಕಥಂ ಭವೇಮ ॥ ೩೦

ಶ್ರೀಶುಕ ಉವಾಚ—

ಏವಂ ಬ್ರುವಾಣಾ ವಿರಹಾತುರಾ ಭೃಶಂ
ವ್ರಜಸ್ತ್ರಿಯಃ ಕೃಷ್ಣವಿಷಕ್ತಮಾನಸಾಃ ।
ವಿಸೃಜ್ಯ ಲಜ್ಜಾಂ ರುರುದುಃ ಸ್ಮ ಸುಸ್ವರಂ
ಗೋವಿಂದ ದಾಮೋದರ ಮಾಧವೇತಿ ॥ ೩೧

ಸ್ತ್ರೀಣಾಮೇವಂ ರುದಂತೀನಾಮುದಿತೇ ಸವಿತರ್ಯಥ ।
ಅಕ್ರೂರಶ್ಚೋದಯಾಮಾಸ ಕೃತಮೈತ್ರಾದಿಕೋ ರಥಮ್ ॥ ೩೨

ಗೋಪಾಸ್ತಮನ್ವಸಜ್ಜಂತ ನಂದಾದ್ಯಾಃ ಶಕಟೈಸ್ತತಃ ।
ಆದಾಯೋಪಾಯನಂ ಭೂರಿ ಕುಂಭಾನ್ ಗೋರಸಸಂಭೃತಾನ್ ॥

ಗೋಪ್ಯಶ್ಚ ದಯಿತಂ ಕೃಷ್ಣಮನುವ್ರಜ್ಯಾನುರಂಜಿತಾಃ ।
ಪ್ರತ್ಯಾದೇಶಂ ಭಗವತಃ ಕಾಂಕ್ಷಂತ್ಯಶ್ಚಾವತಸ್ಥಿರೇ ॥ ೩೪

---

ಧೂಳಿಯಿಂದ ಮುಂಗುರುಳುಮಾಲೆಗಳು ಮಲಿನವಾಗಿರಲು, ಕೊಳಲನ್ನು ನುಡಿಸುತ್ತ ಮುಗುಳ್ನಗೆಯಿಂದಲೂ ಕಟಾಕ್ಷವೀಕ್ಷಣದಿಂದಲೂ ನಮ್ಮ ಚಿತ್ತವನ್ನು ಸೆಳೆಯತಕ್ಕವನು ಇಲ್ಲದಿದ್ದರೆ ನಾವು ಬದುಕಿರುವುದಾದರೂ ಹೇಗೆ?" ಎಂದು ಹೇಳಿಕೊಂಡರು (೩೦). ಕೃಷ್ಣನಲ್ಲಿ ಆಸಕ್ತಚಿತ್ತರಾದ ಆ ವ್ರಜಸ್ತ್ರೀಯರು ಹೀಗೆ ಹೇಳುತ್ತ ಅತ್ಯಂತ ವಿರಹದುಃಖಿತರಾಗಿ "ಹಾ ಗೋವಿಂದ, ದಾಮೋದರ, ಮಾಧವ" ಎನ್ನುತ್ತ ಲಜ್ಜೆಯನ್ನು ತೊರೆದು ಗಟ್ಟಿಯಾಗಿ ಅತ್ತರು (೩೧). ಇತ್ತ ಸೂರ್ಯೋದಯವಾಗಲು ಸಂಧ್ಯಾವಂದನಾದಿಪ್ರಾತಃಕೃತ್ಯಗಳನ್ನು ನೆರವೇರಿಸಿದ ಅಕ್ರೂರನು, ಗೋಪಿಯರು ಅಳುತ್ತಿರುವುದನ್ನು ಲಕ್ಷಿಸದೆ, ರಥವನ್ನು ಮುಂದೂಡಿದನು (೩೨). ನಂದಾದಿಗೋಪಾಲರು (ಕಂಸನಿಗೆ ಕೊಡುವುದಕ್ಕಾಗಿ) ಹೇರಳವಾದ ಕಾಣಿಕೆಗಳನ್ನೂ ಗೋರಸಪೂರ್ಣವಾದ ಕುಂಭಗಳನ್ನೂ ತುಂಬಿಕೊಂಡು ಬಂಡಿಗಳಲ್ಲಿ ಹಿಂಬಾಲಿಸಿದರು (೩೩). ಗೋಪಿಯರು ದಯಿತನಾದ ಕೃಷ್ಣನನ್ನು ಸ್ವಲ್ಪದೂರ ಹಿಂಬಾಲಿಸಿ, ಅವನು ಹಿಂದಿರುಗಿ ವೀಕ್ಷಿಸಿದ್ದರಿಂದ ಸಂತುಷ್ಟರಾದರು. ಭಗವಂತನು ನಿಷೇಧಿಸುವನೆಂದು ಶಂಕಿಸಿ

ತಾಸ್ತಥಾ ತಪ್ಯತೀರ್ವೀಕ್ಷ್ಯ ಸ್ವಪ್ರಸ್ಥಾನೇ ಯದೂತ್ತಮಃ ।
ಸಾಂತ್ವಯಾಮಾಸ ಸಪ್ರೇಮೈರಾಯಾಸ್ಯ ಇತಿ ದೌತ್ಯಕೈಃ ॥ ೩೫

ಯಾವದಾಲಕ್ಷ್ಯತೇ ಕೇತುರ್ಯಾವದ್ ರೇಣೂ ರಥಸ್ಯ ಚ ।
ಅನುಪ್ರಸ್ಥಾಪಿತಾತ್ಮಾನೋ ಲೇಖ್ಯಾನೀವೋಪಲಕ್ಷಿತಾಃ ॥ ೩೬

ತಾ ನಿರಾಶಾ ನಿವವೃತುರ್ಗೋವಿಂದವಿನಿವರ್ತನೇ ।
ವಿಶೋಕಾ ಅಹನೀ ನಿನ್ಯುರ್ಗಾಯಂತ್ಯಃ ಪ್ರಿಯಚೇಷ್ಟಿತಮ್ ॥ ೩೭

ಭಗವಾನಪಿ ಸಂಪ್ರಾಪ್ತೋ ರಾಮಾಕ್ರೂರಯುತೋ ನೃಪ ।
ರಥೇನ ವಾಯುವೇಗೇನ ಕಾಲಿಂದೀಮಘನಾಶಿನೀಮ್ ॥ ೩೮

ತತ್ರೋಪಸ್ಪೃಶ್ಯ ಪಾನೀಯಂ ಪೀತ್ವಾ ಮೃಷ್ಟಂ ಮಣಿಪ್ರಭಮ್ ।
ವೃಕ್ಷಷಂಡಮುಪವ್ರಜ್ಯ ಸರಾಮೋ ರಥಮಾವಿಶತ್ ॥ ೩೯

ಅಕ್ರೂರಸ್ತಾವುಪಾಮಂತ್ರ್ಯ ನಿವೇಶ್ಯ ಚ ರಥೋಪರಿ ।
ಕಾಲಿಂದ್ಯಾ ಹ್ರದಮಾಗತ್ಯ ಸ್ನಾನಂ ವಿಧಿವದಾಚರತ್ ॥ ೪೦

---

ಅಲ್ಲಿಯೇ ನಿಂತರು (೩೪). ತನ್ನ ಪ್ರಯಾಣದಿಂದ ಅವರು ಕಳವಳಿಸುತ್ತಿರುವುದನ್ನು ನೋಡಿ ಶ್ರೀಕೃಷ್ಣನು "ಬೇಗನೆ ಬರುವೆನು" ಎಂದು ದೂತರ ಮೂಲಕ ಪ್ರೇಮಸಂದೇಶವನ್ನು ಕಳಿಸಿ ಗೋಪಿಯರನ್ನು ಸಂತೈಸಿದನು (೩೫). ಶ್ರೀಕೃಷ್ಣನು ಕುಳಿತಿದ್ದ ರಥದ ಧ್ವಜವೂ ರಥದ ಧೂಳಿಯೂ ಕಾಣುವವರೆಗೆ, ತಮ್ಮ ಆತ್ಮವನ್ನು ಅವನೊಂದಿಗೇ ಕಳಿಸಿದ್ದ ಗೋಪಿಯರು ಬರೆದ ಚಿತ್ರಗಳಂತೆ ನಿಂತಿದ್ದರು! (೩೬). ಅನಂತರ ಗೋವಿಂದನು ಹಿಂದಿರುಗುವ ವಿಷಯದಲ್ಲಿ ನಿರಾಶರಾಗಿ ಗೋಪಿಯರು ಹಿಂದಿರುಗಿದರು. ಪ್ರಿಯನ ಕೃತ್ಯಗಳನ್ನು ಹಾಡುವುದರಲ್ಲಿಯೇ ಶೋಕವನ್ನು ನೀಗಿ ದಿನಗಳನ್ನು ಕಳೆದರು (೩೭). ಪರೀಕ್ಷಿತ ರಾಜ, ಅಕ್ರೂರಬಲರಾಮರಿಂದ ಸಮೇತನಾದ ಭಗವಂತನು ವಾಯುವೇಗದಿಂದ ಧಾವಿಸುತ್ತಿದ್ದ ರಥದಲ್ಲಿ ಪಾಪನಾಶಿನಿಯಾದ ಯಮುನೆಯನ್ನು ತಲುಪಿದನು (೩೮). ಆ ನದಿಯಲ್ಲಿ ಆಚಮನಮಾಡಿ ಮಣಿಯಂತೆ ಮಿನುಗುವ ನಿರ್ಮಲಜಲವನ್ನು ಕುಡಿದು, ಮರಗಳ ಗುಂಪಿನಲ್ಲಿ ತಿರುಗಾಡಿ, ಬಲರಾಮಸಹಿತನಾಗಿ ಬಂದು ರಥವನ್ನೇರಿದನು (೩೯). ಅಕ್ರೂರನು ಅವರಿಬ್ಬರನ್ನು ರಥದಲ್ಲಿ ಕುಳ್ಳಿರಿಸಿ, ಅವರಿಗೆ ಹೇಳಿ ಯಮುನೆಯ ಮಡುವಿಗೆ ಬಂದು ವಿಧಿವತ್ತಾಗಿ ಸ್ನಾನ

ನಿಮಜ್ಜ್ಯ ತಸ್ಮಿನ್ ಸಲಿಲೇ ಜಪನ್ ಬ್ರಹ್ಮ ಸನಾತನಮ್ ।
ತಾವೇವ ದದೃಶೇಽಕ್ರೂರೋ ರಾಮಕೃಷ್ಣೌ ಸಮನ್ವಿತೌ ॥ ೪೧

ತೌ ರಥಸ್ಥೌ ಕಥಮಿಹ ಸುತಾವಾನಕದುಂದುಭೇಃ ।
ತರ್ಹಿ ಸ್ವಿತ್ ಸ್ಯಂದನೇ ನ ಸ್ತ ಇತ್ಯುನ್ಮಜ್ಜ್ಯ ವ್ಯಚಷ್ಟ ಸಃ ॥ ೪೨

ತತ್ರಾಪಿ ಚ ಯಥಾಪೂರ್ವಮಾಸೀನೌ ಪುನರೇವ ಸಃ ।
ನ್ಯಮಜ್ಜದ್ ದರ್ಶನಂ ಯನ್ಮೇ ಮೃಷಾ ಕಿಂ ಸಲಿಲೇ ತಯೋಃ ॥ ೪೩

ಭೂಯಸ್ತತ್ರಾಪಿ ಸೋಽದ್ರಾಕ್ಷೀತ್ ಸ್ತೂಯಮಾನಮಹೀಶ್ವರಮ್ ।
ಸಿದ್ಧಚಾರಣಗಂಧರ್ವೈರಸುರೈರ್ನತಕಂಧರೈಃ ॥ ೪೪

ಸಹಸ್ರಶಿರಸಂ ದೇವಂ ಸಹಸ್ರಫಣಮೌಲಿನಮ್ ।
ನೀಲಾಂಬರಂ ಬಿಸಶ್ವೇತಂ ಶೃಂಗೈಃ ಶ್ವೇತಮಿವ ಸ್ಥಿತಮ್ ॥ ೪೫

ತಸ್ಯೋತ್ಸಂಗೇ ಘನಶ್ಯಾಮಂ ಪೀತಕೌಶೇಯವಾಸಸಮ್ ।
ಪುರುಷಂ ಚತುರ್ಭುಜಂ ಶಾಂತಂ ಪದ್ಮಪತ್ರಾರುಣೇಕ್ಷಣಮ್ ॥ ೪೬

---

ವನ್ನು ಮಾಡಿದನು (೪೦). ಅಕ್ರೂರನು ಸನಾತನವಾದ ವೇದಮಂತ್ರವನ್ನು ಜಪಿಸುತ್ತ ನದೀಜಲದಲ್ಲಿ ಮುಳುಗಿದಾಗ, ಜೊತೆಗೂಡಿ ಕುಳಿತಿದ್ದ ಆ ಬಲರಾಮ ಕೃಷ್ಣರನ್ನೇ ಕಂಡನು! (೪೧). "ಎಲಾ! ಆ ವಸುದೇವತನಯರು ರಥದಲ್ಲಿ ಕುಳಿತಿದ್ದಾರೆ, ಅವರು ಇಲ್ಲಿ ಹೇಗೆ ಬಂದರು? ಹಾಗಾದರೆ ಅವರು ರಥದಲ್ಲಿಲ್ಲವೆ!" ಎಂದು ಮೇಲೆದ್ದು ನೋಡಿದನು (೪೨). ರಥದಲ್ಲಿಯೂ ಮೊದಲಿನಂತೆ ಅವರು ಕುಳಿತಿರುವುದನ್ನು ಕಂಡನು! "ಹಾಗಾದರೆ ಜಲದಲ್ಲಿ ಅವರ ದರ್ಶನವಾದದ್ದು ಸುಳ್ಳೆ?" ಎಂದು ಚಿಂತಿಸುತ್ತ ಅಕ್ರೂರನು ಮತ್ತೆ ಮುಳುಗಿದನು. ಪುನಃ ಅವನಿಗೆ ಒಂದು ಅದ್ಭುತದರ್ಶನವಾಯಿತು. ತಲೆಬಾಗಿಸಿದ ಸಿದ್ಧಚಾರಣ ಗಂಧರ್ವರಿಂದಲೂ ಅಸುರರಿಂದಲೂ ಸ್ತುತಿಸಲ್ಪಡುತ್ತಿದ್ದ ಅಹೀಶ್ವರನಾದ ಆದಿಶೇಷನನ್ನು ಅಕ್ರೂರನು ನೋಡಿದನು! (೪೩–೪೪). ಸಾವಿರ ತಲೆಗಳುಳ್ಳವನೂ ಸಾವಿರ ಹೆಡೆಗಳಲ್ಲಿ ಕಿರೀಟಗಳನ್ನು ಧರಿಸಿದವನೂ ನೀಲಾಂಬರನೂ ತಾವರೆಯ ದಂಟಿನಂತೆ ಶುಭ್ರವರ್ಣನೂ ಆದ ಆ ದೇವನು ಅನೇಕ ಶಿಖರಗಳಿಂದ ಶೋಭಿಸುವ ಶ್ವೇತಪರ್ವತದಂತಿದ್ದನು (೪೫). ಅವನ ಉತ್ಸಂಗದಲ್ಲಿ (ಕುಂಡಲೀಕೃತವಾದ ದೇಹದ ನಡುವೆ) ಮೇಘಶ್ಯಾಮನೂ ಪೀತಾಂಬರ

**ಚಾರುಪ್ರಸನ್ನವದನಂ ಚಾರುಹಾಸನಿರೀಕ್ಷಣಮ್ ।**
**ಸುಭ್ರೂನ್ನಸಂ ಚಾರುಕರ್ಣಂ ಸುಕಪೋಲಾರುಣಾಧರಮ್ ॥ ೪೭**

**ಪ್ರಲಂಬಪೀವರಭುಜಂ ತುಂಗಾಂಸೋರಃಸ್ಥಲಶ್ರಿಯಮ್ ।**
**ಕಂಬುಕಂಠಂ ನಿಮ್ನನಾಭಿಂ ವಲಿಮತ್ಪಲ್ಲವೋದರಮ್ ॥ ೪೮**

**ಬೃಹತ್ಕಟಿತಟಶ್ರೋಣಿಕರಭೋರುದ್ವಯಾನ್ವಿತಮ್ ।**
**ಚಾರುಜಾನುಯುಗಂ ಚಾರುಜಂಘಾಯುಗಲಸಂಯುತಮ್ ॥ ೪೯**

**ತುಂಗಗುಲ್ಫಾರುಣನಖವ್ರಾತದೀಧಿತಿಭಿರ್ವೃತಮ್ ।**
**ನವಾಂಗುಲ್ಯಂಗುಷ್ಠದಲೈರ್ವಿಲಸತ್ಪಾದಪಂಕಜಮ್ ॥ ೫೦**

---

ಧಾರಿಯೂ ಚತುರ್ಭುಜನೂ ಶಾಂತನೂ ಕಮಲದಳಾರುಣನೇತ್ರನೂ ಆದ ಪುರುಷನು ಮುಂಡಿಸಿರುವುದನ್ನು ಕಂಡನು! (೪೬). ಆ ಪುರುಷನು ಮನೋಹರ ಪ್ರಸನ್ನಮುಖನೂ ಚೆಲುವಿನ ನಗೆಯೊಡನೆ ನೋಡುವವನೂ ಸುಂದರವಾದ ಹುಬ್ಬು ಮತ್ತು ನಾಸಿಕವನ್ನುಳ್ಳವನೂ ಮಾಟವಾದ ಕಿವಿಗಳುಳ್ಳವನೂ ಆಗಿದ್ದನು (೪೭). ಅಲ್ಲದೆ ನೀಳವಾಗಿ ಪುಷ್ಟವಾದ ಬಾಹುಗಳುಳ್ಳವನೂ ಉನ್ನತವಾದ ಹೆಗಲುಳ್ಳವನೂ ವಕ್ಷಃಸ್ಥಳದಲ್ಲಿ ಲಕ್ಷ್ಮೀಧರನೂ ಕಂಬುಕಂಠನೂ ನಿಮ್ನನಾಭಿಯೂ * ರೇಖಾಂಕಿತವಾಗಿ (ಅಶ್ವತ್ಥ) ದಳದಂತಹ ಉದರವುಳ್ಳವನೂ ಆಗಿದ್ದನು (೪೮). ಬೃಹತ್ತರವಾದ ಕಟಿತಟಶ್ರೋಣಿಗಳುಳ್ಳವನೂ ಕರಭದಂತಹ † ಊರುದ್ವಯದಿಂದ ಅನ್ವಿತನೂ ಸುಂದರವಾದ ಮುಂಡಿ ಮತ್ತು ಮೊಳಕಾಲುಗಳ ಯುಗ್ಮದಿಂದ ಶೋಭಿತನೂ ಆಗಿದ್ದನು (೪೯). ಆ ಪುರುಷನ ಕಾಲುಹರಡು ಉನ್ನತವಾಗಿತ್ತು. ಕೆಂಪಾದ ಉಗುರುಗಳ ಕಾಂತಿ ಹರಡಿತ್ತು. ಕೋಮಲವಾದ ಕಾಲ್ಬೆರಳು ಅಂಗುಷ್ಠಗಳಿಂದ ಪಾದಕಮಲಗಳು ಶೋಭಿಸು

---

* ಕಂಬು = ಶಂಖ; ನಿಮ್ನ = ಆಳವಾದ

† ಕಟಿತಟ = ಸೊಂಟ, ಸೊಂಟದ ಮುಂಭಾಗ. ಶ್ರೋಣಿ = ಪೃಷ್ಠಭಾಗ. ಕರಭ = ಮಣಿಕಟ್ಟಿನಿಂದ ಕಿರುಬೆರಳಿನವರೆಗಿರುವ ಹಸ್ತದ ಹೊರಭಾಗ; ಆನೆಯ ಸೊಂಡಿಲು.

ಸುಮಹಾರ್ಹಮಣಿವ್ರಾತಕಿರೀಟಕಟಕಾಂಗದೈಃ ।
ಕಟಿಸೂತ್ರಬ್ರಹ್ಮಸೂತ್ರಹಾರನೂಪುರಕುಂಡಲೈಃ ॥ ೫೧

ಭ್ರಾಜಮಾನಂ ಪದ್ಮಕರಂ ಶಂಖಚಕ್ರಗದಾಧರಮ್ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ವನಮಾಲಿನಮ್ ॥ ೫೨

ಸುನಂದನಂದಪ್ರಮುಖೈಃ ಪಾರ್ಷದೈಃ ಸನಕಾದಿಭಿಃ ।
ಸುರೇಶೈರ್ಬ್ರಹ್ಮರುದ್ರಾದ್ಯೈರ್ನವಭಿಶ್ಚ ದ್ವಿಜೋತ್ತಮೈಃ ॥ ೫೩

ಪ್ರಹ್ಲಾದನಾರದವಸುಪ್ರಮುಖೈರ್ಭಾಗವತೋತ್ತಮೈಃ ।
ಸ್ತೂಯಮಾನಂ ಪೃಥಗ್ಭಾವೈರ್ವಚೋಭಿರಮಲಾತ್ಮಭಿಃ ॥ ೫೪

ಶ್ರಿಯಾ ಪುಷ್ಟ್ಯಾ ಗಿರಾ ಕಾಂತ್ಯಾ ಕೀರ್ತ್ಯಾ ತುಷ್ಟ್ಯೇಲಯೋರ್ಜಯಾ
ವಿದ್ಯಯಾವಿದ್ಯಯಾ ಶಕ್ತ್ಯಾ ಮಾಯಯಾ ಚ ನಿಷೇವಿತಮ್ ॥ ೫೫

---

ತ್ತಿದ್ದವು (೫೦). ಅಮೂಲ್ಯರತ್ನರಾಶಿಗಳನ್ನು ಕೆತ್ತಿದ ಕಿರೀಟದಿಂದಲೂ ಹಸ್ತಾಭರಣಭುಜಕೀರ್ತಿಗಳಿಂದಲೂ ಕಟಿಸೂತ್ರ ಬ್ರಹ್ಮಸೂತ್ರ ಹಾರ ನೂಪುರ ಕುಂಡಲಗಳಿಂದಲೂ ವಿರಾಜಿಸುತ್ತ, ಪದ್ಮ ಶಂಖ ಚಕ್ರ ಗದೆಗಳನ್ನು ಹಿಡಿದು, ಶ್ರೀವತ್ಸಾಂಕಿತವಕ್ಷಃಸ್ಥಳನಾಗಿ, ಬೆಳಗುವ ಕೌಸ್ತುಭಮಣಿಯನ್ನು ಧರಿಸಿ, ವನಮಾಲಿಯಾದ ಪುರುಷನನ್ನು ಅಕ್ರೂರನು ಕಂಡನು (೫೧–೫೨). ಸುನಂದ, ನಂದ–ಮೊದಲಾದ ಪಾರಿಷದರಿಂದ (ಸ್ವಾಮಿಯೆಂದೂ), ಸನಕಾದಿಜ್ಞಾನಿಗಳಿಂದ (ಬ್ರಹ್ಮವೆಂದೂ), ಬ್ರಹ್ಮ ಮತ್ತು ಈಶಾನಾದ್ಯಷ್ಟದಿಕ್ಪಾಲಕರು–ಹೀಗೆ ಒಂಬತ್ತುಮಂದಿ ದೇವಶ್ರೇಷ್ಠರಿಂದ (ಪರಮೇಶ್ವರನೆಂದೂ), ಮರೀಚಿಯೇ ಮೊದಲಾದ ದ್ವಿಜೋತ್ತಮರಿಂದ (ಪ್ರಜೇಶ್ವರನೆಂದೂ), ಪ್ರಹ್ಲಾದ ನಾರದ ಉಪರಿಚರವಸುಪ್ರಮುಖರಾದ ಭಾಗವತೋತ್ತಮರಿಂದ (ಪರದೇವತೆಯೆಂದೂ), ವಿಭಿನ್ನಭಾವಗಳಿಂದ ಕೂಡಿದ ನಿರ್ಮಲವಚನಗಳಿಂದ ಸ್ತುತಿಸಲ್ಪಡತಕ್ಕವನೂ (೫೩–೫೪), ಲಕ್ಷ್ಮೀ ಪುಷ್ಟಿ ವಾಗ್ದೇವತೆ ಕಾಂತಿ ಕೀರ್ತಿ ತುಷ್ಟಿ ಈಳಾ ಊರ್ಜಾ ವಿದ್ಯಾ ಅವಿದ್ಯಾ ಶಕ್ತಿ ಮಾಯೆ–ಇವರಿಂದ ನಿಷೇವಿತನೂ ಆದ ಪುರುಷನನ್ನು ಅಕ್ರೂರನು ಕಂಡನು (೫೫).

ವಿಲೋಕ್ಯ ಸುಭೃಶಂ ಪ್ರೀತೋ ಭಕ್ತ್ಯಾ ಪರಮಯಾ ಯುತಃ ।
ಹೃಷ್ಯತ್ತನೂರುಹೋ ಭಾವಪರಿಕ್ಲಿನ್ನಾತ್ಮಲೋಚನಃ ॥ ೫೬

ಗಿರಾ ಗದ್ಗದಯಾಸ್ತೌಷೀತ್ ಸತ್ತ್ವಮಾಲಂಬ್ಯ ಸಾತ್ವತಃ ।
ಪ್ರಣಮ್ಯ ಮೂರ್ಧ್ನಾವಹಿತಃ ಕೃತಾಂಜಲಿಪುಟಃ ಶನೈಃ ॥ ೫೭

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕೋನಚತ್ವಾರಿಂಶಾಧ್ಯಾಯಃ



ಆ ಮಹಾಪುರುಷನನ್ನು ನೋಡಿ ಅಕ್ರೂರನು ಆನಂದತುಂದಿಲನಾಗಿ ಪರಮಭಕ್ತಿಯಿಂದ ರೋಮಾಂಚಿತನಾದನು. ಭಾವೋದ್ರೇಕದಿಂದ ಕಣ್ಣು ನೆನೆಯಿತು. ಆ ಸಾತ್ವತಕುಲೋತ್ಪನ್ನನು ತಲೆಬಾಗಿ ನಮಸ್ಕರಿಸಿ ಕೈಮುಗಿದು ಕೊಂಡು ಮೆಲ್ಲನೆ ಧೈರ್ಯವನ್ನವಲಂಬಿಸಿ ಗದ್ಗದಕಂಠದಿಂದ ಹೀಗೆ ಸ್ತೋತ್ರ ಮಾಡಿದನು (೫೬–೫೭).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ



## ಚತ್ವಾರಿಂಶಾಧ್ಯಾಯಃ

ಅಕ್ರೂರ ಉವಾಚ—

ನತೋಽಸ್ಮ್ಯಹಂ ತ್ವಾಖಿಲಹೇತುಹೇತುಂ
ನಾರಾಯಣಂ ಪೂರುಷಮಾದ್ಯಮವ್ಯಯಮ್ ।
ಯನ್ನಾಭಿಜಾತಾದರವಿಂದಕೋಶಾದ್
ಬ್ರಹ್ಮಾಽಽವಿರಾಸೀದ್ ಯತ ಏಷ ಲೋಕಃ ॥ ೧

ಭೂಸ್ತೋಯಮಗ್ನಿಃ ಪವನಃ ಖಮಾದಿ-
ರ್ಮಹಾನಜಾದಿರ್ಮನ ಇಂದ್ರಿಯಾಣಿ ।
ಸರ್ವೇಂದ್ರಿಯಾರ್ಥಾ ವಿಬುಧಾಶ್ಚ ಸರ್ವೇ
ಯೇ ಹೇತವಸ್ತೇ ಜಗತೋಽಂಗಭೂತಾಃ ॥ ೨

ನೈತೇ ಸ್ವರೂಪಂ ವಿದುರಾತ್ಮನಸ್ತೇ
ಹ್ಯಜಾದಯೋಽನಾತ್ಮತಯಾ ಗೃಹೀತಾಃ ।
ಅಜೋಽನುಬದ್ಧಃ ಸ ಗುಣೈರಜಾಯಾ
ಗುಣಾತ್ ಪರಂ ವೇದ ನ ತೇ ಸ್ವರೂಪಮ್ ॥ ೩

## ಅಧ್ಯಾಯ ೪೦

### ಅಕ್ರೂರನಿಂದ ಭಗವಂತನ ಸ್ತುತಿ

ಅಕ್ರೂರನು ಸ್ತೋತ್ರ ಮಾಡಿದನು : " ಹೇ ಕೃಷ್ಣ, ಸಕಲಕಾರಣಗಳಿಗೆ ಕಾರಣನೂ ಶಾಶ್ವತನೂ ನಾರಾಯಣನೂ ಆದಿಪುರುಷನೂ ಆದ ನಿನಗೆ ನಮಸ್ಕರಿಸಿದ್ದೇನೆ. ನಿನ್ನ ನಾಭಿಯಲ್ಲಿ ಹುಟ್ಟಿದ ಪದ್ಮಕೋಶದಿಂದ ಬ್ರಹ್ಮನು ಆವಿರ್ಭವಿಸಿ ಈ ಲೋಕವನ್ನು ಸೃಜಿಸಿದ್ದಾನೆ (೧). ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಅದಕ್ಕೆ ಆದಿಯಾದ ಅಹಂಕಾರ, ಮಹತ್ತತ್ತ್ವ, ಮಾಯೆ, ಮಾಯೆಗೆ ಆದಿಯಾದ ಪುರುಷ, ಮನಸ್ಸು, ಶಬ್ದವೇ ಮೊದಲಾದ ಇಂದ್ರಿಯಾರ್ಥಗಳು, ಸಮಸ್ತದೇವತೆಗಳು—ಎಂಬ ವಿಶ್ವಕಾರಣಗಳು ನಿನ್ನ ಅಂಗದಿಂದ ಜನಿಸಿದವು ! (೨). ಜಡವೆಂದು ಗೃಹೀತವಾಗಿರುವ ಮಾಯೆ ಮೊದಲಾದವು ಆತ್ಮನಾದ

ತ್ವಾಂ ಯೋಗಿನೋ ಯಜಂತ್ಯದ್ಧಾ ಮಹಾಪುರುಷಮೀಶ್ವರಮ್ ।
ಸಾಧ್ಯಾತ್ಮಂ ಸಾಧಿಭೂತಂ ಚ ಸಾಧಿದೈವಂ ಚ ಸಾಧವಃ ॥ ೪

ತ್ರಯ್ಯಾ ಚ ವಿದ್ಯಯಾ ಕೇಚಿತ್ ತ್ವಾಂ ವೈ ವೈತಾನಿಕಾ ದ್ವಿಜಾಃ ।
ಯಜಂತೇ ವಿತತೈರ್ಯಜ್ಞೈರ್ನಾನಾರೂಪಾಮರಾಖ್ಯಯಾ ॥ ೫

ಏಕೇ ತ್ವಾಖಿಲಕರ್ಮಾಣಿ ಸಂನ್ಯಸ್ಯೋಪಶಮಂ ಗತಾಃ ।
ಜ್ಞಾನಿನೋ ಜ್ಞಾನಯಜ್ಞೇನ ಯಜಂತಿ ಜ್ಞಾನವಿಗ್ರಹಮ್ ॥ ೬

ಅನ್ಯೇ ಚ ಸಂಸ್ಕೃತಾತ್ಮಾನೋ ವಿಧಿನಾಭಿಹಿತೇನ ತೇ ।
ಯಜಂತಿ ತ್ವನ್ಮಯಾಸ್ತ್ವಾಂ ವೈ ಬಹುಮೂರ್ತ್ಯೇಕಮೂರ್ತಿಕಮ್ ॥

---

ನಿನ್ನ ಸ್ವರೂಪವನ್ನರಿಯರು. ಬ್ರಹ್ಮನಾದರೋ ಮಾಯೆಯ ಗುಣಗಳಿಂದ ಆವೃತನಾಗಿರುವುದರಿಂದ ನಿನ್ನ ಗುಣಾತೀತವಾದ ಸ್ವರೂಪವನ್ನು ತಿಳಿದಿಲ್ಲ (೩). ಯೋಗಿಗಳು ಅಧ್ಯಾತ್ಮ ಅಧಿಭೂತ ಅಧಿದೈವಗಳಿಗೆ ಅಂತರ್ಯಾಮಿ ಮಹಾಪುರುಷನಾಗಿ ನಿಯಾಮಕನಾದ ನಿನ್ನನ್ನು ಧ್ಯಾನಿಸುತ್ತಾರೆ* (೪). ಯಾಜ್ಞಿಕರಾದ ಕೆಲವು ದ್ವಿಜರು (ಕರ್ಮಕಾಂಡದ) ವೇದತ್ರಯವನ್ನಾಶ್ರಯಿಸಿ, ನಾನಾರೂಪದ ದೇವತೆಗಳ ಹೆಸರಿಂದ, ವಿಸ್ತೃತವಾದ ಯಜ್ಞಗಳ ಮೂಲಕ ನಿನ್ನನ್ನೇ ಅರ್ಚಿಸುತ್ತಾರೆ† (೫). ಜ್ಞಾನಮಾರ್ಗಿಗಳಾದ ಕೆಲವರು ಸಮಸ್ತಕರ್ಮಗಳನ್ನೂ ಪರಿತ್ಯಜಿಸಿ ಉಪಶಾಂತರಾಗಿ, ಜ್ಞಾನಸ್ವರೂಪನಾದ ನಿನ್ನನ್ನು ಜ್ಞಾನಯಜ್ಞದಿಂದ ಭಜಿಸುತ್ತಾರೆ (೬). ಇನ್ನು ಕೆಲವರು ವೈಷ್ಣವಾದಿ ದೀಕ್ಷೆಯಿಂದ ಸಂಸ್ಕೃತರಾಗಿ, ನೀನು ಉಪದೇಶಿಸಿದ ಪಾಂಚರಾತ್ರಾದಿ ವಿಧಿಯನ್ನನುಸರಿಸಿ, ನಿನ್ನಲ್ಲಿ ಮುಳುಗಿ, (ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಭೇದಗಳಿಂದ) ಬಹುಮೂರ್ತಿಯಾಗಿಯೂ (ನಾರಾಯಣ ರೂಪದಿಂದ) ಏಕಮೂರ್ತಿಯಾಗಿಯೂ ಇರುವ ನಿನ್ನನ್ನು ಉಪಾಸಿಸುತ್ತಾರೆ (೭).

---

* ಯೋಗಿಗಳೂ ನಿರ್ಗುಣನಾದ ನಿನ್ನ ಸ್ವರೂಪವನ್ನರಿಯಲಾರದೆ ಪ್ರಕಾರಾಂತರದಿಂದ ನಿನ್ನನ್ನು ಧ್ಯಾನಿಸುತ್ತಾರೆ.

† ಪರಮಾತ್ಮನಿಗೇ ಇಂದ್ರ, ವರುಣ ಮುಂತಾದ ವಿವಿಧನಾಮಗಳು. ಆ ಹೆಸರಿನಲ್ಲಿ ನಡೆಯುವ ಯಾಗಗಳು ಪರಮಾತ್ಮನಿಗೇ ಅರ್ಪಿತ.

ತ್ವಾಮೇವಾನ್ಯೇ ಶಿವೋಕ್ತೇನ ಮಾರ್ಗೇಣ ಶಿವರೂಪಿಣಮ್ ।
ಬಹ್ವಾಚಾರ್ಯವಿಭೇದೇನ ಭಗವನ್ ಸಮುಪಾಸತೇ ॥ ೮

ಸರ್ವ ಏವ ಯಜಂತಿ ತ್ವಾಂ ಸರ್ವದೇವಮಯೇಶ್ವರಮ್ ।
ಯೇಽಪ್ಯನ್ಯದೇವತಾಭಕ್ತಾ ಯದ್ಯಪ್ಯನ್ಯಧಿಯಃ ಪ್ರಭೋ ॥ ೯

ಯಥಾದ್ರಿಪ್ರಭವಾ ನದ್ಯಃ ಪರ್ಜನ್ಯಾಪೂರಿತಾಃ ಪ್ರಭೋ ।
ವಿಶಂತಿ ಸರ್ವತಃ ಸಿಂಧುಂ ತದ್ವತ್ತ್ವಾಂ ಗತಯೋಽಂತತಃ ॥ ೧೦

ಸತ್ತ್ವಂ ರಜಸ್ತಮ ಇತಿ ಭವತಃ ಪ್ರಕೃತೇರ್ಗುಣಾಃ ।
ತೇಷು ಹಿ ಪ್ರಾಕೃತಾಃ ಪ್ರೋಕ್ತಾ ಆಬ್ರಹ್ಮಸ್ಥಾವರಾದಯಃ ॥ ೧೧

ತುಭ್ಯಂ ನಮಸ್ತೇಽಸ್ತ್ವವಿಷಕ್ತದೃಷ್ಟಯೇ
ಸರ್ವಾತ್ಮನೇ ಸರ್ವಧಿಯಾಂ ಚ ಸಾಕ್ಷಿಣೇ ।
ಗುಣಪ್ರವಾಹೋಽಯಮವಿದ್ಯಯಾ ಕೃತಃ
ಪ್ರವರ್ತತೇ ದೇವನೃತಿರ್ಯಗಾತ್ಮಸು ॥ ೧೨

---

ಮತ್ತೆ ಕೆಲವರು ಶಿವನಿಂದ ಉಪದಿಷ್ಟವಾದ ಶೈವಪಾಶುಪತಾದಿ ವಿಭಿನ್ನ ಮಾರ್ಗವನ್ನಾಶ್ರಯಿಸಿ ಶಿವರೂಪಿಯಾದ ನಿನ್ನನ್ನೇ, ಹೇ ಭಗವನ್, ಉಪಾಸನೆಮಾಡುತ್ತಾರೆ (೮). ಓ ಸರ್ವದೇವಸ್ವರೂಪನೆ, ಸರ್ವರೂ ಈಶ್ವರನಾದ ನಿನ್ನನ್ನೇ ಪೂಜಿಸುತ್ತಾರೆ. ವಿಭಿನ್ನದೇವತಾಭಕ್ತರಾದರೂ ವಿಭಿನ್ನಭಾವನೆಯುಳ್ಳವರಾದರೂ, ಹೇ ಸ್ವಾಮಿ, ಎಲ್ಲರೂ ನಿನ್ನನ್ನು ಕುರಿತೇ ಹೊರಟಿದ್ದಾರೆ! ಬೆಟ್ಟದಿಂದ ಹುಟ್ಟಿದ ನದಿಗಳು ಮೇಘದಿಂದ ಜಲಪೂರ್ಣವಾಗಿ ನಾನಾ ಕವಲುಗಳಾಗಿ ಹರಿದರೂ ಕಡೆಯಲ್ಲಿ ಸಮುದ್ರವನ್ನೇ ಸೇರುವಂತೆ, ಹೇ ಪ್ರಭು, ಎಲ್ಲರೂ ನಿನ್ನನ್ನೇ ಸೇರುತ್ತಾರೆ (೯–೧೦). ಸತ್ತ್ವ, ರಜಸ್ಸು, ತಮಸ್ಸು–ಎಂಬಿವು ನಿನ್ನ ಶಕ್ತಿಯಾದ ಪ್ರಕೃತಿಯ ಗುಣಗಳು. ಬ್ರಹ್ಮಾದಿಸ್ಥಾವರಪರ್ಯಂತವಾದ ಸಕಲಪದಾರ್ಥಗಳೂ ಪ್ರಕೃತಿಯಲ್ಲಿ ಪ್ರವಿಷ್ಟವಾದ್ದರಿಂದ ಪ್ರಾಕೃತಗಳು (ಆದ್ದರಿಂದ ಪ್ರಕೃತಿಲಯವಾದ ಮೇಲೆ ನಿನ್ನನ್ನೇ ಸೇರುವರು) (೧೧). ಅಲಿಪ್ತಬುದ್ಧಿಯೂ* ಸರ್ವಾತ್ಮನೂ ಸರ್ವಧೀಸಾಕ್ಷಿಯೂ ಆದ

---

* ಸ್ವವ್ಯತಿರಿಕ್ತವಸ್ತುವಿಲ್ಲದ್ದರಿಂದಲೂ ಸರ್ವಧೀಸಾಕ್ಷಿಯಾದ್ದರಿಂದಲೂ ನೀನು ಅಲಿಪ್ತಬುದ್ಧಿ.

ಅಗ್ನಿರ್ಮುಖಂ ತೇಽವನಿರಂಘ್ರಿರೀಕ್ಷಣಂ
ಸೂರ್ಯೋ ನಭೋ ನಾಭಿರಥೋ ದಿಶಃ ಶ್ರುತಿಃ ।
ದ್ಯೌಃ ಕಂ ಸುರೇಂದ್ರಾಸ್ತವ ಬಾಹವೋಽರ್ಣವಾಃ
ಕುಕ್ಷಿರ್ಮರುತ್ ಪ್ರಾಣಬಲಂ ಪ್ರಕಲ್ಪಿತಮ್ ॥ ೧೩

ರೋಮಾಣಿ ವೃಕ್ಷೌಷಧಯಃ ಶಿರೋರುಹಾ
ಮೇಘಾಃ ಪರಸ್ಯಾಸ್ಥಿನಖಾನಿ ತೇಽದ್ರಯಃ ।
ನಿಮೇಷಣಂ ರಾತ್ರ್ಯಹನೀ ಪ್ರಜಾಪತಿ-
ರ್ಮೇಢ್ರಸ್ತು ವೃಷ್ಟಿಸ್ತವ ವೀರ್ಯಮಿಷ್ಯತೇ ॥ ೧೪

ತ್ವಯ್ಯವ್ಯಯಾತ್ಮನ್ ಪುರುಷೇ ಪ್ರಕಲ್ಪಿತಾ
ಲೋಕಾಃ ಸಪಾಲಾ ಬಹುಜೀವಸಂಕುಲಾಃ ।
ಯಥಾ ಜಲೇ ಸಂಜಿಹತೇ ಜಲೌಕಸೋಽ-
ಪ್ಯುದುಂಬರೇ ವಾ ಮಶಕಾ ಮನೋಮಯೇ ॥ ೧೫

---

ನಿನಗೆ ನಮಸ್ಕಾರ. ದೇವ ಮನುಷ್ಯ ತಿರ್ಯಗ್‌ಜಂತುಗಳಲ್ಲಿ ನಿನ್ನ ಅವಿದ್ಯಾ ಶಕ್ತಿಯಿಂದಾದ ಗುಣಪ್ರವಾಹವು (ಸಂಸಾರವು) ಪ್ರವರ್ತಿಸುತ್ತಿದೆ (೧೨). ಅಗ್ನಿಯೇ ನಿನ್ನ ಮುಖ, ಪೃಥ್ವಿಯು ಪಾದ, ಸೂರ್ಯನು ನೇತ್ರ, ಆಕಾಶವು ನಾಭಿ, ದಿಕ್ಕುಗಳು ಕಿವಿ, ಸ್ವರ್ಗವು ಶಿರಸ್ಸು, ಸುರೇಂದ್ರರು ನಿನ್ನ ಬಾಹುಗಳು, ಸಮುದ್ರವು ಉದರ, ವಾಯುವೇ ನಿನ್ನ ಪ್ರಾಣ ಮತ್ತು ಬಲ (೧೩). ವೃಕ್ಷಗಳೂ ಸಸ್ಯಗಳೂ ನಿನ್ನ ರೋಮಗಳು, ಮೇಘಗಳು ತಲೆಗೂದಲು. ಪರಮಾತ್ಮನಾದ ನಿನಗೆ ಬೆಟ್ಟಗಳು ಮೂಳೆ ಮತ್ತು ಉಗುರು. ಹಗಲು ರಾತ್ರಿಗಳೇ ನೀನು ಕಣ್ಣು ಮುಚ್ಚಿ ತೆರೆಯುವುದು. ಬ್ರಹ್ಮನು ನಿನ್ನ ಜನನೇಂದ್ರಿಯ, ವೃಷ್ಟಿಯು ವೀರ್ಯ (೧೪). ಹೇ ಅವ್ಯಯಾತ್ಮ, ಮನೋಗಮ್ಯನೂ ಪರಮಪುರುಷನೂ ಆದ ನಿನ್ನಲ್ಲಿ ವಿವಿಧ ಜೀವರಾಶಿಗಳಿಂದಲೂ ಲೋಕಪಾಲರಿಂದಲೂ ಕೂಡಿದ ಅನಂತ ಲೋಕಗಳು, ನೀರಲ್ಲಿ ನೀರಿನ ಕ್ರಿಮಿಗಳೂ ಅತ್ತಿಯ ಹಣ್ಣಿನಲ್ಲಿ ಹುಳುಗಳೂ ಹರದಾಡುವಂತೆ ಪರದಾಡುತ್ತಿವೆ! (೧೫).

ಯಾನಿ ಯಾನೀಹ ರೂಪಾಣಿ ಕ್ರೀಡನಾರ್ಥಂ ಬಿಭರ್ಷಿ ಹಿ ।
ತೈರಾಮೃಷ್ಟಶುಚೋ ಲೋಕಾ ಮುದಾ ಗಾಯಂತಿ ತೇ ಯಶಃ ॥ ೧೬

ನಮಃ ಕಾರಣಮತ್ಸ್ಯಾಯ ಪ್ರಲಯಾಬ್ಧಿಚರಾಯ ಚ ।
ಹಯಶೀರ್ಷ್ಣೇ ನಮಸ್ತುಭ್ಯಂ ಮಧುಕೈಟಭಮೃತ್ಯವೇ ॥ ೧೭

ಅಕೂಪಾರಾಯ ಬೃಹತೇ ನಮೋ ಮಂದರಧಾರಿಣೇ ।
ಕ್ಷಿತ್ಯುದ್ಧಾರವಿಹಾರಾಯ ನಮಃ ಸೂಕರಮೂರ್ತಯೇ ॥ ೧೮

ನಮಸ್ತೇಽದ್ಭುತಸಿಂಹಾಯ ಸಾಧುಲೋಕಭಯಾಪಹ ।
ವಾಮನಾಯ ನಮಸ್ತುಭ್ಯಂ ಕ್ರಾಂತತ್ರಿಭುವನಾಯ ಚ ॥ ೧೯

ನಮೋ ಭೃಗೂಣಾಂ ಪತಯೇ ದೃಪ್ತಕ್ಷತ್ರವನಚ್ಛಿದೇ ।
ನಮಸ್ತೇ ರಘುವರ್ಯಾಯ ರಾವಣಾಂತಕರಾಯ ಚ ॥ ೨೦

ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ಸಾತ್ವತಾಂ ಪತಯೇ ನಮಃ ॥ ೨೧

---

ಕ್ರೀಡಾರ್ಥವಾಗಿ ನೀನು ಯಾವ ಯಾವ ರೂಪಗಳನ್ನು ಧರಿಸುವೆಯೊ ಅವುಗಳಿಂದ ತಮ್ಮ ದುಃಖಗಳನ್ನು ಪರಿಹರಿಸಿಕೊಳ್ಳುವ ಸಾಧುಜನರು ಸಂತೋಷದಿಂದ ನಿನ್ನ ಕೀರ್ತಿಯನ್ನು ಹಾಡುತ್ತಾರೆ (೧೬). ಪ್ರಳಯಕಾಲದ ಸಮುದ್ರದಲ್ಲಿ ಈಜಾಡುವ ಕಾರಣಮತ್ಸ್ಯನಿಗೆ ನಮಸ್ಕಾರ! ಮಧುಕೈಟಭರಿಗೆ ಮೃತ್ಯುವೂ ಹಯಗ್ರೀವನೂ ಆದ ನಿನಗೆ ನಮಸ್ಕಾರ! ಮಂದರಪರ್ವತವನ್ನು ಹೊತ್ತ ಮಹಾಕೂರ್ಮನಿಗೆ ನಮಸ್ಕಾರ! ಲೀಲೆಯಿಂದ ಭೂಮಿಯನ್ನೆತ್ತಿ ವಿಹರಿಸಿದ ವರಾಹಮೂರ್ತಿಗೆ ನಮಸ್ಕಾರ! (೧೭–೧೮). ಸಜ್ಜನರ ಭಯವನ್ನು ದೂರಮಾಡಿದವನೆ, ಅದ್ಭುತನರಸಿಂಹನಾದ ನಿನಗೆ ನಮಸ್ಕಾರ! ಮೂರು ಲೋಕಗಳನ್ನು ಹೆಜ್ಜೆಯಿಂದಳೆದ ವಾಮನನಿಗೆ ನಮಸ್ಕಾರ! ಕೊಬ್ಬಿದ ಕ್ಷತ್ರಿಯರ ಹಿಂಡನ್ನು ತುಂಡರಿಸಿದ ಭೃಗುಪತಿಯಾದ ಪರಶುರಾಮನಿಗೆ ನಮಸ್ಕಾರ! ರಘುಕುಲತಿಲಕನಾಗಿ ರಾವಣಾಂತಕನಾದ ನಿನಗೆ ನಮಸ್ಕಾರ! (೧೯–೨೦). ವಾಸುದೇವನೂ ಸಂಕರ್ಷಣನೂ ಆದ ನಿನಗೆ ನಮೋ ನಮಃ. ಪ್ರದ್ಯುಮ್ನನೂ ಅನಿರುದ್ಧನೂ ಸಾತ್ವತಶ್ರೇಷ್ಠನೂ ಆದ ನಿನಗೆ ನಮಸ್ಕಾರ!

ನಮೋ ಬುದ್ಧಾಯ ಶುದ್ಧಾಯ ದೈತ್ಯದಾನವಮೋಹಿನೇ ।
ಮ್ಲೇಚ್ಛಪ್ರಾಯಕ್ಷತ್ರಹಂತ್ರೇ ನಮಸ್ತೇ ಕಲ್ಕಿರೂಪಿಣೇ ॥ ೨೨

ಭಗವನ್ ಜೀವಲೋಕೋಽಯಂ ಮೋಹಿತಸ್ತವ ಮಾಯಯಾ ।
ಅಹಂಮಮೇತ್ಯಸದ್ಗ್ರಾಹೋ ಭ್ರಾಮ್ಯತೇ ಕರ್ಮವರ್ತ್ಮಸು ॥ ೨೩

ಅಹಂ ಚಾತ್ಮಾತ್ಮಜಾಗಾರದಾರಾರ್ಥಸ್ವಜನಾದಿಷು ।
ಭ್ರಮಾಮಿ ಸ್ವಪ್ನಕಲ್ಪೇಷು ಮೂಢಃ ಸತ್ಯಧಿಯಾ ವಿಭೋ ॥ ೨೪

ಅನಿತ್ಯಾನಾತ್ಮದುಃಖೇಷು ವಿಪರ್ಯಯಮತಿರ್ಹ್ಯಹಮ್ ।
ದ್ವಂದ್ವಾರಾಮಸ್ತಮೋವಿಷ್ಟೋ ನ ಜಾನೇ ತ್ವಾಽಽತ್ಮನಃಪ್ರಿಯಮ್ ॥

ಯಥಾಽಬುಧೋ ಜಲಂ ಹಿತ್ವಾ ಪ್ರತಿಚ್ಛನ್ನಂ ತದುದ್ಭವೈಃ ।
ಅಭ್ಯೇತಿ ಮೃಗತೃಷ್ಣಾಂ ವೈ ತದ್ವತ್ತ್ವಾಽಹಂ ಪರಾಙ್ಮುಖಃ ॥ ೨೬

---

ದೈತ್ಯದಾನವರನ್ನು ಮೋಹಗೊಳಿಸುವ ಶುದ್ಧನಾದ ಬುದ್ಧನಿಗೆ ನಮಸ್ಕಾರ! ಮ್ಲೇಚ್ಛರೂಪರಾದ ಕ್ಷತ್ರಿಯರನ್ನು ಕೊಲ್ಲುವ ಕಲ್ಕಿರೂಪಿಯಾದ ನಿನಗೆ ನಮಸ್ಕಾರ! (೨೧–೨೨). ಭಗವನ್, ಈ ಜೀವಲೋಕವು ನಿನ್ನ ಮಾಯೆಗೊಳಗಾಗಿ ಮೋಹಗೊಂಡಿದೆ. ನಾನು–ನನ್ನದು ಎಂಬ ತಪ್ಪು ತಿಳಿವಳಿಕೆಯಿಂದ ಕರ್ಮಮಾರ್ಗದ ಸಂಸಾರದಲ್ಲಿ ಅಲೆಯುತ್ತಿದೆ (೨೩). ಓ ಸ್ವಾಮಿ, ಮೂಢನಾದ ನಾನೂ ಸಹ 'ನಾನು ಅಕ್ರೂರ, ನನ್ನ ಮಗ, ನನ್ನ ಮನೆ, ನನ್ನ ಹೆಂಡತಿ, ನನ್ನ ಹಣ, ನನ್ನ ಬಂಧುಗಳು' ಎಂಬ ಸ್ವಪ್ನಪ್ರಾಯವಾದ ವಸ್ತುಗಳನ್ನು ಸತ್ಯವೆಂದೇ ತಿಳಿದು ಭ್ರಮಿಸುತ್ತಿದ್ದೇನೆ (೨೪). ಅನಿತ್ಯವನ್ನು ನಿತ್ಯವೆಂದೂ, ಅನಾತ್ಮವನ್ನು ಆತ್ಮವೆಂದೂ, ದುಃಖವನ್ನು ಸುಖವೆಂದೂ ವಿಪರೀತವಾಗಿ ಅರಿತುಕೊಂಡವನು ನಾನು. ಆದ್ದರಿಂದ ಸುಖದುಃಖಗಳ ದ್ವಂದ್ವದಲ್ಲಿಳಿದು ಅಜ್ಞಾನದಲ್ಲಿ ಮುಳುಗಿದ ನಾನು, ವಾಸ್ತವವಾಗಿ ನನ್ನ ಆತ್ಮಕ್ಕೆ ಪ್ರೇಮಾಸ್ಪದನಾದ ನಿನ್ನನ್ನು ತಿಳಿಯಲಾರದೆ ಇದ್ದೇನೆ (೨೫). ಬುದ್ಧಿಗೇಡಿಯು ನೀರಿಂದ ಹುಟ್ಟಿದ ಹುಲ್ಲುಗಳಿಂದ ಮರೆಯಾದ ನೀರನ್ನು ಪರಿತ್ಯಜಿಸಿ ಬಿಸಿಲ್ಗುದುರೆಯ ಕಡೆಗೆ ಹೇಗೆ ಧಾವಿಸುವನೋ ಹಾಗೆ ನನ್ನ ಪರಿಸ್ಥಿತಿಯಾಗಿದೆ. ನಿನ್ನ ಮಾಯೆಯಿಂದಲೇ ಆಚ್ಛಾದಿತನಾದ ನಿನ್ನನ್ನು ಪರಿತ್ಯಜಿಸಿ ಬಿಸಿಲ್ಗುದುರೆಯಂತಿರುವ ದೇಹಾದಿಗಳ ಕಡೆಗೆ ಧಾವಿಸುತ್ತಿದ್ದೇನೆ! (೨೬).

ನೋತ್ಸಹೇಽಹಂ ಕೃಪಣಧೀಃ ಕಾಮಕರ್ಮಹತಂ ಮನಃ ।
ರೋದ್ಧುಂ ಪ್ರಮಾಥಿಭಿಶ್ಚಾಕ್ಷೈರ್ಹ್ರಿಯಮಾಣಮಿತಸ್ತತಃ ॥ ೨೭

ಸೋಽಹಂ ತವಾಂಘ್ರ್ಯುಪಗತೋಽಸ್ಮ್ಯಸತಾಂ ದುರಾಪಂ
ತಚ್ಚಾಪ್ಯಹಂ ಭವದನುಗ್ರಹ ಈಶ ಮನ್ಯೇ ।
ಪುಂಸೋ ಭವೇದ್ ಯರ್ಹಿ ಸಂಸರಣಾಪವರ್ಗ-
ಸ್ತ್ವಯ್ಯಬ್ಜನಾಭ ಸದುಪಾಸನಯಾ ಮತಿಃ ಸ್ಯಾತ್ ॥ ೨೮

ನಮೋ ವಿಜ್ಞಾನಮಾತ್ರಾಯ ಸರ್ವಪ್ರತ್ಯಯಹೇತವೇ ।
ಪುರುಷೇಶಪ್ರಧಾನಾಯ ಬ್ರಹ್ಮಣೇಽನಂತಶಕ್ತಯೇ ॥ ೨೯

ನಮಸ್ತೇ ವಾಸುದೇವಾಯ ಸರ್ವಭೂತಕ್ಷಯಾಯ ಚ ।
ಹೃಷೀಕೇಶ ನಮಸ್ತುಭ್ಯಂ ಪ್ರಪನ್ನಂ ಪಾಹಿ ಮಾಂ ಪ್ರಭೋ ॥ ೩೦

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತ್ವಾರಿಂಶಾಧ್ಯಾಯಃ

---

ನನ್ನ ಬುದ್ಧಿ ವಿಷಯವಾಸನೆಗಳಿಂದ ತುಂಬಿದೆ. ಕಾಮಕರ್ಮಗಳಿಂದ ಕ್ಷುಭಿತವಾದ ಮನಸ್ಸನ್ನು ಬಲಾಢ್ಯವಾದ ಇಂದ್ರಿಯಗಳು ಅತ್ತಿಂದಿತ್ತ ಜಗ್ಗಾಡುತ್ತವೆ. ಮನಸ್ಸನ್ನು ಹತೋಟಿಗೆ ತರಲು ನಾನು ಸಮರ್ಥನಾಗಿಲ್ಲ (೨೭). ಈಶ, ಈ ನಾನು ದುರ್ಜನರಿಗೆ ದುರ್ಲಭವಾದ ನಿನ್ನ ಪಾದಕ್ಕೆ ಶರಣಾಗಿದ್ದೇನೆ. ಶರಣಾಗುವುದೂ ಸಹ ನಿನ್ನ ಅನುಗ್ರಹದಿಂದಲೇ ಲಭಿಸಿವೆ. ಜೀವನಿಗೆ ಸಂಸಾರದಿಂದ ಬಿಡುಗಡೆ (ನಿನ್ನ ಕೃಪೆಯಿಂದ) ಒದಗಿಬಂದಾಗ, ಸಜ್ಜನಸೇವೆಯಿಂದ ನಿನ್ನಲ್ಲಿ ಭಕ್ತಿ ಉದಯಿಸುವುದು (೨೮). ಸಕಲರ ಸಕಲಜ್ಞಾನಕ್ಕೂ ಕಾರಣನಾದ ವಿಜ್ಞಾನಮೂರ್ತಿಗೆ ನಮಸ್ಕಾರ! ಪುರುಷನಿಗೆ (ಸುಖದುಃಖಗಳನ್ನು ಕೊಡುವ ಕಾಲಕರ್ಮಸ್ವಭಾವಗಳೆಂಬ) ಯಾವ ನಿಯಾಮಕಗಳಿವೆಯೋ ಅವುಗಳಿಗೆ ಪ್ರಧಾನನಿಯಂತೃವೂ ಅನಂತಶಕ್ತಿಯುಳ್ಳದ್ದೂ ಆದ ಬ್ರಹ್ಮವಸ್ತುವಿಗೆ ನಮಸ್ಕಾರ! (೨೯). ಸರ್ವಭೂತಪ್ರಳಯಕಾರಿಯೂ ವಾಸುದೇವನೂ ಆದ ನಿನಗೆ, ಹೃಷೀಕೇಶನೆ, ನಮಸ್ಕಾರ. ಶರಣಾಗತನಾದ ನನ್ನನ್ನು, ಪ್ರಭುವೆ, ಪಾಲಿಸು " ಎಂದು ಸ್ತುತಿಸಿದನು (೩೦).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತನೆಯ ಅಧ್ಯಾಯ

## ಏಕಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

**ಸ್ತುವತಸ್ತಸ್ಯ ಭಗವಾನ್ ದರ್ಶಯಿತ್ವಾ ಜಲೇ ವಪುಃ ।**
**ಭೂಯಃ ಸಮಾಹರತ್ ಕೃಷ್ಣೋ ನಟೋ ನಾಟ್ಯಮಿವಾತ್ಮನಃ ॥ ೧**

**ಸೋऽಪಿ ಚಾಂತರ್ಹಿತಂ ವೀಕ್ಷ್ಯ ಜಲಾದುನ್ಮಜ್ಜ್ಯ ಸತ್ವರಃ ।**
**ಕೃತ್ವಾ ಚಾವಶ್ಯಕಂ ಸರ್ವಂ ವಿಸ್ಮಿತೋ ರಥಮಾಗಮತ್ ॥ ೨**

**ತಮಪೃಚ್ಛದ್ಧೃಷೀಕೇಶಃ ಕಿಂ ತೇ ದೃಷ್ಟಮಿಹಾದ್ಭುತಮ್ ।**
**ಭೂಮೌ ವಿಯತಿ ತೋಯೇ ವಾ ತಥಾ ತ್ವಾಂ ಲಕ್ಷಯಾಮಹೇ ॥ ೩**

ಅಕ್ರೂರ ಉವಾಚ

**ಅದ್ಭುತಾನೀಹ ಯಾವಂತಿ ಭೂಮೌ ವಿಯತಿ ವಾ ಜಲೇ ।**
**ತ್ವಯಿ ವಿಶ್ವಾತ್ಮಕೇ ತಾನಿ ಕಿಂ ಮೇऽದೃಷ್ಟಂ ವಿಪಶ್ಯತಃ ॥ ೪**

## ಅಧ್ಯಾಯ ೪೧

ಮಧುರಾಪ್ರವೇಶ. ರಜಕವಧೆ. ನೇಯ್ಗೆಯವನಿಗೂ ಹೂವಾಡಿಗನಿಗೂ ಅನುಗ್ರಹ

ಶುಕಮಹರ್ಷಿಗಳು ಹೇಳಿದರು: ಹೀಗೆ ಅಕ್ರೂರನು ಸ್ತುತಿಸುತ್ತಿರುವಾಗಲೇ ಭಗವಾನ್ ಶ್ರೀಕೃಷ್ಣನು ಜಲದಲ್ಲಿ ತನ್ನ ದಿವ್ಯದೇಹವನ್ನು ತೋರಿಸಿ, ನಟನು ನಾಟ್ಯವನ್ನು ಮುಗಿಸುವಂತೆ ಅದನ್ನು ಉಪಸಂಹರಿಸಿದನು (೧). ದಿವ್ಯಾಕೃತಿಯು ಅಂತರ್ಹಿತವಾದುದನ್ನು ಕಂಡು ಅಕ್ರೂರನು ನೀರಿನಿಂದ ಹೊರಗೆ ಎದ್ದು ಬಂದು ವಿಸ್ಮಿತನಾಗಿ, ಬೇಗಬೇಗನೆ ಆವಶ್ಯಕವಾದ ಎಲ್ಲ ಕರ್ತವ್ಯವನ್ನೂ ನೆರವೇರಿಸಿ ರಥದ ಬಳಿಗೆ ಬಂದನು (೨). ಮುಕುಂದನು ಅವನನ್ನು ಕುರಿತು "ಅಕ್ರೂರ, ನಿನ್ನನ್ನು ನೋಡಿದರೆ ಏನೋ ಅದ್ಭುತವನ್ನು ಕಂಡವನಂತೆ ನಮಗೆ ತೋರುತ್ತದೆ! ಭೂಮಿಯ ಮೇಲೆ ನೋಡಿದೆಯೊ? ಆಕಾಶದಲ್ಲಿಯೊ? ಜಲದಲ್ಲಿಯೊ?" ಎಂದು ಕೇಳಿದನು! (೩). ಅದಕ್ಕೆ ಅಕ್ರೂರನು "ಭೂಮಿಯ ಮೇಲೆ, ಆಕಾಶದಲ್ಲಿ, ಜಲದಲ್ಲಿ, ಯಾವ ಯಾವ ಅದ್ಭುತಗಳಿವೆಯೋ ಅವೆಲ್ಲ ವಿಶ್ವಾತ್ಮಕನಾದ ನಿನ್ನಲ್ಲಿಯೇ ಇವೆ! ನಿನ್ನನ್ನು

ಯತ್ರಾದ್ಭುತಾನಿ ಸರ್ವಾಣಿ ಭೂಮೌ ವಿಯತಿ ವಾ ಜಲೇ ।
ತಂ ತ್ವಾನುಪಶ್ಯತೋ ಬ್ರಹ್ಮನ್ ಕಿಂ ಮೇ ದೃಷ್ಟಮಿಹಾದ್ಭುತಮ್ ॥

ಇತ್ಯುಕ್ತ್ವಾ ಚೋದಯಾಮಾಸ ಸ್ಯಂದನಂ ಗಾಂದಿನೀಸುತಃ ।
ಮಥುರಾಮನಯದ್ ರಾಮಂ ಕೃಷ್ಣಂ ಚೈವ ದಿನಾತ್ಯಯೇ ॥ ೬

ಮಾರ್ಗೇ ಗ್ರಾಮಜನಾ ರಾಜಂಸ್ತತ್ರ ತತ್ರೋಪಸಂಗತಾಃ ।
ವಸುದೇವಸುತೌ ವೀಕ್ಷ್ಯ ಪ್ರೀತಾ ದೃಷ್ಟಿಂ ನ ಚಾದದುಃ ॥ ೭

ತಾವದ್ ವ್ರಜೌಕಸಸ್ತತ್ರ ನಂದಗೋಪಾದಯೋಽಗ್ರತಃ ।
ಪುರೋಪವನಮಾಸಾದ್ಯ ಪ್ರತೀಕ್ಷಂತೋಽವತಸ್ಥಿರೇ ॥ ೮

ತಾನ್ ಸಮೇತ್ಯಾಹ ಭಗವಾನಕ್ರೂರಂ ಜಗದೀಶ್ವರಃ ।
ಗೃಹೀತ್ವಾ ಪಾಣಿನಾ ಪಾಣಿಂ ಪ್ರಶ್ರಿತಂ ಪ್ರಹಸನ್ನಿವ ॥ ೯

ಭವಾನ್ ಪ್ರವಿಶತಾಮಗ್ರೇ ಸಹಯಾನಃ ಪುರೀಂ ಗೃಹಮ್ ।
ವಯಂ ತ್ವಿಹಾವಮುಚ್ಯಾಥ ತತೋ ದ್ರಕ್ಷ್ಯಾಮಹೇ ಪುರೀಮ್ ॥ ೧೦

---

ನೋಡಿದ ನನಗೆ ಯಾವ ಅದ್ಭುತವನ್ನು ನೋಡಿದಂತಾಗಲಿಲ್ಲ? (೪). ಯಾರಲ್ಲಿ ಸಮಸ್ತ ಅದ್ಭುತಗಳು ನೆಲೆಸಿವೆಯೋ ಅಂಥ ನಿನ್ನನ್ನು ಇಲ್ಲಿ ನೋಡುತ್ತಿರುವ ನನಗೆ, ಭೂಮಿಯಮೇಲಾಗಲಿ ಆಕಾಶದಲ್ಲಾಗಲಿ ಜಲದಲ್ಲಾಗಲಿ, ಹೇ ಪರಮೇಶ್ವರ, ಬೇರೆ ಯಾವ ಅದ್ಭುತವು ಕಂಡೀತು!" ಎಂದು ಹೇಳಿದನು (೫). ಗಾಂದಿನಿ ಎಂಬವಳ ಪುತ್ರನಾದ ಅಕ್ರೂರನು ಹೀಗೆ ನುಡಿದು ರಥವನ್ನು ಮುಂದೂಡಿದನು. ಬಲರಾಮನನ್ನೂ ಶ್ರೀಕೃಷ್ಣನನ್ನೂ ಹಗಲಿನ ಅಂತ್ಯಭಾಗದಲ್ಲಿ ಮಥುರೆಗೆ ಕರೆದೊಯ್ದನು (೬). ಪರೀಕ್ಷಿತರಾಜ, ದಾರಿಯಲ್ಲಿ ಹಳ್ಳಿಯ ಜನರು ಅಲ್ಲಲ್ಲಿ ಸೇರಿ, ವಸುದೇವಸುತರನ್ನು ಪ್ರೀತಿಯಿಂದ ನೋಡುತ್ತಿದ್ದರೇ ಹೊರತು, ತಮ್ಮ ದೃಷ್ಟಿಯನ್ನು ಹಿಂದೆಗೆದುಕೊಳ್ಳಲಿಲ್ಲ! (೭). ಅಷ್ಟರಲ್ಲಿ ವ್ರಜವಾಸಿಗಳಾದ ನಂದಗೋಪಾದಿಗಳು ಮೊದಲೇ ಹೋಗಿ, ಇವರನ್ನು ಪ್ರತೀಕ್ಷಿಸುತ್ತ ನಗರೋಪವದಲ್ಲಿ ಕಾದಿದ್ದರು (೮). ಜಗದೀಶ್ವರನಾದ ಭಗವಂತನು ಅವರೆಲ್ಲರೊಡನೆ ಸಂಮಿಳಿತನಾಗಿ, ಅಕ್ರೂರನ ಕೈಯನ್ನು ತನ್ನ ಕೈಯಿಂದ ಹಿಡಿದುಕೊಂಡು ಮುಗುಳ್ನಗೆ ಬೀರುತ್ತ ಮೃದುವಾಗಿ "ಅಕ್ರೂರ, ನೀನು ಮೊದಲು ಈ ಬಂಡಿಗಳೊಡನೆ ನಗರವನ್ನು ಪ್ರವೇಶಿಸಿ

ಅಕ್ರೂರ ಉವಾಚ—

**ನಾಹಂ ಭವದ್ಭ್ಯಾಂ ರಹಿತಃ ಪ್ರವೇಕ್ಷ್ಯೇ ಮಥುರಾಂ ಪ್ರಭೋ ।**
**ತ್ಯಕ್ತುಂ ನಾರ್ಹಸಿ ಮಾಂ ನಾಥ ಭಕ್ತಂ ತೇ ಭಕ್ತವತ್ಸಲ ॥ ೧೧**

**ಆಗಚ್ಛ ಯಾಮ ಗೇಹಾನ್ ನಃ ಸನಾಥಾನ್ ಕುರ್ವಧೋಕ್ಷಜ ।**
**ಸಹಾಗ್ರಜಃ ಸಗೋಪಾಲೈಃ ಸುಹೃದ್ಭಿಶ್ಚ ಸುಹೃತ್ತಮ ॥ ೧೨**

**ಪುನೀಹಿ ಪಾದರಜಸಾ ಗೃಹಾನ್ ನೋ ಗೃಹಮೇಧಿನಾಮ್ ।**
**ಯಚ್ಛೌಚೇನಾನುತೃಪ್ಯಂತಿ ಪಿತರಃ ಸಾಗ್ನಯಃ ಸುರಾಃ ॥ ೧೩**

**ಅವನಿಜ್ಯಾಂಘ್ರಿಯುಗಲಮಾಸೀಚ್ಛ್ಲೋಕ್ಯೋ ಬಲಿರ್ಮಹಾನ್ ।**
**ಐಶ್ವರ್ಯಮತುಲಂ ಲೇಭೇ ಗತಿಂ ಚೈಕಾಂತಿನಾಂ ತು ಯಾ ॥ ೧೪**

**ಆಪಸ್ತೇಽಂಘ್ರ್ಯವನೇಜನ್ಯಸ್ತ್ರೀನ್ ಲೋಕಾನ್ ಶುಚಯೋಽಪುನನ್ ।**
**ಶಿರಸಾಧತ್ತ ಯಾಃ ಶರ್ವಃ ಸ್ವರ್ಯಾತಾಃ ಸಗರಾತ್ಮಜಾಃ ॥ ೧೫**

---

ಮನೆಗೆ ಹೋಗು. ನಾವು ಇಲ್ಲಿಯೇ ಸ್ವಲ್ಪ ವಿಶ್ರಮಿಸಿ ಅನಂತರ ನಗರವನ್ನು ನೋಡಬೇಕೆಂದಿದ್ದೇವೆ" ಎಂದನು (೯—೧೦). ಆಗ ಅಕ್ರೂರನು ಹೇಳಿದನು: "ನಾಥ, ನಿಮ್ಮಿಬ್ಬರನ್ನು ಬಿಟ್ಟು ಒಬ್ಬನೇ ನಾನು ಮಥುರೆಯನ್ನು ಪ್ರವೇಶಿಸುವುದಿಲ್ಲ! ಭಕ್ತವತ್ಸಲ, ಭಕ್ತನಾದ ನನ್ನನ್ನು ತ್ಯಜಿಸಬೇಡ. ನನ್ನೊಡನೆ ಬಾ; ಹೋಗೋಣ. ನಮ್ಮ ಗೃಹವನ್ನು ಸನಾಥವನ್ನಾಗಿ ಮಾಡು. ಮಿತ್ರನೆ, ನಿನ್ನ ಅಣ್ಣ, ಗೋಪಾಲರು, ಮಿತ್ರರು—ಇವರೊಡನೆ ಆಗಮಿಸು. ಗೃಹಸ್ಥರಾದ ನಮ್ಮ ಗೃಹವನ್ನು ನಿನ್ನ ಪಾದಧೂಳಿಯಿಂದ ಪವಿತ್ರಗೊಳಿಸು. ನಿನ್ನ ಪಾದವನ್ನು ತೊಳೆದ ನೀರಿನಿಂದ ಪಿತೃದೇವತೆಗಳೂ, ಅಗ್ನಿಗಳೂ, ದೇವತೆಗಳೂ ತೃಪ್ತರಾಗುವರು (೧೩). ನಿನ್ನ ಪಾದಯುಗಳವನ್ನು ತೊಳೆದು ಬಲಿಚಕ್ರವರ್ತಿಯು ಮಹಾಪುರುಷನೆಂದು ವಿಖ್ಯಾತನಾದನು. ಅಸದೃಶವಾದ ಐಶ್ವರ್ಯವನ್ನು ಪಡೆದು, ಏಕಾಂತಭಕ್ತರಿಗೆ ಲಭಿಸುವ ಸದ್ಗತಿಯನ್ನೈದಿದನು (೧೪). ನಿನ್ನ ಪಾದವನ್ನು ಕ್ಷಾಲಿಸಿದ ಗಂಗಾಜಲವು ಮೂರುಲೋಕಗಳನ್ನೂ ಪವಿತ್ರಗೊಳಿಸಿತು. ಅದನ್ನು ಶಿವನು ಶಿರದಲ್ಲಿ ಧರಿಸಿದನು. ಆ ಜಲದಿಂದ ಸಗರಪುತ್ರರು

**ದೇವದೇವ ಜಗನ್ನಾಥ ಪುಣ್ಯಶ್ರವಣಕೀರ್ತನ ।**
**ಯದೂತ್ತಮೋತ್ತಮಶ್ಲೋಕ ನಾರಾಯಣ ನಮೋಽಸ್ತು ತೇ ॥ ೧೬**

**ಶ್ರೀಭಗವಾನುವಾಚ—**

**ಆಯಾಸ್ಯೇ ಭವತೋ ಗೇಹಮಹಮಾರ್ಯಸಮನ್ವಿತಃ ।**
**ಯದುಚಕ್ರದ್ರುಹಂ ಹತ್ವಾ ವಿತರಿಷ್ಯೇ ಸುಹೃತ್ಪ್ರಿಯಮ್ ॥ ೧೭**

**ಶ್ರೀಶುಕ ಉವಾಚ—**

**ಏವಮುಕ್ತೋ ಭಗವತಾ ಸೋಽಕ್ರೂರೋ ವಿಮನಾ ಇವ ।**
**ಪುರೀಂ ಪ್ರವಿಷ್ಟಃ ಕಂಸಾಯ ಕರ್ಮಾವೇದ್ಯ ಗೃಹಂ ಯಯೌ ॥ ೧೮**

**ಅಥಾಪರಾಹ್ಣೇ ಭಗವಾನ್ ಕೃಷ್ಣಃ ಸಂಕರ್ಷಣಾನ್ವಿತಃ ।**
**ಮಥುರಾಂ ಪ್ರಾವಿಶದ್ ಗೋಪೈರ್ದಿದೃಕ್ಷುಃ ಪರಿವಾರಿತಃ ॥ ೧೯**

**ದದರ್ಶ ತಾಂ ಸ್ಫಾಟಿಕತುಂಗಗೋಪುರ-**
**ದ್ವಾರಾಂ ಬೃಹದ್ಧೇಮಕಪಾಟತೋರಣಾಮ್ ।**
**ತಾಮ್ರಾರಕೋಷ್ಠಾಂ ಪರಿಖಾದುರಾಸದಾ-**
**ಮುದ್ಯಾನರಮ್ಯೋಪವನೋಪಶೋಭಿತಾಮ್ ॥ ೨೦**

---

ಸ್ವರ್ಗವನ್ನಡರಿದರು (೧೫). ದೇವದೇವ, ಜಗನ್ನಾಥ, ಪುಣ್ಯಶ್ರವಣ, ಪುಣ್ಯ ಕೀರ್ತನ, ಯದೂತ್ತಮ, ಪುಣ್ಯಕೀರ್ತಿ, ನಾರಾಯಣ, ನಿನಗೆ ನಮಸ್ಕಾರ!" ಎಂದನು (೧೬). ಅದಕ್ಕೆ ಭಗವಂತನು "ಅಕ್ರೂರ, ಯದುಗಳಿಗೆ ದ್ರೋಹ ವನ್ನೆಸಗಿದ ಕಂಸನನ್ನು ಮೊದಲು ಸಂಹರಿಸಿ ಸಜ್ಜನರಿಗೆ ಸಂತೋಷವನ್ನುಂಟು ಮಾಡುವೆನು. ಆಮೇಲೆ ಅಣ್ಣನೊಡನೆ ನಿನ್ನ ಮನೆಗೆ ಬರುವೆನು" ಎಂದು ತಿಳಿಸಿದನು (೧೭). ಭಗವಂತನು ಹೀಗೆ ಹೇಳಲು ಅಕ್ರೂರನು ಸ್ವಲ್ಪ ವಿಷಣ್ಣ ನಾದರೂ ನಗರವನ್ನು ಪ್ರವೇಶಿಸಿ, ತಾನು ಮಾಡಿದ ಕಾರ್ಯವನ್ನು ಕಂಸನಿಗೆ ತಿಳಿಸಿ ತನ್ನ ಮನೆಗೆ ಹೋದನು (೧೮). ಇತ್ತ ಶ್ರೀಕೃಷ್ಣನು ಸಂಜೆಗೆ ಸ್ವಲ್ಪ ಮೊದಲು ಗೋಪರಿಂದ ಪರಿವೃತನಾಗಿ ಬಲರಾಮನೊಡನೆ ಮಥುರೆಯನ್ನು ನೋಡಲು ಪುರವನ್ನು ಪ್ರವೇಶಿಸಿದನು (೧೯). ಆ ನಗರಿಯು ಉನ್ನತವಾದ ಪುರದ್ವಾರಗಳಿಂದಲೂ ಗೃಹದ್ವಾರಗಳಿಂದಲೂ ಕೂಡಿತ್ತು. ಸುವರ್ಣಮಯ ವಾದ ದೊಡ್ಡಬಾಗಿಲುಗಳಿಂದಲೂ ತೋರಣಗಳಿಂದಲೂ ರಂಜಿತವಾಗಿತ್ತು.

ಸೌವರ್ಣಶೃಂಗಾಟಕಹರ್ಮ್ಯನಿಷ್ಕುಟೈಃ
ಶ್ರೇಣೀಸಭಾಭಿರ್ಭವನೈರುಪಸ್ಕೃತಾಮ್ ।
ವೈದೂರ್ಯವಜ್ರಾಮಲನೀಲವಿದ್ರುಮೈ-
ರ್ಮುಕ್ತಾಹರಿದ್ಭಿರ್ವಲಭೀಷು ವೇದಿಷು ॥ ೨೧

ಜುಷ್ಟೇಷು ಜಾಲಾಮುಖರಂಧ್ರಕುಟ್ಟಿಮೇ-
ಷ್ವಾವಿಷ್ಟಪಾರಾವತಬರ್ಹಿನಾದಿತಾಮ್ ।
ಸಂಸಿಕ್ತರಥ್ಯಾಪಣಮಾರ್ಗಚತ್ವರಾಂ
ಪ್ರಕೀರ್ಣಮಾಲ್ಯಾಂಕುರಲಾಜತಂಡುಲಾಮ್ ॥ ೨೨

ಆಪೂರ್ಣಕುಂಭೈರ್ದಧಿಚಂದನೋಕ್ಷಿತೈಃ
ಪ್ರಸೂನದೀಪಾವಲಿಭಿಃ ಸಪಲ್ಲವೈಃ ।
ಸವೃಂದರಂಭಾಕ್ರಮುಕೈಃ ಸಕೇತುಭಿಃ
ಸ್ವಲಂಕೃತದ್ವಾರಗೃಹಾಂ ಸಪಟ್ಟಿಕೈಃ ॥ ೨೩

---

ತಾಮ್ರ ಮತ್ತು ಹಿತ್ತಾಳೆಯಿಂದ ನಿರ್ಮಿತವಾದ ಧಾನ್ಯಾಗಾರ ಮೊದಲಾದವು ಗಳಿದ್ದವು. ದುರ್ಗಮವಾದ ಕಂದಕಗಳಿದ್ದವು. ರಮ್ಯವಾದ ದೊಡ್ಡ ಉದ್ಯಾನ ಗಳೂ ಚಿಕ್ಕ ಉಪವನಗಳೂ ಇದ್ದವು (೨೦). ಸುವರ್ಣಾಲಂಕೃತವಾದ ಚೌಕ ಗಳಿಂದಲೂ ವಿಶಾಲಭವನಗಳಿಂದಲೂ ಕೈತೋಟಗಳಿಂದಲೂ ಮಧುರೆಯು ಭೂಷಿತವಾಗಿತ್ತು. ವೈಡೂರ್ಯ, ವಜ್ರ, ಸ್ಫಟಿಕ, ನೀಲ, ಹವಳ, ಮುತ್ತು, ಮರಕತಗಳಿಂದ ಅಲಂಕೃತವಾದ ಮನೆಯ ಸೂರುಗಳಲ್ಲಿ, ಕಟ್ಟೆಗಳಲ್ಲಿ, ಕಿಟಕಿ ಗಳಲ್ಲಿ, ಸ್ವಚ್ಛನಿರ್ಮಿತಭೂಪ್ರದೇಶಗಳಲ್ಲಿ ಪಾರಿವಾಳಗಳೂ ನವಿಲುಗಳೂ ಕೂಗುತ್ತಿದ್ದವು. ರಾಜಮಾರ್ಗಗಳನ್ನೂ ಅಂಗಡಿಬೀದಿಗಳನ್ನೂ ಅಂಗಳಗಳನ್ನೂ ನಿರ್ಮಲವಾಗಿ ಗುಡಿಸಿ ನೀರನ್ನು ಸಿಂಪಡಿಸಲಾಗಿತ್ತು. ಹೂ ಚಿಗುರೆಲೆ ಅರಳು ಅಕ್ಕಿಕಾಳುಗಳು ಅಲ್ಲಲ್ಲಿ ಹರಡಿದ್ದವು (೨೧–೨೨). ದಧಿ, ಚಂದನ, ಪುಷ್ಪ, ದೀಪ, ಚಿಗುರೆಲೆಗಳಿಂದ ಸಹಿತವಾಗಿ ಪಟ್ಟೆಗಳನ್ನು ಕಟ್ಟಿದ ಕುಂಭಗಳಿಂದಲೂ ಗೊನೆಗಳಿರುವ ಬಾಳೆಮರ ಮತ್ತು ಅಡಿಕೆಗಳಿಂದಲೂ ಧ್ವಜಗಳಿಂದಲೂ ಮನೆ ಬಾಗಿಲುಗಳನ್ನು ಅಲಂಕರಿಸಿದ್ದರು (೨೩).

ತಾಂ ಸಂಪ್ರವಿಷ್ಟೌ ವಸುದೇವನಂದನೌ
ವೃತೌ ವಯಸ್ಯೈರ್ನರದೇವವರ್ತ್ಮನಾ ।
ದ್ರಷ್ಟುಂ ಸಮೀಯುಸ್ತ್ವರಿತಾಃ ಪುರಸ್ತ್ರಿಯೋ
ಹರ್ಮ್ಯಾಣಿ ಚೈವಾರುರುಹುರ್ನೃಪೋತ್ಸುಕಾಃ ॥ ೨೪

ಕಾಶ್ಚಿದ್ ವಿಪರ್ಯಗ್ಧೃತವಸ್ತ್ರಭೂಷಣಾ
ವಿಸ್ಮೃತ್ಯ ಚೈಕಂ ಯುಗಲೇಷ್ವಥಾಪರಾಃ ।
ಕೃತೈಕಪತ್ರಶ್ರವಣೈಕನೂಪುರಾ
ನಾಙ್ಕ್ತ್ವಾ ದ್ವಿತೀಯಂ ತ್ವಪರಾಶ್ಚ ಲೋಚನಮ್ ॥ ೨೫

ಅಶ್ನಂತ್ಯ ಏಕಾಸ್ತದಪಾಸ್ಯ ಸೋತ್ಸವಾ
ಅಭ್ಯಜ್ಯಮಾನಾ ಅಕೃತೋಪಮಜ್ಜನಾಃ ।
ಸ್ವಪಂತ್ಯ ಉತ್ಥಾಯ ನಿಶಮ್ಯ ನಿಃಸ್ವನಂ
ಪ್ರಪಾಯಯಂತ್ಯೋಽರ್ಭಮಪೋಹ್ಯ ಮಾತರಃ ॥ ೨೬

---

ವಸುದೇವತನಯರು ಗೆಳೆಯರಿಂದ ಪರಿವೃತರಾಗಿ ರಾಜಮಾರ್ಗದಿಂದ ಆ ಮಥುರಾನಗರವನ್ನು ಪ್ರವೇಶಿಸಿದರು. ಆಗ, ಪರೀಕ್ಷಿತರಾಜ, ಅವರಿಬ್ಬರನ್ನು ನೋಡುವುದಕ್ಕಾಗಿ ಪುರಸ್ತ್ರೀಯರು ಉತ್ಸಾಹಗೊಂಡು ತ್ವರೆಯಿಂದ ಬಂದರು. ಕೆಲವರು ಉಪ್ಪರಿಗೆಗಳನ್ನು ಹತ್ತಿದರು (೨೪). ಆ ಸ್ತ್ರೀಯರಲ್ಲಿ ಕೆಲವರು ಉತ್ಸಾಹಭರದಿಂದ ವಸ್ತ್ರಾಭರಣಗಳನ್ನು ತಪ್ಪುತಪ್ಪಾಗಿ ಧರಿಸಿಕೊಂಡಿದ್ದರು. ಆಭರಣಯುಗ್ಮದಲ್ಲಿ ಕೆಲವರು ಇನ್ನೊಂದನ್ನು ಮರೆತಿದ್ದರು. ಹಲವರು ಒಂದು ಕಿವಿಗೆ ಮಾತ್ರ ಕುಂಡಲವನ್ನೂ ಇನ್ನು ಕೆಲವರು ಒಂದು ಕಾಲಿಗೆ ಮಾತ್ರ ನೂಪುರವನ್ನೂ ಹಾಕಿಕೊಂಡಿದ್ದರು! ಇನ್ನಿತರರು ಒಂದು ಕಣ್ಣಿಗೆ ಮಾತ್ರ ಕಾಡಿಗೆಯನ್ನು ಹಚ್ಚಿಕೊಂಡಿದ್ದರು! (೨೫). ತಿನ್ನುತ್ತಿದ್ದವರು ತಿನ್ನುವುದನ್ನು ಬಿಟ್ಟು, ಅಭ್ಯಂಗಕ್ಕಾಗಿ ತೈಲವನ್ನು ಹಚ್ಚಿಕೊಂಡವರು ಸ್ನಾನಮಾಡದೆಯೇ, ಸಂಭ್ರಮದಿಂದ ಬಂದರು. ಹೊರಗೆ ಶಬ್ದವನ್ನು ಕೇಳಿದೊಡನೆ ಮಲಗಿದವರು ಎದ್ದು, ಮಕ್ಕಳಿಗೆ ಹಾಲುಕುಡಿಸುತ್ತಿದ್ದ ತಾಯಿಯರು ಮಕ್ಕಳನ್ನು ಹಾಗೆಯೇ ಬಿಟ್ಟು, ಧಾವಿಸಿಬಂದರು (೨೬).

ಮನಾಂಸಿ ತಾಸಾಮರವಿಂದಲೋಚನಃ
ಪ್ರಗಲ್ಭಲೀಲಾಹಸಿತಾವಲೋಕನೈಃ ।
ಜಹಾರ ಮತ್ತದ್ವಿರದೇಂದ್ರವಿಕ್ರಮೋ
ದೃಶಾಂ ದದಚ್ಛ್ರೀರಮಣಾತ್ಮನೋತ್ಸವಮ್ ॥ ೨೭

ದೃಷ್ಟ್ವಾ ಮುಹುಃಶ್ರುತಮನುದ್ರುತಚೇತಸಸ್ತಂ
ತತ್ಪ್ರೇಕ್ಷಣೋತ್ಸ್ಮಿತಸುಧೋಕ್ಷಣಲಬ್ಧಮಾನಾಃ ।
ಆನಂದಮೂರ್ತಿಮುಪಗುಹ್ಯ ದೃಶಾಽಽತ್ಮಲಬ್ಧಂ
ಹೃಷ್ಯತ್ತ್ವಚೋ ಜಹುರನಂತಮರಿಂದಮಾಧಿಮ್ ॥ ೨೮

ಪ್ರಾಸಾದಶಿಖರಾರೂಢಾಃ ಪ್ರೀತ್ಯುತ್ಫುಲ್ಲಮುಖಾಂಬುಜಾಃ ।
ಅಭ್ಯವರ್ಷನ್ ಸೌಮನಸ್ಯೈಃ ಪ್ರಮುದಾ ಬಲಕೇಶವೌ ॥ ೨೯

ದಧ್ಯಕ್ಷತೈಃ ಸೋದಪಾತ್ರೈಃ ಸ್ರಗ್ಗಂಧೈರಭ್ಯುಪಾಯನೈಃ ।
ತಾವಾನರ್ಚುಃ ಪ್ರಮುದಿತಾಸ್ತತ್ರ ತತ್ರ ದ್ವಿಜಾತಯಃ ॥ ೩೦

---

ಮದಿಸಿದ ಗಜೇಂದ್ರನಂತೆ ನಡೆದು ಬರುತ್ತಿದ್ದ ಅರವಿಂದನೇತ್ರನಾದ ಶ್ರೀಕೃಷ್ಣನು ತನ್ನ ಲೀಲಾವಿಶೇಷದಿಂದ, ನಗುವಿನಿಂದ, ನೋಟದಿಂದ, ಲಕ್ಷ್ಮೀದೇವಿಯ ಮನಸ್ಸನ್ನು ಸೆಳೆದ ತನ್ನ ದೇಹಸೌಂದರ್ಯದಿಂದ, ಆ ಯುವತಿಯರ ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತ ಅವರ ಚಿತ್ತವನ್ನು ಅಪಹರಿಸಿದನು (೨೭). ಅರಿಂದಮ—ಪರೀಕ್ಷಿತ, ಆ ಸ್ತ್ರೀಯರು ಮುಕುಂದನ ವಿಷಯವಾಗಿ ಬಹಳ ಕೇಳಿದ್ದರು. ಅವನನ್ನೀಗ ಕಣ್ಣಿಂದ ಕಂಡಾಗ ಅವರ ಮನಸ್ಸು ಮುಕುಂದನನ್ನು ಹಿಂಬಾಲಿಸಿತು. ಅವನ ವಿಲೋಕನಸ್ಮಿತಗಳ ಸುಧೆಯ ಸೇಚನದಿಂದ ಅವರು ಗರ್ವಿತರಾದರು! ಆ ಸ್ತ್ರೀಯರು ಆ ಆನಂದಮೂರ್ತಿಯನ್ನು ಕಣ್ಣಿಂದ ಒಳಗೆ ಸೆಳೆದು ಮನಸ್ಸಿನಲ್ಲಿ ಅಪ್ಪಿಕೊಂಡು ರೋಮಾಂಚಿತರಾಗಿ ಮಹತ್ತರವಾಗಿದ್ದ ಮನೋವ್ಯಾಧಿಯನ್ನು ನೀಗಿಕೊಂಡರು! (೨೮). ಪ್ರಾಸಾದಗಳ ಅಗ್ರಭಾಗವನ್ನೇರಿದ ಆ ಪ್ರಮದೆಯರು ಪ್ರೀತಿಯಿಂದರಳಿದ ಮುಖಪದ್ಮವುಳ್ಳವರಾಗಿ ಬಲರಾಮ ಕೇಶವರ ಮೇಲೆ ಒಳ್ಳೆಯ ಮನೋಭಾವಗಳನ್ನು ಸುರಿಸಿದರು (೨೯). ಸಂತುಷ್ಟರಾದ ದ್ವಿಜರು ದಧ್ಯಕ್ಷತೆಗಳನ್ನೂ ಜಲಪಾತ್ರೆಗಳನ್ನೂ ಗಂಧಮಾಲ್ಯಗಳನ್ನೂ ಮತ್ತಿತರ ಕಾಣಿಕೆಗಳನ್ನೂ ತಂದು ಅವುಗಳಿಂದ

**ಊಚುಃ ಪೌರಾ ಅಹೋ ಗೋಪ್ಯಸ್ತಪಃ ಕಿಮಚರನ್ ಮಹತ್ ।**
**ಯಾ ಹ್ಯೇತಾವನುಪಶ್ಯಂತಿ ನರಲೋಕಮಹೋತ್ಸವೌ ॥ ೩೧**

**ರಜಕಂ ಕಂಚಿದಾಯಾಂತಂ ರಂಗಕಾರಂ ಗದಾಗ್ರಜಃ ।**
**ದೃಷ್ಟ್ವಾಯಾಚತ ವಾಸಾಂಸಿ ಧೌತಾನ್ಯತ್ಯುತ್ತಮಾನಿ ಚ ॥ ೩೨**

**ದೇಹ್ಯಾವಯೋಃ ಸಮುಚಿತಾನ್ಯಂಗ ವಾಸಾಂಸಿ ಚಾರ್ಹತೋಃ ।**
**ಭವಿಷ್ಯತಿ ಪರಂ ಶ್ರೇಯೋ ದಾತುಸ್ತೇ ನಾತ್ರ ಸಂಶಯಃ ॥ ೩೩**

**ಸ ಯಾಚಿತೋ ಭಗವತಾ ಪರಿಪೂರ್ಣೇನ ಸರ್ವತಃ ।**
**ಸಾಕ್ಷೇಪಂ ರುಷಿತಃ ಪ್ರಾಹ ಭೃತ್ಯೋ ರಾಜ್ಞಃ ಸುದುರ್ಮದಃ ॥ ೩೪**

**ಈದೃಶಾನ್ಯೇವ ವಾಸಾಂಸಿ ನಿತ್ಯಂ ಗಿರಿವನೇಚರಾಃ ।**
**ಪರಿಧತ್ತ ಕಿಮುದ್ವೃತ್ತಾ ರಾಜದ್ರವ್ಯಾಣ್ಯಭೀಪ್ಸಥ ॥ ೩೫**

**ಯಾತಾಶು ಬಾಲಿಶಾ ಮೈವಂ ಪ್ರಾರ್ಥ್ಯಂ ಯದಿ ಜಿಜೀವಿಷಾ ।**
**ಬಧ್ನಂತಿ ಘ್ನಂತಿ ಲುಂಪಂತಿ ದೃಪ್ತಂ ರಾಜಕುಲಾನಿ ವೈ ॥ ೩೬**

---

ಬಲಕೇಶವರನ್ನು ಅಲ್ಲಲ್ಲಿ ಪೂಜಿಸಿದರು (೩೦). "ಆಹಾ! ಗೋಪಿಯರು ಮಹತ್ತರವಾದ ಯಾವ ತಪಸ್ಸನ್ನಾಚರಿಸಿರಬಹುದು! ಮನುಜಲೋಕಕ್ಕೆ ಮಹೋತ್ಸವವನ್ನುಂಟುಮಾಡುವ ಇವರನ್ನು ಅವರು ಅನುದಿನವೂ ನೋಡುತ್ತಾರೆ!" ಎಂದು ಪೌರಜನನು ಹೇಳಿಕೊಳ್ಳುತ್ತಿದ್ದರು (೩೧). ಬಟ್ಟೆಗಳನ್ನೊಗೆದು ಬಣ್ಣಹಾಕುವ ರಜಕನೊಬ್ಬನು ಎದುರಿಗೆ ಬರುತ್ತಿರುವುದನ್ನು ಕಂಡು ಶ್ರೀಕೃಷ್ಣನು, ಅವನಲ್ಲಿದ್ದ ಉತ್ತಮವಾದ ಒಗೆದ ಬಟ್ಟೆಗಳನ್ನು ಬೇಡಿದನು (೩೨). "ಅಯ್ಯಾ, ಅರ್ಹರಾದ ನಮ್ಮಿಬ್ಬರಿಗೆ ಯೋಗ್ಯವಾದ ಕೆಲವು ಬಟ್ಟೆಗಳನ್ನು ಕೊಡು. ಕೊಟ್ಟರೆ ನಿನಗೆ ಉತ್ತಮಶ್ರೇಯಸ್ಸಾಗುವುದು. ಸಂದೇಹ ಬೇಡ" ಎಂದನು (೩೩). ಸರ್ವಪರಿಪೂರ್ಣನಾದ ಭಗವಂತನು ಬೇಡಿದಾಗ ಆ ರಜಕನು ರೋಷಗೊಂಡನು. ಮದಾಂಧನಾದ ಆ ರಾಜಭೃತ್ಯನು ತಿರಸ್ಕಾರಪೂರ್ವಕವಾಗಿ ಹೇಳಿದನು (೩೪): "ಕಾಡುಮೇಡುಗಳಲ್ಲಿ ಅಲೆಯತಕ್ಕವರೆ! ನೀವು ತೊಟ್ಟಿರುವ ಈ ಬಗೆಯ ಬಟ್ಟೆಗಳನ್ನೇ ಯಾವಾಗಲೂ ಹಾಕಿಕೊಳ್ಳಿರಿ! ನಯವನ್ನು ಮೀರಿದ ಉದ್ಧತರೆ, ರಾಜಭೋಗ್ಯವಾದ ವಸ್ತುಗಳನ್ನು ಬಯಸುವಿರಾ? (೩೫). ಅವಿವೇಕಿಗಳೆ, ಬೇಗ ತೊಲಗಿರಿ. ಬದುಕುವ ಬಯಕೆ ಇದ್ದರೆ

ಏವಂ ವಿಕತ್ಥಮಾನಸ್ಯ ಕುಪಿತೋ ದೇವಕೀಸುತಃ ।
ರಜಕಸ್ಯ ಕರಾಗ್ರೇಣ ಶಿರಃ ಕಾಯಾದಪಾತಯತ್ ॥ ೩೭

ತಸ್ಯಾನುಜೀವಿನಃ ಸರ್ವೇ ವಾಸಃಕೋಶಾನ್ ವಿಸೃಜ್ಯ ವೈ ।
ದುದ್ರುವುಃ ಸರ್ವತೋ ಮಾರ್ಗಂ ವಾಸಾಂಸಿ ಜಗೃಹೇಽಚ್ಯುತಃ ॥ ೩೮

ವಸಿತ್ವಾಽಽತ್ಮಪ್ರಿಯೇ ವಸ್ತ್ರೇ ಕೃಷ್ಣಃ ಸಂಕರ್ಷಣಸ್ತಥಾ ।
ಶೇಷಾಣ್ಯಾದತ್ತ ಗೋಪೇಭ್ಯೋ ವಿಸೃಜ್ಯ ಭುವಿ ಕಾನಿಚಿತ್ ॥ ೩೯

ತತಸ್ತು ವಾಯಕಃ ಪ್ರೀತಸ್ತಯೋರ್ವೇಷಮಕಲ್ಪಯತ್ ।
ವಿಚಿತ್ರವರ್ಣೈಶ್ಚೈಲೇಯೈರಾಕಲ್ಪೈರನುರೂಪತಃ ॥ ೪೦

ನಾನಾಲಕ್ಷಣವೇಷಾಭ್ಯಾಂ ಕೃಷ್ಣರಾಮೌ ವಿರೇಜತುಃ ।
ಸ್ವಲಂಕೃತೌ ಬಾಲಗಜೌ ಪರ್ವಣೀವ ಸಿತೇತರೌ ॥ ೪೧

ತಸ್ಯ ಪ್ರಸನ್ನೋ ಭಗವಾನ್ ಪ್ರಾದಾತ್ ಸಾರೂಪ್ಯಮಾತ್ಮನಃ ।
ಶ್ರಿಯಂ ಚ ಪರಮಾಂ ಲೋಕೇ ಬಲೈಶ್ವರ್ಯಸ್ಮೃತೀಂದ್ರಿಯಮ್ ॥

---

ಹೀಗೆ ಕೇಳಬಾರದು. ರಾಜಪುರುಷರು ಸೊಕ್ಕಿದವರನ್ನು ಸೆರೆಹಿಡಿಯುವರು, ಬಡಿಯುವರು; ಇದ್ದುದನ್ನೂ ದೋಚಿಬಿಡುವರು!" ಎಂದನು (೩೬). ಹೀಗೆ ಅವನು ದುರಹಂಕಾರದಿಂದ ಮಾತಾಡುತ್ತಿರಲು, ದೇವಕೀಸುತನು ಕುಪಿತನಾಗಿ ತನ್ನ ಕರಾಗ್ರದಿಂದ ಹೊಡೆದು ರಜಕನ ಶಿರಸ್ಸನ್ನು ದೇಹದಿಂದ ಉರುಳಿಸಿದನು (೩೭). ರಜಕನ ಸೇವಕರೆಲ್ಲರೂ ವಸ್ತ್ರಸಂಪುಟಗಳನ್ನು ಅಲ್ಲೇ ತೊರೆದು ಕಂಡ ದಾರಿಯನ್ನು ಹಿಡಿದು ದಿಕ್ಕುದಿಕ್ಕಿಗೆ ಓಡಿಹೋದರು. ಅಚ್ಯುತನು ಆ ವಸ್ತ್ರಗಳನ್ನು ವಶಪಡಿಸಿಕೊಂಡನು. ಶ್ರೀಕೃಷ್ಣನೂ ಬಲರಾಮನೂ ತಮಗೆ ಬೇಕಾದ ಎರಡೆರಡು ವಸ್ತ್ರಗಳನ್ನು ತೆಗೆದುಕೊಂಡು ಉಳಿದವನ್ನು ಗೋಪರಿಗೆ ಕೊಟ್ಟರು. ಕೆಲವನ್ನು ಅಲ್ಲಿಯೇ ನೆಲದಮೇಲೆ ಬಿಟ್ಟರು (೩೮–೩೯). ಅನಂತರ ಒಬ್ಬ ನೇಯ್ಗೆಯವನು ಅವರಿಗೆ ಒಪ್ಪುವ ಬಣ್ಣಬಣ್ಣದ ಬಟ್ಟೆಯ ಅಲಂಕಾರಗಳಿಂದ ಅವರಿಬ್ಬರನ್ನು ಪ್ರೀತಿಯಿಂದ ಸಿಂಗರಿಸಿದನು. ನಾನಾವಿಧದ ವೇಷದಿಂದ ಭೂಷಿತರಾದ ಬಲರಾಮಕೃಷ್ಣರು, ಉತ್ಸವಕಾಲದಲ್ಲಿ ಅಲಂಕರಿಸಲ್ಪಟ್ಟ ಬಿಳಿಯ ಮತ್ತು ಕರಿಯ ಆನೆಮರಿಗಳಂತೆ ಕಾಣಿಸಿದರು (೪೦–೪೧). ಸಂಪ್ರೀತನಾದ ಭಗವಂತನು ಆ ನೇಯ್ಗೆಯವನಿಗೆ ಈ ಲೋಕದಲ್ಲಿ ಪರಮವೈಭವವನ್ನೂ ಬಲ,

ತತಃ ಸುದಾಮ್ನೋ ಭವನಂ ಮಾಲಾಕಾರಸ್ಯ ಜಗ್ಮತುಃ ।
ತೌ ದೃಷ್ಟ್ವಾ ಸ ಸಮುತ್ಥಾಯ ನನಾಮ ಶಿರಸಾ ಭುವಿ ॥ ೪೩

ತಯೋರಾಸನಮಾನೀಯ ಪಾದ್ಯಂ ಚಾರ್ಘ್ಯಾರ್ಹಣಾದಿಭಿಃ ।
ಪೂಜಾಂ ಸಾನುಗಯೋಶ್ಚಕ್ರೇ ಸ್ರಕ್‌ತಾಂಬೂಲಾನುಲೇಪನೈಃ ॥ ೪೪

ಪ್ರಾಹ ನಃ ಸಾರ್ಥಕಂ ಜನ್ಮ ಪಾವಿತಂ ಚ ಕುಲಂ ಪ್ರಭೋ ।
ಪಿತೃದೇವರ್ಷಯೋ ಮಹ್ಯಂ ತುಷ್ಟಾ ಹ್ಯಾಗಮನೇನ ವಾಮ್ ॥ ೪೫

ಭವಂತೌ ಕಿಲ ವಿಶ್ವಸ್ಯ ಜಗತಃ ಕಾರಣಂ ಪರಮ್ ।
ಅವತೀರ್ಣಾವಿಹಾಂಶೇನ ಕ್ಷೇಮಾಯ ಚ ಭವಾಯ ಚ ॥ ೪೬

ನ ಹಿ ವಾಂ ವಿಷಮಾ ದೃಷ್ಟಿಃ ಸುಹೃದೋರ್ಜಗದಾತ್ಮನೋಃ ।
ಸಮಯೋಃ ಸರ್ವಭೂತೇಷು ಭಜಂತಂ ಭಜತೋರಪಿ ॥ ೪೭

ತಾವಾಜ್ಞಾಪಯತಂ ಭೃತ್ಯಂ ಕಿಮಹಂ ಕರವಾಣಿ ವಾಮ್ ।
ಪುಂಸೋಽತ್ಯನುಗ್ರಹೋ ಹ್ಯೇಷ ಭವದ್ಭಿರ್ಯನ್ನಿಯುಜ್ಯತೇ ॥ ೪೮

---

ಐಶ್ವರ್ಯ, ಸ್ಮೃತಿ, ಇಂದ್ರಿಯಶಕ್ತಿಗಳನ್ನೂ ಪರಲೋಕದಲ್ಲಿ ಸಾರೂಪ್ಯಮುಕ್ತಿಯನ್ನೂ ಕರುಣಿಸಿದನು (೪೨). ಆ ಮೇಲೆ ಸುದಾಮನೆಂಬ ಹೂವಾಡಿಗನ ಮನೆಗೆ ಹೋದರು. ಒಡನೆಯೇ ಅವನು ಎದ್ದುಬಂದು ನೆಲದಲ್ಲಿ ತಲೆಯಿಟ್ಟು ವಂದಿಸಿದನು. ಅವರಿಗೆ ಪೀಠವನ್ನು ತಂದಿತ್ತು ಪಾದ್ಯವನ್ನು ಕೊಟ್ಟು, ಮಾಲೆ ತಾಂಬೂಲ ಅನುಲೇಪನ–ಮೊದಲಾದ ಪೂಜಾದ್ರವ್ಯಗಳಿಂದ ಅನುಚರಸಹಿತರಾದ ಅವರನ್ನು ಸತ್ಕರಿಸಿದನು (೪೩–೪೪). ಆ ಹೂವಾಡಿಗನು "ಪ್ರಭುವೆ, ನಮ್ಮ ಜನ್ಮ ಸಾರ್ಥಕವಾಯಿತು. ಕುಲವು ಪವಿತ್ರವಾಯಿತು. ನೀವೀರ್ವರು ಆಗಮಿಸಿದ್ದರಿಂದ ಪಿತೃದೇವರ್ಷಿಗಳು ನನ್ನಲ್ಲಿ ಸಂಪ್ರೀತರಾದರು (೪೫). ನೀವು ಈ ಸಮಸ್ತಪ್ರಪಂಚಕ್ಕೂ ಮೂಲಕಾರಣರಾಗಿದ್ದೀರಿ. ಈ ಲೋಕದಲ್ಲಿ ಜಗತ್ತಿನ ಕ್ಷೇಮಕ್ಕಾಗಿ, ಸ್ಥಿತಿಗಾಗಿ, ಅಂಶದಿಂದ ಅವತರಿಸಿದ್ದೀರಿ. ಜಗತ್ತಿನ ಆತ್ಮರೂ ಸರ್ವಭೂತಗಳಲ್ಲಿ ಸಮರೂ ಭಜಿಸುವವನಿಗೆ ಆಶ್ರಯವನ್ನೀಯತಕ್ಕವರೂ ಜಗತ್ತಿನ ಮಿತ್ರರೂ ಆದ ನಿಮ್ಮ ದೃಷ್ಟಿ ಎಂದಿಗೂ ವಿಷಮವಾದ್ದಲ್ಲ (೪೬–೪೭). ನಿಮಗಾಗಿ ನಾನು ಯಾವ ಕಾರ್ಯವನ್ನು ಮಾಡಬೇಕೆಂದು ಈ ಭೃತ್ಯನಿಗೆ ಆಜ್ಞಾಪಿಸಿರಿ. ನೀವು ಆಜ್ಞೆಯನ್ನಿತ್ತರೆ ಅದೇ ಮನುಷ್ಯನಿಗೆ ಒಂದು ಅನುಗ್ರಹ"

ಇತ್ಯಭಿಪ್ರೇತ್ಯ ರಾಜೇಂದ್ರ ಸುದಾಮಾ ಪ್ರೀತಮಾನಸಃ ।
ಶಸ್ತೈಃ ಸುಗಂಧೈಃ ಕುಸುಮೈರ್ಮಾಲಾ ವಿರಚಿತಾ ದದೌ ॥ ೪೯

ತಾಭಿಃ ಸ್ವಲಂಕೃತೌ ಪ್ರೀತೌ ಕೃಷ್ಣರಾಮೌ ಸಹಾನುಗೌ ।
ಪ್ರಣತಾಯ ಪ್ರಪನ್ನಾಯ ದದತುರ್ವರದೌ ವರಾನ್ ॥ ೫೦

ಸೋಽಪಿ ವವ್ರೇಽಚಲಾಂ ಭಕ್ತಿಂ ತಸ್ಮಿನ್ನೇವಾಖಿಲಾತ್ಮನಿ ।
ತದ್ಭಕ್ತೇಷು ಚ ಸೌಹಾರ್ದಂ ಭೂತೇಷು ಚ ದಯಾಂ ಪರಾಮ್ ॥

ಇತಿ ತಸ್ಮೈ ವರಂ ದತ್ವಾ ಶ್ರಿಯಂ ಚಾನ್ವಯವರ್ಧಿನೀಮ್ ।
ಬಲಮಾಯುರ್ಯಶಃ ಕಾಂತಿಂ ನಿರ್ಜಗಾಮ ಸಹಾಗ್ರಜಃ ॥ ೫೨

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಏಕಚತ್ವಾರಿಂಶಾಧ್ಯಾಯಃ



ಎಂದನು (೪೮). ರಾಜೇಂದ್ರ, ಸುದಾಮನು ಹೀಗೆ ವಿಜ್ಞಾಪಿಸಿ ಅವರ ಅಭಿಪ್ರಾಯವನ್ನರಿತು, ಪರಿಮಳಭರಿತವಾದ ಶ್ರೇಷ್ಠ ಕುಸುಮಗಳಿಂದ ರಚಿಸಿದ ಮಾಲೆಗಳನ್ನು ಪ್ರೀತಿಯಿಂದ ಅರ್ಪಿಸಿದನು (೪೯). ಶ್ರೀಕೃಷ್ಣ ಬಲರಾಮರು ತಮ್ಮ ಪರಿವಾರದವರೊಡನೆ ಆ ಮಾಲೆಗಳಿಂದ ಅಲಂಕರಿಸಿಕೊಂಡರು. ಸಂಪ್ರೀತರಾದ ಆ ವರದರು ಪ್ರಣತನೂ ಪ್ರಪನ್ನನೂ ಆದ ಸುದಾಮನಿಗೆ ವರವನ್ನಿತ್ತರು. (೫೦). ಹೂವಾಡಿಗನಾದರೋ ವಿಶ್ವಾತ್ಮನಾದ ಶ್ರೀಕೃಷ್ಣನಲ್ಲಿ ಅಚಲವಾದ ಭಕ್ತಿಯೂ ಅವನ ಭಕ್ತರ ವಿಷಯದಲ್ಲಿ ಸೌಹಾರ್ದವೂ ಸರ್ವಜಂತುಗಳಲ್ಲಿ ಉತ್ತಮಕರುಣೆಯೂ ತನಗೆ ಇರಲೆಂದು ಬೇಡಿಕೊಂಡನು (೫೧). ಶ್ರೀಕೃಷ್ಣನು ಹಾಗೆಯೇ ವರವನ್ನಿತ್ತು, ವಂಶವರ್ಧಿನಿಯಾದ ಸಂಪತ್ತನ್ನೂ ಬಲ, ಆಯುಸ್ಸು, ಕೀರ್ತಿ, ತೇಜಸ್ಸುಗಳನ್ನೂ ಅನುಗ್ರಹಿಸಿ, ಅಣ್ಣನೊಡನೆ ನಿರ್ಗಮಿಸಿದನು (೫೨).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತೊಂದನೆಯ ಅಧ್ಯಾಯ



## ದ್ವಿಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಅಥ ವ್ರಜನ್ ರಾಜಪಥೇನ ಮಾಧವಃ
ಸ್ತ್ರಿಯಂ ಗೃಹೀತಾಂಗವಿಲೇಪಭಾಜನಾಮ್ ।
ವಿಲೋಕ್ಯ ಕುಬ್ಜಾಂ ಯುವತೀಂ ವರಾನನಾಂ
ಪಪ್ರಚ್ಛ ಯಾಂತೀಂ ಪ್ರಹಸನ್ ರಸಪ್ರದಃ ॥ ೧

ಕಾ ತ್ವಂ ವರೋರ್ವೇತದು ಹಾನುಲೇಪನಂ
ಕಸ್ಯಾಂಗನೇ ವಾ ಕಥಯಸ್ವ ಸಾಧು ನಃ ।
ದೇಹ್ಯಾವಯೋರಂಗವಿಲೇಪಮುತ್ತಮಂ
ಶ್ರೇಯಸ್ತತಸ್ತೇ ನಚಿರಾದ್ ಭವಿಷ್ಯತಿ ॥ ೨

ಸೈರಂಧ್ರ್ಯುವಾಚ—

ದಾಸ್ಯಸ್ಮ್ಯಹಂ ಸುಂದರ ಕಂಸಸಂಮತಾ
ತ್ರಿವಕ್ರನಾಮಾ ಹ್ಯನುಲೇಪಕರ್ಮಣಿ ।

## ಅಧ್ಯಾಯ ೪೨

ಕುಬ್ಜೆಯಲ್ಲಿ ಅನುಗ್ರಹ; ಧನುಸ್ಸಿನ ಭಂಗ; ಕಂಸನ ದುಃಸ್ವಪ್ನ;
ರಂಗಮಂಟಪದ ಸಜ್ಜೀಕರಣ

ಅನಂತರ ರಾಜಮಾರ್ಗದಲ್ಲಿ ಮಾಧವನು ಹೋಗುತ್ತಿರುವಾಗ, ಗೂನು ಬೆನ್ನಿನ ಕುಬ್ಜೆಯೂ ಸುಂದರಮುಖಿಯೂ ಆದ ಯುವತಿಯೊಬ್ಬಳು ಚಂದನಾದ್ಯನುಲೇಪನಗಳ ಪಾತ್ರೆಯನ್ನು ಹಿಡಿದು ಹೋಗುತ್ತಿರುವುದನ್ನು ಕಂಡನು. ವಿನೋದಪ್ರಿಯನಾದ ಆತನು ಕುಬ್ಜೆಯನ್ನು ಕೇಳಿದನು (೧): "ಎಲೌ ಸುಂದರಿ! ಯಾರು ನೀನು? ಈ ಅನುಲೇಪನವು ಯಾರಿಗೆ? ಸರಿಯಾಗಿ ನಮಗೆ ತಿಳಿಸು! ಉತ್ತಮವಾದ ಅಂಗವಿಲೇಪನವನ್ನು ನಮಗೂ ಕೊಡು. ಅದರಿಂದ ನಿನಗೆ ಶೀಘ್ರದಲ್ಲಿ ಒಳ್ಳೆಯದಾಗುವುದು!" ಎಂದನು (೨). ಆಗ ಸೈರಂಧ್ರಿ* "ಸುಂದರಾಂಗ! ನಾನು ಕಂಸಮಹಾರಾಜನಿಗೆ ಅನುಲೇಪನ

---

* ಸೈರಂಧ್ರಿ= ಅರಮನೆಯ ಪರಿಚಾರಿಕೆ.

ಮದ್ಭಾವಿತಂ ಭೋಜಪತೇರತಿಪ್ರಿಯಂ
ವಿನಾ ಯುವಾಂ ಕೋಽನ್ಯತಮಸ್ತದರ್ಹತಿ ‖ ೩

ರೂಪಪೇಶಲಮಾಧುರ್ಯಹಸಿತಾಲಾಪವೀಕ್ಷಿತೈಃ ।
ಧರ್ಷಿತಾತ್ಮಾ ದದೌ ಸಾಂದ್ರಮುಭಯೋರನುಲೇಪನಮ್ ‖ ೪

ತತಸ್ತಾವಂಗರಾಗೇಣ ಸ್ವವರ್ಣೇತರಶೋಭಿನಾ ।
ಸಂಪ್ರಾಪ್ತಪರಭಾಗೇನ ಶುಶುಭಾತೇಽನುರಂಜಿತೌ ‖ ೫

ಪ್ರಸನ್ನೋ ಭಗವಾನ್ ಕುಬ್ಜಾಂ ತ್ರಿವಕ್ರಾಂ ರುಚಿರಾನನಾಮ್ ।
ಋಜ್ವೀಂ ಕರ್ತುಂ ಮನಶ್ಚಕ್ರೇ ದರ್ಶಯನ್ ದರ್ಶನೇ ಫಲಮ್ ‖ ೬

ಪದ್ಭ್ಯಾಮಾಕ್ರಮ್ಯ ಪ್ರಪದೇ ದ್ವ್ಯಂಗುಲ್ಯುತ್ತಾನಪಾಣಿನಾ ।
ಪ್ರಗೃಹ್ಯ ಚುಬುಕೇಽಧ್ಯಾತ್ಮಮುದನೀನಮದಚ್ಯುತಃ ‖ ೭

---

ಗಳನ್ನು ಮಾಡಿಕೊಡುವ ದಾಸಿ. ನನ್ನ ಹೆಸರು ತ್ರಿವಕ್ರಾ! ಅವನ ಮೆಚ್ಚುಗೆಯನ್ನು ಗಳಿಸಿದವಳು. ಭೋಜೇಶ್ವರನಿಗೆ ನಾನು ನಿರ್ಮಿಸುವ ಅಂಗರಾಗವೆಂದರೆ ಬಹಳ ಪ್ರೀತಿ! ಈ ಅನುಲೇಪನವು ನಿಮಗಲ್ಲದೆ ಇನ್ನು ಯಾರಿಗೆ ಯೋಗ್ಯವೆನಿಸೀತು?" ಎಂದಳು (೩). ಶ್ರೀಕೃಷ್ಣ ಬಲರಾಮರ ರೂಪ, ನಯ, ಮಾಧುರ್ಯ, ನಗು, ಸಂಭಾಷಣೆಯ ವಿಧಾನ, ನೋಟಗಳಿಗೆ ವಶಳಾದ ಕುಬ್ಜೆಯು ಇಬ್ಬರಿಗೂ ಶ್ರೇಷ್ಠವಾದ ಅನುಲೇಪನವನ್ನಿತ್ತಳು (೪). ಅವರು ತಮ್ಮ ದೇಹಕಾಂತಿಗಿಂತ ಬೇರೊಂದು ಕಾಂತಿಯನ್ನು ಬೀರುವ ಅಂಗರಾಗವನ್ನು ದೇಹದ ಮೇಲ್ಭಾಗಕ್ಕೆ ತೊಡೆದುಕೊಂಡು ಸುಂದರವಾಗಿ ಶೋಭಿಸಿದರು. ಭಗವಂತನು ಪ್ರಸನ್ನನಾದನು. ತನ್ನ ದರ್ಶನದಫಲವನ್ನು ಅನುಗ್ರಹಿಸುವುದಕ್ಕೋಸ್ಕರ, ಗೂನಿಯೂ ಸುಂದರಮುಖಿಯೂ ಆದ ತ್ರಿವಕ್ರೆಯನ್ನು ನೇರವಾದ ಆಕೃತಿಯುಳ್ಳವಳನ್ನಾಗಿ ಮಾಡಬೇಕೆಂದು ಬಯಸಿದನು (೫–೬). ತನ್ನ ಕಾಲುಗಳಿಂದ ಅವಳ ಹೆಜ್ಜೆಗಳೆರಡನ್ನೂ ತುಳಿದು ನಿಂತು, ಮೇಲ್ಮುಖವಾದ ಕೈಯ ಎರಡು ಬೆರಳುಗಳನ್ನು ಅವಳ ಗಲ್ಲದ ಕೆಳಗಿಟ್ಟು, ತ್ರಿವಕ್ರೆಯ ಆಧ್ಯಾತ್ಮಿಕ ದೇಹವನ್ನು * ಅಚ್ಯುತನು ಮೇಲಕ್ಕೆ ಮೀಟಿದನು! (೭).

---

* ಆಧ್ಯಾತ್ಮಿಕದೇಹ = ಜೀವಾತ್ಮವಿರುವ ಭೌತಿಕಶರೀರ.

ಸಾ ತದರ್ಜುಸಮಾನಾಂಗೀ ಬೃಹಚ್ಛ್ರೋಣಿಪಯೋಧರಾ ।
ಮುಕುಂದಸ್ಪರ್ಶನಾತ್ ಸದ್ಯೋ ಬಭೂವ ಪ್ರಮದೋತ್ತಮಾ ॥ ೮

ತತೋ ರೂಪಗುಣೌದಾರ್ಯಸಂಪನ್ನಾ ಪ್ರಾಹ ಕೇಶವಮ್ ।
ಉತ್ತರೀಯಾಂತಮಾಕೃಷ್ಯ ಸ್ಮಯಂತೀ ಜಾತಹೃಚ್ಛಯಾ ॥ ೯

ಏಹಿ ವೀರ ಗೃಹಂ ಯಾಮೋ ನ ತ್ವಾಂ ತ್ಯಕ್ತುಮಿಹೋತ್ಸಹೇ ।
ತ್ವಯೋನ್ಮಥಿತಚಿತ್ತಾಯಾಃ ಪ್ರಸೀದ ಪುರುಷರ್ಷಭ ॥ ೧೦

ಏವಂ ಸ್ತ್ರಿಯಾ ಯಾಚ್ಯಮಾನಃ ಕೃಷ್ಣೋ ರಾಮಸ್ಯ ಪಶ್ಯತಃ ।
ಮುಖಂ ವೀಕ್ಷ್ಯಾನುಗಾನಾಂ ಚ ಪ್ರಹಸಂಸ್ತಾಮುವಾಚ ಹ ॥ ೧೧

ಏಷ್ಯಾಮಿ ತೇ ಗೃಹಂ ಸುಭ್ರೂಃ ಪುಂಸಾಮಾಧಿವಿಕರ್ಶನಮ್ ।
ಸಾಧಿತಾರ್ಥೋಽಗೃಹಾಣಾಂ ನಃ ಪಾಂಥಾನಾಂ ತ್ವಂ ಪರಾಯಣಮ್ ॥

ವಿಸೃಜ್ಯ ಮಾಧ್ವ್ಯಾ ವಾಣ್ಯಾ ತಾಂ ವ್ರಜನ್ ಮಾರ್ಗೇ ವಣಿಕ್ಪಥೈಃ ।
ನಾನೋಪಾಯನತಾಂಬೂಲಸ್ರಗ್ಗಂಧೈಃ ಸಾಗ್ರಜೋಽರ್ಚಿತಃ ॥ ೧೩

---

ಒಡನೆಯೇ ಕುಬ್ಜೆಯು ಮುಕುಂದನ ಸ್ಪರ್ಶಮಹಿಮೆಯಿಂದ ನೇರವೂ ಸಮವೂ ಆದ ಅಂಗವುಳ್ಳವಳೂ ಪೀನಶ್ರೋಣಿಪಯೋಧರೆಯೂ ಆದ ಅಂಗನಾಮಣಿಯಾದಳು! (೮). ಆಮೇಲೆ ಆ ರೂಪಗುಣೌದಾರ್ಯಸಂಪನ್ನೆಯು ಮನ್ಮಥಾವಿಷ್ಟಳಾಗಿ ನಗುತ್ತ ಕೇಶವನ ಉತ್ತರೀಯವನ್ನು ಹಿಡಿದು "ವೀರನೆ, ಬಾ! ಮನೆಗೆ ಹೋಗೋಣ! ನಿನ್ನನ್ನು ಬಿಟ್ಟಿರಲಾರೆ. ನಿನ್ನಿಂದ ನನ್ನ ಮನಸ್ಸು ಕಲಕಿಹೋಯಿತು. ಪುರುಷೋತ್ತಮ, ಪ್ರಸನ್ನನಾಗು!" ಎಂದಳು (೯–೧೦). ಹೀಗೆ ಸ್ತ್ರೀಯೊಬ್ಬಳು ಬಲರಾಮನ ಕಣ್ಣೆದುರಿಗೇ ಯಾಚಿಸುತ್ತಿರಲು, ಶ್ರೀಕೃಷ್ಣನು ಪಕ್ಕದಲ್ಲಿದ್ದ ಗೋಪಾಲರ ಮುಖವನ್ನು ನೋಡಿ ನಗುತ್ತ "ಸುಂದರಿ, ನನ್ನ ಕೆಲಸವು ಮುಗಿದಮೇಲೆ, ಗಂಡಸರ ಮಾನಸಖೇದವನ್ನು ಪರಿಹರಿಸುವ ನಿನ್ನ ಮನೆಗೆ ಬರುವೆನು! ಮನೆಮಡದಿಯರಿಲ್ಲದ ನಮ್ಮಂಥ ದಾರಿಹೋಕರಿಗೆ ನೀನೇ ಗತಿ!" ಎಂದು ಹೇಳಿದನು (೧೧–೧೨). ಮೃದುನುಡಿಗಳನ್ನಾಡಿ ಅವಳನ್ನು ವಿಸರ್ಜಿಸಿ ಮುಂದೆ ಮಾರ್ಗವಿಡಿದು ಹೋಗುತ್ತಿರುವಾಗ, ವಣಿಜರು ನಾನಾ ವಿಧವಾದ ಕಾಣಿಕೆಗಳನ್ನೂ ತಾಂಬೂಲ, ಹೂಮಾಲೆ,

ತದ್ದರ್ಶನಸ್ಮರಕ್ಷೋಭಾದಾತ್ಮಾನಂ ನಾವಿದನ್ ಸ್ತ್ರಿಯಃ ।
ವಿಸ್ರಸ್ತವಾಸಃಕಬರವಲಯಾಲೇಖ್ಯಮೂರ್ತಯಃ ॥ ೧೪

ತತಃ ಪೌರಾನ್ ಪೃಚ್ಛಮಾನೋ ಧನುಷಃ ಸ್ಥಾನಮಚ್ಯುತಃ ।
ತಸ್ಮಿನ್ ಪ್ರವಿಷ್ಟೋ ದದೃಶೇ ಧನುರೈಂದ್ರಮಿವಾದ್ಭುತಮ್ ॥ ೧೫

ಪುರುಷೈರ್ಬಹುಭಿರ್ಗುಪ್ತಮರ್ಚಿತಂ ಪರಮರ್ದ್ಧಿಮತ್ ।
ವಾರ್ಯಮಾಣೋ ನೃಭಿಃ ಕೃಷ್ಣಃ ಪ್ರಸಹ್ಯ ಧನುರಾದದೇ ॥ ೧೬

ಕರೇಣ ವಾಮೇನ ಸಲೀಲಮುದ್ಧೃತಂ
ಸಜ್ಯಂ ಚ ಕೃತ್ವಾ ನಿಮಿಷೇಣ ಪಶ್ಯತಾಮ್ ।
ನೃಣಾಂ ವಿಕೃಷ್ಯ ಪ್ರಬಭಂಜ ಮಧ್ಯತೋ
ಯಥೇಕ್ಷುದಂಡಂ ಮದಕರ್ಯುರುಕ್ರಮಃ ॥ ೧೭

ಧನುಷೋ ಭಜ್ಯಮಾನಸ್ಯ ಶಬ್ದಃ ಖಂ ರೋದಸೀ ದಿಶಃ ।
ಪೂರಯಾಮಾಸ ಯಂ ಶ್ರುತ್ವಾ ಕಂಸಸ್ತ್ರಾಸಮುಪಾಗಮತ್ ॥ ೧೮

---

ಗಂಧಗಳನ್ನೂ ತಂದಿತ್ತು, ಶ್ರೀಕೃಷ್ಣನನ್ನೂ ಅವನ ಅಣ್ಣನನ್ನೂ ಸತ್ಕರಿಸಿದರು (೧೩). ಆತನ ದರ್ಶನದಿಂದ ಕಾಮೋದ್ರೇಕವನ್ನು ತಾಳಿದ ಸ್ತ್ರೀಯರು ತಮ್ಮನ್ನು ತಾವೇ ಮರೆತರು. ಸಡಿಲಿದ ಸೀರೆ, ಮುಡಿ ಮತ್ತು ಬಳೆಗಳುಳ್ಳವರಾಗಿ ಚಿತ್ರದ ಬೊಂಬೆಗಳಂತೆ ನಿಂತಿದ್ದರು (೧೪). ಆಮೇಲೆ ಅಚ್ಯುತನು ಪೌರರನ್ನು ಕುರಿತು ಧನುಸ್ಸಿರುವ ಸ್ಥಳವು ಯಾವುದೆಂದು ಕೇಳುತ್ತ, ಧನುರ್ಯಾಗ ನಡೆಯುವ ಸ್ಥಳವನ್ನು ಪ್ರವೇಶಿಸಿ, ಇಂದ್ರಧನುಸ್ಸಿನಂತಿರುವ ಅದ್ಭುತವಾದ ಧನುಸ್ಸನ್ನು ಕಂಡನು (೧೫). ಮಹಾತೇಜಸ್ಸಿನಿಂದ ಕೂಡಿದ ಆ ಧನುಸ್ಸನ್ನು ಬಹುಮಂದಿ ರಾಜಪುರುಷರು ಅರ್ಚಿಸಿ ರಕ್ಷಿಸುತ್ತಿದ್ದರು. ಅವರು ಬೇಡವೆಂದರೂ ಕೇಳದೆ ಶ್ರೀಕೃಷ್ಣನು ಬಲಾತ್ಕಾರದಿಂದ ನುಗ್ಗಿಹೋಗಿ ಆ ಧನುಸ್ಸನ್ನು ಹಿಡಿದನು (೧೬). ಎಡಗೈಯಿಂದ ಧನುಸ್ಸನ್ನು ಲೀಲಾಜಾಲವಾಗಿ ಹಿಡಿದೆತ್ತಿ, ಜನರು ನೋಡುತ್ತಿರುವಾಗಲೇ ನಿಮಿಷಮಾತ್ರದಲ್ಲಿ ಹೆದೆಯೇರಿಸಿ, ಬಲಾಢ್ಯವಾದ ಮತ್ತಮಾತಂಗವು ಕಬ್ಬಿನ ಜಲ್ಲೆಯನ್ನು ಮುರಿಯುವಂತೆ ಜಗ್ಗಿ ಮಧ್ಯದಲ್ಲಿ ಮುರಿದುಹಾಕಿದನು! (೧೭). ಧನುಸ್ಸು ಭಗ್ನವಾಗುವಾಗ ಜನಿಸಿದ ಶಬ್ದವು ಭೂಮ್ಯಾಕಾಶಗಳನ್ನೂ ತುಂಬಿತು. ಅದನ್ನು ಕೇಳಿ ಕಂಸನು ಹೆದರಿ

**ತದ್ರಕ್ಷಿಣಃ ಸಾನುಚರಾಃ ಕುಪಿತಾ ಆತತಾಯಿನಃ ।**
**ಗ್ರಹೀತುಕಾಮಾ ಆವವ್ರುರ್ಗೃಹ್ಯತಾಂ ವಧ್ಯತಾಮಿತಿ ॥ ೧೯**

**ಅಥ ತಾನ್ ದುರಭಿಪ್ರಾಯಾನ್ ವಿಲೋಕ್ಯ ಬಲಕೇಶವೌ ।**
**ಕ್ರುದ್ಧೌ ಧನ್ವನ ಆದಾಯ ಶಕಲೇ ತಾಂಶ್ಚ ಜಘ್ನತುಃ ॥ ೨೦**

**ಬಲಂ ಚ ಕಂಸಪ್ರಹಿತಂ ಹತ್ವಾ ಶಾಲಾಮುಖಾತ್ತತಃ ।**
**ನಿಷ್ಕ್ರಮ್ಯ ಚೇರತುರ್ಹೃಷ್ಟೌ ನಿರೀಕ್ಷ್ಯ ಪುರಸಂಪದಃ ॥ ೨೧**

**ತಯೋಸ್ತದದ್ಭುತಂ ವೀರ್ಯಂ ನಿಶಾಮ್ಯ ಪುರವಾಸಿನಃ ।**
**ತೇಜಃ ಪ್ರಾಗಲ್ಭ್ಯಂ ರೂಪಂ ಚ ಮೇನಿರೇ ವಿಬುಧೋತ್ತಮೌ ॥ ೨೨**

**ತಯೋರ್ವಿಚರತೋಃ ಸ್ವೈರಮಾದಿತ್ಯೋಽಸ್ತಮುಪೇಯಿವಾನ್ ।**
**ಕೃಷ್ಣರಾಮೌ ವೃತೌ ಗೋಪೈಃ ಪುರಾಚ್ಛಕಟಮೀಯತುಃ ॥ ೨೩**

**ಗೋಪ್ಯೋ ಮುಕುಂದವಿಗಮೇ ವಿರಹಾತುರಾ ಯಾ**
**ಆಶಾಸತಾಶಿಷ ಋತಾ ಮಧುಪುರ್ಯಭೂವನ್ ।**

---

ದನು (೧೮). ಧನುಸ್ಸನ್ನು ರಕ್ಷಿಸುತ್ತಿದ್ದ ಕಾವಲುಗಾರರೂ ಸೇವಕರೂ ಕುಪಿತರಾಗಿ ಶ್ರೀಕೃಷ್ಣನನ್ನು ಘಾತಿಸುವ ಉದ್ದೇಶದಿಂದ ಹಿಡಿಯಬೇಕೆಂದು 'ಹಿಡಿಯಿರಿ! ಕೊಲ್ಲಿರಿ!' ಎನ್ನುತ್ತ ಮುತ್ತಿದರು (೧೯). ದುರಭಿಪ್ರಾಯದಿಂದ ಮುತ್ತಿದ ಅವರನ್ನು ನೋಡಿ ಕ್ರುದ್ಧರಾದ ಬಲರಾಮಕೇಶವರು ಮುರಿದ ಧನುಸ್ಸಿನ ತುಂಡುಗಳನ್ನೆತ್ತಿಕೊಂಡು ಅವರನ್ನು ಬಡಿದು ಕೊಂದರು (೨೦). ಕಂಸನು ಕಳಿಸಿದ ಸೈನಿಕರನ್ನೂ ಸಂಹರಿಸಿ ಆ ಭವನದ ಎದುರುಬಾಗಿಲಿನಿಂದ ಹೊರಗೆ ಬಂದು, ಪುರವೈಭವವನ್ನು ನೋಡಿ ಸಂತುಷ್ಟರಾಗಿ ತಿರುಗಾಡುತ್ತಿದ್ದರು (೨೧). ಅವರ ಅದ್ಭುತವಾದ ಪರಾಕ್ರಮವನ್ನೂ ಪ್ರಭಾವವನ್ನೂ ಧೈರ್ಯವನ್ನೂ ರೂಪವನ್ನೂ ವೀಕ್ಷಿಸಿದ ನಗರವಾಸಿಗಳು ಅವರೀರ್ವರೂ ದೇವತಾಶ್ರೇಷ್ಠರೆಂದು ಭಾವಿಸಿದರು (೨೨). ಶ್ರೀಕೃಷ್ಣಬಲರಾಮರು ಸ್ವೇಚ್ಛೆಯಾಗಿ ತಿರುಗಾಡುತ್ತಿರಲು ಸೂರ್ಯನು ಮುಳುಗಿದನು. ಅವರು ಗೋಪಾಲರೊಡನೆ ಪುರದಿಂದ, ಬಂಡಿಯು ಬೀಡುಬಿಟ್ಟ ಸ್ಥಳಕ್ಕೆ ಹಿಂದಿರುಗಿದರು (೨೩). ಮುಕುಂದನು ಗೋಕುಲದಿಂದ ಹೊರಡುವಾಗ ವಿರಹತಪ್ತರಾದ ಗೋಪಿಯರು,

ಸಂಪಶ್ಯತಾಂ ಪುರುಷಭೂಷಣಗಾತ್ರಲಕ್ಷ್ಮೀಂ
ಹಿತ್ವೇತರಾನ್ ನು ಭಜತಶ್ಚಕಮೇಽಯನಂ ಶ್ರೀಃ ॥ ೨೪

ಅವನಿಕ್ತಾಂಘ್ರಿಯುಗಲೌ ಭುಕ್ತ್ವಾ ಕ್ಷೀರೋಪಸೇಚನಮ್ ।
ಊಷತುಸ್ತಾಂ ಸುಖಂ ರಾತ್ರಿಂ ಜ್ಞಾತ್ವಾ ಕಂಸಚಿಕೀರ್ಷಿತಮ್ ॥ ೨೫

ಕಂಸಸ್ತು ಧನುಷೋ ಭಂಗಂ ರಕ್ಷಿಣಾಂ ಸ್ವಬಲಸ್ಯ ಚ ।
ವಧಂ ನಿಶಮ್ಯ ಗೋವಿಂದರಾಮವಿಕ್ರೀಡಿತಂ ಪರಮ್ ॥ ೨೬

ದೀರ್ಘಪ್ರಜಾಗರೋ ಭೀತೋ ದುರ್ನಿಮಿತ್ತಾನಿ ದುರ್ಮತಿಃ ।
ಬಹೂನ್ಯಚಷ್ಟೋಭಯಥಾ ಮೃತ್ಯೋರ್ದೌತ್ಯಕರಾಣಿ ಚ ॥ ೨೭

ಅದರ್ಶನಂ ಸ್ವಶಿರಸಃ ಪ್ರತಿರೂಪೇ ಚ ಸತ್ಯಪಿ ।
ಅಸತ್ಯಪಿ ದ್ವಿತೀಯೇ ಚ ದ್ವೈರೂಪ್ಯಂ ಜ್ಯೋತಿಷಾಂ ತಥಾ ॥ ೨೮

---

ಮಧುರೆಯಲ್ಲಿ ಪುರುಷಭೂಷಣನಾದ ಶ್ರೀಕೃಷ್ಣನ ಅಂಗಸೌಂದರ್ಯವನ್ನು ವೀಕ್ಷಿಸುವವರಿಗೆ ಏನಾಗುವುದೆಂದು ಊಹಿಸಿದ್ದರೋ (ಈ ದಿನ ಮಧುರಾನಗರದ ತರುಣಿಯರಿಗೆ ಸುಪ್ರಭಾತವಾಯಿತು ಇತ್ಯಾದಿ) ಅದು ಆಶೀರ್ವಾದವಾಗಿ ಪರಿಣಮಿಸಿ ಸತ್ಯವಾಯಿತು! ಶ್ರೀಕೃಷ್ಣನ ಅಂಗಸೌಂದರ್ಯವೆಂದರೆ, ಲಕ್ಷ್ಮೀದೇವಿಯು ತನ್ನನ್ನು ಭಜಿಸುತ್ತಿದ್ದ ಬ್ರಹ್ಮಾದಿಗಳನ್ನೂ ತೊರೆದು ಯಾವುದನ್ನು ಕಾಮಿಸಿದಳೋ ಅದು! (೨೪). ಶ್ರೀಕೃಷ್ಣಬಲರಾಮರು ಕೈಗಳನ್ನು ತೊಳೆದು ಕ್ಷೀರಾನ್ನವನ್ನು ಭುಂಜಿಸಿ, ಕಂಸನು ಏನುಮಾಡಲಿದ್ದಾನೆಂಬುದನ್ನರಿತು, ಆ ರಾತ್ರಿಯನ್ನು ಸುಖವಾಗಿ ಕಳೆದರು (೨೫). ಗೋವಿಂದನಿಗೂ ಬಲರಾಮನಿಗೂ ಒಂದು ಕ್ರೀಡಾಮಾತ್ರವಾಗಿದ್ದ ಧನುರ್ಭಂಗವನ್ನೂ ರಕ್ಷಿಪುರುಷರ ಮತ್ತು ಸೈನಿಕರ ವಧೆಯನ್ನೂ ಕಂಸನು ಕೇಳಿದನು (೨೬). ಆದರಿಂದ ಭೀತನಾದ ಆ ದುರ್ಮತಿಗೆ ಆ ರಾತ್ರಿ ದೀರ್ಘಜಾಗರಣವಾಯಿತು. ಅವನು ಜಾಗ್ರತ್ತಿನಲ್ಲಿಯೂ ಸ್ವಪ್ನದಲ್ಲಿಯೂ ದುರ್ನಿಮಿತ್ತಗಳನ್ನೂ ಮೃತ್ಯುದೂತಾಗಮನ ಸೂಚನೆಗಳನ್ನೂ ಕಂಡನು (೨೭). (ಕನ್ನಡಿ ಮೊದಲಾದವುಗಳಲ್ಲಿ) ತನ್ನ ಪ್ರತಿಬಿಂಬವು ಗೋಚರಿಸಿದರೂ ಅವನಿಗೆ ತಲೆಯು ಗೋಚರಿಸಲಿಲ್ಲ! ಎರಡನೆಯ ವಸ್ತು ಇಲ್ಲದಿದ್ದರೂ—ಕೈಬೆರಳು ಮೊದಲಾದ್ದನ್ನು ಅಡ್ಡಹಿಡಿಯದಿದ್ದರೂ ಚಂದ್ರಮುಂತಾದ ಜ್ಯೋತಿಗಳು ಎರಡೆರಡಾಗಿ ಕಂಡವು (೨೮).

ಛಿದ್ರಪ್ರತೀತಿಶ್ಛಾಯಾಯಾಂ ಪ್ರಾಣಘೋಷಾನುಪಶ್ರುತಿಃ ।
ಸ್ವರ್ಣಪ್ರತೀತಿರ್ವೃಕ್ಷೇಷು ಸ್ವಪದಾನಾಮದರ್ಶನಮ್ ॥ ೨೯

ಸ್ವಪ್ನೇ ಪ್ರೇತಪರಿಷ್ವಂಗಃ ಖರಯಾನಂ ವಿಷಾದನಮ್ ।
ಯಾಯಾನ್ನಲದಮಾಲ್ಯೇಕಸ್ತೈಲಾಭ್ಯಕ್ತೋ ದಿಗಂಬರಃ । ೩೦

ಅನ್ಯಾನಿ ಚೇತ್ಥಂಭೂತಾನಿ ಸ್ವಪ್ನಜಾಗರಿತಾನಿ ಚ ।
ಪಶ್ಯನ್ ಮರಣಸಂತ್ರಸ್ತೋ ನಿದ್ರಾಂ ಲೇಭೇ ನ ಚಿಂತಯಾ ॥ ೩೧

ವ್ಯುಷ್ಟಾಯಾಂ ನಿಶಿ ಕೌರವ್ಯ ಸೂರ್ಯೇ ಚಾದ್ಭ್ಯಃ ಸಮುತ್ಥಿತೇ ।
ಕಾರಯಾಮಾಸ ವೈ ಕಂಸೋ ಮಲ್ಲಕ್ರೀಡಾಮಹೋತ್ಸವಮ್ ॥ ೩೨

ಆನರ್ಚುಃ ಪುರುಷಾ ರಂಗಂ ತೂರ್ಯಭೇರ್ಯಶ್ಚ ಜಘ್ನಿರೇ ।
ಮಂಚಾಶ್ಚಾಲಂಕೃತಾಃ ಸ್ರಗ್ಭಿಃ ಪತಾಕಾಚೈಲತೋರಣೈಃ ॥ ೩೩

ತೇಷು ಪೌರಾ ಜಾನಪದಾ ಬ್ರಹ್ಮಕ್ಷತ್ರಪುರೋಗಮಾಃ ।
ಯಥೋಪಜೋಷಂ ವಿವಿಶೂ ರಾಜಾನಶ್ಚ ಕೃತಾಸನಾಃ ॥ ೩೪

---

ಪ್ರತಿಬಿಂಬದಲ್ಲಿ ರಂಧ್ರವು ಗೋಚರಿಸಿತು. ಕಿವಿಮುಚ್ಚಿದಾಗ ಒಳಗೆ ಕೇಳಿಸುವ ಪ್ರಾಣಘೋಷವು ಕಂಸನಿಗೆ ಕೇಳಿಸಲಿಲ್ಲ. ಮರಗಳು ಚಿನ್ನದ ಬಣ್ಣವುಳ್ಳವುಗಳಾಗಿ ತೋರಿದವು. ಧೂಳಲ್ಲಿ ಕಾಲಿಟ್ಟಾಗ ಹೆಜ್ಜೆಯ ಗುರುತು ಕಾಣಿಸಲಿಲ್ಲ * (೨೯). ಸ್ವಪ್ನದಲ್ಲಾದರೋ ಪ್ರೇತದ ಆಲಿಂಗನ, ಕತ್ತೆಸವಾರಿ, ವಿಷಭಕ್ಷಣ, ದಾಸವಾಳ ಹೂವಿನ ಮಾಲೆಯನ್ನು ಹಾಕಿಕೊಂಡು ಪ್ರಯಾಣ, ತೈಲಾಭ್ಯಂಗ, ಬತ್ತಲೆಯಾಗಿರುವುದು–ಇವು ಕಂಡವು. ಇವೇ ಮೊದಲಾದ ಸ್ವಪ್ನ ಮತ್ತು ಜಾಗರಿತದ ದುಃಶಕುನಗಳನ್ನು ಕಾಣುತ್ತಿದ್ದ ಕಂಸನು ಮರಣಭೀತನಾದನು. ಚಿಂತೆಯಿಂದ ನಿದ್ರೆ ಬರಲಿಲ್ಲ (೩೦–೩೧). ಪರೀಕ್ಷಿತ, ರಾತ್ರಿ ಕಳೆದು ಜಲಮಧ್ಯದಿಂದ ಸೂರ್ಯನು ಉದ್ಗಮಿಸಲು, ಕಂಸನು ಜಟ್ಟಿಕಾಳಗದ ಮಹೋತ್ಸವವನ್ನು ಏರ್ಪಡಿಸಿದನು (೩೨). (ನಿಯೋಜಿತರಾದ) ಪುರುಷರು ರಂಗಸ್ಥಳವನ್ನು ಪೂಜಿಸಿದರು. ವಾದ್ಯಭೇರಿಗಳು ಮೊಳಗಿದವು. ಮಾಲೆ, ಪತಾಕೆ, ವಸ್ತ್ರ, ತೋರಣಗಳಿಂದ ಪೀಠಗಳು ಅಲಂಕರಿಸಲ್ಪಟ್ಟವು (೩೩). ಆ ಪೀಠಗಳಲ್ಲಿ ಬ್ರಹ್ಮಕ್ಷತ್ರಿಯರೇ ಮೊದಲಾದ ಪೌರರೂ ರಾಷ್ಟ್ರಪ್ರಜೆಗಳೂ

---

* ಇವೆಲ್ಲವೂ ದುರ್ನಿಮಿತ್ತಗಳು.

ಕಂಸಂ ಪರಿವೃತೋಽಮಾತ್ಯೈ ರಾಜಮಂಚ ಉಪಾವಿಶತ್ ।
ಮಂಡಲೇಶ್ವರಮಧ್ಯಸ್ಥೋ ಹೃದಯೇನ ವಿದೂಯತಾ ॥ ೩೫

ವಾದ್ಯಮಾನೇಷು ತೂರ್ಯೇಷು ಮಲ್ಲತಾಲೋತ್ತರೇಷು ಚ ।
ಮಲ್ಲಾಃ ಸ್ವಲಂಕೃತಾ ದೃಪ್ತಾಃ ಸೋಪಾಧ್ಯಾಯಾಃ ಸಮಾವಿಶನ್ ॥

ಚಾಣೂರೋ ಮುಷ್ಟಿಕಃ ಕೂಟಃ ಶಲಸ್ತೋಶಲ ಏವ ಚ ।
ತ ಆಸೇದುರುಪಸ್ಥಾನಂ ವಲ್ಗುವಾದ್ಯಪ್ರಹರ್ಷಿತಾಃ ॥ ೩೭

ನಂದಗೋಪಾದಯೋ ಗೋಪಾ ಭೋಜರಾಜಸಮಾಹುತಾಃ ।
ನಿವೇದಿತೋಪಾಯನಾಸ್ತೇ ಏಕಸ್ಮಿನ್ ಮಂಚ ಆವಿಶನ್ ॥ ೩೮

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ದ್ವಿಚತ್ವಾರಿಂಶಾಧ್ಯಾಯಃ



ಯಥಾಸುಖವಾಗಿ ಕುಳಿತರು. ರಾಜರೂ ಪೀಠಗಳಲ್ಲಿ ಆಸೀನರಾದರು (೩೪). ಕಂಸನು ಅಮಾತ್ಯರಿಂದ ಪರಿವೃತನಾಗಿ ಮಂಡಲೇಶ್ವರರ ನಡುವೆ ರಾಜಪೀಠದಲ್ಲಿ ಮಂಡಿಸಿದನು. ಅವನ ಹೃದಯವು ಖಿನ್ನವಾಗಿತ್ತು. ವಾದ್ಯಗಳು ಮೊಳಗುತ್ತಿರಲು ಜಟ್ಟಿಗಳ ತಾಳಗಳು ಉಚ್ಚತರವಾಗಿ ಕೇಳಿಸುತ್ತಿರಲು, ದೃಪ್ತರಾದ ಜಟ್ಟಿಗಳು ಅಲಂಕರಿಸಿಕೊಂಡು ತಮ್ಮ ತಮ್ಮ ಗುರುಗಳೊಡನೆ ಕುಳಿತಿದ್ದರು (೩೫–೩೬). ಚಾಣೂರ, ಮುಷ್ಟಿಕ, ಕೂಟ, ಶಾಲ, ತೋಶಲ–ಎಂಬ ಜಟ್ಟಿಗಳು ಮನೋಹರವಾದ್ಯಧ್ವನಿಯಿಂದ ಉಬ್ಬುತ್ತ ಕುಸ್ತಿಯಾಡುವ ರಂಗಸ್ಥಳಕ್ಕೆ ಆಗಮಿಸಿದರು. ಕಂಸನಿಂದ ಆಹೂತರಾದ ನಂದಾದಿಗೋಪಾಲರು ಬಂದು ರಾಜನಿಗೆ ಕಾಣಿಕೆಗಳನ್ನೊಪ್ಪಿಸಿ ಒಂದು ಮಂಚದ ಮೇಲೆ ಕುಳಿತರು (೩೭–೩೮).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತೆರಡನೆಯ ಅಧ್ಯಾಯ



*

## ತ್ರಿಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಅಥ ಕೃಷ್ಣಶ್ಚ ರಾಮಶ್ಚ ಕೃತಶೌಚೌ ಪರಂತಪ ।
ಮಲ್ಲದುಂದುಭಿನಿರ್ಘೋಷಂ ಶ್ರುತ್ವಾ ದ್ರಷ್ಟುಮುಪೇಯತುಃ ॥ ೧

ರಂಗದ್ವಾರಂ ಸಮಾಸಾದ್ಯ ತಸ್ಮಿನ್ ನಾಗಮವಸ್ಥಿತಮ್ ।
ಅಪಶ್ಯತ್ ಕುವಲಯಾಪೀಡಂ ಕೃಷ್ಣೋಽಂಬಷ್ಠಪ್ರಚೋದಿತಮ್ ॥

ಬದ್ಧ್ವಾ ಪರಿಕರಂ ಶೌರಿಃ ಸಮುಹ್ಯ ಕುಟಿಲಾಲಕಾನ್ ।
ಉವಾಚ ಹಸ್ತಿಪಂ ವಾಚಾ ಮೇಘನಾದಗಭೀರಯಾ ॥ ೩

ಅಂಬಷ್ಠಾಂಬಷ್ಠ ಮಾರ್ಗಂ ನೌ ದೇಹ್ಯಪಕ್ರಮ ಮಾ ಚಿರಮ್ ।
ನೋ ಚೇತ್ ಸಕುಂಜರಂ ತ್ವಾದ್ಯ ನಯಾಮಿ ಯಮಸಾದನಮ್ ॥ ೪

### ಅಧ್ಯಾಯ ೪೩

ಕುವಲಯಾಪೀಡವೆಂಬ ಆನೆಯನ್ನೂ ಮಾವುತನನ್ನೂ ಸಂಹರಿಸಿ
ರಂಗಮಂಟಪವನ್ನು ಪ್ರವೇಶಿಸುವುದು

ಶುಕಮುನಿಗಳು ಹೇಳಿದರು : ಪರೀಕ್ಷಿತರಾಜ, ಇತ್ತಲಾಗಿ ಶ್ರೀಕೃಷ್ಣನೂ ಬಲರಾಮನೂ ಸ್ನಾನಾದಿಪ್ರಾತಃಕೃತ್ಯಗಳನ್ನು ನೆರವೇರಿಸಿದಮೇಲೆ, ಜಟ್ಟಿಗಳ ಭೇರೀನಿನಾದವನ್ನಾಲಿಸಿ ಕಾಳಗವನ್ನು ವೀಕ್ಷಿಸಲು ಆಗಮಿಸಿದರು (೧). ರಂಗಸ್ಥಳದ ಮಹಾದ್ವಾರಕ್ಕೆ ಬಂದಾಗ ಕುವಲಯಾಪೀಡವೆಂಬ ಆನೆಯನ್ನು ಮಾವುತನು ಅಡ್ಡಲಾಗಿ ತಂದು ನಿಲ್ಲಿಸಿರುವುದನ್ನು ಶ್ರೀಕೃಷ್ಣನು ಕಂಡನು. ಅವನು ಸೊಂಟಕ್ಕೆ ಪರಿಕರವನ್ನು ಬಿಗಿದು ಕಟ್ಟಿ ಮುಂಗುರುಳನ್ನು ಸರಿಪಡಿಸಿಕೊಂಡು ಮಾವುತನನ್ನು ದ್ದೇಶಿಸಿ ಮೇಘಗಂಭೀರಧ್ವನಿಯಿಂದ ನುಡಿದನು (೨-೩) : “ಎಲೈ ಮಾವುತ, ಮಾವುತ, ನಮ್ಮಿರ್ವರಿಗೆ ದಾರಿಯನ್ನಿತ್ತು ಬೇಗನೆ ಆಚೆಗೆ ಸರಿದುಕೊ. ಇಲ್ಲದಿದ್ದರೆ ಆನೆಯನ್ನೂ ನಿನ್ನನ್ನೂ ಯಮಸದನಕ್ಕೆ ಅಟ್ಟುವೆನು” ಎಂದನು (೪).

ಏವಂ ನಿರ್ಭರ್ತ್ಸಿತೋಽಂಬಷ್ಠಃ ಕುಪಿತಃ ಕೋಪಿತಂ ಗಜಮ್ ।
ಚೋದಯಾಮಾಸ ಕೃಷ್ಣಾಯ ಕಾಲಾಂತಕಯಮೋಪಮಮ್ ॥ ೫

ಕರೀಂದ್ರಸ್ತಮಭಿದ್ರುತ್ಯ ಕರೇಣ ತರಸಾಗ್ರಹೀತ್ ।
ಕರಾದ್ ವಿಗಲಿತಃ ಸೋಽಮುಂ ನಿಹತ್ಯಾಂಘ್ರಿಷ್ವಲೀಯತ ॥ ೬

ಸಂಕ್ರುದ್ಧಸ್ತಮಚಕ್ಷಾಣೋ ಘ್ರಾಣದೃಷ್ಟಿಃ ಸ ಕೇಶವಮ್ ।
ಪರಾಮೃಶತ್ ಪುಷ್ಕರೇಣ ಸ ಪ್ರಸಹ್ಯ ವಿನಿರ್ಗತಃ ॥ ೭

ಪುಚ್ಛೇ ಪ್ರಗೃಹ್ಯಾತಿಬಲಂ ಧನುಷಃ ಪಂಚವಿಂಶತಿಮ್ ।
ವಿಚಕರ್ಷ ಯಥಾ ನಾಗಂ ಸುಪರ್ಣ ಇವ ಲೀಲಯಾ ॥ ೮

ಸ ಪರ್ಯಾವರ್ತಮಾನೇನ ಸವ್ಯದಕ್ಷಿಣತೋಽಚ್ಯುತಃ ।
ಬಭ್ರಾಮ ಭ್ರಾಮ್ಯಮಾಣೇನ ಗೋವತ್ಸೇನೇವ ಬಾಲಕಃ ॥ ೯

ತತೋಽಭಿಮುಖಮಭ್ಯೇತ್ಯ ಪಾಣಿನಾಽಽಹತ್ಯ ವಾರಣಮ್ ।
ಪ್ರಾದ್ರವನ್ ಪಾತಯಾಮಾಸ ಸ್ಪೃಶ್ಯಮಾನಃ ಪದೇ ಪದೇ ॥ ೧೦

---

ಹೀಗೆ ಗದರಿಸಲು ಕುಪಿತನಾದ ಮಾವುತನು ಕಾಲಮೃತ್ಯುವಿಗೂ ಯಮನಿಗೂ ಸದೃಶವಾದ ರೋಷಿತಗಜವನ್ನು ಕೃಷ್ಣನ ಮೇಲೆ ನುಗ್ಗಿಸಿದನು (೫). ಆನೆಯು ವೇಗವಾಗಿ ನುಗ್ಗಿಬಂದು ಶ್ರೀಕೃಷ್ಣನನ್ನು ಸೊಂಡಿಲಿನಿಂದ ಹಿಡಿಯಿತು. ಕೃಷ್ಣನು ಅದರ ಹಿಡಿತದಿಂದ ತಪ್ಪಿಸಿಕೊಂಡು ಕೈಯಿಂದ ಗುದ್ದಿ ಅದರ ಕಾಲುಗಳ ನಡುವೆ ಮರೆಯಾದನು (೬). ಕೇಶವನನ್ನು ಕಾಣದೆ ಆನೆಯು ಸೊಂಡಿಲಿಂದ ತಡಕಾಡಿತು. ಕೇಶವನು ಸ್ವೇಚ್ಛೆಯಿಂದ ಹೊರಗೆ ಬಂದು ಬಲಾಢ್ಯವಾದ ಆ ಗಜವನ್ನು ಬಾಲದಲ್ಲಿ ಹಿಡಿದು ಇಪ್ಪತ್ತೈದು ಧನುಸ್ಸುಗಳಷ್ಟು ದೂರ, ಗರುಡನು ಸರ್ಪವನ್ನೆಳೆಯುವಂತೆ, ಲೀಲೆಯಿಂದ ದರದರನೆ ಎಳೆದುಕೊಂಡು ಹೋದನು (೭–೮). ಬಾಲವನ್ನು ಹಿಡಿದಿದ್ದ ಅಚ್ಯುತನು, ಆನೆಯು ಎಡಕ್ಕೆ ತಿರುಗಿದಾಗ ಬಲಕ್ಕೂ ಬಲಕ್ಕೆ ತಿರುಗಿದಾಗ ಎಡಕ್ಕೂ ಓಡುತ್ತ, ಬಾಲಕನು ಹಸುವಿನ ಕರುವಿನೊಡನೆ ಆಡುವಂತೆ ಸುತ್ತಾಡಿದನು(೯). ಅನಂತರ ಗಜದ ಎದುರಿಗೆ ಬಂದು ಕೈಯಿಂದ ಅದನ್ನು ಗುದ್ದಿ ಓಡಿದನು. ಆನೆಯು ಅಟ್ಟಿಸಿಕೊಂಡು ಬರಲು ಥಟ್ಟನೆ ನಿಂತು, ಮತ್ತೆ ವಂಚಿಸಿ ಓಡುತ್ತ ಆನೆಯು ಹೆಜ್ಜೆಹೆಜ್ಜೆಗೂ ಮುಗ್ಗರಿಸುವಂತೆ ಮಾಡಿದನು ! (೧೦).

ಸ ಧಾವನ್ ಕ್ರೀಡಯಾ ಭೂಮೌ ಪತಿತ್ವಾ ಸಹಸೋತ್ಥಿತಃ ।
ತಂ ಮತ್ವಾ ಪತಿತಂ ಕ್ರುದ್ಧೋ ದಂತಾಭ್ಯಾಂ ಸೋಽಹನತ್ಕ್ಷಿತಿಮ್ ॥

ಸ್ವವಿಕ್ರಮೇ ಪ್ರತಿಹತೇ ಕುಂಜರೇಂದ್ರೋಽತ್ಯಮರ್ಷಿತಃ ।
ಚೋದ್ಯಮಾನೋ ಮಹಾಮಾತ್ರೈಃ ಕೃಷ್ಣಮಭ್ಯದ್ರವದ್ ರುಷಾ ॥

ತಮಾಪತಂತಮಾಸಾದ್ಯ ಭಗವಾನ್ ಮಧುಸೂದನಃ ।
ನಿಗೃಹ್ಯ ಪಾಣಿನಾ ಹಸ್ತಂ ಪಾತಯಾಮಾಸ ಭೂತಲೇ ॥ ೧೩

ಪತಿತಸ್ಯ ಪದಾಽಽಕ್ರಮ್ಯ ಮೃಗೇಂದ್ರ ಇವ ಲೀಲಯಾ ।
ದಂತಮುತ್ಪಾಟ್ಯ ತೇನೇಭಂ ಹಸ್ತಿಪಾಂಶ್ಚಾಹನದ್ಧರಿಃ ॥ ೧೪

ಮೃತಕಂ ದ್ವಿಪಮುತ್ಸೃಜ್ಯ ದಂತಪಾಣಿಃ ಸಮಾವಿಶತ್ ।
ಅಂಸನ್ಯಸ್ತವಿಷಾಣೋಽಸೃಙ್ಮದಬಿಂದುಭಿರಂಕಿತಃ ।
ವಿರೂಢಸ್ವೇದಕಣಿಕಾವದನಾಂಬುರುಹೋ ಬಭೌ ॥ ೧೫

---

ಶ್ರೀಕೃಷ್ಣನು ಓಡುತ್ತಿರುವಾಗ ಲೀಲೆಯಿಂದ ನೆಲದಮೇಲೆ ಮಲಗಿದನು. ಅವನು ಬಿದ್ದನೆಂದು ತಿಳಿದು ಆನೆಯು ಓಡಿಬರಲು, ಅಚ್ಯುತನು ಥಕ್ಕನೆ ಎದ್ದು ಸರಿದನು. ಆನೆಯು (ಗುರಿತಪ್ಪಿ) ಕೋರೆದಾಡೆಗಳಿಂದ ನೆಲವನ್ನು ಕುಟ್ಟಿತು! (೧೧). ಹೀಗೆ ತನ್ನ ಪರಾಕ್ರಮವು ಪ್ರತಿಹತವಾಗಲು ಗಜರಾಜನು ಅತ್ಯಂತ ರೋಷಾವಿಷ್ಟನಾದನು. ಮಾವುತರು ಭರದಿಂದ ಪ್ರೋತ್ಸಾಹಿಸುತ್ತಿರಲು ಅದು ಸಿಟ್ಟಿನಿಂದ ಮತ್ತೆ ಕೃಷ್ಣನ ಮೇಲೆ ನುಗ್ಗಿತು (೧೨). ಭಗವಾನ್ ಮಧುಸೂದನನು ನುಗ್ಗಿಬಂದ ಆನೆಯ ಸೊಂಡಿಲನ್ನು ಕೈಯಿಂದ ಹಿಡಿದೆಳೆದು ಆನೆಯನ್ನು ನೆಲದ ಮೇಲೆ ಉರುಳಿಸಿದನು. ಉರುಳಿಬಿದ್ದ ಆನೆಯನ್ನು ಸಿಂಹಲೀಲೆಯಿಂದ ತುಳಿದು ದಂತವನ್ನು ಕಿತ್ತು ಅದರಿಂದಲೇ ಆನೆಯನ್ನೂ ಮಾವುತರನ್ನೂ ಬಡಿದು ಕೊಂದನು (೧೪). ಸತ್ತ ಆನೆಯನ್ನು ತೊರೆದು ದಂತಪಾಣಿಯಾಗಿ ರಂಗದೆಡೆಗೆ ಬಂದನು. ಹೆಗಲಮೇಲೆ ಗಜದಂತವನ್ನೇರಿಸಿದ ಗೋವಿಂದನು ಆನೆಯ ರಕ್ತ ಮತ್ತು ಮದೋದಕಗಳ ಬಿಂದುಗಳಿಂದ ಅಂಕಿತನಾಗಿ, ವದನಾಂಬುಜದಲ್ಲಿ ಬೆವರುಹನಿಗಳು ಹನುಕುತ್ತಿರಲು, ಒಂದು ವಿಶಿಷ್ಟ ಶೋಭೆಯಿಂದ ಕಂಗೊಳಿಸಿದನು (೧೫).

ವೃತೌ ಗೋಪೈಃ ಕತಿಪಯೈರ್ಬಲದೇವಜನಾರ್ದನೌ ।
ರಂಗಂ ವಿವಿಶತೂ ರಾಜನ್ ಗಜದಂತವರಾಯುಧೌ ॥ ೧೬

ಮಲ್ಲಾನಾಮಶನಿರ್ನೃಣಾಂ ನರವರಃ
ಸ್ತ್ರೀಣಾಂ ಸ್ಮರೋ ಮೂರ್ತಿಮಾನ್
ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭುಜಾಂ
ಶಾಸ್ತಾ ಸ್ವಪಿತ್ರೋಃ ಶಿಶುಃ ।
ಮೃತ್ಯುರ್ಭೋಜಪತೇರ್ವಿರಾಡವಿದುಷಾಂ
ತತ್ತ್ವಂ ಪರಂ ಯೋಗಿನಾಂ
ವೃಷ್ಣೀನಾಂ ಪರದೇವತೇತಿ ವಿದಿತೋ
ರಂಗಂ ಗತಃ ಸಾಗ್ರಜಃ ॥ ೧೭

ಹತಂ ಕುವಲಯಾಪೀಡಂ ದೃಷ್ಟ್ವಾ ತಾವಪಿ ದುರ್ಜಯೌ ।
ಕಂಸೋ ಮನಸ್ಯಪಿ ತದಾ ಭೃಶಮುದ್ವಿವಿಜೇ ನೃಪ ॥ ೧೮

ತೌ ರೇಜತೂ ರಂಗಗತೌ ಮಹಾಭುಜೌ
ವಿಚಿತ್ರವೇಷಾಭರಣಸ್ರಗಂಬರೌ ।

---

ಬಲದೇವನೂ ಜನಾರ್ದನನೂ ಕೆಲವೇ ಗೋಪರಿಂದ ಪರಿವೃತರಾಗಿ ಗಜದಂತಗಳೆಂಬ ವರಾಯುಧಗಳನ್ನು ಹಿಡಿದು ರಂಗಮಂಟಪವನ್ನು ಪ್ರವೇಶಿಸಿದರು (೧೬). ಪರೀಕ್ಷಿತರಾಜ, ಜಟ್ಟಿಗಳಿಗೆ ಸಿಡಿಲೆಂದು, ಪುರುಷರಿಗೆ ಪುರುಷೋತ್ತಮನೆಂದು, ಸ್ತ್ರೀಯರಿಗೆ ಮೂರ್ತಿಮಂತನಾದ ಮನ್ಮಥನೆಂದು, ಗೊಲ್ಲರಿಗೆ ಸ್ವಕೀಯಬಂಧುವೆಂದು, ದುಷ್ಟರಾಜರಿಗೆ ದಂಡಧಾರಿಯಾದ ನಿಯಾಮಕನೆಂದು, ತನ್ನ ತಂದೆತಾಯಿಗಳಿಗೆ ಮಗುವೆಂದು, ಭೋಜಪತಿಯಾದ ಕಂಸನಿಗೆ ಮೃತ್ಯುವೆಂದು, ಏನನ್ನೂ ಅರಿಯದ ಮೂರ್ಖರಿಗೆ ಲೋಕಸಾಧಾರಣನೆಂದು, ಯೋಗಿಗಳಿಗೆ ಪರತತ್ತ್ವವೆಂದು, ವೃಷ್ಣಿಕುಲದವರಿಗೆ ಪರದೇವತೆಯೆಂದು ವಿದಿತನಾದ ಶ್ರೀಕೃಷ್ಣನು ಅಗ್ರಜನಾದ ಬಲದೇವನೊಡನೆ ರಂಗಮಂಟಪವನ್ನು ಪ್ರವೇಶಿಸಿದನು! (೧೭). ಕುವಲಯಾಪೀಡವು ಹತವಾದುದನ್ನು ನೋಡಿ ಬಲರಾಮಕೃಷ್ಣರು ದುರ್ಜಯರೆಂದರಿತು, ಕಂಸನು ಧೀರನಾದರೂ ಆ ಸಮಯದಲ್ಲಿ ಬಹಳ ಹೆದರಿದನು (೧೮). ವಿಚಿತ್ರವೇಷಾಭರಣಮಾಲಾವಸ್ತ್ರಧಾರಿಗಳಾಗಿ

ಯಥಾ ನಟಾವುತ್ತಮವೇಷಧಾರಿಣೌ
ಮನಃ ಕ್ಷಿಪಂತೌ ಪ್ರಭಯಾ ನಿರೀಕ್ಷತಾಮ್ ॥ ೧೯

ನಿರೀಕ್ಷ್ಯ ತಾವುತ್ತಮಪೂರುಷೌ ಜನಾ
ಮಂಚಸ್ಥಿತಾ ನಾಗರರಾಷ್ಟ್ರಕಾ ನೃಪ ।
ಪ್ರಹರ್ಷವೇಗೋತ್ಕಲಿತೇಕ್ಷಣಾನನಾಃ
ಪಪುರ್ನ ತೃಪ್ತಾ ನಯನೈಸ್ತದಾನನಮ್ ॥ ೨೦

ಪಿಬಂತ ಇವ ಚಕ್ಷುರ್ಭ್ಯಾಂ ಲಿಹಂತ ಇವ ಜಿಹ್ವಯಾ ।
ಜಿಘ್ರಂತ ಇವ ನಾಸಾಭ್ಯಾಂ ಶ್ಲಿಷ್ಯಂತ ಇವ ಬಾಹುಭಿಃ ॥ ೨೧

ಊಚುಃ ಪರಸ್ಪರಂ ತೇ ವೈ ಯಥಾದೃಷ್ಟಂ ಯಥಾಶ್ರುತಮ್ ।
ತದ್ರೂಪಗುಣಮಾಧುರ್ಯಪ್ರಾಗಲ್ಭ್ಯಸ್ಮಾರಿತಾ ಇವ ॥ ೨೨

ಏತೌ ಭಗವತಃ ಸಾಕ್ಷಾದ್ಧರೇರ್ನಾರಾಯಣಸ್ಯ ಹಿ ।
ಅವತೀರ್ಣಾವಿಹಾಂಶೇನ ವಸುದೇವಸ್ಯ ವೇಶ್ಮನಿ ॥ ೨೩

---

ರಂಗಮಂಟಪವನ್ನು ಪ್ರವೇಶಿಸಿದ ಮಹಾಭುಜರಾದ ಶ್ರೀಕೃಷ್ಣಬಲದೇವರು ತಮ್ಮ ಪ್ರಭೆಯಿಂದ, ಉತ್ತಮವೇಷಧಾರಿಗಳಾದ ನಟರಂತೆ, ನೋಡುವವರ ಮನಸ್ಸನ್ನು ಆಕರ್ಷಿಸುತ್ತ ವಿರಾಜಿಸಿದರು (೧೯). ಮಂಚಗಳಲ್ಲಿ ಮಂಡಿಸಿದ್ದ ಪೌರರೂ ರಾಷ್ಟ್ರಕರೂ ಆ ಪುರುಷೋತ್ತಮರನ್ನು ವೀಕ್ಷಿಸಿ, ಪರೀಕ್ಷಿತರಾಜ, ಹರ್ಷೋದ್ರೇಕದಿಂದ ಕಣ್ಣರಳಿಸಿ ಬಾಯ್ದೆರೆದು, ನೇತ್ರಗಳಿಂದ ಅವರ ಮುಖ ಸೌಂದರ್ಯವನ್ನು ಹೀರುತ್ತಿದ್ದರೇ ಹೊರತು ತೃಪ್ತರಾಗಲಿಲ್ಲ! (೨೦). ಕಣ್ಣಿಂದ ಕುಡಿಯುವರೋ, ನಾಲಿಗೆಯಿಂದ ನೆಕ್ಕುವರೋ, ಮೂಗುಗಳಿಂದ ಆಘ್ರಾಣಿಸುವರೋ, ಬಾಹುಗಳಿಂದ ಆಲಿಂಗಿಸುವರೋ ಎಂಬಂತೆ ಸಭಾಸದರು ಕಾಣಿಸಿದರು! (೨೧). ಅವರೀರ್ವರ ರೂಪ, ಗುಣ, ಮಾಧುರ್ಯ, ಧೈರ್ಯ ಗಳನ್ನು ಪ್ರತ್ಯಕ್ಷವಾಗಿ ಕಂಡುದರಿಂದ ಸ್ಮರಣೆಯಾಯಿತೋ ಎಂಬಂತೆ ತಾವು ನೋಡಿದ್ದನ್ನೂ ಕೇಳಿದ್ದನ್ನೂ ಅವರು ಅನ್ಯೋನ್ಯವಾಗಿ ಹೇಳಿಕೊಂಡರು (೨೨):
“ ಇವರೀರ್ವರೂ ಸಾಕ್ಷಾತ್ ಶ್ರೀಹರಿಯಾದ ಭಗವಾನ್ ಶ್ರೀಮನ್ನಾರಾಯಣನ

ಏಷ ವೈ ಕಿಲ ದೇವಕ್ಯಾಂ ಜಾತೋ ನೀತಶ್ಚ ಗೋಕುಲಮ್ ।
ಕಾಲಮೇತಂ ವಸನ್ ಗೂಢೋ ವವೃಧೇ ನಂದವೇಶ್ಮನಿ ॥ ೨೪

ಪೂತನಾನೇನ ನೀತಾಂತಂ ಚಕ್ರವಾತಶ್ಚ ದಾನವಃ ।
ಅರ್ಜುನೌ ಗುಹ್ಯಕಃ ಕೇಶೀ ಧೇನುಕೋಽನ್ಯೇ ಚ ತದ್ವಿಧಾಃ ॥ ೨೫

ಗಾವಃ ಸಪಾಲಾ ಏತೇನ ದಾವಾಗ್ನೇಃ ಪರಿಮೋಚಿತಾಃ ।
ಕಾಲಿಯೋ ದಮಿತಃ ಸರ್ಪ ಇಂದ್ರಶ್ಚ ವಿಮದಃ ಕೃತಃ ॥ ೨೬

ಸಪ್ತಾಹಮೇಕಹಸ್ತೇನ ಧೃತೋಽದ್ರಿಪ್ರವರೋಽಮುನಾ ।
ವರ್ಷವಾತಾಶನಿಭ್ಯಶ್ಚ ಪರಿತ್ರಾತಂ ಚ ಗೋಕುಲಮ್ ॥ ೨೭

ಗೋಪ್ಯೋಽಸ್ಯ ನಿತ್ಯಮುದಿತಹಸಿತಪ್ರೇಕ್ಷಣಂ ಮುಖಮ್ ।
ಪಶ್ಯಂತ್ಯೋ ವಿವಿಧಾಂಸ್ತಾಪಾಂಸ್ತರಂತಿ ಸ್ಮಾಶ್ರಮಂ ಮುದಾ ॥ ೨೮

ವದಂತ್ಯನೇನ ವಂಶೋಽಯಂ ಯದೋಃ ಸುಬಹುವಿಶ್ರುತಃ ।
ಶ್ರಿಯಂ ಯಶೋ ಮಹತ್ತ್ವಂ ಚ ಲಪ್ಸ್ಯತೇ ಪರಿರಕ್ಷಿತಃ ॥ ೨೯

ಅಂಶದಿಂದ ವಸುದೇವನ ಗೃಹದಲ್ಲಿ ಅವತರಿಸಿದ್ದಾರಂತೆ. ಈತನು (ಶ್ರೀಕೃಷ್ಣನು) ದೇವಕಿಯ ಗರ್ಭದಲ್ಲಿ ಜನಿಸಿದ ಮೇಲೆ ಗೋಕುಲಕ್ಕೆ ಒಯ್ಯಲ್ಪಟ್ಟನಂತೆ. ಇಲ್ಲಿಯವರೆಗೆ ಗೂಢವಾಗಿದ್ದು ನಂದಗೋಪನ ಮನೆಯಲ್ಲಿ ಬೆಳೆದಿದ್ದಾನೆ (೨೩–೨೪). ಈತನಿಂದಲೇ ಪೂತನೆಯು ಮರಣವನ್ನೈದಿದಳು. ತೃಣಾವರ್ತನೆಂಬ ದಾನವನನ್ನು ಸಂಹರಿಸಿದವನು ಇವನೇ. ಯಮಳಾರ್ಜುನ ವೃಕ್ಷಗಳನ್ನು ಉರುಳಿಸಿದವನೂ ಶಂಖಚೂಡನೆಂಬ ಯಕ್ಷನನ್ನೂ, ಕೇಶಿ, ಧೇನುಕ ಮೊದಲಾದವರನ್ನೂ ಕೊಂದವನು ಈತನೇ (೨೫). ಇವನಿಂದಲೇ ಗೋವುಗಳೂ ಗೋಪಾಲರೂ ಕಾಳ್ಗಿಚ್ಚಿನಿಂದ ಪಾರಾದರು. ಕಾಳಿಯಸರ್ಪವನ್ನು ದಂಡಿಸಿದವನೂ ಇಂದ್ರನ ಗರ್ವವನ್ನಡಗಿಸಿದವನೂ ಈತನೇ. ಗೋವರ್ಧನಗಿರಿಯನ್ನು ಒಂದು ಕೈಯಿಂದ ಏಳುದಿನಗಳವರೆಗೆ ಎತ್ತಿಹಿಡಿದನಂತೆ! ಮಳೆಗಾಳಿ ಸಿಡಿಲುಗಳಿಂದ ಗೋಕುಲವನ್ನು ರಕ್ಷಿಸಿದನಂತೆ (೨೭). ಸದಾ ಸಂತೋಷಯುಕ್ತವಾಗಿ ನಗುವನ್ನೂ ನೋಟವನ್ನೂ ಬೀರುವ ಈತನ ಮುಖವನ್ನು ನೋಡುತ್ತ ಗೋಪಿಯರು ತಮ್ಮ ವಿವಿಧಕಷ್ಟಗಳನ್ನು ಶ್ರಮವಿಲ್ಲದೆ ಹರ್ಷದಿಂದ ನೀಗಿದರು (೨೮). ಇವನಿಂದ ಪರಿಪಾಲಿತವಾದ ಯದುವಂಶವು

**ಅಯಂ ಚಾಸ್ಯಾಗ್ರಜಃ ಶ್ರೀಮಾನ್ ರಾಮಃ ಕಮಲಲೋಚನಃ ।**
**ಪ್ರಲಂಬೋ ನಿಹತೋ ಯೇನ ವತ್ಸಕೋ ಯೇ ಬಕಾದಯಃ ॥ ೩೦**

**ಜನೇಷ್ವೇವಂ ಬ್ರುವಾಣೇಷು ತೂರ್ಯೇಷು ನಿನದತ್ಸು ಚ ।**
**ಕೃಷ್ಣರಾಮೌ ಸಮಾಭಾಷ್ಯ ಚಾಣೂರೋ ವಾಕ್ಯಮಬ್ರವೀತ್ ॥ ೩೧**

**ಹೇ ನಂದಸೂನೋ ಹೇ ರಾಮ ಭವಂತೌ ವೀರಸಂಮತೌ ।**
**ನಿಯುದ್ಧಕುಶಲೌ ಶ್ರುತ್ವಾ ರಾಜ್ಞಾಽಽಹೂತೌ ದಿದೃಕ್ಷುಣಾ ॥ ೩೨**

**ಪ್ರಿಯಂ ರಾಜ್ಞಃ ಪ್ರಕುರ್ವಂತ್ಯಃ ಶ್ರೇಯೋ ವಿಂದಂತಿ ವೈ ಪ್ರಜಾಃ ।**
**ಮನಸಾ ಕರ್ಮಣಾ ವಾಚಾ ವಿಪರೀತಮತೋಽನ್ಯಥಾ ॥ ೩೩**

**ನಿತ್ಯಂ ಪ್ರಮುದಿತಾ ಗೋಪಾ ವತ್ಸಪಾಲಾ ಯಥಾ ಸ್ಫುಟಮ್ ।**
**ವನೇಷು ಮಲ್ಲಯುದ್ಧೇನ ಕ್ರೀಡಂತಶ್ಚಾರಯಂತಿ ಗಾಃ ॥ ೩೪**

---

ವಿಖ್ಯಾತವಾಗಿ, ಸಂಪತ್ತು ಕೀರ್ತಿ ಮಹತ್ತ್ವಗಳನ್ನು ಗಳಿಸುವುದೆಂದು ಜನರು ಹೇಳುತ್ತಾರೆ (೨೯). ಇನ್ನೊಬ್ಬನು ಈತನ ಅಣ್ಣ. ರಾಮನೆಂದು ಹೆಸರು. ತೇಜಸ್ವಿಯೂ ತಾವರೆಯಂತಹ ನೇತ್ರಗಳುಳ್ಳವನೂ ಆಗಿದ್ದಾನೆ. ಪ್ರಲಂಬ, ವತ್ಸ, ಬಕ–ಮೊದಲಾದವರನ್ನು ಈ ಬಲರಾಮನು ಸಂಹರಿಸಿದ್ದಾನಂತೆ" ಎಂದು ಮಾತಾಡಿಕೊಳ್ಳುತ್ತಿದ್ದರು * (೩೦). ಜನರು ಹೀಗೆ ಮಾತಾಡಿಕೊಳ್ಳುತ್ತಿರಲು, ವಾದ್ಯಗಳು ಭೋರ್ಗರೆಯುತ್ತಿರಲು, ಚಾಣೂರನು ಶ್ರೀಕೃಷ್ಣ ಬಲರಾಮರನ್ನು ಸಂಬೋಧಿಸಿ ಹೇಳಿದನು: "ಹೇ ನಂದಸೂನು–ಕೃಷ್ಣ, ಹೇ ರಾಮ, ನೀವು ವೀರರೂ ಕುಸ್ತಿಯಲ್ಲಿ ಕುಶಲರೂ ಎಂಬುದನ್ನು ಕೇಳಿದ ಮಹಾರಾಜನು ನಿಮ್ಮನ್ನು ನೋಡಬೇಕೆಂದು ಕರೆಸಿದ್ದಾನೆ (೩೧–೩೨). ರಾಜನಿಗೆ ಪ್ರಿಯವಾದುದನ್ನು ಮನಸಾ ಕರ್ಮಣಾ ವಾಚಾ ನಡೆಸತಕ್ಕ ಪ್ರಜೆಗಳಿಗೆ ಕ್ಷೇಮವೂ ವಿಪರೀತವಾಗಿ ನಡೆಯುವವರಿಗೆ ಕೇಡೂ ಸಂಭವಿಸುತ್ತದೆ (೩೩). ಗೋಪಾಲರೂ ವತ್ಸಪಾಲರೂ ಸದಾ ಸಂತೋಷದಿಂದ ಇದ್ದಾರೆಂಬುದು

---

* ಧೇನುಕನನ್ನು ಬಲರಾಮನೂ ವತ್ಸಾಸುರ ಬಕಾಸುರರನ್ನು ಶ್ರೀಕೃಷ್ಣನೂ ಸಂಹರಿಸಿದ್ದಾರೆ. ಧೇನುಕ, ವತ್ಸ, ಬಕ—ಈ ಮೂವರ ವಿಷಯದಲ್ಲಿ ವ್ಯತ್ಯಾಸವಾಗಿ ಹೇಳಿರುವುದು, ಕಿಂವದಂತಿಯು ನಿಶ್ಚಯವಿಲ್ಲದೆ ವಿಪರ್ಯಾಸವಾಗಿರುತ್ತದೆಯೆಂದು ಸೂಚಿಸುವುದಕ್ಕಾಗಿ.

**ತಸ್ಮಾದ್ ರಾಜ್ಞಃ ಪ್ರಿಯಂ ಯೂಯಂ ವಯಂ ಚ ಕರವಾಮಹೇ ।**
**ಭೂತಾನಿ ನಃ ಪ್ರಸೀದಂತಿ ಸರ್ವಭೂತಮಯೋ ನೃಪಃ ॥ ೩೫**

**ತನ್ನಿಶಮ್ಯಾಬ್ರವೀತ್ ಕೃಷ್ಣೋ ದೇಶಕಾಲೋಚಿತಂ ವಚಃ ।**
**ನಿಯುದ್ಧಮಾತ್ಮನೋಽಭೀಷ್ಟಂ ಮನ್ಯಮಾನೋಽಭಿನಂದ್ಯ ಚ ॥ ೩೬**

**ಪ್ರಜಾ ಭೋಜಪತೇರಸ್ಯ ವಯಂ ಚಾಪಿ ವನೇಚರಾಃ ।**
**ಕರವಾಮ ಪ್ರಿಯಂ ನಿತ್ಯಂ ತನ್ನಃ ಪರಮನುಗ್ರಹಃ ॥ ೩೭**

**ಬಾಲಾ ವಯಂ ತುಲ್ಯಬಲೈಃ ಕ್ರೀಡಿಷ್ಯಾಮೋ ಯಥೋಚಿತಮ್ ।**
**ಭವೇನ್ನಿಯುದ್ಧಂ ಮಾಽಧರ್ಮಃ ಸ್ಪೃಶೇನ್ಮಲ್ಲ ಸಭಾಸದಃ ॥ ೩೮**

**ಚಾಣೂರ ಉವಾಚ—**

**ನ ಬಾಲೋ ನ ಕಿಶೋರಸ್ತ್ವಂ ಬಲಶ್ಚ ಬಲಿನಾಂ ವರಃ ।**
**ಲೀಲಯೇಭೋ ಹತೋ ಯೇನ ಸಹಸ್ರದ್ವಿಪಸತ್ತ್ವಭೃತ್ ॥ ೩೯**

---

ಸ್ಪಷ್ಟವಾಗಿದೆ. ವನಗಳಲ್ಲಿ ಕುಸ್ತಿಯನ್ನಾಡಿ ಕ್ರೀಡಿಸುತ್ತ ಹಸುಗಳನ್ನು ಮೇಯಿಸುತ್ತ ಇದ್ದಾರೆ (೩೪). ಆದ್ದರಿಂದ (ಅದಕ್ಕೆ ಪ್ರತಿಯಾಗಿ) ರಾಜನಿಗೆ ಪ್ರಿಯವಾದುದನ್ನು ನೀವೂ ನಾವೂ ನಡೆಸೋಣ. (ರಾಜನು ಪ್ರೀತನಾದಲ್ಲಿ) ಸಕಲ ಭೂತಗಳೂ ನಮಗೆ ಪ್ರಸನ್ನವಾಗುತ್ತವೆ. ಏಕೆಂದರೆ, ರಾಜನು ಸರ್ವಭೂತಗಳಲ್ಲಿಯೂ ವ್ಯಾಪಕನಾಗಿರುವನು" ಎಂದನು (೩೫). ಶ್ರೀಕೃಷ್ಣನು ಅದನ್ನು ಕೇಳಿ ಮಲ್ಲಯುದ್ಧವು ತನಗೆ ಪ್ರಿಯವೆಂದು ಮೆಚ್ಚಿದನಲ್ಲದೆ ದೇಶಕಾಲೋಚಿತವಾಗಿ ಒಂದು ಮಾತನ್ನಾಡಿದನು: "ವನಚರರಾದ ನಾವೂ ಸಹ ಭೋಜೇಶ್ವರನ ಪ್ರಜೆಗಳೇ ಹೌದು. ಅವನಿಗೆ ಪ್ರಿಯವಾದುದನ್ನು ಸದಾ ನಾವು ಆಚರಿಸಬೇಕು. ಅದು ನಮಗೆ ಪರಮಾನುಗ್ರಹವೇ ಸರಿ (೩೬–೩೭). ಆದರೆ ನಾವು ಬಾಲಕರು. ನಾವು ಸಮಾನಬಲರಾದವರೊಡನೆ ಯಥೋಚಿತವಾಗಿ ಆಡತಕ್ಕವರು. ಅಂಥವರೊಡನೆ ಕುಸ್ತಿ ನಡೆಯಲಿ. ಎಲೈ ಜಟ್ಟಿಯೆ, (ಅನುಚಿತವಾದ ಕುಸ್ತಿ ನಡೆದು) ಸಭಾಸದರಿಗೆ ಅಧರ್ಮವುಂಟಾಗುವುದು ಬೇಡ" ಎಂದನು (೩೮). ಅದಕ್ಕೆ ಚಾಣೂರನು "ನೀನು ಬಾಲಕನೂ ಅಲ್ಲ, ಚಿಕ್ಕವಯಸ್ಸಿನವನೂ ಅಲ್ಲ! ಬಲರಾಮನೂ ಬಲಿಷ್ಠರಲ್ಲಿ ಅಗ್ರಣಿಯೆನಿಸಿದ್ದಾನೆ. ಸಾವಿರ ಆನೆಗಳ ಬಲವಿದ್ದ ಕುವಲಯಾಪೀಡವನ್ನು ಲೀಲೆಯಿಂದ ಕೊಂದವನು

**ತಸ್ಮಾದ್ ಭವದ್ಭ್ಯಾಂ ಬಲಿಭಿರ್ಯೋದ್ಧವ್ಯಂ ನಾನಯೋಽತ್ರ ವೈ ।**
**ಮಯಿ ವಿಕ್ರಮ ವಾರ್ಷ್ಣೇಯ ಬಲೇನ ಸಹ ಮುಷ್ಟಿಕಃ ॥ ೪೦**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ತ್ರಿಚತ್ವಾರಿಂಶಾಧ್ಯಾಯಃ

---

## ಚತುಶ್ಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

**ಏವಂ ಚರ್ಚಿತಸಂಕಲ್ಪೋ ಭಗವಾನ್ ಮಧುಸೂದನಃ ।**
**ಆಸಸಾದಾಥ ಚಾಣೂರಂ ಮುಷ್ಟಿಕಂ ರೋಹಿಣೀಸುತಃ ॥ ೧**

**ಹಸ್ತಾಭ್ಯಾಂ ಹಸ್ತಯೋರ್ಬದ್ಧ್ವಾ ಪದ್ಭ್ಯಾಮೇವ ಚ ಪಾದಯೋಃ ।**
**ವಿಚಕರ್ಷತುರನ್ಯೋನ್ಯಂ ಪ್ರಸಹ್ಯ ವಿಜಿಗೀಷಯಾ ॥ ೨**

---

ನೀನೇ ಅಲ್ಲವೆ! (೩೯). ಆದ್ದರಿಂದ ನೀವಿಬ್ಬರು ಬಲಿಷ್ಠರೊಡನೆ ಹೋರಾಡ ಬೇಕು. ಇದರಲ್ಲಿ ಅಧರ್ಮವೇನೂ ಇಲ್ಲ. ಕೃಷ್ಣ, ನೀನು ನನ್ನೊಡನೆ ಕುಸ್ತಿ ಯಾಡು. ಮುಷ್ಟಿಕನು ಬಲರಾಮನೊಡನೆ ಹೋರಾಡಲಿ" ಎಂದನು (೪೦).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತುಮೂರನೆಯ ಅಧ್ಯಾಯ

---

## ಅಧ್ಯಾಯ ೪೪

ಚಾಣೂರಮುಷ್ಟಿಕರ ಸಂಹಾರ; ಕಂಸವಧೆ

ಶುಕಮಹರ್ಷಿಗಳು ಹೇಳಿದರು: ಆಗ ಮಧುಸೂದನನು ನಿಶ್ಚಿತಸಂಕಲ್ಪ ನಾಗಿ ಚಾಣೂರನನ್ನೂ ರೋಹಿಣೀಸುತನಾದ ಬಲದೇವನು ಮುಷ್ಟಿಕನನ್ನೂ ಎದುರಿಸಿದನು (೧). ಮೊದಲು ಅವರು ಎರಡು ಕೈಗಳಿಂದ ಕೈಗಳನ್ನು ಹಿಡಿದು, ಕಾಲುಗಳಿಂದ ಕಾಲುಗಳನ್ನು ತೊಡರಿಸಿ, ಜಯಾಪೇಕ್ಷೆಯಿಂದ ಬಲ ಪೂರ್ವಕವಾಗಿ ಒಬ್ಬರನ್ನೊಬ್ಬರು ಜಗ್ಗಾಡಿದರು (೨).

ಅರತ್ನೀ ದ್ವೇ ಅರತ್ನಿಭ್ಯಾಂ ಜಾನುಭ್ಯಾಂ ಚೈವ ಜಾನುನೀ ।
ಶಿರಃ ಶೀರ್ಷ್ಣೋರಸೋರಸ್ತಾವನ್ಯೋನ್ಯಮಭಿಜಘ್ನತುಃ ॥ ೩

ಪರಿಭ್ರಾಮಣವಿಕ್ಷೇಪಪರಿರಂಭಾವಪಾತನೈಃ ।
ಉತ್ಸರ್ಪಣಾಪಸರ್ಪಣೈಶ್ಚಾನ್ಯೋನ್ಯಂ ಪ್ರತ್ಯರುಂಧತಾಮ್ ॥ ೪

ಉತ್ಥಾಪನೈರುನ್ನಯನೈಶ್ಚಾಲನೈಃ ಸ್ಥಾಪನೈರಪಿ ।
ಪರಸ್ಪರಂ ಜಿಗೀಷಂತಾವಪಚಕ್ರತುರಾತ್ಮನಃ ॥ ೫

ತದ್ ಬಲಾಬಲವದ್ಯುದ್ಧಂ ಸಮೇತಾಃ ಸರ್ವಯೋಷಿತಃ ।
ಊಚುಃ ಪರಸ್ಪರಂ ರಾಜನ್ ಸಾನುಕಂಪಾ ವರೂಥಶಃ ॥ ೬

ಮಹಾನಯಂ ಬತಾಧರ್ಮ ಏಷಾಂ ರಾಜಸಭಾಸದಾಮ್ ।
ಯೇ ಬಲಾಬಲವದ್ಯುದ್ಧಂ ರಾಜ್ಞೋಽನ್ವಿಚ್ಛಂತಿ ಪಶ್ಯತಃ ॥ ೭

---

ಮೊಳಕೈಗಳಿಂದ ಮೊಳಕೈಗಳನ್ನು ತಳ್ಳುತ್ತ, ಮೊಳಕಾಲುಗಳಿಂದ ಮೊಳಕಾಲುಗಳನ್ನು ತೀಡುತ್ತ, ತಲೆಯಿಂದ ತಲೆಗೂ ಎದೆಯಿಂದ ಎದೆಗೂ ಢಿಕ್ಕಿಹೊಡೆಸುತ್ತ ಕುಸ್ತಿಯಾಡಿದರು (೩). ಒಬ್ಬರನ್ನೊಬ್ಬರು ಹಿಡಿದು ಗಿರ್ರನೆ ತಿರುಗಿಸುತ್ತ, ತಳ್ಳುತ್ತ, ತೋಳುಗಳಿಂದ ಅಮುಕುತ್ತ, ಉರುಳಿಸುತ್ತ, ಒಬ್ಬರೆದುರಿಗೊಬ್ಬರು ವೇಗದಿಂದ ನುಗ್ಗಿಬರುತ್ತ, ಹಾಗೆಯೇ ಹಿಂದೆ ಸರಿಯುತ್ತ ಹೋರಾಡಿದರು (೪). ಬಿದ್ದವನ ಕಾಲುಗಳನ್ನು ಹಿಡಿದು ಎತ್ತಿಹಾಕುತ್ತ, ಕೈಗಳನ್ನು ಹಿಡಿದೆಳೆದು ಬಿಸುಡುತ್ತ, ಪಟ್ಟುಗಳಿಂದ ತಪ್ಪಿಸಿಕೊಳ್ಳಲು ಕೊಸೆಯುತ್ತ, ಕೈಕಾಲುಗಳನ್ನು ಉಂಡೆಯಾಗಿ ಮುದುರಿಸುತ್ತ ಜಯಾಪೇಕ್ಷೆಯಿಂದ ಪರಸ್ಪರ ದೇಹಗಳನ್ನು ಪೀಡಿಸಿದರು (೫). ಬಲಶಾಲಿಗಳಾದ ಜಟ್ಟಿಗಳಿಗೂ ಬಲಹೀನರೆಂದು ಎಣಿಸಿದ ಬಾಲಕರಿಗೂ ಪರಸ್ಪರ ನಡೆಯುತ್ತಿದ್ದ ಕುಸ್ತಿಯನ್ನು ನೋಡಿ, ಅಲ್ಲಿ ಸೇರಿದ್ದ ಸ್ತ್ರೀಯರು ಮರುಕಗೊಂಡು ಗುಂಪಾಗಿ ತಮ್ಮಲ್ಲಿ ಮಾತಾಡತೊಡಗಿದರು (೬): "ಅಯ್ಯೋ! ಈ ರಾಜಸಭಾಸದರಿಗೆ ಇದು ಮಹತ್ತರವಾದ ಅಧರ್ಮ! ಬಲಾಢ್ಯರಾದ ಜಟ್ಟಿಗಳು ದುರ್ಬಲರಾದ ಬಾಲಕರೊಡನೆ ಮಲ್ಲಯುದ್ಧಮಾಡುವುದನ್ನು ಇವರು ರಾಜನ ಕಣ್ಣೆದುರಿಗೇ ನೋಡುತ್ತ ಅನುಮೋದಿಸುತ್ತಾರೆ! (೭).

ಕ್ವ ವಜ್ರಸಾರಸರ್ವಾಂಗೌ ಮಲ್ಲೌ ಶೈಲೇಂದ್ರಸಂನಿಭೌ ।
ಕ್ವ ಚಾತಿಸುಕುಮಾರಾಂಗೌ ಕಿಶೋರೌ ನಾಪ್ತಯೌವನಾ ॥ ೮

ಧರ್ಮವ್ಯತಿಕ್ರಮೋ ಹ್ಯಸ್ಯ ಸಮಾಜಸ್ಯ ಧ್ರುವಂ ಭವೇತ್ ।
ಯತ್ರಾಧರ್ಮಃ ಸಮುತ್ತಿಷ್ಠೇನ್ನ ಸ್ಥೇಯಂ ತತ್ರ ಕರ್ಹಿಚಿತ್ ॥ ೯

ನ ಸಭಾಂ ಪ್ರವಿಶೇತ್ ಪ್ರಾಜ್ಞಃ ಸಭ್ಯದೋಷಾನನುಸ್ಮರನ್ ।
ಅಬ್ರುವನ್ ವಿಬ್ರುವನ್ನಜ್ಞೋ ನರಃ ಕಿಲ್ಬಿಷಮಶ್ನುತೇ ॥ ೧೦

ವಲ್ಗತಃ ಶತ್ರುಮಭಿತಃ ಕೃಷ್ಣಸ್ಯ ವದನಾಂಬುಜಮ್ ।
ವೀಕ್ಷ್ಯತಾಂ ಶ್ರಮವಾರ್ಯುಪ್ತಂ ಪದ್ಮಕೋಶಮಿವಾಂಬುಭಿಃ ॥ ೧೧

ಕಿಂ ನ ಪಶ್ಯತ ರಾಮಸ್ಯ ಮುಖಮಾತಾಮ್ರಲೋಚನಮ್ ।
ಮುಷ್ಟಿಕಂ ಪ್ರತಿ ಸಾಮರ್ಷಂ ಹಾಸಸಂರಂಭಶೋಭಿತಮ್ ॥ ೧೨

ಪುಣ್ಯಾ ಬತ ವ್ರಜಭುವೋ ಯದಯಂ ನೃಲಿಂಗ-
ಗೂಢಃ ಪುರಾಣಪುರುಷೋ ವನಚಿತ್ರಮಾಲ್ಯಃ ।

---

ಸರ್ವಾಂಗಗಳೂ ವಜ್ರಸಾರವಾಗಿರುವ ಪರ್ವತಾಕಾರದ ಈ ದಾಂಡಿಗಜಟ್ಟಿಗಳೆಲ್ಲಿ? ಅತ್ಯಂತ ಸುಕುಮಾರಾಂಗರೂ ಇನ್ನೂ ತಾರುಣ್ಯವನ್ನು ಪಡೆಯದವರೂ ಆದ ಈ ಕಿಶೋರರೆಲ್ಲಿ? (೮). ನಿಶ್ಚಯವಾಗಿಯೂ ಈ ಸಭೆಗೆ ಇದು ಧರ್ಮಾತಿಕ್ರಮವೇ ಸರಿ. ಎಲ್ಲಿ ಅಧರ್ಮವಿರುವುದೋ ಅಲ್ಲಿ ಎಂದಿಗೂ ಇರಬಾರದು! ಸಭಾಸದರು ಅನ್ಯಾಯಮಾಡುವರೆಂದು ತಿಳಿದಾಗ ಪ್ರಾಜ್ಞನು ಆ ಸಭೆಯನ್ನು ಪ್ರವೇಶಿಸಬಾರದು. ಅನ್ಯಾಯ ನಡೆಯುವಾಗ, ತೀಮಾ ಮಾತಾಡದಿದ್ದರೂ ವಿಪರೀತವಾಗಿ ನುಡಿದರೂ ನನಗೆ ಗೊತ್ತಿಲ್ಲವೆಂದರೂ ಮನುಷ್ಯನಿಗೆ ಪಾಪಬರುವುದು (೯–೧೦). ಶತ್ರುವಿನ ಸುತ್ತಲೂ ಜಿಗಿದಾಡುತ್ತಿರುವ ಕೃಷ್ಣನ ಬೆವರಿದ ವದನಾಂಬುಜವನ್ನು ನೋಡಿರಿ. ಜಲಬಿಂದು ಸುಂದರವಾದ ಅರವಿಂದದಂತೆ ಕಾಣುವುದು! (೧೧). (ಓ ಗೆಳತಿಯರೆ) ಬಲರಾಮನ ಮುಖವನ್ನು ಕಾಣಿರಾ? ಮುಷ್ಟಿಕನ ಮೇಲೆ ಕ್ರೋಧಗೊಂಡು ಕಣ್ಣು ಕೆಂಪಾಗಿದ್ದರೂ ಮುಗುಳ್ನಗೆಯ ಸಂಭ್ರಮದಿಂದ ಮುಖವು ಶೋಭಿಸುತ್ತಿದೆ! (೧೨). (ಕೆಲವು ಸ್ತ್ರೀಯರು ಹೇಳಿದರು) ವ್ರಜಭೂಮಿಗಳೇ ಧನ್ಯವಾದವು! ಶಿವನಿಂದಲೂ ಲಕ್ಷ್ಮಿಯಿಂದಲೂ ಪೂಜಿತಪಾದನಾದ ಪುರಾಣ

ಗಾಃ ಪಾಲಯನ್ ಸಹಬಲಃ ಕ್ವಣಯಂಶ್ಚ ವೇಣುಂ
ವಿಕ್ರೀಡಯಾಂಚತಿ ಗಿರಿತ್ರರಮಾರ್ಚಿತಾಂಘ್ರಿಃ ॥ ೧೩

ಗೋಪ್ಯಸ್ತಪಃ ಕಿಮಚರನ್ ಯದಮುಷ್ಯ ರೂಪಂ
ಲಾವಣ್ಯಸಾರಮಸಮೋರ್ಧ್ವಮನನ್ಯಸಿದ್ಧಮ್ ।
ದೃಗ್ಭಿಃ ಪಿಬಂತ್ಯನುಸವಾಭಿನವಂ ದುರಾಪ-
ಮೇಕಾಂತಧಾಮ ಯಶಸಃ ಶ್ರಿಯ ಐಶ್ವರಸ್ಯ ॥ ೧೪

ಯಾ ದೋಹನೇಽವಹನನೇ ಮಥನೋಪಲೇಪ-
ಪ್ರೇಂಖೇಂಖನಾರ್ಭರುದಿತೋಕ್ಷಣಮಾರ್ಜನಾದೌ ।
ಗಾಯಂತಿ ಚೈನಮನುರಕ್ತಧಿಯೋಽಶ್ರುಕಂಠ್ಯೋ
ಧನ್ಯಾ ವ್ರಜಸ್ತ್ರಿಯ ಉರುಕ್ರಮಚಿತ್ತಯಾನಾಃ ॥ ೧೫

ಪ್ರಾತರ್ವ್ರಜಾದ್ ವ್ರಜತ ಆವಿಶತಶ್ಚ ಸಾಯಂ
ಗೋಭಿಃ ಸಮಂ ಕ್ವಣಯತೋಽಸ್ಯ ನಿಶಮ್ಯ ವೇಣುಮ್ ।

---

ಪುರುಷನು ಮನುಷ್ಯವೇಷದಿಂದ ಗೂಢನಾಗಿ ಅಲ್ಲಿ ಸಂಚರಿಸುವನು. ಈತನು ವನಮಾಲೆಯನ್ನು ಧರಿಸಿ ಬಲರಾಮನೊಡನೆ ಗೋವುಗಳನ್ನು ಕಾಯುತ್ತ ಕೊಳಲನ್ನು ನುಡಿಸುತ್ತ ವಿವಿಧಕ್ರೀಡೆಗಳಿಂದ ಗೋಕುಲದಲ್ಲಿ ತಿರುಗಾಡುತ್ತಾನೆ! (೧೩). ಲಾವಣ್ಯಸಾರವಾದ ಈತನ ಈ ರೂಪವನ್ನು ಕಣ್ಣುಗಳಿಂದ ಕುಡಿಯುತ್ತಾರಲ್ಲ, ಆ ಗೋಪಿಯರು ಯಾವ ತಪಸ್ಸನ್ನು ಆಚರಿಸಿರಬಹುದು! ಈ ರೂಪಕ್ಕೆ ಸಮವಾದ್ದಾಗಲಿ ಹೆಚ್ಚಿನದಾಗಲಿ ಇಲ್ಲ! ಇದು ಸಹಜವೂ ಸಲಸಲಕ್ಕೆ ಹೊಸತೆನಿಸುವುದೂ ಅನ್ಯತ್ರ ದುರ್ಲಭವೂ ಆಗಿದೆ. ಈ ರೂಪವು ಕೀರ್ತಿಕಾಂತಿಮಹಿಮೆಗಳಿಗೆ ನಿಯತವಾದ ನಿಲ್ದಾಣ (೧೪). ಕೃಷ್ಣನಲ್ಲಿಯೇ ಚಿತ್ತವು ನೆಲೆಸಿರುವ ಅನುರಕ್ತರಾದ ಗೋಪಿಯರು ಹಾಲುಕರೆಯುವಾಗ, ಮೊಸರು ಕಡೆಯುವಾಗ, ನೆಲ ಬಳಿಯುವಾಗ, ತೊಟ್ಟಿಲು ತೂಗುವಾಗ, ಮಕ್ಕಳು ಅಳುವಾಗ, ನೀರು ಚಿಮುಕಿಸುವಾಗ, ಬಟ್ಟೆಯೊಗೆಯುವಾಗ ಆನಂದ ಬಾಷ್ಪಗಳನ್ನು ದುರಿಸುತ್ತ ಇವನ ಹಾಡನ್ನು ಹಾಡುತ್ತಾರೆ. ಅವರೇ ಧನ್ಯರು! (೧೫). ವ್ರಜದಿಂದ ಗೋವುಗಳೊಡನೆ ಬೆಳಿಗ್ಗೆ ಹೋಗುವಾಗಲೂ ಸಂಜೆ ಬರುವಾಗಲೂ ಈತನು ನುಡಿಸುವ ಕೊಳಲನ್ನು ಕೇಳಿ ಸಡಗರದಿಂದ ಹೊರಗೆ

ನಿರ್ಗಮ್ಯ ತೂರ್ಣಮಬಲಾಃ ಪಥಿ ಭೂರಿಪುಣ್ಯಾಃ
ಪಶ್ಯಂತಿ ಸಸ್ಮಿತಮುಖಂ ಸದಯಾವಲೋಕನಮ್ ॥ ೧೬

ಏವಂ ಪ್ರಭಾಷಮಾಣಾಸು ಸ್ತ್ರೀಷು ಯೋಗೇಶ್ವರೋ ಹರಿಃ ।
ಶತ್ರುಂ ಹಂತುಂ ಮನಶ್ಚಕ್ರೇ ಭಗವಾನ್ ಭರತರ್ಷಭ ॥ ೧೭

ಸಭಯಾಃ ಸ್ತ್ರೀಗಿರಃ ಶ್ರುತ್ವಾ ಪುತ್ರಸ್ನೇಹಶುಚಾಽಽತುರೌ ।
ಪಿತರಾವನ್ವತಪ್ಯೇತಾಂ ಪುತ್ರಯೋರಬುಧೌ ಬಲಮ್ ॥ ೧೮

ತೈಸ್ತೈರ್ನಿಯುದ್ಧವಿಧಿಭಿರ್ವಿವಿಧೈರಚ್ಯುತೇತರೌ ।
ಯುಯುಧಾತೇ ಯಥಾನ್ಯೋನ್ಯಂ ತಥೈವ ಬಲಮುಷ್ಟಿಕೌ ॥ ೧೯

ಭಗವದ್ಗಾತ್ರನಿಷ್ಪಾತೈರ್ವಜ್ರನಿಷ್ಪೇಷನಿಷ್ಠುರೈಃ ।
ಚಾಣೂರೋ ಭಜ್ಯಮಾನಾಂಗೋ ಮುಹುರ್ಗ್ಲಾನಿಮವಾಪ ಹ ॥

---

ಬಂದು ದಾರಿಯಲ್ಲಿ ನಿಂತು, ಕೃಪಾವಲೋಕನಯುಕ್ತವಾದ ಈತನ ಮಂದಹಾಸಪೂರ್ಣವಾದ ಮುಖವನ್ನು ನೋಡುವ ಗೋಪಿಯರು ಮಹಾಪುಣ್ಯಶಾಲಿಗಳು !" ಎಂದು ಹೇಳುತ್ತಿದ್ದರು (೧೬). ಹೆಂಗಸರು ಹೀಗೆ ಹೇಳಿಕೊಳ್ಳುತ್ತಿರುವಾಗ, ಭರತರ್ಷಭ–ಪರೀಕ್ಷಿತ, ಯೋಗೇಶ್ವರನಾದ ಭಗವಾನ್ ಶ್ರೀಹರಿಯು ವೈರಿಯನ್ನು ಕೊಲ್ಲಬೇಕೆಂದು ಮನಸ್ಸು ಮಾಡಿದನು (೧೭). ಸ್ತ್ರೀಯರಾಡುತ್ತಿದ್ದ ಭಯದ ನುಡಿಗಳನ್ನು ಕೇಳಿ, ಪುತ್ರರ ಪರಾಕ್ರಮವನ್ನರಿಯದ ತಂದೆತಾಯಿಗಳು * ಪುತ್ರಸ್ನೇಹದಿಂದುದಿಸಿದ ಶೋಕದಿಂದ ವಿಹ್ವಲರಾಗಿ ಕಳವಳಿಸಿದರು (೧೮). ಅಚ್ಯುತನೂ ಚಾಣೂರನೂ ಯಾವ ಯಾವ ಪ್ರಕಾರದಲ್ಲಿ ಮಲ್ಲವರಸೆಗಳಿಂದ ಹೊಡೆದಾಡಿದರೋ ಹಾಗೆಯೇ ಬಲದೇವನೂ ಮುಷ್ಟಿಕನೂ ಹೊಡೆದಾಡುತ್ತಿದ್ದರು (೧೯). ವಜ್ರಾಯುಧದ ಬಡಿತಗಳಂತೆ ಕಠೋರವಾದ ಶ್ರೀಕೃಷ್ಣನ ಗುದ್ದುಗಳಿಂದ ಚಾಣೂರನ ಸರ್ವಾಂಗಗಳೂ ಜಜ್ಜಿಹೋಗುತ್ತಿರಲು, ಅವನು ಮತ್ತೆ ಮತ್ತೆ ಬಳಲಿ ಹೈರಾಣಾದನು (೨೦).

---

* ತಂದೆತಾಯಿಗಳು = ವಸುದೇವದೇವಕಿಯರು. ಪುತ್ರವಧೆಯನ್ನು ಕಾಣಲೆಂದು ಉದ್ದೇಶಪೂರ್ವಕವಾಗಿಯೇ ಕಂಸನು ಅವರನ್ನು ಸಭೆಗೆ ಕರೆಸಿದ್ದನೆಂದು ಊಹಿಸಬೇಕು.

ಸ ಶ್ಯೇನವೇಗ ಉತ್ಪತ್ಯ ಮುಷ್ಟೀಕೃತ್ಯ ಕರಾವುಭೌ ।
ಭಗವಂತಂ ವಾಸುದೇವಂ ಕ್ರುದ್ಧೋ ವಕ್ಷಸ್ಯಬಾಧತ ॥ ೨೧

ನಾಚಲತ್ತತ್ಪ್ರಹಾರೇಣ ಮಾಲಾಹತ ಇವ ದ್ವಿಪಃ ।
ಬಾಹ್ವೋರ್ನಿಗೃಹ್ಯ ಚಾಣೂರಂ ಬಹುಶೋ ಭ್ರಾಮಯನ್ ಹರಿಃ ॥

ಭೂಪೃಷ್ಠೇ ಪೋಥಯಾಮಾಸ ತರಸಾ ಕ್ಷೀಣಜೀವಿತಮ್ ।
ವಿಸ್ರಸ್ತಾಕಲ್ಪಕೇಶಸ್ರಗಿಂದ್ರಧ್ವಜ ಇವಾಪತತ್ ॥ ೨೩

ತಥೈವ ಮುಷ್ಟಿಕಃ ಪೂರ್ವಂ ಸ್ವಮುಷ್ಟ್ಯಾಭಿಹತೇನ ವೈ ।
ಬಲಭದ್ರೇಣ ಬಲಿನಾ ತಲೇನಾಭಿಹತೋ ಭೃಶಮ್ ॥ ೨೪

ಪ್ರವೇಪಿತಃ ಸ ರುಧಿರಮುದ್ವಮನ್ ಮುಖತೋಽರ್ದಿತಃ ।
ವ್ಯಸುಃ ಪಪಾತೋರ್ವ್ಯುಪಸ್ಥೇ ವಾತಾಹತ ಇವಾಂಘ್ರಿಪಃ ॥ ೨೫

ತತಃ ಕೂಟಮನುಪ್ರಾಪ್ತಂ ರಾಮಃ ಪ್ರಹರತಾಂ ವರಃ ।
ಅವಧೀಲ್ಲೀಲಯಾ ರಾಜನ್ ಸಾವಜ್ಞಂ ವಾಮಮುಷ್ಟಿನಾ ॥ ೨೬

---

ಒಮ್ಮೆ ಅವನು ಎರಡು ಕೈಗಳನ್ನೂ ಮುಷ್ಟಿಗಟ್ಟಿ ಗಿಡಗದಂತೆ ರಭಸದಿಂದ ಎರಗಿ ವಾಸುದೇವನ ಎದೆಯಮೇಲೆ ಗುದ್ದಿದನು (೨೧). ಹೂಮಾಲೆಯಿಂದ ಹೊಡೆಯಲ್ಪಟ್ಟ ಗಜೇಂದ್ರನಂತೆ, ಆ ಗುದ್ದಿಗೆ ವಾಸುದೇವನು ಅಲ್ಲಾಡಲಿಲ್ಲ. ಅವನು ಚಾಣೂರನ ಎರಡು ಬಾಹುಗಳನ್ನೂ ಹಿಡಿದು ಅನೇಕ ಬಾರಿ ಗಿರ್ರನೆ ತಿರುಗಿಸಿ,ಅವನನ್ನು ವೇಗದಿಂದ ನೆಲದಮೇಲೆ ಬಡಿದನು. ಚಾಣೂರನ ಅಲಂಕಾರಗಳೂ ತಲೆಯಲ್ಲಿದ್ದ ಮಾಲೆಯೂ ಈಡಾಡಿ ಉಡಿದುಹೋಗಲು, ಇಂದ್ರಧ್ವಜದಂತೆ ಬಿದ್ದು ಅವನು ಅಸುವನ್ನು ತೊರೆದನು (೨೨–೨೩). ಹಾಗೆಯೇ ಮುಷ್ಟಿಕನು ಮುಷ್ಟಿಯಿಂದ ಮೊದಲು ಬಲಭದ್ರನನ್ನು ಗುದ್ದಲಾಗಿ, ಬಲಾಢ್ಯನಾದ ಆತನು ಬಲವಾಗಿ ತಿರುಗಿ ಗುದ್ದಿದನು. ಆ ಹೊಡೆತಕ್ಕೆ ನಡುಗಿ ತತ್ತರಿಸಿದ ಮುಷ್ಟಿಕನು ಬಾಯಿಂದ ನೆತ್ತರನ್ನು ಕಕ್ಕುತ್ತ, ಬಿರುಗಾಳಿಗೆ ಉರುಳಿದ ಮರದಂತೆ, ನೆಲದಮೇಲೆ ಸತ್ತುಬಿದ್ದನು (೨೪–೨೫). ಅನಂತರ ಮಲ್ಲಯುದ್ಧಕ್ಕೆ ಬಂದ ಕೂಟನೆಂಬ ಜಟ್ಟಿಯನ್ನು ಪರಾಕ್ರಮಿಯಾದ ಬಲರಾಮನು ಲೆಕ್ಕವಿಡದೆ

ತರ್ಹ್ಯೇವ ಹಿ ಶಲಃ ಕೃಷ್ಣಪದಾಪಹತಶೀರ್ಷಕಃ ।
ದ್ವಿಧಾ ವಿದೀರ್ಣಸ್ತೋಶಲಕ ಉಭಾವಪಿ ನಿಪೇತತುಃ ॥ ೨೭

ಚಾಣೂರೇ ಮುಷ್ಟಿಕೇ ಕೂಟೇ ಶಲೇ ತೋಶಲಕೇ ಹತೇ ।
ಶೇಷಾಃ ಪ್ರದುದ್ರುವುರ್ಮಲ್ಲಾಃ ಸರ್ವೇ ಪ್ರಾಣಪರೀಪ್ಸವಃ ॥ ೨೮

ಗೋಪಾನ್ ವಯಸ್ಯಾನಾಕೃಷ್ಯ ತೈಃ ಸಂಸೃಜ್ಯ ವಿಜಹ್ರತುಃ ।
ವಾದ್ಯಮಾನೇಷು ತೂರ್ಯೇಷು ವಲ್ಗಂತೌ ರುತನೂಪುರೌ ॥ ೨೯

ಜನಾಃ ಪ್ರಜಹೃಷುಃ ಸರ್ವೇ ಕರ್ಮಣಾ ರಾಮಕೃಷ್ಣಯೋಃ ।
ಋತೇ ಕಂಸಂ ವಿಪ್ರಮುಖ್ಯಾಃ ಸಾಧವಃ ಸಾಧು ಸಾಧ್ವಿತಿ ॥ ೩೦

ಹತೇಷು ಮಲ್ಲವರ್ಯೇಷು ವಿದ್ರುತೇಷು ಚ ಭೋಜರಾಟ್ ।
ನ್ಯವಾರಯತ್ ಸ್ವತೂರ್ಯಾಣಿ ವಾಕ್ಯಂ ಚೇದಮುವಾಚ ಹ ॥ ೩೧

ನಿಃಸಾರಯತ ದುರ್ವೃತ್ತೌ ವಸುದೇವಾತ್ಮಜೌ ಪುರಾತ್ ।
ಧನಂ ಹರತ ಗೋಪಾನಾಂ ನಂದಂ ಬಧ್ನೀತ ದುರ್ಮತಿಮ್ ॥ ೩೨

---

ಎಡಮುಷ್ಟಿಯಿಂದ ಗುದ್ದಿ ಲೀಲೆಯಿಂದ ಕೊಂದುಹಾಕಿದನು. ಆಗಲೇ ಶಲನು ಕೃಷ್ಣನ ಪಾದಪ್ರಹಾರದಿಂದ ತಲೆಯೊಡೆದೂ, ತೋಶಲಕನು ಎರಡು ಸೀಳಾಗಿ ಸೀಳಲ್ಪಟ್ಟೂ ಬಿದ್ದುಸತ್ತರು (೨೬–೨೭). ಚಾಣೂರ, ಮುಷ್ಟಿಕ, ಕೂಟ, ಶಲ, ತೋಶಲಕ—ಎಂಬ ಜಟ್ಟಿಗಳು ಈ ಪ್ರಕಾರ ಹತರಾಗಲು, ಉಳಿದ ಜಟ್ಟಿಗಳೆಲ್ಲರೂ ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿ ಓಡಿಹೋದರು ! (೨೮). ತರುವಾಯ ಶ್ರೀಕೃಷ್ಣಬಲಭದ್ರರು ತಮ್ಮ ಗೆಳೆಯರಾದ ಗೋಪಾಲರನ್ನು ಸೆಳೆದು ಅಪ್ಪಿಕೊಂಡು, ತಮಟೆಗಳು ಬಾರಿಸಲ್ಪಡುತ್ತಿರಲಾಗಿ ನೂಪುರಧ್ವನಿಯಾಗುವಂತೆ ಕುಣಿಯುತ್ತ ಕ್ರೀಡಿಸಿದರು (೨೯). ಬಲರಾಮ ಶ್ರೀಕೃಷ್ಣರ ಸಾಹಸ ಕಾರ್ಯವನ್ನು ವೀಕ್ಷಿಸಿ ಸಮಸ್ತಜನರೂ, ಕಂಸನೊಬ್ಬನನ್ನು ಬಿಟ್ಟು, ಹರ್ಷಿಸಿದರು. ವಿಪ್ರೋತ್ತಮರೂ ಸಜ್ಜನರೂ ' ಭಲೆ ! ಭಲೆ ! ' ಎಂದು ಹೊಗಳಿದರು (೩೦). ಪ್ರಧಾನಮಲ್ಲರು ಹತರಾದಮೇಲೆ ಉಳಿದ ಜಟ್ಟಿಗಳು ಓಡಿಹೋಗಲು, ಭೋಜಪತಿಯಾದ ಕಂಸನು ಬಾರಿಸುವ ವಾದ್ಯಗಳನ್ನು ತಡೆದು ಹೀಗೆ ಆಜ್ಞಾಪಿಸಿದನು : " ಖೂಳರಾದ ವಸುದೇವಪುತ್ರರನ್ನು ಪುರದಿಂದ ಹೊರದಬ್ಬಿರಿ ! ಗೊಲ್ಲರ ಆಸ್ತಿಯನ್ನು ಕಿತ್ತುಕೊಳ್ಳಿರಿ ! ದುರುಳನಾದ ನಂದಗೋಪನನ್ನು ಸೆರೆ

ವಸುದೇವಸ್ತು ದುರ್ಮೇಧಾ ಹನ್ಯತಾಮಾಶ್ವಸತ್ತಮಃ ।
ಉಗ್ರಸೇನಃ ಪಿತಾ ಚಾಪಿ ಸಾನುಗಃ ಪರಪಕ್ಷಗಃ ॥ ೩೩

ಏವಂ ವಿಕತ್ಥಮಾನೇ ವೈ ಕಂಸೇ ಪ್ರಕುಪಿತೋಽವ್ಯಯಃ ।
ಲಘಿಮ್ನೋತ್ಪತ್ಯ ತರಸಾ ಮಂಚಮುತ್ತುಂಗಮಾರುಹತ್ ॥ ೩೪

ತಮಾವಿಶಂತಮಾಲೋಕ್ಯ ಮೃತ್ಯುಮಾತ್ಮನ ಆಸನಾತ್ ।
ಮನಸ್ವೀ ಸಹಸೋತ್ಥಾಯ ಜಗೃಹೇ ಸೋಽಸಿಚರ್ಮಣೀ ॥ ೩೫

ತಂ ಖಡ್ಗಪಾಣಿಂ ವಿಚರಂತಮಾಶು
ಶ್ಯೇನಂ ಯಥಾ ದಕ್ಷಿಣಸವ್ಯಮಂಬರೇ ।
ಸಮಗ್ರಹೀದ್ ದುರ್ವಿಷಹೋಗ್ರತೇಜಾ
ಯಥೋರಗಂ ತಾರ್ಕ್ಷ್ಯಸುತಃ ಪ್ರಸಹ್ಯ ॥ ೩೬

ಪ್ರಗೃಹ್ಯ ಕೇಶೇಷು ಚಲತ್ಕಿರೀಟಂ
ನಿಪಾತ್ಯ ರಂಗೋಪರಿ ತುಂಗಮಂಚಾತ್ ।
ತಸ್ಯೋಪರಿಷ್ಟಾತ್ ಸ್ವಯಮಬ್ಜನಾಭಃ
ಪಪಾತ ವಿಶ್ವಾಶ್ರಯ ಆತ್ಮತಂತ್ರಃ ॥ ೩೭

---

ಹಿಡಿಯಿರಿ! (೩೧–೩೨). ಬುದ್ಧಿಗೇಡಿಯೂ ಪರಮನೀಚನೂ ಆದ ವಸುದೇವನನ್ನು ವಧಿಸಿರಿ! ವೈರಿಪಕ್ಷಕ್ಕೆ ಸೇರಿದ ತಂದೆಯಾದ ಉಗ್ರಸೇನನನ್ನು ಅವನ ಅನುಚರರೊಡನೆ ಕೊಲ್ಲಿರಿ!" ಎಂದನು (೩೩). ಹೀಗೆ ಕಂಸನು ವ್ಯರ್ಥವಾಗಿ ಗರ್ವದ ಮಾತನ್ನಾಡಲು, ಅವ್ಯಯನಾದ ವಾಸುದೇವನು ಕೆರಳಿದನು. ವೇಗದಿಂದ ಹೋಗಿ, ಕಂಸನು ಕುಳಿತಿದ್ದ ಉತ್ತುಂಗಮಂಚಕ್ಕೆ ಲಾಘವದಿಂದ ಅಡರಿದನು (೩೪). ತನಗೆ ಮೃತ್ಯುವಾಗಿ ಒರುತ್ತಿದ್ದ ಕೃಷ್ಣನನ್ನು ಧೀರನಾದ ಕಂಸನು ನೋಡಿ ಧಿಗ್ಗನೆ ಗದ್ದುಗೆಯಿಂದೆದ್ದು ಖಡ್ಗವನ್ನು ಸೆಳೆದು ಗುರಾಣಿಯನ್ನು ಹಿಡಿದನು (೩೫). ಖಡ್ಗಪಾಣಿಯಾದ ಕಂಸನು ಆಕಾಶದಲ್ಲಿ ಹಾರಾಡುವ ಗಿಡಗದಂತೆ ಬಲಕ್ಕೂ ಎಡಕ್ಕೂ ನೆಗೆದಾಡುತ್ತಿರಲು, ಅತ್ಯುಗ್ರತೇಜನಾದ ಕೃಷ್ಣನು, ಗರುಡನು ಹಾವನ್ನು ಹಠಾತ್ಕಾರದಿಂದ ಹಿಡಿಯುವಂತೆ ರಭಸದಿಂದ ನುಗ್ಗಿ ವಿಚಲಿತಕಿರೀಟನಾದ ಕಂಸನ ತಲೆಗೂದಲನ್ನು ಹಿಡಿದು, ಅವನನ್ನು ಉತ್ತುಂಗಮಂಚದಿಂದೆಳೆದು ರಂಗಸ್ಥಳಕ್ಕೆ ಉರುಳಿಸಿ ಅವನ ಮೇಲೆ ಧುಮುಕಿ

ತಂ ಸಂಪರೇತಂ ವಿಚಕರ್ಷ ಭೂಮೌ
ಹರಿರ್ಯಥೇಭಂ ಜಗತೋ ವಿಪಶ್ಯತಃ ।
ಹಾಹೇತಿ ಶಬ್ದಃ ಸುಮಹಾಂಸ್ತದಾಭೂ-
ದುದೀರಿತಃ ಸರ್ವಜನೈರ್ನರೇಂದ್ರ ॥ ೩೮

ಸ ನಿತ್ಯದೋದ್ವಿಗ್ನಧಿಯಾ ತಮೀಶ್ವರಂ
ಪಿಬನ್ ವದನ್ ವಾ ವಿಚರನ್ ಸ್ವಪನ್ ಶ್ವಸನ್ ।
ದದರ್ಶ ಚಕ್ರಾಯುಧಮಗ್ರತೋ ಯ-
ಸ್ತದೇವ ರೂಪಂ ದುರವಾಪಮಾಪ ॥ ೩೯

ತಸ್ಯಾನುಜಾ ಭ್ರಾತರೋಽಷ್ಟೌ ಕಂಕನ್ಯಗ್ರೋಧಕಾದಯಃ ।
ಅಭ್ಯಧಾವನ್ನಭಿಕ್ರುದ್ಧಾ ಭ್ರಾತುರ್ನಿರ್ವೇಶಕಾರಿಣಃ ॥ ೪೦

ತಥಾತಿರಭಸಾಂಸ್ತಾಂಸ್ತು ಸಂಯತ್ತಾನ್ ರೋಹಿಣೀಸುತಃ ।
ಅಹನ್ ಪರಿಘಮುದ್ಯಮ್ಯ ಪಶೂನಿವ ಮೃಗಾಧಿಪಃ ॥ ೪೧

ನೇದುರ್ದುಂದುಭಯೋ ವ್ಯೋಮ್ನಿ ಬ್ರಹ್ಮೇಶಾದ್ಯಾ ವಿಭೂತಯಃ ।
ಪುಷ್ಪೈಃ ಕಿರಂತಸ್ತಂ ಪ್ರೀತಾಃ ಶಶಂಸುರ್ನನೃತುಃ ಸ್ತ್ರಿಯಃ ॥ ೪೨

---

ದನು! (೩೬–೩೭). ಬಿದ್ದು ಅಸುನೀಗಿದ ಕಂಸನನ್ನು ವಿಶ್ವಾಶ್ರಯನೂ ಸ್ವತಂತ್ರನೂ ಆದ ಪದ್ಮನಾಭನು, ಸಿಂಹವು ಆನೆಯನ್ನೆಳೆಯುವಂತೆ ಎಲ್ಲರೆದುರಿಗೆ ದರದರನೆ ಎಳೆದನು. ಸಕಲಜನರೂ 'ಹಾ! ಹಾ!' ಎಂದು ಕೂಗಾಡಿದರು (೩೮). ನರೇಂದ್ರ–ಪರೀಕ್ಷಿತ, ಭೀತಚಿತ್ತನಾಗಿದ್ದ ಕಂಸನು ಕುಡಿಯುವಾಗ, ನುಡಿಯುವಾಗ, ನಡೆಯುವಾಗ, ಮಲಗಿದಾಗ, ಉಸಿರುಬಿಡುವಾಗ ಸದಾ ತನ್ನೆದುರಿಗೆ ಚಕ್ರಪಾಣಿಯಾದ ಆ ಈಶನನ್ನು ಕಾಣುತ್ತಿದ್ದನಾದ್ದರಿಂದ ಅನ್ಯದುರ್ಲಭವಾದ ಆತನ ಸಾರೂಪ್ಯವನ್ನೇ ಪಡೆದನು (೩೯). ಬಳಿಕ ಕಂಸನ ತಮ್ಮಂದಿರಾದ ಕಂಕ, ನ್ಯಗ್ರೋಧಕ–ಮೊದಲಾದ ಎಂಟು ಜನರು ಅಣ್ಣನ ವಧೆಗೆ ಸೇಡುತೀರಿಸಿಕೊಳ್ಳಬೇಕೆಂದು ಸಿಟ್ಟಿನಿಂದ ಓಡಿಬಂದರು. ಅತಿರಭಸದಿಂದ ಬಂದು ಆಕ್ರಮಣಮಾಡಿದ ಅವರನ್ನು ರೋಹಿಣೀಸುತನಾದ ಬಲಭದ್ರನು ಪರಿಘಾಯುಧವನ್ನು ಹಿಡಿದು, ಸಿಂಹವು ಪಶುಗಳನ್ನು ಕೊಲ್ಲುವಂತೆ ಬಡಿದು ಕೊಂದನು (೪೦–೪೧). ಗಗನದಲ್ಲಿ ದೇವದುಂದುಭಿಗಳು ಮೊಳಗಿದವು.

ತೇಷಾಂ ಸ್ತ್ರಿಯೋ ಮಹಾರಾಜ ಸುಹೃನ್ಮರಣದುಃಖಿತಾಃ ।
ತತ್ರಾಭೀಯುರ್ವಿನಿಷ್ಕ್ರಂತ್ಯಃ ಶೀರ್ಷಾಣ್ಯಶ್ರುವಿಲೋಚನಾಃ ॥ ೪೩

ಶಯಾನಾನ್ ವೀರಶಯ್ಯಾಯಾಂ ಪತೀನಾಲಿಂಗ್ಯ ಶೋಚತೀಃ ।
ವಿಲೇಪುಃ ಸುಸ್ವರಂ ನಾರ್ಯೋ ವಿಸೃಜಂತ್ಯೋ ಮುಹುಃ ಶುಚಃ ॥

ಹಾ ನಾಥ ಪ್ರಿಯ ಧರ್ಮಜ್ಞ ಕರುಣಾನಾಥವತ್ಸಲ ।
ತ್ವಯಾ ಹತೇನ ನಿಹತಾ ವಯಂ ತೇ ಸಗೃಹಪ್ರಜಾಃ ॥ ೪೫

ತ್ವಯಾ ವಿರಹಿತಾ ಪತ್ಯಾ ಪುರೀಯಂ ಪುರುಷರ್ಷಭ ।
ನ ಶೋಭತೇ ವಯಮಿವ ನಿವೃತ್ತೋತ್ಸವಮಂಗಲಾ ॥ ೪೬

ಅನಾಗಸಾಂ ತ್ವಂ ಭೂತಾನಾಂ ಕೃತವಾನ್ ದ್ರೋಹಮುಲ್ಬಣಮ್ ।
ತೇನೇಮಾಂ ಭೋ ದಶಾಂ ನೀತೋ ಭೂತಧ್ರುಕ್ ಕೋ
ಲಭೇತ ಶಮ್ ॥ ೪೭

ಸರ್ವೇಷಾಮಿಹ ಭೂತಾನಾಮೇಷ ಹಿ ಪ್ರಭವಾಪ್ಯಯಃ ।
ಗೋಪ್ತಾ ಚ ತದವಧ್ಯಾಯೀ ನ ಕ್ವಚಿತ್ ಸುಖಮೇಧತೇ ॥ ೪೮

---

ಬ್ರಹ್ಮ, ಈಶ್ವರ–ಮೊದಲಾದ ವಿಭೂತಿಪುರುಷರು ಹೂಮಳೆಗರೆಯುತ್ತ ಅವನನ್ನು ಸ್ತುತಿಸಿದರು. ದೇವಸ್ತ್ರೀಯರು ನರ್ತಿಸಿದರು (೪೨). ಮಹಾರಾಜ, ಹತರಾದ ಕಂಸಾದಿಗಳ ಪತ್ನಿಯರು ತಮ್ಮ ಪ್ರಿಯರ ಮರಣದಿಂದ ದುಃಖಿತರಾಗಿ ಕಂಬನಿದುಂಬಿ ತಲೆಯನ್ನು ಕುಟ್ಟಿಕೊಳ್ಳುತ್ತ ಅಲ್ಲಿಗೆ ಬಂದರು. ವೀರಶಯ್ಯೆಯಲ್ಲಿ ಹತರಾಗಿ ಮಲಗಿದ್ದ ತಮ್ಮ ಗಂಡಂದಿರನ್ನು ಆಲಂಗಿಸಿಕೊಂಡು ಶೋಕತಪ್ತರಾಗಿ ಕಣ್ಣೀರುಸುರಿಸುತ್ತ ಗಟ್ಟಿಯಾಗಿ ಅತ್ತರು (೪೩-೪೪). "ಹಾ ನಾಥ, ಪ್ರಿಯ, ಧರ್ಮಜ್ಞ, ಕರುಣಾಳು, ಅನಾಥವತ್ಸಲ, ನೀನು ಮೃತನಾದ ಮೇಲೆ ನಿನ್ನವರಾದ ನಾವೂ ಪ್ರಜೆಗಳೂ ಸತ್ತಂತೆಯೇ ಸರಿ. ಓ ಪುರುಷೋತ್ತಮ, ಒಡೆಯನಾದ ನೀನು ಹತನಾದ ಮೇಲೆ ಮಂಗಳೋತ್ಸವಶೂನ್ಯವಾದ ಈ ನಗರಿಯು ನಮ್ಮಂತೆಯೇ ಶೋಭಿಸದು (೪೫–೪೬). ಯಾವ ತಪ್ಪನ್ನೂ ಮಾಡದ ಜನರಿಗೆ ನೀನು ಘೋರವಾದ ದ್ರೋಹವನ್ನೆಸಗಿದೆ. ಅದರಿಂದ ನಿನಗೆ ಈ ಅವಸ್ಥೆ ಬಂದಿತು. ಜೀವದ್ರೋಹಿಗೆ ಸುಖವಾದೀತೆ? (೪೭). ಕೃಷ್ಣನು ಸಕಲಭೂತಗಳ ಜನ್ಮಲಯಗಳಿಗೆ ಕಾರಣನಾದವನು. ಅವುಗಳ ರಕ್ಷಕ. ಅವನನ್ನು ನಿಂದಿಸ

ಶ್ರೀಶುಕ ಉವಾಚ—

**ರಾಜಯೋಷಿತ ಆಶ್ವಾಸ್ಯ ಭಗವಾನ್ ಲೋಕಭಾವನಃ ।**
**ಯಾಮಾಹುರ್ಲೌಕಿಕೀಂ ಸಂಸ್ಥಾಂ ಹತಾನಾಂ ಸಮಕಾರಯತ್ ॥**

**ಮಾತರಂ ಪಿತರಂ ಚೈವ ಮೋಚಯಿತ್ವಾಥ ಬಂಧನಾತ್ ।**
**ಕೃಷ್ಣರಾಮೌ ವವಂದಾತೇ ಶಿರಸಾಽಽಸ್ಪೃಶ್ಯ ಪಾದಯೋಃ ॥ ೫೦**

**ದೇವಕೀ ವಸುದೇವಶ್ಚ ವಿಜ್ಞಾಯ ಜಗದೀಶ್ವರೌ ।**
**ಕೃತಸಂವಂದನೌ ಪುತ್ರೌ ಸಸ್ವಜಾತೇ ನ ಶಂಕಿತೌ ॥ ೫೧**

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಚತುಶ್ಚತ್ವಾರಿಂಶಾಧ್ಯಾಯಃ



ತಕ್ಕವನು ಎಂದಿಗೂ ಸುಖದಿಂದ ವರ್ಧಿಸಲಾರ" ಎಂದು ವಿಲಪಿಸಿದರು (೪೮). ಭೂತಭಾವನನಾದ ಭಗವಂತನು ಆ ರಾಜಸ್ತ್ರೀಯರನ್ನು ಸಂತೈಸಿ, ಲೋಕ ವಿದಿತವಾದ ಯಾವ ಉತ್ತರಕ್ರಿಯೆಯುಂಟೋ ಅದನ್ನು ಹತರಾದವರಿಗೆ ಮಾಡಿಸಿದನು (೪೯). ತರುವಾಯ ರಾಮಕೃಷ್ಣರು ತಾಯಿತಂದೆಗಳನ್ನು ಸೆರೆಯಿಂದ ಬಿಡಿಸಿ, ಅವರ ಪಾದಗಳಿಗೆ ತಲೆಯನ್ನು ಮುಟ್ಟಿಸಿ ನಮಸ್ಕರಿಸಿದರು. ಹಾಗೆ ವಂದಿಸಿದ ಪುತ್ರರು ಜಗದೀಶ್ವರರೆಂದು ಶಂಕಿಸಿದ ದೇವಕಿಯೂ ವಸುದೇವನೂ ಅವರನ್ನು ಆಲಿಂಗಿಸಿಕೊಳ್ಳದೆ ಇದ್ದರು (೫೦–೫೧).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತುನಾಲ್ಕನೆಯ ಅಧ್ಯಾಯ



## ಪಂಚಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

**ಪಿತರಾವುಪಲಬ್ಧಾರ್ಥೌ ವಿದಿತ್ವಾ ಪುರುಷೋತ್ತಮಃ ।**
**ಮಾ ಭೂದಿತಿ ನಿಜಾಂ ಮಾಯಾಂ ತತಾನ ಜನಮೋಹಿನೀಮ್ ॥ ೧**

**ಉವಾಚ ಪಿತರಾವೇತ್ಯ ಸಾಗ್ರಜಃ ಸಾತ್ವತರ್ಷಭಃ ।**
**ಪ್ರಶ್ರಯಾವನತಃ ಪ್ರೀಣನ್ನಂಬ ತಾತೇತಿ ಸಾದರಮ್ ॥ ೨**

**ನಾಸ್ಮತ್ತೋ ಯುವಯೋಸ್ತಾತ ನಿತ್ಯೋತ್ಕಂಠಿತಯೋರಪಿ ।**
**ಬಾಲ್ಯಪೌಗಂಡಕೈಶೋರಾಃ ಪುತ್ರಾಭ್ಯಾಮಭವನ್ ಕ್ವಚಿತ್ ॥ ೩**

### ಅಧ್ಯಾಯ ೪೫

ದೇವಕೀವಸುದೇವರನ್ನು ಸಂತೈಸುವುದು. ಶ್ರೀಕೃಷ್ಣಬಲರಾಮರ ಉಪನಯನ ವಿದ್ಯಾಭ್ಯಾಸ. ಗುರುವಿನ ಮೃತಪುತ್ರನನ್ನು ತಂದುಕೊಡುವುದು

ಆಗ ನಾವೀರ್ವರು ಈಶ್ವರರೆಂಬುದು ನಮ್ಮ ತಾಯಿತಂದೆಗಳಿಗೆ ಗೊತ್ತಾಗಿದೆ—ಎಂದು ತಿಳಿದು ಪುರುಷೋತ್ತಮನು, ಹೀಗಾಗದಿರಲಿ—ಎಂಬ ಆಶಯದಿಂದ ಅವರ ಮೇಲೆ ಜನಮೋಹಿನಿಯಾದ ನಿಜಮಾಯೆಯನ್ನು ಬೀರಿದನು * (೧). ಆ ಯದುಪುಂಗವನು ಅಣ್ಣನಾದ ಬಲರಾಮನೊಡನೆ ತಾಯಿತಂದೆಗಳ ಬಳಿಗೆ ಹೋಗಿ ವಿನಯದಿಂದ ವಂದಿಸಿ ಆನಂದಗೊಳಿಸುತ್ತ ಆದರದಿಂದ ನುಡಿದನು (೨): "ಅಮ್ಮ, ಅಪ್ಪ, ನಮಗಾಗಿ ನೀವು ಸದಾ ತೀವ್ರೇಚ್ಛೆಯುಳ್ಳವರಾಗಿದ್ದರೂ ನಮ್ಮ ಬಾಲ್ಯ, ಪೌಗಂಡ, ಕೈಶೋರಾವಸ್ಥೆಗಳಿಂದಾಗುವ† ಸುಖದ

* "ನಾನು ಪ್ರಸನ್ನನಾದರೆ ಇವರಿಗೆ ಈಶ್ವರಜ್ಞಾನ ಸುಲಭ. ನನ್ನಲ್ಲಿ ಪುತ್ರಪ್ರೇಮವಾದರೋ ಇವರಿಗೆ ದುರ್ಲಭ. ಈಗ ಪುತ್ರನೆಂದು ತಿಳಿದು ಸಂತೋಷಿಸುತ್ತಿರಲಿ" ಎಂದು ಅಭಿಪ್ರಾಯ.

† ಹದಿನಾರು ವರ್ಷದ ಒಳಗೆ ವಯೋಭೇದದಿಂದಾಗುವ ಮೂರು ಅವಸ್ಥೆಗಳು.

ನ ಲಬ್ಧೋ ದೈವಹತಯೋರ್ವಾಸೋ ನೌ ಭವದಂತಿಕೇ ।
ಯಾಂ ಬಾಲಾಃ ಪಿತೃಗೇಹಸ್ಥಾ ವಿಂದಂತೇ ಲಾಲಿತಾ ಮುದಮ್ ॥ ೪

ಸರ್ವಾರ್ಥಸಂಭವೋ ದೇಹೋ ಜನಿತಃ ಪೋಷಿತೋ ಯತಃ ।
ನ ತಯೋರ್ಯಾತಿ ನಿರ್ವೇಶಂ ಪಿತ್ರೋರ್ಮರ್ತ್ಯಃ ಶತಾಯುಷಾ ॥

ಯಸ್ತಯೋರಾತ್ಮಜಃ ಕಲ್ಪ ಆತ್ಮನಾ ಚ ಧನೇನ ಚ ।
ವೃತ್ತಿಂ ನ ದದ್ಯಾತ್ತಂ ಪ್ರೇತ್ಯ ಸ್ವಮಾಂಸಂ ಖಾದಯಂತಿ ಹಿ ॥ ೬

ಮಾತರಂ ಪಿತರಂ ವೃದ್ಧಂ ಭಾರ್ಯಾಂ ಸಾಧ್ವೀಂ ಸುತಂ ಶಿಶುಮ್ ।
ಗುರುಂ ವಿಪ್ರಂ ಪ್ರಪನ್ನಂ ಚ ಕಲ್ಪೋಽಬಿಭ್ರಚ್ಛ್ವಸನ್ ಮೃತಃ ॥ ೭

ತನ್ನಾವಕಲ್ಪಯೋಃ ಕಂಸಾನ್ನಿತ್ಯಮುದ್ವಿಗ್ನಚೇತಸೋಃ ।
ಮೋಘಮೇತೇ ವ್ಯತಿಕ್ರಾಂತಾ ದಿವಸಾ ವಾಮನರ್ಚತೋಃ ॥ ೮

---

ಪ್ರಾಪ್ತಿ ನಮ್ಮಿಂದ ನಿಮಗಿಲ್ಲವಾಯಿತು (೩). ದುರದೃಷ್ಟಶಾಲಿಗಳಾದ ನಮಗೆ ನಿಮ್ಮ ಬಳಿ ವಾಸಮಾಡುವ ಯೋಗವಿರಲಿಲ್ಲ. ಬಾಲಕರು ತಂದೆಯ ಮನೆಯಲ್ಲಿ ಲಾಲಿತರಾಗಿ ಪಡುವ ಆನಂದ ನಮಗೆ ಲಭ್ಯವಾಗಲಿಲ್ಲ (೪). ಧರ್ಮಾದಿಸಕಲ ಪುರುಷಾರ್ಥಗಳಿಗೂ ಕಾರಣವಾದ ಈ ದೇಹವು ಯಾರಿಂದ ಹುಟ್ಟಿ ಪೋಷಿತ ವಾಗಿರುವುದೋ ಅಂಥ ತಾಯಿತಂದೆಗಳ ಋಣವನ್ನು ತೀರಿಸಲು ನೂರು ವರ್ಷ ಶ್ರಮಿಸಿದರೂ ಮನುಷ್ಯನಿಂದಾಗುವುದಿಲ್ಲ (೫). ಯಾವ ಮಗನು ದೇಹ ದಿಂದಲೂ ಧನದಿಂದಲೂ ಸಮರ್ಥನಾಗಿದ್ದರೂ ತಾಯಿತಂದೆಗಳನ್ನು ಸೇವಿಸುತ್ತ ಅವರ ಜೀವಿಕೆಯನ್ನು ನಡೆಸುವುದಿಲ್ಲವೋ, ಅವನಿಂದ ಲೋಕಾಂತರದಲ್ಲಿ ತನ್ನ ಮಾಂಸವನ್ನೇ ತಿನ್ನಿಸುತ್ತಾರೆ! (೬). ವೃದ್ಧರಾದ ತಾಯಿತಂದೆಗಳನ್ನೂ ಸಾಧ್ವಿಯಾದ ಹೆಂಡತಿಯನ್ನೂ ಚಿಕ್ಕವಯಸ್ಸಿನ ಮಗನನ್ನೂ ಗುರುವಿಪ್ರರನ್ನೂ ಶರಣಾಗತನನ್ನೂ ತಾನು ಸಮರ್ಥನಾಗಿದ್ದರೂ ಪಾಲಿಸದಿದ್ದರೆ, ಅವನು ಉಸಿರಾಡುವ ಹೆಣವೇ ಸರಿ (೭). ಕಂಸನಿಂದ ಸದಾ ಭೀತಚಿತ್ತರಾದ ನಾವು ಅಸಮರ್ಥರಾದ್ದರಿಂದ ಇದುವರೆಗೆ ನಿಮ್ಮ ಸೇವೆಯನ್ನು ಮಾಡಲಾಗಲಿಲ್ಲ. ಹೀಗೆ ನಮ್ಮೀರ್ವರ ದಿನಗಳು ವ್ಯರ್ಥವಾಗಿ ಕಳೆದುಹೋದವು (೮).

ತತ್ ಕ್ಷಂತುಮರ್ಹಥಸ್ತಾತ ಮಾತರ್ನೌ ಪರತಂತ್ರಯೋಃ ।
ಅಕುರ್ವತೋರ್ವಾಂ ಶುಶ್ರೂಷಾಂ ಕ್ಲಿಷ್ಟಯೋರ್ದುರ್ಹೃದಾ ಭೃಶಮ್ ॥ ೯

ಶ್ರೀಶುಕ ಉವಾಚ—

ಇತಿ ಮಾಯಾಮನುಷ್ಯಸ್ಯ ಹರೇರ್ವಿಶ್ವಾತ್ಮನೋ ಗಿರಾ ।
ಮೋಹಿತಾವಂಕಮಾರೋಪ್ಯ ಪರಿಷ್ವಜ್ಯಾಪತುರ್ಮುದಮ್ ॥ ೧೦

ಸಿಂಚಂತಾವಶ್ರುಧಾರಾಭಿಃ ಸ್ನೇಹಪಾಶೇನ ಚಾವೃತೌ ।
ನ ಕಿಂಚಿದೂಚತೂ ರಾಜನ್ ಬಾಷ್ಪಕಂಠೌ ವಿಮೋಹಿತೌ ॥ ೧೧

ಏವಮಾಶ್ವಾಸ್ಯ ಪಿತರೌ ಭಗವಾನ್ ದೇವಕೀಸುತಃ ।
ಮಾತಾಮಹಂ ತೂಗ್ರಸೇನಂ ಯದೂನಾಮಕರೋನ್ನೃಪಮ್ ॥ ೧೨

ಆಹ ಚಾಸ್ಮಾನ್ ಮಹಾರಾಜ ಪ್ರಜಾಶ್ಚಾಜ್ಞಪ್ತುಮರ್ಹಸಿ ।
ಯಯಾತಿಶಾಪಾದ್ ಯದುಭಿರ್ನಾಸಿತವ್ಯಂ ನೃಪಾಸನೇ ॥ ೧೩

---

ಆದ್ದರಿಂದ, ಓ ತಂದೆ, ಅಮ್ಮ, ಶತ್ರುವಿನಿಂದ ಬಹಳ ಕಷ್ಟಕ್ಕೊಳಗಾದ ನಿಮ್ಮ ಶುಶ್ರೂಷೆಯನ್ನು ಪರತಂತ್ರರಾದ ನಮಗೆ ಮಾಡಲಾಗಲಿಲ್ಲ. ನಮ್ಮನ್ನು ಮನ್ನಿಸಿರಿ" ಎಂದನು (೯). ಶ್ರೀಹರಿಯೂ ವಿಶ್ವಾತ್ಮನೂ ಆದ ಈ ಮಾಯಾ ಮನುಷ್ಯನ ಮಾತಿನ ಮೋಡಿಗೆ ಮರುಳಾದ ದೇವಕೀವಸುದೇವರು ಅವರಿಬ್ಬರನ್ನು ತೊಡೆಯ ಮೇಲೆ ಕುಳ್ಳಿರಿಸಿ ಅಪ್ಪಿಕೊಂಡು ಆನಂದಿಸಿದರು (೧೦). ಸ್ನೇಹಪಾಶದಿಂದ ಆವೃತರಾದ ಅವರು ಕಣ್ಣೀರುಧಾರೆಗಳನ್ನು ಹರಿಸಿ ಮಕ್ಕಳನ್ನು ನೆನಿಸಿದರೇ ಹೊರತು ಒಂದು ಮಾತನ್ನೂ ಆಡಲಿಲ್ಲ. ಪರೀಕ್ಷಿತರಾಜ, ಕೊರಳು ಉಬ್ಬಿಬಂದು ಗದ್ಗದಿತರಾಗಿ ಪರವಶರಾದ ಅವರಿಗೆ ಮಾತಾಡಲು ಸಾಧ್ಯವಾಗಲಿಲ್ಲ (೧೧). ಹೀಗೆ ಭಗವಾನ್ ದೇವಕೀಸುತನು ತಾಯಿತಂದೆಗಳನ್ನು ಸಂತೈಸಿ, ಮಾತಾಮಹನಾದ ಉಗ್ರಸೇನನನ್ನು ರಾಜನನ್ನಾಗಿ ಮಾಡಿ, ಅವನೇ ಯಾದವರ ಪತಿಯೆಂದು ಗೊತ್ತುಮಾಡಿದನು (೧೨). ಮತ್ತು ಉಗ್ರಸೇನನನ್ನು ಕುರಿತು "ಮಹಾರಾಜ, ಪ್ರಜೆಗಳಾದ ನಮಗೆ ನೀನು ಆಜ್ಞೆಯನ್ನೀಯಬಹುದು. ಯಯಾತಿಶಾಪದ ದೆಸೆಯಿಂದ ಯದುವಂಶೀಯರು ಸಿಂಹಾಸನದಲ್ಲಿ ಕುಳಿತುಕೊಳ್ಳುವಂತಿಲ್ಲ (೧೩).

**ಮಯಿ ಭೃತ್ಯ ಉಪಾಸೀನೇ ಭವತೋ ವಿಬುಧಾದಯಃ ।**
**ಬಲಿಂ ಹರಂತ್ಯವನತಾಃ ಕಿಮುತಾನ್ಯೇ ನರಾಧಿಪಾಃ ॥ ೧೪**

**ಸರ್ವಾನ್‌ಸ್ವಾನ್ ಜ್ಞಾತಿಸಂಬಂಧಾನ್ ದಿಗ್ಭ್ಯಃ ಕಂಸಭಯಾದ್ಗತಾನ್।**
**ಯದುವೃಷ್ಣ್ಯಂಧಕಮಧುದಾಶಾರ್ಹಕುಕುರಾದಿಕಾನ್ ॥ ೧೫**

**ಸಭಾಜಿತಾನ್ ಸಮಾಶ್ವಾಸ್ಯ ವಿದೇಶಾವಾಸಕರ್ಶಿತಾನ್ ।**
**ನ್ಯವಾಸಯತ್ ಸ್ವಗೇಹೇಷು ವಿತ್ತೈಃ ಸಂತರ್ಪ್ಯ ವಿಶ್ವಕೃತ್ ॥ ೧೬**

**ಕೃಷ್ಣಸಂಕರ್ಷಣಭುಜೈರ್ಗುಪ್ತಾ ಲಬ್ಧಮನೋರಥಾಃ ।**
**ಗೃಹೇಷು ರೇಮಿರೇ ಸಿದ್ಧಾಃ ಕೃಷ್ಣರಾಮಗತಜ್ವರಾಃ ॥ ೧೭**

**ವೀಕ್ಷಂತೋಽಹರಹಃ ಪ್ರೀತಾ ಮುಕುಂದವದನಾಂಬುಜಮ್ ।**
**ನಿತ್ಯಂ ಪ್ರಮುದಿತಂ ಶ್ರೀಮತ್ ಸದಯಸ್ಮಿತವೀಕ್ಷಣಮ್ ॥ ೧೮**

**ತತ್ರ ಪ್ರವಯಸೋಽಪ್ಯಾಸನ್ ಯುವಾನೋಽತಿಬಲೌಜಸಃ ।**
**ಪಿಬಂತೋಽಕ್ಷೈರ್ಮುಕುಂದಸ್ಯ ಮುಖಾಂಬುಜಸುಧಾಂ ಮುಹುಃ ॥**

---

ನಾನು ಕಿಂಕರನಾಗಿ ನಿನ್ನ ಸೇವೆ ಮಾಡುವಾಗ ದೇವೇಂದ್ರಾದಿಗಳೇ ತಲೆಬಾಗಿ ನಿನಗೆ ಕಪ್ಪವನ್ನೀಯುವರು! ಇನ್ನುಳಿದ ನೃಪಾಲರ ಪಾಡೇನು?" ಎಂದನು (೧೪). ಆಮೇಲೆ ವಿಶ್ವಕರ್ತನಾದ ಶ್ರೀಕೃಷ್ಣನು, ಕಂಸಭಯದಿಂದ ದಿಕ್ಕು ದಿಕ್ಕುಗಳಿಗೆ ಓಡಿಹೋಗಿ ವಿದೇಶವಾಸದಿಂದ ಕಷ್ಟಕ್ಕೆ ಸಿಕ್ಕಿದ್ದ ಯದು, ವೃಷ್ಣಿ, ಅಂಧಕ, ಮಧು, ದಾಶಾರ್ಹ, ಕುಕುರವಂಶೀಯರಾದ ತನ್ನ ಬಂಧುಗಳನ್ನೂ ಸಂಬಂಧಿಗಳನ್ನೂ ಕರೆಸಿ ಸಮಾಧಾನಪಡಿಸಿ ಧನಾದಿಗಳನ್ನು ಕೊಟ್ಟು ತಮ್ಮ ತಮ್ಮ ಗೃಹಗಳಲ್ಲಿ ನೆಲೆಗೊಳಿಸಿದನು (೧೫–೧೬). ಶ್ರೀಕೃಷ್ಣಸಂಕರ್ಷಣರ ಭುಜಬಲದಿಂದ ಸಂರಕ್ಷಿತರಾದ ಪ್ರಜೆಗಳು ಅವರಿಂದ ಕಷ್ಟವನ್ನು ನೀಗಿಕೊಂಡು ಇಷ್ಟಾರ್ಥವನ್ನು ಪಡೆದು ಸಮೃದ್ಧರಾಗಿ ಮನೆಗಳಲ್ಲಿ ಸಂತೋಷದಿಂದಿದ್ದರು (೧೭). ಸದಾ ಪ್ರಫುಲ್ಲವೂ ಕೃಪಾಮಯವಾದ ನಗುನೋಟಗಳಿಂದ ಸಹಿತವೂ ಕಾಂತಿಯುಕ್ತವೂ ಆದ ಮುಕುಂದನ ವದನಾಂಬುಜವನ್ನು ಪ್ರತಿದಿನವೂ ನೋಡಿ ಪ್ರಜೆಗಳು ಪ್ರೀತರಾಗುತ್ತಿದ್ದರು. ಮಥುರೆಯಲ್ಲಿ ಮುದುಕರೂ ಸಹ ಮುಕುಂದನ ಮುಖಾಂಬುಜದ ಅಮೃತವನ್ನು ಮತ್ತೆ ಮತ್ತೆ ಕುಡಿದು, ಬಲಶಾಲಿಗಳೂ ಓಜಸ್ವಿಗಳೂ ಆದ ತರುಣರಾದರು! (೧೮–೧೯).

**ಅಥ ನಂದಂ ಸಮಾಸಾದ್ಯ ಭಗವಾನ್ ದೇವಕೀಸುತಃ ।**
**ಸಂಕರ್ಷಣಶ್ಚ ರಾಜೇಂದ್ರ ಪರಿಷ್ವಜ್ಯೇದಮೂಚತುಃ ॥ ೨೦**

**ಪಿತರ್ಯುವಾಭ್ಯಾಂ ಸ್ನಿಗ್ಧಾಭ್ಯಾಂ ಪೋಷಿತೌ ಲಾಲಿತೌ ಭೃಶಮ್ ।**
**ಪಿತ್ರೋರಭ್ಯಧಿಕಾ ಪ್ರೀತಿರಾತ್ಮಜೇಷ್ವಾತ್ಮನೋಽಪಿ ಹಿ ॥ ೨೧**

**ಸ ಪಿತಾ ಸಾ ಚ ಜನನೀ ಯೌ ಪುಷ್ಣೀತಾಂ ಸ್ವಪುತ್ರವತ್ ।**
**ಶಿಶೂನ್ ಬಂಧುಭಿರುತ್ಸೃಷ್ಟಾನಕಲ್ಪೈಃ ಪೋಷರಕ್ಷಣೇ ॥ ೨೨**

**ಯಾತ ಯೂಯಂ ವ್ರಜಂ ತಾತ ವಯಂ ಚ ಸ್ನೇಹದುಃಖಿತಾನ್ ।**
**ಜ್ಞಾತೀನ್ ವೋ ದ್ರಷ್ಟುಮೇಷ್ಯಾಮೋ ವಿಧಾಯ ಸುಹೃದಾಂ ಸುಖಮ್ ॥ ೨೩**

**ಏವಂ ಸಾಂತ್ವಯ್ಯ ಭಗವಾನ್ ನಂದಂ ಸವ್ರಜಮಚ್ಯುತಃ ।**
**ವಾಸೋಽಲಂಕಾರಕುಪ್ಯಾದ್ಯೈರರ್ಹಯಾಮಾಸ ಸಾದರಮ್ ॥ ೨೪**

**ಇತ್ಯುಕ್ತಸ್ತೌ ಪರಿಷ್ವಜ್ಯ ನಂದಃ ಪ್ರಣಯವಿಹ್ವಲಃ ।**
**ಪೂರಯನ್ನಶ್ರುಭಿರ್ನೇತ್ರೇ ಸಹ ಗೋಪೈರ್ವ್ರಜಂ ಯಯೌ ॥ ೨೫**

---

ಪರೀಕ್ಷಿತರಾಜ, ಆಮೇಲೆ ಶ್ರೀಕೃಷ್ಣನೂ ಬಲಭದ್ರನೂ ನಂದನ ಬಳಿಗೆ ಬಂದು ಅವನನ್ನು ಆಲಿಂಗಿಸಿಕೊಂಡು "ತಂದೆಯೆ, ಸ್ನೇಹಪೂರ್ಣರಾದ ನೀವು ನಮ್ಮನ್ನು ಚೆನ್ನಾಗಿ ಲಾಲಿಸಿ ಪೋಷಿಸಿದ್ದೀರಿ. ತಂದೆತಾಯಿಗಳಿಗೆ ತಮಗಿಂತಲೂ ತಮ್ಮ ಮಕ್ಕಳ ಮೇಲೆ ಅಧಿಕವಾದ ಪ್ರೀತಿ ಇರುತ್ತದೆ (೨೦–೨೧). ಶಿಶುಗಳ ಪಾಲನೆಪೋಷಣೆಗಳಲ್ಲಿ ಅಸಮರ್ಥರಾದ ಬಂಧುಗಳು ಪರಿತ್ಯಜಿಸಿದಾಗ, ಆ ಶಿಶುಗಳನ್ನು ತಮ್ಮ ಮಕ್ಕಳಂತೆ ಯಾರು ಪೋಷಿಸುವರೋ ಅವರೇ ತಾಯಿತಂದೆಗಳು (೨೨). ಓ ತಂದೆಯೆ, ಈಗ ನೀವು ವ್ರಜಕ್ಕೆ ಹೋಗಿರಿ. ಇಲ್ಲಿರುವ ಆಪ್ತರ ಯೋಗಕ್ಷೇಮಗಳಿಗೆ ವ್ಯವಸ್ಥೆಯನ್ನು ಮಾಡಿ, ಸ್ನೇಹವಶದಿಂದ ದುಃಖಿತರಾಗಿರುವ ಬಂಧುಗಳಾದ ನಿಮ್ಮೆಲ್ಲರನ್ನೂ ನೋಡಲು ಬರುತ್ತೇವೆ" ಎಂದು ನುಡಿದರು (೨೩). ಭಗವಾನ್ ಅಚ್ಯುತನು ಹೀಗೆ ನಂದನನ್ನು ಸಂತೈಸಿ ವಸ್ತ್ರ, ಅಲಂಕಾರ, ಕಂಚಿನ ಪಾತ್ರೆ ಮೊದಲಾದವನ್ನು ಅರ್ಪಿಸಿ ಆದರದಿಂದ ಸತ್ಕರಿಸಿದನು. ನಂದಗೋಪನು ಪ್ರೇಮಭರದಿಂದ ಅವರಿಬ್ಬರನ್ನೂ ಆಲಿಂಗಿಸಿಕೊಂಡು ವಿಷಣ್ಣನಾಗಿ ಕಂಬನಿದುಂಬಿ ಗೋಪರೊಡನೆ ವ್ರಜಕ್ಕೆ ಹಿಂದಿರುಗಿದನು (೨೪–೨೫).

**ಅಥ ಶೂರಸುತೋ ರಾಜನ್ ಪುತ್ರಯೋಃ ಸಮಕಾರಯತ್ ।**
**ಪುರೋಧಸಾ ಬ್ರಾಹ್ಮಣೈಶ್ಚ ಯಥಾವದ್ ದ್ವಿಜಸಂಸ್ಕೃತಿಮ್ ॥ ೨೬**

**ತೇಭ್ಯೋಽದಾದ್ ದಕ್ಷಿಣಾ ಗಾವೋ ರುಕ್ಮಮಾಲಾಃ ಸ್ವಲಂಕೃತಾಃ ।**
**ಸ್ವಲಂಕೃತೇಭ್ಯಃ ಸಂಪೂಜ್ಯ ಸವತ್ಸಾಃ ಕ್ಷೌಮಮಾಲಿನೀಃ ॥ ೨೭**

**ಯಾಃ ಕೃಷ್ಣರಾಮಜನ್ಮರ್ಕ್ಷೇ ಮನೋದತ್ತಾ ಮಹಾಮತಿಃ ।**
**ತಾಶ್ಚಾದದಾದನುಸ್ಮೃತ್ಯ ಕಂಸೇನಾಧರ್ಮತೋ ಹೃತಾಃ ॥ ೨೮**

**ತತಶ್ಚ ಲಬ್ಧಸಂಸ್ಕಾರೌ ದ್ವಿಜತ್ವಂ ಪ್ರಾಪ್ಯ ಸುವ್ರತೌ ।**
**ಗರ್ಗಾದ್ ಯದುಕುಲಾಚಾರ್ಯಾದ್ ಗಾಯತ್ರಂ ವ್ರತಮಾಸ್ಥಿತೌ ॥**

**ಪ್ರಭವೌ ಸರ್ವವಿದ್ಯಾನಾಂ ಸರ್ವಜ್ಞೌ ಜಗದೀಶ್ವರೌ ।**
**ನಾನ್ಯಸಿದ್ಧಾಮಲಜ್ಞಾನಂ ಗೂಹಮಾನೌ ನರೇಹಿತೈಃ ॥ ೩೦**

---

ರಾಜ, ತರುವಾಯ ಶೂರಸುತನಾದ ವಸುದೇವನು ಪುರೋಹಿತರಾದ ಗರ್ಗಾಚಾರ್ಯರಿಂದಲೂ ಇತರ ಬ್ರಾಹ್ಮಣರಿಂದಲೂ ಒಡಗೂಡಿ ಇಬ್ಬರು ಮಕ್ಕಳಿಗೂ ದ್ವಿಜೋಚಿತವಾದ ಉಪನಯನವನ್ನು ವಿಧಿವತ್ತಾಗಿ ನೆರವೇರಿಸಿದನು (೨೬). ಆಗ (ವಸ್ತ್ರಾದಿಗಳನ್ನಿತ್ತು) ಅಲಂಕರಿಸಲ್ಪಟ್ಟ ವಿಪ್ರರಿಗೆ ದಕ್ಷಿಣೆಯನ್ನು ಕೊಟ್ಟು ಚಿನ್ನದ ಸರ ರೇಶ್ಮೆಯ ದುಕೂಲಾದಿಗಳಿಂದ ಅಲಂಕೃತವಾದ ಮತ್ತು ಕರುಗಳಿಂದ ಸಹಿತವಾದ ಗೋವುಗಳನ್ನು ಅವರಿಗೆ ದಾನಮಾಡಿದನು (೨೭). ಮಹಾಪ್ರಾಜ್ಞನಾದ ವಸುದೇವನು ಬಲರಾಮಶ್ರೀಕೃಷ್ಣರ ಜನ್ಮನಕ್ಷತ್ರದಲ್ಲಿ ಮನಸ್ಸಿನಿಂದ ಯಾವ ಗೋವುಗಳನ್ನು ದಾನಮಾಡಿದ್ದನೋ, ಯಾವುದನ್ನು ಕಂಸನು ಅಧರ್ಮದಿಂದ ಅಪಹರಿಸಿದ್ದನೋ ಅವನ್ನು ಆಗ ಸ್ಮರಿಸಿಕೊಂಡು ದಾನಮಾಡಿದನು (೨೮). ರಾಮಕೃಷ್ಣರು ಯದುಕುಲಾಚಾರ್ಯರಾದ ಗರ್ಗರಿಂದ ಉಪನಯನಸಂಸ್ಕಾರವನ್ನು ಹೊಂದಿ ದ್ವಿಜತ್ವವನ್ನು ಪಡೆದು ನಿಯಮನಿಷ್ಠರಾಗಿ ಬ್ರಹ್ಮಚರ್ಯವ್ರತವನ್ನು ಕೈಗೊಂಡರು (೨೯). ಸಮಸ್ತ ವಿದ್ಯೆಗಳಿಗೆ ಜನ್ಮಸ್ಥಾನವಾದವರೂ ಸರ್ವಜ್ಞರೂ ಆದ ಆ ಜಗದೀಶ್ವರರು ಸ್ವತಃಸಿದ್ಧವಾದ ತಮ್ಮ ವಿಮಲಜ್ಞಾನವನ್ನು ಮನುಷ್ಯಚೇಷ್ಟಿತಗಳಿಂದ ಮರೆಸಿಕೊಂಡಿದ್ದರು (೩೦).

ಅಥೋ ಗುರುಕುಲೇ ವಾಸಮಿಚ್ಛಂತಾವುಪಜಗ್ಮತುಃ ।
ಕಾಶ್ಯಂ ಸಾಂದೀಪನಿಂ ನಾಮ ಹ್ಯವಂತೀಪುರವಾಸಿನಮ್ ॥ ೩೧

ಯಥೋಪಸಾದ್ಯ ತೌ ದಾಂತೌ ಗುರೌ ವೃತ್ತಿಮನಿಂದಿತಾಮ್ ।
ಗ್ರಾಹಯಂತಾವುಪೇತೌ ಸ್ಮ ಭಕ್ತ್ಯಾ ದೇವಮಿವಾದೃತೌ ॥ ೩೨

ತಯೋರ್ದ್ವಿಜವರಸ್ತುಷ್ಟಃ ಶುದ್ಧಭಾವಾನುವೃತ್ತಿಭಿಃ ।
ಪ್ರೋವಾಚ ವೇದಾನಖಿಲಾನ್ ಸಾಂಗೋಪನಿಷದೋ ಗುರುಃ ॥ ೩೩

ಸರಹಸ್ಯಂ ಧನುರ್ವೇದಂ ಧರ್ಮಾನ್ ನ್ಯಾಯಪಥಾಂಸ್ತಥಾ ।
ತಥಾ ಚಾನ್ವೀಕ್ಷಿಕೀಂ ವಿದ್ಯಾಂ ರಾಜನೀತಿಂ ಚ ಷಡ್ವಿಧಾಮ್ ॥ ೩೪

ಸರ್ವಂ ನರವರಶ್ರೇಷ್ಠೌ ಸರ್ವವಿದ್ಯಾಪ್ರವರ್ತಕೌ ।
ಸಕೃನ್ನಿಗದಮಾತ್ರೇಣ ತೌ ಸಂಜಗೃಹತುರ್ನೃಪ ॥ ೩೫

---

ಅನಂತರ ಗುರುಕುಲವಾಸವನ್ನು ಮಾಡಬೇಕೆಂದು ಸಾಂದೀಪನಿಯೆಂಬ ಗುರುವಿನ ಬಳಿಗೆ ಹೋದರು. ಆತನು ಕಾಶೀನಗರದವನಾಗಿದ್ದು ಆಗ ಅವಂತೀ ಪುರದಲ್ಲಿ ವಾಸವಾಗಿದ್ದನು (೩೧). 'ನಾವು ಗುರುವಿಗೆ ಶರಣಾದಂತೆ ಲೋಕದ ಜನರೂ ಗುರುಕುಲವಾಸದ ಸಂಪ್ರದಾಯವನ್ನು ಪಾಲಿಸಲಿ' ಎಂದು ಲೋಕಕ್ಕೆ ಬೋಧಿಸುವುದಕ್ಕಾಗಿ ಜಿತೇಂದ್ರಿಯರಾದ ರಾಮಕೃಷ್ಣರು ಕ್ರಮವರಿತು ಭಕ್ತಿಯಿಂದ ಗುರುವಿನ ಬಳಿಗೆ ಹೋಗಿ, ಪರಮೇಶ್ವರನನ್ನು ಸೇವಿಸುವಂತೆ ಆದರಪೂರ್ವಕವಾಗಿ ಸಾಂದೀಪನಿಯ ಶುಶ್ರೂಷೆಮಾಡುತ್ತ, ಪರಿಶುದ್ಧವಾದ ಗುರುಕುಲವೃತ್ತಿಯನ್ನು ಪಾಲಿಸಿದರು (೩೨). ವಿಪ್ರೋತ್ತಮನಾದ ಆಚಾರ್ಯ ಸಾಂದೀಪನಿಯು ರಾಮಕೃಷ್ಣರ ಪರಿಶುದ್ಧಭಾವದಿಂದಲೂ ವಿನಯದಿಂದಲೂ ಸಂತುಷ್ಟನಾಗಿ ಷಡಂಗಸಹಿತವಾದ ಎಲ್ಲ ವೇದಗಳನ್ನೂ ಉಪನಿಷತ್ತುಗಳನ್ನೂ ಅವರಿಗೆ ಕಲಿಸಿದನು (೩೩). ರಹಸ್ಯವಾದ ಮಂತ್ರದೇವತಾಜ್ಞಾನದಿಂದ ಯುಕ್ತವಾದ ಧನುರ್ವೇದ, ಧರ್ಮಶಾಸ್ತ್ರ, ಮೀಮಾಂಸಾದಿ ದರ್ಶನಗಳು, ತರ್ಕಶಾಸ್ತ್ರ, ಷಡ್ಗುಣಯುಕ್ತವಾದ* ರಾಜನೀತಿ—ಇವುಗಳನ್ನು ಬೋಧಿಸಿದನು (೩೪). ಆಚಾರ್ಯನು ಒಂದು ಸಲ ಹೇಳಿದಮಾತ್ರದಿಂದಲೇ ಸಕಲವಿದ್ಯಾಪ್ರವರ್ತಕ

---

* ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಸಮಾಶ್ರಯ–ಎಂದು ರಾಜನೀತಿಯ ಆರು ಗುಣಗಳು.

**ಅಹೋರಾತ್ರೈಶ್ಚತುಃಷಷ್ಟ್ಯಾ ಸಂಯತೌ ತಾವತೀಃ ಕಲಾಃ ।**
**ಗುರುದಕ್ಷಿಣಯಾಽಽಚಾರ್ಯಂ ಛಂದಯಾಮಾಸತುರ್ನೃಪ ॥ ೩೬**

**ದ್ವಿಜಸ್ತಯೋಸ್ತಂ ಮಹಿಮಾನಮದ್ಭುತಂ**
**ಸಂಲಕ್ಷ್ಯ ರಾಜನ್ನತಿಮಾನುಷೀಂ ಮತಿಮ್ ।**
**ಸಂಮಂತ್ರ್ಯ ಪತ್ನ್ಯಾ ಸ ಮಹಾರ್ಣವೇ ಮೃತಂ**
**ಬಾಲಂ ಪ್ರಭಾಸೇ ವರಯಾಂಬಭೂವ ಹ ॥ ೩೭**

**ತಥೇತ್ಯಥಾರುಹ್ಯ ಮಹಾರಥೌ ರಥಂ**
**ಪ್ರಭಾಸಮಾಸಾದ್ಯ ದುರಂತವಿಕ್ರಮೌ ।**
**ವೇಲಾಮುಪವ್ರಜ್ಯ ನಿಷೀದತುಃ ಕ್ಷಣಂ**
**ಸಿಂಧುರ್ವಿದಿತ್ವಾರ್ಹಣಮಾಹರತ್ತಯೋಃ ॥ ೩೮**

**ತಮಾಹ ಭಗವಾನಾಶು ಗುರುಪುತ್ರಃ ಪ್ರದೀಯತಾಮ್ ।**
**ಯೋಽಸಾವಿಹ ತ್ವಯಾ ಗ್ರಸ್ತೋ ಬಾಲಕೋ ಮಹತೋರ್ಮಿಣಾ ॥**

---

ರಾದ ಆ ಪುರುಷೋತ್ತಮರು ಸರ್ವವನ್ನೂ ಗ್ರಹಿಸಿದರು. ಮಹಾರಾಜ, ಅರವತ್ತುನಾಲ್ಕು ಅಹೋರಾತ್ರಗಳಲ್ಲಿ ಗೀತವಾದ್ಯಾದಿ ಅರುವತ್ತುನಾಲ್ಕು ಕಲೆಗಳನ್ನು ನಿಯಮಪೂರ್ವಕವಾಗಿ ಅವರು ಕಲಿತರು. ಆಮೇಲೆ ಗುರುದಕ್ಷಿಣೆಯನ್ನು ಸ್ವೀಕರಿಸಬೇಕೆಂದು ಆಚಾರ್ಯನನ್ನು ಕೇಳಿಕೊಂಡರು (೩೫–೩೬). ಆ ವಿಪ್ರನು ಶ್ರೀಕೃಷ್ಣಬಲಭದ್ರರ ಅದ್ಭುತಮಹಿಮೆಯನ್ನೂ ಅತಿಮಾನುಷವಾದ ಪ್ರಜ್ಞಾಶಕ್ತಿಯನ್ನೂ ಲಕ್ಷಿಸಿ ತನ್ನ ಪತ್ನಿಯೊಡನೆ ಸಮಾಲೋಚಿಸಿದನು. ಅನಂತರ ಸಾಂದೀಪನಿಯು ಪ್ರಭಾಸಕ್ಷೇತ್ರದ ಮಹಾಸಾಗರದಲ್ಲಿ ಮೃತನಾದ ತನ್ನ ಮಗನನ್ನು ಗುರುದಕ್ಷಿಣೆಯಾಗಿ ತಂದುಕೊಡಬೇಕೆಂದು ಕೇಳಿದನು!(೩೭). 'ಆಗಬಹುದು!' ಎಂದು ನುಡಿದು ಅದ್ಭುತಪರಾಕ್ರಮಿಗಳಾದ ಆ ಮಹಾರಥರು ರಥವನ್ನೇರಿ ಪ್ರಭಾಸಕ್ಷೇತ್ರಕ್ಕೆ ಹೋಗಿ ಸಮುದ್ರತೀರದಲ್ಲಿ ಒಂದು ಕ್ಷಣಕಾಲ ಕುಳಿತುಕೊಂಡರು. ಅವರು ಈಶ್ವರರೆಂಬುದನ್ನರಿತು ಸಮುದ್ರರಾಜನು ಗೌರವ ಕಾಣಿಕೆಯನ್ನು ತಂದಿತ್ತನು (೩೮). ಭಗವಾನ್ ಶ್ರೀಕೃಷ್ಣನು ಸಮುದ್ರರಾಜನನ್ನು ಕುರಿತು "ನಮ್ಮ ಗುರುಪುತ್ರನಾದ ಬಾಲಕನನ್ನು ಇಲ್ಲಿ ದೊಡ್ಡ ಅಲೆಯ ಮೂಲಕ ಸೆಳೆದು ಅಪಹರಿಸಿದ್ದೀಯೆ. ಅವನನ್ನು ಕೂಡಲೇ ತಂದು ಒಪ್ಪಿಸು!"

ಸಮುದ್ರ ಉವಾಚ—

ನೈವಾಹಾರ್ಷಮಹಂ ದೇವ ದೈತ್ಯಃ ಪಂಚಜನೋ ಮಹಾನ್ ।
ಅಂತರ್ಜಲಚರಃ ಕೃಷ್ಣ ಶಂಖರೂಪಧರೋಽಸುರಃ ॥ ೪೦

ಆಸ್ತೇ ತೇನಾಹೃತೋ ನೂನಂ ತಚ್ಛ್ರುತ್ವಾ ಸತ್ವರಂ ಪ್ರಭುಃ ।
ಜಲಮಾವಿಶ್ಯ ತಂ ಹತ್ವಾ ನಾಪಶ್ಯದುದರೇಽರ್ಭಕಮ್ ॥ ೪೧

ತದಂಗಪ್ರಭವಂ ಶಂಖಮಾದಾಯ ರಥಮಾಗಮತ್ ।
ತತಃ ಸಂಯಮನೀಂ ನಾಮ ಯಮಸ್ಯ ದಯಿತಾಂ ಪುರೀಮ್ ॥ ೪೨

ಗತ್ವಾ ಜನಾರ್ದನಃ ಶಂಖಂ ಪ್ರದಧ್ಮೌ ಸಹಲಾಯುಧಃ ।
ಶಂಖನಿರ್ಹ್ರಾದಮಾಕರ್ಣ್ಯ ಪ್ರಜಾಸಂಯಮನೋ ಯಮಃ ॥ ೪೩

ತಯೋಃ ಸಪರ್ಯಾಂ ಮಹತೀಂ ಚಕ್ರೇ ಭಕ್ತ್ಯುಪಬೃಂಹಿತಾಮ್ ।
ಉವಾಚಾವನತಃ ಕೃಷ್ಣಂ ಸರ್ವಭೂತಾಶಯಾಲಯಮ್ ।
ಲೀಲಾಮನುಷ್ಯ ಹೇ ವಿಷ್ಣೋ ಯುವಯೋಃ ಕರವಾಮ ಕಿಮ್ ॥

---

ಎಂದು ಆಜ್ಞಾಪಿಸಿದನು (೩೯). ಅದಕ್ಕೆ ಸಮುದ್ರನು "ದೇವ, ನಾನು ಅಪಹರಿಸಿಲ್ಲ. ಪಂಚಜನ ಎಂಬ ಮಹಾದೈತ್ಯನು ಅಪಹರಿಸಿದ್ದಾನೆ. ಕೃಷ್ಣ, ಆ ದೈತ್ಯನು ಶಂಖರೂಪವನ್ನು ಧರಿಸಿ ನೀರೊಳಗೆ ಸಂಚರಿಸುತ್ತ ಇರುತ್ತಾನೆ. ಅವನೇ ಅಪಹರಿಸಿದ್ದು" ಎಂದನು (೪೦). ಒಡನೆಯೇ ಸ್ವಾಮಿಯು ಜಲವನ್ನು ಪ್ರವೇಶಿಸಿ ಪಂಚಜನನೆಂಬ ಅಸುರನನ್ನು ಸಂಹರಿಸಿದನು. ಅವನ ಉದರದಲ್ಲಿ ಬಾಲಕನನ್ನು ಕಾಣಲಿಲ್ಲ. ಪಂಚಜನಾಸುರನ ದೇಹದಿಂದಾದ ಶಂಖವನ್ನು ತೆಗೆದುಕೊಂಡು ರಥಕ್ಕೆ ಹಿಂದಿರುಗಿದನು. ಆಮೇಲೆ ಜನಾರ್ಧನನು ಬಲದೇವನೊಡನೆ ಯಮನಿಗೆ ಪ್ರಿಯವಾದ ಸಂಯಮನಿಯೆಂಬ ನಗರಕ್ಕೆ ಹೋಗಿ ಪಾಂಚಜನ್ಯಶಂಖವನ್ನೂದಿದನು. ಪ್ರಜಾಂತಕನಾದ ಯಮನಿಗೆ ಆ ಧ್ವನಿಯು ಕೇಳಿಸಿತು (೪೧–೪೩). ಯಮನು ಬಲರಾಮಕೃಷ್ಣರಿಗೆ ಭಕ್ತಿಯಿಂದ ವಿಶೇಷವಾದ ಪೂಜೆಯನ್ನು ಮಾಡಿದನು. ಅವನು ಸರ್ವಭೂತಹೃದಯಸ್ಥಿತನಾದ ಶ್ರೀಕೃಷ್ಣನನ್ನು ಕುರಿತು ವಿನಯದಿಂದ "ಲೀಲಾಮನುಷ್ಯನಾದ ವಿಷ್ಣುವೆ, ನಿಮ್ಮಿರ್ವರಿಗೆ ನಾವು ಮಾಡಬೇಕಾದ್ದೇನು ?" ಎಂದು ಕೇಳಿದನು (೪೪).

ಶ್ರೀಭಗವಾನುವಾಚ—

**ಗುರುಪುತ್ರಮಿಹಾನೀತಂ ನಿಜಕರ್ಮನಿಬಂಧನಮ್ ।**
**ಆನಯಸ್ವ ಮಹಾರಾಜ ಮಚ್ಛಾಸನಪುರಸ್ಕೃತಃ ॥ ೪೫**

**ತಥೇತಿ ತೇನೋಪಾನೀತಂ ಗುರುಪುತ್ರಂ ಯದೂತ್ತಮೌ ।**
**ದತ್ತ್ವಾ ಸ್ವಗುರವೇ ಭೂಯೋ ವೃಣೀಷ್ವೇತಿ ತಮೂಚತುಃ ॥ ೪೬**

ಗುರುರುವಾಚ—

**ಸಮ್ಯಕ್ ಸಂಪಾದಿತೋ ವತ್ಸ ಭವದ್ಭ್ಯಾಂ ಗುರುನಿಷ್ಕ್ರಯಃ ।**
**ಕೋ ನು ಯುಷ್ಮದ್ವಿಧಗುರೋಃ ಕಾಮಾನಾಮವಶಿಷ್ಯತೇ ॥ ೪೭**

**ಗಚ್ಛತಂ ಸ್ವಗೃಹಂ ವೀರೌ ಕೀರ್ತಿರ್ವಾಮಸ್ತು ಪಾವನೀ ।**
**ಛಂದಾಂಸ್ಯಯಾತಯಾಮಾನಿ ಭವಂತ್ವಿಹ ಪರತ್ರ ಚ ॥ ೪೮**

**ಗುರುಣೈವಮನುಜ್ಞಾತೌ ರಥೇನಾನಿಲರಂಹಸಾ ।**
**ಆಯಾತೌ ಸ್ವಪುರಂ ತಾತ ಪರ್ಜನ್ಯನಿನದೇನ ವೈ ॥ ೪೯**

---

ಭಗವಂತನು "ಯಮರಾಜ, ನಮ್ಮ ಗುರುಪುತ್ರನನ್ನು ಆತನ ಕರ್ಮಾನುಗುಣವಾಗಿ ಇಲ್ಲಿಗೆ ತಂದಿರುವೆಯಷ್ಟೆ. ಈಗ ನನ್ನ ಆಜ್ಞೆಯನ್ನು ಮನ್ನಿಸಿ ಅವನನ್ನು ಕರೆದುಕೊಂಡು ಬಾ" ಎಂದು ತಿಳಿಸಿದನು (೪೫). ಆಗಲೆಂದು ಯಮನು ಗುರುಪುತ್ರನನ್ನು ತಂದೊಪ್ಪಿಸಿದನು. ಯಾದವೋತ್ತಮರಾದ ರಾಮಕೃಷ್ಣರು ಆ ಬಾಲಕನನ್ನು ತಮ್ಮ ಗುರುವಿಗೆ ಒಪ್ಪಿಸಿ 'ಸ್ವೀಕರಿಸಬೇಕು' ಎಂದು ನುಡಿದರು (೪೬). ಆಗ ಆಚಾರ್ಯನಾದ ಸಾಂದೀಪನಿಯು "ವತ್ಸ, ನೀವೀರ್ವರೂ ಗುರುದಕ್ಷಿಣೆಯನ್ನು ಸಮೀಚೀನವಾಗಿ ತಂದೊಪ್ಪಿಸಿದಿರಿ. ನಿಮ್ಮಂಥವರ ಗುರುವಾದವನಿಗೆ ಯಾವ ಬಯಕೆ ನೆರವೇರದೆ ಇದ್ದೀತು? (೪೭). ವೀರರೆ, ನೀವು ಗೃಹಕ್ಕೆ ತೆರಳಬಹುದು. ಶ್ರೇಷ್ಠವಾದ ಕೀರ್ತಿ ನಿಮಗೆ ಲಭಿಸಲಿ. ನೀವು ಅಧ್ಯಯನ ಮಾಡಿದ ವೇದಗಳು ವೀರ್ಯವತ್ತರವಾಗಿ ನಿಂತು ಇಹಪರಗಳಲ್ಲಿ ಫಲವನ್ನು ನೀಡಲಿ!" ಎಂದು ಆಶೀರ್ವದಿಸಿದನು (೪೮). ಹೀಗೆ ಗುರುವಿನಿಂದ ಅನುಜ್ಞೆಯನ್ನು ಪಡೆದು, ಶ್ರೀಕೃಷ್ಣ ಬಲಭದ್ರರು ವಾಯುವೇಗದ ರಥವನ್ನೇರಿ ಮೇಘದಂತೆ ಅದನ್ನು ಗುಡುಗಿಸುತ್ತ ತಮ್ಮ ನಗರಕ್ಕೆ ಬಂದರು (೪೯).

ಸಮನಂದನ್ ಪ್ರಜಾಃ ಸರ್ವಾ ದೃಷ್ಟ್ವಾ ರಾಮಜನಾರ್ದನೌ ।
ಅಪಶ್ಯಂತ್ಯೋ ಬಹ್ವಹಾನಿ ನಷ್ಟಲಬ್ಧಧನಾ ಇವ ॥ ೫೦

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಪಂಚಚತ್ವಾರಿಂಶಾಧ್ಯಾಯಃ

---

## ಷಟ್ಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—
ವೃಷ್ಣೀನಾಂ ಪ್ರವರೋ ಮಂತ್ರೀ ಕೃಷ್ಣಸ್ಯ ದಯಿತಃ ಸಖಾ ।
ಶಿಷ್ಯೋ ಬೃಹಸ್ಪತೇಃ ಸಾಕ್ಷಾದುದ್ಧವೋ ಬುದ್ಧಿಸತ್ತಮಃ ॥ ೧

ತಮಾಹ ಭಗವಾನ್ ಪ್ರೇಷ್ಠಂ ಭಕ್ತಮೇಕಾಂತಿನಂ ಕ್ವಚಿತ್ ।
ಗೃಹೀತ್ವಾ ಪಾಣಿನಾ ಪಾಣಿಂ ಪ್ರಪನ್ನಾರ್ತಿಹರೋ ಹರಿಃ ॥ ೨

---

ವತ್ಸ–ಪರೀಕ್ಷಿತ, ಒಹುದಿನಗಳಿಂದ ಬಲರಾಮಜನಾರ್ದನರನ್ನು ಕಾಣದಿದ್ದ ಸಕಲಪ್ರಜೆಗಳೂ ಅವರನ್ನು ಕಂಡು, ನಷ್ಟವಾದ ಐಶ್ವರ್ಯವನ್ನು ಪಡೆದವರಂತೆ ಆನಂದಿಸಿದರು (೫೦).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತೈದನೆಯ ಅಧ್ಯಾಯ

---

## ಅಧ್ಯಾಯ ೪೬

ಗೋಪಿಯರನ್ನು ಸಂತೈಸಲು ಶ್ರೀಕೃಷ್ಣನು ಉದ್ಧವನನ್ನು ಗೋಕುಲಕ್ಕೆ ಕಳಿಸುವುದು. ನಂದ–ಉದ್ಧವರ ಸಂಭಾಷಣೆ

ಶುಕಮುನಿಗಳು ಹೇಳಿದರು: ವೃಷ್ಣಿವಂಶದಲ್ಲಿ ಉದ್ಧವ ಎಂಬವನು ಮುಖ್ಯನೂ ಶ್ರೀಕೃಷ್ಣನಿಗೆ ಮಂತ್ರಿಯೂ ಪ್ರಿಯಮಿತ್ರನೂ ಆಗಿದ್ದನು. ಅವನು ಬೃಹಸ್ಪತಿಯ ಸಾಕ್ಷಾತ್ ಶಿಷ್ಯ; ಮಹಾಮೇಧಾವಿ (೧). ಭಕ್ತರ ಕಷ್ಟಗಳನ್ನು ಪರಿಹರಿಸುವ ಶ್ರೀಕೃಷ್ಣನು ಪ್ರಿಯತಮನೂ ಏಕಾಂತಭಕ್ತನೂ ಆದ ಉದ್ಧವನನ್ನು ಒಂದು ಸಲ ಕೈಯಲ್ಲಿ ಹಿಡಿದುಕೊಂಡು ಹೀಗೆಂದನು (೨):

ಗಚ್ಛೋದ್ಧವ ವ್ರಜಂ ಸೌಮ್ಯ ಪಿತ್ರೋರ್ನೌ ಪ್ರೀತಿಮಾವಹ ।
ಗೋಪೀನಾಂ ಮದ್ವಿಯೋಗಾಧಿಂ ಮತ್ಸಂದೇಶೈರ್ವಿಮೋಚಯ ॥ ೩

ತಾ ಮನ್ಮನಸ್ಕಾ ಮತ್ಪ್ರಾಣಾ ಮದರ್ಥೇ ತ್ಯಕ್ತದೈಹಿಕಾಃ ।
ಯೇ ತ್ಯಕ್ತಲೋಕಧರ್ಮಾಶ್ಚ ಮದರ್ಥೇ ತಾನ್ ಬಿಭರ್ಮ್ಯಹಮ್ ॥

ಮಯಿ ತಾಃ ಪ್ರೇಯಸಾಂ ಪ್ರೇಷ್ಠೇ ದೂರಸ್ಥೇ ಗೋಕುಲಸ್ತ್ರಿಯಃ ।
ಸ್ಮರಂತ್ಯೋಽಂಗ ವಿಮುಹ್ಯಂತಿ ವಿರಹೌತ್ಕಂಠ್ಯವಿಹ್ವಲಾಃ ॥ ೫

ಧಾರಯಂತ್ಯತಿಕೃಚ್ಛ್ರೇಣ ಪ್ರಾಯಃ ಪ್ರಾಣಾನ್ ಕಥಂಚನ ।
ಪ್ರತ್ಯಾಗಮನಸಂದೇಶೈರ್ಬಲ್ಲವ್ಯೋ ಮೇ ಮದಾತ್ಮಿಕಾಃ ॥ ೬

ಶ್ರೀಶುಕ ಉವಾಚ—

ಇತ್ಯುಕ್ತ ಉದ್ಧವೋ ರಾಜನ್ ಸಂದೇಶಂ ಭರ್ತುರಾದೃತಃ ।
ಆದಾಯ ರಥಮಾರುಹ್ಯ ಪ್ರಯಯೌ ನಂದಗೋಕುಲಮ್ ॥ ೭

---

"ಸೌಮ್ಯ, ನೀನು ವ್ರಜಕ್ಕೆ ಹೋಗಿ ನಮ್ಮ ತಾಯಿತಂದೆಗಳಿಗೆ ಸಂತೋಷವನ್ನುಂಟುಮಾಡು. ಗೋಪಿಯರಿಗೆ ನನ್ನ ಸಂದೇಶವಚನಗಳನ್ನು ತಿಳಿಸಿ ಅವರ ವಿರಹದುಃಖವನ್ನು ಶಾಂತಗೊಳಿಸು (೩). ಆ ಗೋಪಿಯರು ನನ್ನಲ್ಲಿಯೇ ಮನಸ್ಸಿಟ್ಟು ನನ್ನನ್ನೇ ಪ್ರಾಣವೆಂದು ತಿಳಿದು, ಪತಿಪುತ್ರಾದಿದೇಹಸಂಬಂಧಿಗಳನ್ನು ನನಗಾಗಿ ತೊರೆದವರು. ನನಗಾಗಿ ಲೋಕಧರ್ಮಗಳನ್ನು ಯಾರು ತ್ಯಜಿಸುವರೋ ಅವರನ್ನು ನಾನು ಪಾಲಿಸುತ್ತೇನೆ (೪). ಪ್ರಿಯರಲ್ಲಿ ಪ್ರಿಯತಮನಾದ ನಾನು ದೂರಸ್ಥನಾದ್ದರಿಂದ, ಗೋಕುಲದ ಸ್ತ್ರೀಯರು, ಆಹಾ! ನನ್ನನ್ನೇ ಸ್ಮರಿಸಿಕೊಳ್ಳುತ್ತಿದ್ದಾರೆ. ವಿರಹದ ಉತ್ಕಂಠೆಯಿಂದ ಕಳವಳಿಸುತ್ತಿದ್ದಾರೆ (೫). ಬಹುಕಷ್ಟದಿಂದ ಹೇಗೋ ಪ್ರಾಣವನ್ನು ಉಳಿಸಿಕೊಂಡಿರಬೇಕು! ನಾನೇ ಆತ್ಮವೆಂದು ತಿಳಿದಿರುವ ಗೋಪಿಯರು, ಮತ್ತೆ ಬರುವೆನೆಂಬ ನನ್ನ ಸಂದೇಶಗಳಿಂದಲೇ ಬದುಕಿದ್ದಾರೆ!" ಎಂದನು (೬). ರಾಜ, ಆಗ ಉದ್ಧವನು ತನ್ನ ಪ್ರಭುವಿನ ಸಂದೇಶವನ್ನು ಆದರದಿಂದ ಕೇಳಿ, ರಥವೇರಿ ನಂದಗೋಕುಲಕ್ಕೆ ಹೊರಟನು (೭).

ಪ್ರಾಪ್ತೋ ನಂದವ್ರಜಂ ಶ್ರೀಮಾನ್ ನಿಮ್ಲೋಚತಿ ವಿಭಾವಸೌ ।
ಛನ್ನಯಾನಃ ಪ್ರವಿಶತಾಂ ಪಶೂನಾಂ ಖುರರೇಣುಭಿಃ ॥ ೮

ವಾಸಿತಾರ್ಥೇಽಭಿಯುಧ್ಯದ್ಭಿರ್ನಾದಿತಂ ಶುಷ್ಮಿಭಿರ್ವೃಷೈಃ ।
ಧಾವಂತೀಭಿಶ್ಚ ವಾಸ್ರಾಭಿರೂಧೋಭಾರೈಃ ಸ್ವವತ್ಸಕಾನ್ ॥ ೯

ಇತಸ್ತತೋ ವಿಲಂಘದ್ಭಿರ್ಗೋವತ್ಸೈರ್ಮಂಡಿತಂ ಸಿತೈಃ ।
ಗೋದೋಹಶಬ್ದಾಭಿರವಂ ವೇಣೂನಾಂ ನಿಃಸ್ವನೇನ ಚ ॥ ೧೦

ಗಾಯಂತೀಭಿಶ್ಚ ಕರ್ಮಾಣಿ ಶುಭಾನಿ ಬಲಕೃಷ್ಣಯೋಃ ।
ಸ್ವಲಂಕೃತಾಭಿರ್ಗೋಪೀಭಿರ್ಗೋಪೈಶ್ಚ ಸುವಿರಾಜಿತಮ್ ॥ ೧೧

ಅಗ್ನ್ಯರ್ಕಾತಿಥಿಗೋವಿಪ್ರಪಿತೃದೇವಾರ್ಚನಾನ್ವಿತೈಃ ।
ಧೂಪದೀಪೈಶ್ಚ ಮಾಲ್ಯೈಶ್ಚ ಗೋಪಾವಾಸೈರ್ಮನೋರಮಮ್ ॥

---

ಸೂರ್ಯನು ಮುಳುಗುವ ಹೊತ್ತಿಗೆ ಆ ತೇಜಸ್ವಿಯು ನಂದವ್ರಜವನ್ನು ಸೇರಿದನು. ಆಗ ವ್ರಜದೊಳಗೆ ಬರುತ್ತಿದ್ದ ದನಗಳ ಕಾಲ್ಗೊರಸುಗಳಿಂದೆದ್ದ ಧೂಳಿ ಉದ್ಧವನ ರಥವನ್ನು ಮುಸುಕಿತು (೮). ಬೆದೆಗೆ ಬಂದ ಹಸುಗಳಿಗಾಗಿ ಹೋರಾಡುತ್ತಿದ್ದ ಸೊಕ್ಕಿದ ಗೂಳಿಗಳ ಗುಟರೆಗಳಿಂದಲೂ, ತುಂಬಿದ ಕೆಚ್ಚಲನ್ನು ಹೊತ್ತು ತಮ್ಮ ಕರುಗಳಿದ್ದೆಡೆಗೆ ಧಾವಿಸುವ ಧೇನುಗಳ ಹುಂಭಾರವಗಳಿಂದಲೂ ಗೋಕುಲವು ತುಂಬಿತ್ತು (೯). ಇಲ್ಲಿಂದಲ್ಲಿಗೆ ಹಾರಾಡುತ್ತಿದ್ದ ಬಿಳಿಯ ಬಣ್ಣದ ಕರುಗಳಿಂದ ಭೂಷಿತವಾಗಿತ್ತು. ಹಾಲು ಕರೆಯುವ ವೇಳೆಯಲ್ಲಿ ಹೇಳುವ 'ಬಿಡು, ಕಟ್ಟು, ಬಿಡಬೇಡ, ಎಳೆ, ಇತ್ತಕೊಡು' ಮುಂತಾದ ಗೋಪರ ಆಲಾಪಗಳಿಂದಲೂ ಕೊಳಲುಗಳ ಧ್ವನಿಯಿಂದಲೂ ವ್ರಜವು ವ್ಯಾಪಿಸಿತ್ತು (೧೦). ಅಲಂಕರಿಸಿಕೊಂಡು ಬಲರಾಮಕೃಷ್ಣರ ಶುಭಕಾರ್ಯಗಳನ್ನು ಹಾಡುತ್ತಿದ್ದ ಗೋಪಿಯರಿಂದಲೂ ಗೋಪರಿಂದಲೂ ವಿರಾಜಿತವಾಗಿತ್ತು. ಅಗ್ನಿ, ಸೂರ್ಯ, ಅತಿಥಿ, ಗೋವು, ವಿಪ್ರರು, ಪಿತೃಗಳು, ದೇವತೆಗಳು–ಇವರಿಗಾಗಿ ಏರ್ಪಡಿಸಿದ ಧೂಪ, ದೀಪ, ಮಾಲ್ಯಾದಿಗಳ ಸಡಗರವುಳ್ಳ ಗೋಪರ ಮನೆಗಳಿಂದ ಮನೋಹರವಾಗಿತ್ತು (೧೧–೧೨).

*

ಸರ್ವತಃ ಪುಷ್ಪಿತವನಂ ದ್ವಿಜಾಲಿಕುಲನಾದಿತಮ್ ।
ಹಂಸಕಾರಂಡವಾಕೀರ್ಣೈಃ ಪದ್ಮಷಂಡೈಶ್ಚ ಮಂಡಿತಮ್ ॥ ೧೩

ತಮಾಗತಂ ಸಮಾಗಮ್ಯ ಕೃಷ್ಣಸ್ಯಾನುಚರಂ ಪ್ರಿಯಮ್ ।
ನಂದಃ ಪ್ರೀತಃ ಪರಿಷ್ವಜ್ಯ ವಾಸುದೇವಧಿಯಾಽರ್ಚಯತ್ ॥ ೧೪

ಭೋಜಿತಂ ಪರಮಾನ್ನೇನ ಸಂವಿಷ್ಟಂ ಕಶಿಪೌ ಸುಖಮ್ ।
ಗತಶ್ರಮಂ ಪರ್ಯಪೃಚ್ಛತ್ ಪಾದಸಂವಾಹನಾದಿಭಿಃ ॥ ೧೫

ಕಚ್ಚಿದಂಗ ಮಹಾಭಾಗ ಸಖಾ ನಃ ಶೂರನಂದನಃ ।
ಆಸ್ತೇ ಕುಶಲ್ಯಪತ್ಯಾದ್ಯೈರ್ಯುಕ್ತೋ ಮುಕ್ತಃ ಸುಹೃದ್ವೃತಃ ॥ ೧೬

ದಿಷ್ಟ್ಯಾ ಕಂಸೋ ಹತಃ ಪಾಪಃ ಸಾನುಗಃ ಸ್ವೇನ ಪಾಪ್ಮನಾ ।
ಸಾಧೂನಾಂ ಧರ್ಮಶೀಲಾನಾಂ ಯದೂನಾಂ ದ್ವೇಷ್ಟಿ ಯಃ ಸದಾ ॥

---

ಎಲ್ಲಿ ನೋಡಿದರೂ ಅರಳಿದ ಉದ್ಯಾನಗಳಲ್ಲಿ ಹಕ್ಕಿಗಳು ಚಿಲಿಪಿಲಿಗುಟ್ಟು ತ್ತಿದ್ದವು; ದುಂಬಿಗಳು ಝೇಂಕರಿಸುತ್ತಿದ್ದವು. (ಅಲ್ಲಿರುವ ಕೊಳಗಳು) ಹಂಸ, ಕಾರಂಡವಾದಿಪಕ್ಷಿಗಳಿಂದಲೂ ಪದ್ಮರಾಶಿಗಳಿಂದಲೂ ಮಂಡಿತವಾಗಿದ್ದವು (೧೩). ಅಂತಹ ವ್ರಜವನ್ನು ಉದ್ಧವನು ಪ್ರವೇಶಿಸಿದನು. ಶ್ರೀಕೃಷ್ಣನ ಪ್ರಿಯಮಿತ್ರನು ಬಂದನೆಂದು ತಿಳಿದು, ನಂದನು ಆನಂದದಿಂದ ಅವನನ್ನು ಆಲಿಂಗಿಸಿಕೊಂಡು ಅವನೇ ಕೃಷ್ಣನೆಂಬ ಭಾವನೆಯಿಂದ ಉಪಚರಿಸಿದನು(೧೪). ಉದ್ಧವನಿಗೆ ಮೃಷ್ಟಾನ್ನಭೋಜನಮಾಡಿಸಿದಮೇಲೆ ಅವನು ಹಾಸಿಗೆಯಲ್ಲಿ ಸುಖವಾಗಿ ಕುಳಿತಿರಲು, ಕಾಲೊತ್ತುವುದೇ ಮೊದಲಾದ ಉಪಚಾರಗಳಿಂದ ಅವನ ಮಾರ್ಗಶ್ರಮವನ್ನು ಪರಿಹರಿಸಿ ನಂದನು ಕೇಳಿದನು (೧೫): "ಅಯ್ಯಾ–ಮಹಾಭಾಗ, ನಮ್ಮ ಮಿತ್ರನಾದ ವಸುದೇವನು ಕುಶಲದಿಂದಿರು ವನೆ? ಬಂಧನದಿಂದ ಬಿಡುಗಡೆಯಾದಮೇಲೆ ಮಕ್ಕಳು ಮಡದಿಯರೊಡನೆ ಗೆಳೆಯರಿಂದ ಪರಿವೃತನಾಗಿ ಸುಖದಿಂದಿರುವನೆ? (೧೬). ಪಾಪಿಯಾದ ಕಂಸನು ಪರಿವಾರಸಹಿತವಾಗಿ ತನ್ನ ಪಾಪಕರ್ಮದಿಂದಲೇ ಹತನಾದನೆಂಬುದು ಸಂತೋಷದ ವಿಷಯ. ಸಾಧುಜನರನ್ನೂ ಧರ್ಮಶೀಲರಾದ ಯಾದವರನ್ನೂ ಅವನು ಸದಾ ದ್ವೇಷಿಸುತ್ತಿದ್ದನು (೧೭).

ಅಪಿ ಸ್ಮರತಿ ನಃ ಕೃಷ್ಣೋ ಮಾತರಂ ಸುಹೃದಃ ಸಖೀನ್ ।
ಗೋಪಾನ್ ವ್ರಜಂ ಚಾತ್ಮನಾಥಂ ಗಾವೋ ವೃಂದಾವನಂ ಗಿರಿಮ್ ॥

ಅಪ್ಯಾಯಾಸ್ಯತಿ ಗೋವಿಂದಃ ಸ್ವಜನಾನ್ ಸಕೃದೀಕ್ಷಿತುಮ್ ।
ತರ್ಹಿ ದ್ರಕ್ಷ್ಯಾಮ ತದ್ವಕ್ತ್ರಂ ಸುನಸಂ ಸುಸ್ಮಿತೇಕ್ಷಣಮ್ ॥ ೧೯

ದಾವಾಗ್ನೇರ್ವಾತವರ್ಷಾಚ್ಚ ವೃಷಸರ್ಪಾಚ್ಚ ರಕ್ಷಿತಾಃ ।
ದುರತ್ಯಯೇಭ್ಯೋ ಮೃತ್ಯುಭ್ಯಃ ಕೃಷ್ಣೇನ ಸುಮಹಾತ್ಮನಾ ॥ ೨೦

ಸ್ಮರತಾಂ ಕೃಷ್ಣವೀರ್ಯಾಣಿ ಲೀಲಾಪಾಂಗನಿರೀಕ್ಷಿತಮ್ ।
ಹಸಿತಂ ಭಾಷಿತಂ ಚಾಂಗ ಸರ್ವಾ ನಃ ಶಿಥಿಲಾಃ ಕ್ರಿಯಾಃ ॥ ೨೧

ಸರಿಚ್ಛೈಲವನೋದ್ದೇಶಾನ್ ಮುಕುಂದಪದಭೂಷಿತಾನ್ ।
ಆಕ್ರೀಡಾನೀಕ್ಷಮಾಣಾನಾಂ ಮನೋ ಯಾತಿ ತದಾತ್ಮತಾಮ್ ॥ ೨೨

ಮನ್ಯೇ ಕೃಷ್ಣಂ ಚ ರಾಮಂ ಚ ಪ್ರಾಪ್ತಾವಿಹ ಸುರೋತ್ತಮೌ ।
ಸುರಾಣಾಂ ಮಹದರ್ಥಾಯ ಗರ್ಗಸ್ಯ ವಚನಂ ಯಥಾ ॥ ೨೩

---

ಕೃಷ್ಣನು ನಮ್ಮನ್ನು ಸ್ಮರಿಸಿಕೊಳ್ಳುತ್ತಿರುವನೆ! ತನ್ನ ತಾಯಿ, ಆಪ್ತರು, ಮಿತ್ರರು, ಗೋಪರು, ತನ್ನ ಒಡೆತನವೇ ಇದ್ದ ಈ ಗೋಕುಲ, ಗೋವುಗಳು, ವೃಂದಾವನ, ಗೋವರ್ಧನಗಿರಿ–ಇವುಗಳನ್ನು ಸ್ಮರಿಸಿಕೊಳ್ಳುವನೆ? (೧೮). ತನ್ನವರನ್ನು ನೋಡುವುದಕ್ಕೆ ಒಮ್ಮೆ ಕೃಷ್ಣನು ಬಂದಿದ್ದರೆ, ಅವನ ಮುಖವನ್ನು–ಸುಂದರವಾದ ಆ ಮೂಗನ್ನು ಮುಗುಳ್ನಗೆಯ ನೋಟವನ್ನು ನೋಡಬಹುದಿತ್ತು! (೧೯). ಕಾಳ್ಗಿಚ್ಚಿನಿಂದ, ಬಿರುಗಾಳಿಯಿಂದ, ಜಡಿಮಳೆಯಿಂದ, ವೃಷಭಾಸುರನಿಂದ, ಸರ್ಪದಿಂದ–ಇಂತಹ ಇನ್ನೆಷ್ಟೋ ಘೋರಮೃತ್ಯುಗಳಿಂದ ಮಹಾತ್ಮನಾದ ಕೃಷ್ಣನು ನಮ್ಮನ್ನು ರಕ್ಷಿಸಿದ್ದಾನೆ (೨೦). ಗೋವಿಂದನ ಪರಾಕ್ರಮಕಾರ್ಯಗಳನ್ನೂ ಅವನ ಆ ಲೀಲೆ, ಆ ಕಡೆಗಣ್ಣಿನ ನೋಟ, ಆ ನಗು, ಆ ಮಾತುಗಳನ್ನೂ ಸ್ಮರಿಸಿಕೊಂಡರೆ, ಉದ್ಧವ, ನಮ್ಮ ಎಲ್ಲ ಕೆಲಸಗಳೂ ಅಲ್ಲಿಯೇ ನಿಂತುಹೋಗುತ್ತವೆ! (೨೧). ಮುಕುಂದನ ಹೆಜ್ಜೆಗಳಿಂದ ಭೂಷಿತವಾದ ಹೊಳೆ, ಬೆಟ್ಟ, ಕಾಡಿನ ಪ್ರದೇಶಗಳನ್ನೂ ಹೂದೋಟಗಳನ್ನೂ ನೋಡಿದಾಗ, ಮನಸ್ಸು ಕೃಷ್ಣಮಯವಾಗಿಬಿಡುತ್ತದೆ! (೨೨). ಗರ್ಗಮುನಿಗಳ ಮಾತನ್ನು ಪರಿಶೀಲಿಸಿದರೆ, ಕೃಷ್ಣನೂ ರಾಮನೂ ದೇವತೆಗಳ ದೊಡ್ಡ

**ಕಂಸಂ ನಾಗಾಯುತಪ್ರಾಣಂ ಮಲ್ಲೌ ಗಜಪತಿಂ ತಥಾ ।**
**ಅವಧಿಷ್ಟಾಂ ಲೀಲಯೈವ ಪಶೂನಿವ ಮೃಗಾಧಿಪಃ ॥ ೨೪**

**ತಾಲತ್ರಯಂ ಮಹಾಸಾರಂ ಧನುರ್ಯಷ್ಟಿಮಿವೇಭರಾಟ್ ।**
**ಬಭಂಜೈಕೇನ ಹಸ್ತೇನ ಸಪ್ತಾಹಮದಧಾದ್ ಗಿರಿಮ್ ॥ ೨೫**

**ಪ್ರಲಂಬೋ ಧೇನುಕೋಽರಿಷ್ಟಸ್ತೃಣಾವರ್ತೋ ಬಕಾದಯಃ ।**
**ದೈತ್ಯಾಃ ಸುರಾಸುರಜಿತೋ ಹತಾ ಯೇನೇಹ ಲೀಲಯಾ ॥ ೨೬**

**ಶ್ರೀಶುಕ ಉವಾಚ—**

**ಇತಿ ಸಂಸ್ಮೃತ್ಯ ಸಂಸ್ಮೃತ್ಯ ನಂದಃ ಕೃಷ್ಣಾನುರಕ್ತಧೀಃ ।**
**ಅತ್ಯುತ್ಕಂಠೋಽಭವತ್ತೂಷ್ಣೀಂ ಪ್ರೇಮಪ್ರಸರವಿಹ್ವಲಃ ॥ ೨೭**

**ಯಶೋದಾ ವರ್ಣ್ಯಮಾನಾನಿ ಪುತ್ರಸ್ಯ ಚರಿತಾನಿ ಚ ।**
**ಶೃಣ್ವಂತ್ಯಶ್ರೂಣ್ಯವಾಸ್ರಾಕ್ಷೀತ್ ಸ್ನೇಹಸ್ನುತಪಯೋಧರಾ ॥ ೨೮**

---

ಕಾರ್ಯವನ್ನು ಸಾಧಿಸುವುದಕ್ಕಾಗಿ ಇಲ್ಲಿಗೆ ಬಂದ ದೇವಶ್ರೇಷ್ಠರೆಂದು ನನಗೆ ತೋರುತ್ತದೆ(೨೩). ಹತ್ತುಸಾವಿರ ಆನೆಗಳ ಬಲವಿದ್ದ ಕಂಸನನ್ನೂ ಚಾಣೂರ ಮುಷ್ಟಿಕರೆಂಬ ಜಟ್ಟಿಗಳನ್ನೂ ಕುವಲಯಾಪೀಡವೆಂಬ ಸಲಗವನ್ನೂ, ಸಿಂಹವು ಪಶುಗಳನ್ನು ಕೊಲ್ಲುವಂತೆ, ಲೀಲಾಮಾತ್ರದಿಂದ ಅವರು ಕೊಂದರಲ್ಲವೆ? (೨೪). ಮೂರು ತಾಳೆಯ ಮರಗಳಷ್ಟು ಉನ್ನತವಾಗಿದ್ದ ಅತ್ಯಂತ ದೃಢವಾದ ಧನುಸ್ಸನ್ನು, ಗಜರಾಜನು ಒಂದು ಕೋಲನ್ನು ಮುರಿದಂತೆ, ಕೃಷ್ಣನು ಮುರಿದುಬಿಟ್ಟನಲ್ಲ! ಒಂದೇ ಕೈಯಿಂದ ಗೋವರ್ಧನಗಿರಿಯನ್ನು ಏಳುದಿನಗಳ ವರೆಗೆ ಧರಿಸಿದ್ದನು! (೨೫). ದೇವದಾನವರನ್ನು ಗೆದ್ದ ಪ್ರಲಂಬ, ಧೇನುಕ, ಅರಿಷ್ಟ, ತೃಣಾವರ್ತ, ಬಕ–ಮೊದಲಾದ ದೈತ್ಯರು ಲೀಲೆಯಿಂದ ಸಂಹರಿಸಲ್ಪಟ್ಟರು" ಎಂದು ನುಡಿದನು (೨೬). ಈ ಪ್ರಕಾರವಾಗಿ ನಂದಗೋಪನು ಶ್ರೀ ಕೃಷ್ಣನಲ್ಲಿ ಅನುರಕ್ತಚಿತ್ತನಾಗಿ ಶ್ರೀಕೃಷ್ಣನನ್ನು ಮತ್ತೆ ಮತ್ತೆ ಸ್ಮರಿಸಿಕೊಂಡು ತೀವ್ರವಾದ ಉತ್ಕಂಠೆಯಿಂದ ಪ್ರೇಮಾವೇಶವಿಹ್ವಲನಾಗಿ (ಮಾತು ಹೊರಡದೆ) ಸುಮ್ಮನಾದನು (೨೭). ನಂದನು ಮಗನ ಚರಿತೆಗಳನ್ನು ವರ್ಣಿಸುತ್ತಿರುವಾಗ, ಕೇಳುತ್ತಲಿದ್ದ ಯಶೋದೆಯ ಕಣ್ಣುಗಳಿಂದ ಕಣ್ಣೀರು ಬಳಬಳನೆ ಉದುರುತ್ತಿತ್ತು. ವಾತ್ಸಲ್ಯದಿಂದ ಅವಳ ಸ್ತನಗಳಲ್ಲಿ ಹಾಲು ಒಸರಿತು (೨೮).

ತಯೋರಿತ್ಥಂ ಭಗವತಿ ಕೃಷ್ಣೇ ನಂದಯಶೋದಯೋಃ ।
ವೀಕ್ಷ್ಯಾನುರಾಗಂ ಪರಮಂ ನಂದಮಾಹೋದ್ಧವೋ ಮುದಾ ॥ ೨೯

ಉದ್ಧವ ಉವಾಚ—

ಯುವಾಂ ಶ್ಲಾಘ್ಯತಮೌ ನೂನಂ ದೇಹಿನಾಮಿಹ ಮಾನದ ।
ನಾರಾಯಣೇಽಖಿಲಗುರೌ ಯತ್ ಕೃತಾ ಮತಿರೀದೃಶೀ ॥ ೩೦

ಏತೌ ಹಿ ವಿಶ್ವಸ್ಯ ಚ ಬೀಜಯೋನೀ
ರಾಮೋ ಮುಕುಂದಃ ಪುರುಷಃ ಪ್ರಧಾನಮ್ ।
ಅನ್ವೀಯ ಭೂತೇಷು ವಿಲಕ್ಷಣಸ್ಯ
ಜ್ಞಾನಸ್ಯ ಚೇಶಾತ ಇಮೌ ಪುರಾಣೌ ॥ ೩೧

ಯಸ್ಮಿಞ್ಜನಃ ಪ್ರಾಣವಿಯೋಗಕಾಲೇ
ಕ್ಷಣಂ ಸಮಾವೇಶ್ಯ ಮನೋವಿಶುದ್ಧಮ್ ।
ನಿರ್ಹೃತ್ಯ ಕರ್ಮಾಶಯಮಾಶು ಯಾತಿ
ಪರಾಂ ಗತಿಂ ಬ್ರಹ್ಮಮಯೋಽರ್ಕವರ್ಣಃ ॥ ೩೨

---

ಭಗವಾನ್ ಶ್ರೀಕೃಷ್ಣನಲ್ಲಿ ನಂದಯಶೋದೆಯರಿಗಿದ್ದ ಪರಮಪ್ರೀತಿಯನ್ನು ಕಂಡು ಸಂತೋಷದಿಂದ ಉದ್ಧವನು ಹೇಳಿದನು (೨೯): "ಮಹಾಭಾಗ–ನಂದ, ಮನುಷ್ಯರಲ್ಲಿ ನೀವಿಬ್ಬರು ಪ್ರಶಂಸನೀಯರಾದ ವ್ಯಕ್ತಿಗಳು. ವಿಶ್ವಗುರುವಾದ ಶ್ರೀಮನ್ನಾರಾಯಣನಲ್ಲಿ ನಿಮಗೆ ಈ ಬಗೆಯ ನಿಶ್ಚಲಪ್ರೇಮ ಉಂಟಾಗಿದೆ (೩೦). ಬಲರಾಮನೂ ಮುಕುಂದನೂ ಈ ಜಗತ್ತಿಗೆ ನಿಮಿತ್ತ ಕಾರಣರೂ ಉಪಾದಾನ ಕಾರಣರೂ* ಆಗಿದ್ದಾರೆ. ಪುರುಷಪ್ರಕೃತಿಗಳೆಂದರೆ ಇವರೇ. ಅನಾದಿಗಳಾದ ಇವರು ಸಕಲಭೂತಗಳಲ್ಲಿಯೂ ಪ್ರವೇಶಿಸಿ ಭೂತನಿಮಿತ್ತಕವಾದ ನಾನಾಭೇದಗಳಿಗೂ ಚೇತನಸ್ವರೂಪರಾದ ಜೀವಗಳಿಗೂ ನಿಯಾಮಕರಾಗಿದ್ದಾರೆ (೩೧). ಯಾವ ಪರಮಪುರುಷನಲ್ಲಿ ಪರಿಶುದ್ಧವಾದ ಮನಸ್ಸನ್ನು ಪ್ರಾಣೋತ್ಕ್ರಮಣವೇಳೆಯಲ್ಲಿ ಒಂದು ಕ್ಷಣಕಾಲ ಜೀವಿಯು ನೆಲೆಗೊಳಿಸಿದರೆ, ಜೀವಿಯು ಕರ್ಮವಾಸನೆಯನ್ನು ಪರಿತ್ಯಜಿಸಿ ಬ್ರಹ್ಮಮಯನಾಗಿ ಸ್ವರೂಪಜ್ಞಾನವನ್ನು ಪಡೆದು ಸೂರ್ಯನಂತೆ ಶುದ್ಧ ಸತ್ತ್ವಮೂರ್ತಿಯಾಗಿ ಸದ್ಗತಿಯನ್ನೈದುವನೋ (ಆತನೇ ಶ್ರೀಕೃಷ್ಣನೆಂದು ತಿಳಿ) (೩೨).

---

* ಗಡಿಗೆಗೆ ಕುಂಬಾರನು ನಿಮಿತ್ತಕಾರಣ. ಮಣ್ಣು ಉಪಾದಾನಕಾರಣ.

ತಸ್ಮಿನ್ ಭವಂತಾವಖಿಲಾತ್ಮಹೇತೌ
ನಾರಾಯಣೇ ಕಾರಣಮರ್ತ್ಯಮೂರ್ತೌ ।
ಭಾವಂ ವಿಧತ್ತಾಂ ನಿತರಾಂ ಮಹಾತ್ಮನ್
ಕಿಂ ವಾವಶಿಷ್ಟಂ ಯುವಯೋಃ ಸುಕೃತ್ಯಮ್ ॥ ೩೩

ಆಗಮಿಷ್ಯತ್ಯದೀರ್ಘೇಣ ಕಾಲೇನ ವ್ರಜಮಚ್ಯುತಃ ।
ಪ್ರಿಯಂ ವಿಧಾಸ್ಯತೇ ಪಿತ್ರೋರ್ಭಗವಾನ್ ಸಾತ್ವತಾಂ ಪತಿಃ ॥ ೩೪

ಹತ್ವಾ ಕಂಸಂ ರಂಗಮಧ್ಯೇ ಪ್ರತೀಪಂ ಸರ್ವಸಾತ್ವತಾಮ್ ।
ಯದಾಹ ವಃ ಸಮಾಗತ್ಯ ಕೃಷ್ಣಃ ಸತ್ಯಂ ಕರೋತಿ ತತ್ ॥ ೩೫

ಮಾ ಖಿದ್ಯತಂ ಮಹಾಭಾಗೌ ದ್ರಕ್ಷ್ಯಥಃ ಕೃಷ್ಣಮಂತಿಕೇ ।
ಅಂತರ್ಹೃದಿ ಸ ಭೂತಾನಾಮಾಸ್ತೇ ಜ್ಯೋತಿರಿವೈಧಸಿ ॥ ೩೬

ನ ಹ್ಯಸ್ಯಾಸ್ತಿ ಪ್ರಿಯಃ ಕಶ್ಚಿನ್ನಾಪ್ರಿಯೋ ವಾಸ್ತ್ಯಮಾನಿನಃ ।
ನೋತ್ತಮೋ ನಾಧಮೋ ನಾಪಿ ಸಮಾನಸ್ಯಾಸಮೋಽಪಿ ವಾ ॥ ೩೭

---

ವಿಶ್ವಾತ್ಮನೂ ವಿಶ್ವಕಾರಣನೂ ನಿಮಿತ್ತವಶದಿಂದ ಮನುಷ್ಯದೇಹವನ್ನು ಧರಿಸಿದವನೂ ಆದ ಶ್ರೀಮನ್ನಾರಾಯಣನಲ್ಲಿ, ಓ ಮಹಾತ್ಮ, ದಂಪತಿಗಳಾದ ನೀವಿಬ್ಬರೂ ಭಕ್ತಿಭಾವವನ್ನು ದೃಢವಾಗಿ ನೆಲೆಗೊಳಿಸಿದ್ದೀರಿ. ನೀವು ಇನ್ನು ಮಾಡಬೇಕಾದ ಪುಣ್ಯಕಾರ್ಯವಾದರೂ ಯಾವುದು ಉಳಿದಿದೆ? (೩೩). ಸಾತ್ವತಕುಲಪತಿಯಾದ ಭಗವಾನ್ ಅಚ್ಯುತನು ಶೀಘ್ರದಲ್ಲಿಯೇ ವ್ರಜಕ್ಕೆ ಆಗಮಿಸುವನು. ತಂದೆತಾಯಿಗಳಾದ ನಿಮಗೆ ಆನಂದವನ್ನೀಯುವನು (೩೪). ಸಕಲ ಯಾದವರಿಗೂ ವಿರೋಧಿಯಾಗಿದ್ದ ಕಂಸನನ್ನು ರಂಗಮಧ್ಯದಲ್ಲಿ ಸಂಹರಿಸಿದಮೇಲೆ ನಿಮ್ಮನ್ನು ಕುರಿತು ಏನುಹೇಳಿದನೋ, ಅದನ್ನು ಸತ್ಯವಾಗಿ ನಡೆಸುವನು (೩೫). ಮಹಾಶಯ, ನೀವಿಬ್ಬರೂ ಖಿನ್ನರಾಗಬೇಡಿರಿ. ಬಳಿಯಲ್ಲಿಯೇ ಶ್ರೀಕೃಷ್ಣನನ್ನು ಕಾಣುವಿರಿ. ಸಮಿತ್ತಿನಲ್ಲಿ ಅಗ್ನಿಯಿರುವಂತೆ ಆತನು ಸಕಲ ಪ್ರಾಣಿಗಳ ಹೃದಯದಲ್ಲಿ ನೆಲೆಸಿದ್ದಾನೆ (೩೬). ಅಭಿಮಾನರಹಿತನಾದ ಆವನಿಗೆ ಪ್ರಿಯನಾದವನೂ ಇಲ್ಲ; ಅಪ್ರಿಯನೂ ಇಲ್ಲ. ಸಮದೃಷ್ಟಿಯುಳ್ಳ ಆವನಿಗೆ ಉತ್ತಮನೆಂಬವನೂ ಇಲ್ಲ; ಅಧಮನೆಂಬವನೂ ಇಲ್ಲ (೩೭).

ನ ಮಾತಾ ನ ಪಿತಾ ತಸ್ಯ ನ ಭಾರ್ಯಾ ನ ಸುತಾದಯಃ ।
ನಾತ್ಮೀಯೋ ನ ಪರಶ್ಚಾಪಿ ನ ದೇಹೋ ಜನ್ಮ ಏವ ಚ ॥ ೩೮

ನ ಚಾಸ್ಯ ಕರ್ಮ ವಾ ಲೋಕೇ ಸದಸನ್ಮಿಶ್ರಯೋನಿಷು ।
ಕ್ರೀಡಾರ್ಥಃ ಸೋಽಪಿ ಸಾಧೂನಾಂ ಪರಿತ್ರಾಣಾಯ ಕಲ್ಪತೇ ॥ ೩೯

ಸತ್ತ್ವಂ ರಜಸ್ತಮ ಇತಿ ಭಜತೇ ನಿರ್ಗುಣೋ ಗುಣಾನ್ ।
ಕ್ರೀಡನ್ನತೀತೋಽತ್ರ ಗುಣೈಃ ಸೃಜತ್ಯವತಿ ಹಂತ್ಯಜಃ ॥ ೪೦

ಯಥಾ ಭ್ರಮರಿಕಾದೃಷ್ಟ್ಯಾ ಭ್ರಾಮ್ಯತೀವ ಮಹೀಯತೇ ।
ಚಿತ್ತೇ ಕರ್ತರಿ ತತ್ರಾತ್ಮಾ ಕರ್ತೇವಾಹಂಧಿಯಾ ಸ್ಮೃತಃ ॥ ೪೧

ಯುವಯೋರೇವ ನೈವಾಯಮಾತ್ಮಜೋ ಭಗವಾನ್ ಹರಿಃ ।
ಸರ್ವೇಷಾಮಾತ್ಮಜೋ ಹ್ಯಾತ್ಮಾ ಪಿತಾ ಮಾತಾ ಸ ಈಶ್ವರಃ ॥ ೪೨

---

ಆ ಪರಮಾತ್ಮನಿಗೆ ತಾಯಿ ಇಲ್ಲ, ತಂದೆ ಇಲ್ಲ, ಮಡದಿಯೂ ಇಲ್ಲ, ಮಕ್ಕಳೇ ಮೊದಲಾದ ಬಂಧುಗಳೂ ಇಲ್ಲ! ಆತ್ಮೀಯನೂ ಇಲ್ಲ, ಪರಕೀಯನೂ ಇಲ್ಲ; ದೇಹಜನ್ಮಗಳೂ ಇಲ್ಲ (೩೮). ಆತನಿಗೆ ಮಾಡಬೇಕಾದ ಕರ್ತವ್ಯವೂ ಇಲ್ಲ. ಅಂಥವನಾದರೂ ಕ್ರೀಡೆಗಾಗಿ ಸಜ್ಜನರ ಪಾಲನೆಯ ಉದ್ದೇಶದಿಂದ ದೇವತಿರ್ಯಙ್ಮನುಷ್ಯಾದಿಯೋನಿಗಳಲ್ಲಿ ಆವಿರ್ಭವಿಸುತ್ತಾನೆ (೩೯). ಜನ್ಮರಹಿತನಾದ ಆತನು ನಿರ್ಗುಣನಾದರೂ ಸತ್ತ್ವರಜಸ್ತಮಸ್ಸುಗಳೆಂಬ ಮಾಯಾಗುಣಗಳನ್ನು ಅವಲಂಬಿಸಿ, ಇಚ್ಛಾರಹಿತನಾದರೂ ಗುಣಗಳಿಂದ ಕ್ರೀಡಿಸುತ್ತ ಸೃಜಿಸುತ್ತಾನೆ, ಪಾಲಿಸುತ್ತಾನೆ, ಸಂಹರಿಸುತ್ತಾನೆ (೪೦). ಅಪ್ಪಾಲೆತಿಪ್ಪಾಲೆಯಾಡುತ್ತ ತಿರುಗುವವನ ದೃಷ್ಟಿಯಲ್ಲಿ (ಅಲ್ಲಾಡದಿರುವ) ಭೂಮಿಯೇ ತಿರುಗುವಂತೆ ಪ್ರತೀತವಾಗುವುದು. ಹಾಗೆಯೇ ವಾಸ್ತವವಾಗಿ ಕರ್ತೃವಾಗಿರುವ ಚಿತ್ತದಲ್ಲಿ, 'ನಾನು' ಎಂದು ಅಧ್ಯಾಸಗೊಂಡಿರುವ ಆತ್ಮನು ಕರ್ತೃವಿನಂತೆ ಪ್ರತೀತನಾಗುತ್ತಿದ್ದಾನೆ (೪೧). ಅಲ್ಲದೆ, ನಂದಗೋಪ, ಭಗವಾನ್ ಶ್ರೀಹರಿಯು ನಿಮ್ಮಿಬ್ಬರಿಗೆ ಮಾತ್ರವೇ ಪುತ್ರನಲ್ಲ! ಆ ಈಶ್ವರನು ಸರ್ವರಿಗೂ ಪುತ್ರನೂ ಅವರ ಸ್ವಸ್ವರೂಪನೂ ತಾಯಿಯೂ ತಂದೆಯೂ ಆಗಿದ್ದಾನೆ! (೪೨).

ದೃಷ್ಟಂ ಶ್ರುತಂ ಭೂತಭವದ್ಭವಿಷ್ಯತ್
ಸ್ಥಾಸ್ನುಶ್ಚರಿಷ್ಣುರ್ಮಹದಲ್ಪಕಂ ಚ ।
ವಿನಾಚ್ಯುತಾದ್ ವಸ್ತು ತರಾಂ ನ ವಾಚ್ಯಂ
ಸ ಏವ ಸರ್ವಂ ಪರಮಾರ್ಥಭೂತಃ ॥ ೪೩

ಏವಂ ನಿಶಾ ಸಾ ಬ್ರುವತೋರ್ವ್ಯತೀತಾ
ನಂದಸ್ಯ ಕೃಷ್ಣಾನುಚರಸ್ಯ ರಾಜನ್ ।
ಗೋಪ್ಯಃ ಸಮುತ್ಥಾಯ ನಿರೂಪ್ಯ ದೀಪಾನ್
ವಾಸ್ತೂನ್ ಸಮಭ್ಯರ್ಚ್ಯ ದಧೀನ್ಯಮಂಥನ್ ॥ ೪೪

ತಾ ದೀಪದೀಪ್ತೈರ್ಮಣಿಭಿರ್ವಿರೇಜೂ
ರಜ್ಜೂರ್ವಿಕರ್ಷದ್ಭುಜಕಂಕಣಸ್ರಜಃ ।
ಚಲನ್ನಿತಂಬಸ್ತನಹಾರಕುಂಡಲ-
ತ್ವಿಷತ್ಕಪೋಲಾರುಣಕುಂಕುಮಾನನಾಃ ॥ ೪೫

---

ಲೋಕದಲ್ಲಿ ಕಂಡಿರುವ ಮತ್ತು ಕೇಳಿರುವ ವಸ್ತುಗಳೂ, ಹಿಂದೆ ಹುಟ್ಟಿದ ಈಗ ಹುಟ್ಟಿರುವ ಮತ್ತು ಮುಂದೆ ಹುಟ್ಟಲಿರುವ ವಸ್ತುಗಳೂ, ಸ್ಥಾವರಜಂಗಮಗಳೂ, ಬಹುದೊಡ್ಡದಾದ ಮತ್ತು ಬಹು ಚಿಕ್ಕದಾದ ವಸ್ತುವೂ–ಯಾವುದೇ ಆದರೂ ಅದು ಅಚ್ಯುತನಿಗೆ ಅತಿರಿಕ್ತವೆಂದು ಹೇಳಕೂಡದು. ಸರ್ವವೂ ಪರಮಾರ್ಥದಲ್ಲಿ ಆತನೇ " ಎಂದು ಹೇಳಿದನು (೪೩). ಪರೀಕ್ಷಿತರಾಜ, ಈ ಪ್ರಕಾರದಲ್ಲಿ ನಂದನೂ ಶ್ರೀಕೃಷ್ಣಭಕ್ತನಾದ ಉದ್ಧವನೂ ಸಂಭಾಷಿಸುತ್ತಿರುವಾಗಲೇ ರಾತ್ರಿ ಕಳೆದುಹೋಯಿತು! (ಅರುಣೋದಯವಾದೊಡನೆ) ಗೋಪಿಯರು ಎದ್ದು ದೀಪವನ್ನು ಹಚ್ಚಿ, ಬಾಗಿಲನ್ನು ಬಳಿದು ಪೂಜಿಸಿ ಮೊಸರನ್ನು ಕಡೆಯಲಾರಂಭಿಸಿದರು (೪೪). ಅವರು ಮೊಸರನ್ನು ಕಡೆಯುವಾಗ (ಮೈಮೇಲಿದ್ದ ಒಡವೆಗಳ) ಮಣಿಗಳು ದೀಪಗಳಿಂದ ಬೆಳಗುತ್ತಿದ್ದವು. ಹಗ್ಗವನ್ನು ಎಳೆಯುವ ತೋಳುಗಳಲ್ಲಿ ಬಳೆಗಳು ಮಾಲೆಗಳಂತೆ ಶೋಭಿಸುತ್ತಿದ್ದವು. ನಿತಂಬ, ಸ್ತನ, ಹಾರ, ಕುಂಡಲಗಳು ಚಲಿಸುತ್ತಿದ್ದವು. ಕುಂಡಲಗಳ ಕಾಂತಿಯು ಕಪೋಲಗಳ ಮೇಲೆ ಹರಡಿತ್ತು. ಮುಖಗಳಲ್ಲಿ ಕೆಂಪಾದ ಕುಂಕುಮ ರಂಜಿಸುತ್ತಿತ್ತು (೪೫).

ಉದ್ಗಾಯತೀನಾಮರವಿಂದಲೋಚನಂ
ವ್ರಜಾಂಗನಾನಾಂ ದಿವಮಸ್ಪೃಶದ್ ಧ್ವನಿಃ ।
ದಧ್ನಶ್ಚ ನಿರ್ಮಂಥನಶಬ್ದಮಿಶ್ರಿತೋ
ನಿರಸ್ಯತೇ ಯೇನ ದಿಶಾಮಮಂಗಲಮ್ ॥ ೪೬

ಭಗವತ್ಯುದಿತೇ ಸೂರ್ಯೇ ನಂದದ್ವಾರಿ ವ್ರಜೌಕಸಃ ।
ದೃಷ್ಟ್ವಾ ರಥಂ ಶಾತಕೌಂಭಂ ಕಸ್ಯಾಯಮಿತಿ ಚಾಬ್ರುವನ್ ॥ ೪೭

ಅಕ್ರೂರ ಆಗತಃ ಕಿಂ ವಾ ಯಃ ಕಂಸಸ್ಯಾರ್ಥಸಾಧಕಃ ।
ಯೇನ ನೀತೋ ಮಧುಪುರೀಂ ಕೃಷ್ಣಃ ಕಮಲಲೋಚನಃ ॥ ೪೮

ಕಿಂ ಸಾಧಯಿಷ್ಯತ್ಯಸ್ಮಾಭಿರ್ಭರ್ತುಃ ಪ್ರೇತಸ್ಯ ನಿಷ್ಕೃತಿಮ್ ।
ಇತಿ ಸ್ತ್ರೀಣಾಂ ವದಂತೀನಾಮುದ್ಧವೋಽಗಾತ್ ಕೃತಾಹ್ನಿಕಃ ॥ ೪೯

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಷಟ್‌ಚತ್ವಾರಿಂಶಾಧ್ಯಾಯಃ

---

ಅರವಿಂದನೇತ್ರನಾದ ಶ್ರೀಕೃಷ್ಣನ ಹಾಡುಗಳನ್ನು ಆ ಗೋಪಿಯರು ಹಾಡುತ್ತಿರಲು, ಘೋರೆಂದು ಮೊಸರು ಕಡೆಯುವ ಶಬ್ದದೊಡನೆ ಸಂಮಿಶ್ರವಾದ ಆ ಗೀತಧ್ವನಿಯು ನಭವನ್ನಡರಿತು. ಆ ಧ್ವನಿಯು ದಿಗಂತಗಳ ಅಮಂಗಳವನ್ನು ಹೋಗಲಾಡಿಸಿತು (೪೬). ಸೂರ್ಯೋದಯವಾದ ಮೇಲೆ ನಂದಗೋಪನ ಮನೆಯ ಬಾಗಿಲಲ್ಲಿ ನಿಂತಿದ್ದ ಸುವರ್ಣಮಯವಾದ ರಥವನ್ನು ಕಂಡು ವ್ರಜ ವಾಸಿಗಳು "ಇದು ಯಾರದು?" ಎಂದು ವಿಚಾರಿಸತೊಡಗಿದರು (೪೭): "ಕಂಸನ ಕಾರ್ಯಸಾಧಕನಾದ ಅಕ್ರೂರ ಬಂದಿರಬಹುದೆ! ಕಮಲಲೋಚನ ನಾದ ಕೃಷ್ಣನನ್ನು ಮಧುರೆಗೆ ಕರೆದೊಯ್ದನಲ್ಲ, ಅವನು ಮತ್ತೆ ಬಂದಿರಬಹುದೆ! ನಮ್ಮಿಂದ ಅವನು ಸಾಧಿಸುವುದೇನು? ತನ್ನ ಒಡೆಯನಾದ ಕಂಸನಿಗೆ (ನಮ್ಮ ಮಾಂಸದ ಪಿಂಡಗಳನ್ನು ಕಟ್ಟಿ) ಪ್ರೇತಕರ್ಮವನ್ನು ಮಾಡಿಸುವನೋ ಹೇಗೆ!" ಎಂದು ಗೋಪಿಯರು ಮಾತಾಡುತ್ತಿದ್ದರು. ಅಷ್ಟರಲ್ಲಿ ಪ್ರಾತರಾಹ್ನಿಕವನ್ನು ಮುಗಿಸಿದ ಉದ್ಧವನು ಅಲ್ಲಿಗೆ ಬಂದನು (೪೮–೪೯).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತಾರನೆಯ ಅಧ್ಯಾಯ

## ಸಪ್ತಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

ತಂ ವೀಕ್ಷ್ಯ ಕೃಷ್ಣಾನುಚರಂ ವ್ರಜಸ್ತ್ರಿಯಃ
ಪ್ರಲಂಬಬಾಹುಂ ನವಕಂಜಲೋಚನಮ್ ।
ಪೀತಾಂಬರಂ ಪುಷ್ಕರಮಾಲಿನಂ ಲಸ-
ನ್ಮುಖಾರವಿಂದಂ ಮಣಿಮೃಷ್ಟಕುಂಡಲಮ್ ॥ ೧

ಶುಚಿಸ್ಮಿತಾಃ ಕೋಽಯಮಪೀಚ್ಯದರ್ಶನಃ
ಕುತಶ್ಚ ಕಸ್ಯಾಚ್ಯುತವೇಷಭೂಷಣಃ ।
ಇತಿ ಸ್ಮ ಸರ್ವಾಃ ಪರಿವವ್ರುರುತ್ಸುಕಾ-
ಸ್ತಮುತ್ತಮಶ್ಲೋಕಪದಾಂಬುಜಾಶ್ರಯಮ್ ॥ ೨

ತಂ ಪ್ರಶ್ರಯೇಣಾವನತಾಃ ಸುಸತ್ಕೃತಂ
ಸವ್ರೀಡಹಾಸೇಕ್ಷಣಸೂನೃತಾದಿಭಿಃ ।

### ಅಧ್ಯಾಯ ೪೭

ಉದ್ಧವ–ಗೋಪಿಯರ ಸಂವಾದ. ಭ್ರಮರಗೀತೆ. ಉದ್ಧವನು
ಮಧುರೆಗೆ ಹಿಂದಿರುಗುವುದು

ಆಗ ವ್ರಜಾಂಗನೆಯರು ದೀರ್ಘಬಾಹುವೂ ನವಪದ್ಮದಳನೇತ್ರನೂ ಪೀತಾಂಬರಧಾರಿಯೂ ಕಮಲಮಾಲೆಯನ್ನು ಧರಿಸಿದವನೂ ಪ್ರಕಾಶಮಾನ ಮುಖಾರವಿಂದನೂ ರತ್ನಖಚಿತಕುಂಡಲಗಳಿಂದ ಶೋಭಿಸತಕ್ಕವನೂ ಶ್ರೀ ಕೃಷ್ಣನ ಮಿತ್ರನೂ ಆದ ಉದ್ಧವನನ್ನು ವೀಕ್ಷಿಸಿದರು (೧). ಅವರು ಶುಭ್ರ ವಾದ ಮುಗುಳ್ನಗೆಯನ್ನು ಬೀರುತ್ತ “ ಈ ಭವ್ಯರೂಪನು ಯಾರು ? ಅಚ್ಯುತನ ವೇಷಭೂಷಣಗಳನ್ನು ಧರಿಸಿರುವ ಇವನು ಎಲ್ಲಿಂದ ಬಂದನು ? ” ಎಂಬ ಕುತೂಹಲದಿಂದ ಎಲ್ಲರೂ ಉತ್ತಮಶ್ಲೋಕನ ಪಾದಕಮಲವನ್ನಾಶ್ರಯಿಸಿದ್ದ ಉದ್ಧವನ ಸುತ್ತ ಸೇರಿದರು (೨) ವಿನಯದಿಂದ ಅವನಿಗೆ ನಮಸ್ಕರಿಸಿನಾಚಿಕೆ, ಮುಗುಳ್ನಗೆಯ ನೋಟ, ಒಳ್ಳೆಯ ನುಡಿಗಳಿಂದಲೇ ಸತ್ಕರಿಸಿದರು. ಉದ್ಧವನು

ರಹಸ್ಯಪೃಚ್ಛನ್ನುಪವಿಷ್ಟಮಾಸನೇ
ವಿಜ್ಞಾಯ ಸಂದೇಶಹರಂ ರಮಾಪತೇಃ ॥ ೩

ಜಾನೀಮಸ್ತ್ವಾಂ ಯದುಪತೇಃ ಪಾರ್ಷದಂ ಸಮುಪಾಗತಮ್ ।
ಭರ್ತ್ರೇಹ ಪ್ರೇಷಿತಃ ಪಿತ್ರೋರ್ಭವಾನ್ ಪ್ರಿಯಚಿಕೀರ್ಷಯಾ ॥ ೪

ಅನ್ಯಥಾ ಗೋವ್ರಜೇ ತಸ್ಯ ಸ್ಮರಣೀಯಂ ನ ಚಕ್ಷ್ಮಹೇ ।
ಸ್ನೇಹಾನುಬಂಧೋ ಬಂಧೂನಾಂ ಮುನೇರಪಿ ಸುದುಸ್ತ್ಯಜಃ ॥ ೫

ಅನ್ಯೇಷ್ವರ್ಥಕೃತಾ ಮೈತ್ರೀ ಯಾವದರ್ಥವಿಡಂಬನಮ್ ।
ಪುಂಭಿಃ ಸ್ತ್ರೀಷು ಕೃತಾ ಯದ್ವತ್ ಸುಮನಸ್ಸ್ವಿವ ಷಟ್ಪದೈಃ ॥ ೬

ನಿಸ್ಸ್ವಂ ತ್ಯಜಂತಿ ಗಣಿಕಾ ಅಕಲ್ಪಂ ನೃಪತಿಂ ಪ್ರಜಾಃ ।
ಅಧೀತವಿದ್ಯಾ ಆಚಾರ್ಯಮೃತ್ವಿಜೋ ದತ್ತದಕ್ಷಿಣಮ್ ॥ ೭

---

ಲಕ್ಷ್ಮೀಪತಿಯ ಸಂದೇಶಹರನೆಂಬುದು ತಿಳಿದಮೇಲೆ ಗೋಪಿಯರು ಏಕಾಂತದಲ್ಲಿ ಹೋಗಿ ಕಂಡು, ಪೀಠದಲ್ಲಿ ಕುಳಿತಿದ್ದ ಅವನನ್ನು ಕೇಳಿದರು (೩): "ಅಯ್ಯಾ–ಉದ್ಧವ, ನೀನು ಯದುಪತಿಯ ಸೇವಕನಾಗಿ ಆಗಮಿಸಿರುವೆಯೆಂದು ನಮಗೆ ಗೊತ್ತಾಗಿದೆ. ತನ್ನ ತಾಯಿತಂದೆಗಳಿಗೆ ಸಂತೋಷವನ್ನೀಯಲು ಒಡೆಯನು ನಿನ್ನನ್ನು ಕಳಿಸಿದ್ದಾನೆ (೪). ಅದನ್ನು ಬಿಟ್ಟರೆ ಈ ಗೋಕುಲದಲ್ಲಿ ಅವನು ಸ್ಮರಿಸಿಕೊಳ್ಳಬೇಕಾದದ್ದು ಏನೂ ಇಲ್ಲ! ಆತ್ಮಬಂಧುಗಳಲ್ಲಿ ಸ್ನೇಹಾನುಬಂಧವು ಯೋಗಿಗಳಿಗೂ ತ್ಯಜಿಸಲು ಶಕ್ಯವಲ್ಲ (೫). ಹತ್ತಿರದ ಬಂಧುಗಳನ್ನು ಬಿಟ್ಟು ಉಳಿದವರಲ್ಲಿ ಸ್ನೇಹವೆನ್ನುವುದು ಕಾರ್ಯಹೇತುಕವಾದುದು–ಸಹಜವಾದ್ದಲ್ಲ. ಅದು ಗಂಡಸರಿಗೆ ಹೆಂಗಸರಲ್ಲಿರುವ ಪ್ರೀತಿಯ ಹಾಗೆ! ದುಂಬಿಗಳಿಗೆ ಹೂಗಳಲ್ಲಿರುವ ಪ್ರೀತಿಯ ಹಾಗೆ! (೬). ಹಣವನ್ನು ಕಳೆದುಕೊಂಡು ದರಿದ್ರನಾದವನನ್ನು ವೇಶ್ಯೆಯರು ದೂರಮಾಡುತ್ತಾರೆ. ಅಸಮರ್ಥನಾದ ದೊರೆಯನ್ನು ಪ್ರಜೆಗಳು ತ್ಯಜಿಸುತ್ತಾರೆ. ವಿದ್ಯೆಯನ್ನು ಕಲಿತ ಮೇಲೆ ಶಿಷ್ಯರು ಗುರುವನ್ನೂ ದಕ್ಷಿಣೆಯನ್ನು ಕೊಟ್ಟಮೇಲೆ ಯಜಮಾನನನ್ನು ಪುರೋಹಿತರೂ ತೊರೆದು ಹೋಗುತ್ತಾರೆ! (೭).

**ಖಗಾ ವೀತಫಲಂ ವೃಕ್ಷಂ ಭುಕ್ತ್ವಾ ಚಾತಿಥಯೋ ಗೃಹಮ್ ।**
**ದಗ್ಧಂ ಮೃಗಾಸ್ತಥಾರಣ್ಯಂ ಜಾರೋ ಭುಕ್ತ್ವಾ ರತಾಂ ಸ್ತ್ರಿಯಮ್ ॥**

**ಇತಿ ಗೋಪ್ಯೋ ಹಿ ಗೋವಿಂದೇ ಗತವಾಕ್ಕಾಯಮಾನಸಾಃ ।**
**ಕೃಷ್ಣದೂತೇ ವ್ರಜಂ ಯಾತೇ ಉದ್ಧವೇ ತ್ಯಕ್ತಲೌಕಿಕಾಃ ॥ ೯**

**ಗಾಯಂತ್ಯಃ ಪ್ರಿಯಕರ್ಮಾಣಿ ರುದತ್ಯಶ್ಚ ಗತಹ್ರಿಯಃ ।**
**ತಸ್ಯ ಸಂಸ್ಮೃತ್ಯ ಸಂಸ್ಮೃತ್ಯ ಯಾನಿ ಕೈಶೋರಬಾಲ್ಯಯೋಃ ॥ ೧೦**

**ಕಾಚಿನ್ಮಧುಕರಂ ದೃಷ್ಟ್ವಾ ಧ್ಯಾಯಂತೀ ಕೃಷ್ಣಸಂಗಮಮ್ ।**
**ಪ್ರಿಯಪ್ರಸ್ಥಾಪಿತಂ ದೂತಂ ಕಲ್ಪಯಿತ್ವೇದಮಬ್ರವೀತ್ ॥ ೧೧**

---

ಹಣ್ಣಿಲ್ಲದ ಮರವನ್ನು ಹಕ್ಕಿಗಳೂ ಊಟಮಾಡಿದಮೇಲೆ ಉಂಡಮನೆಯನ್ನು ಅತಿಥಿಗಳೂ ಸುಟ್ಟುಹೋದ ಕಾಡನ್ನು ಮೃಗಗಳೂ ತ್ಯಜಿಸುವುದು ಸಹಜ. ಜಾರನು ಅನುರಕ್ತಳಾದ ಸ್ತ್ರೀಯನ್ನು ಭೋಗಿಸಿದ ಮೇಲೆ ತೊರೆದು ಬಿಡುತ್ತಾನೆ!" ಎಂದರು (೮). ಈ ಪ್ರಕಾರವಾಗಿ ನುಡಿದ ಗೋಪಿಯರು ಗೋವಿಂದನಲ್ಲಿಯೇ ನೆಟ್ಟುಹೋದ ಮಾತು–ಮನಸ್ಸು–ದೇಹವುಳ್ಳವರಾಗಿ, ವ್ರಜಕ್ಕೆ ಆಗಮಿಸಿದ ಗೋವಿಂದದೂತನಾದ ಉದ್ಧವನೆದುರಿಗೆ, ಲೌಕಿಕವಾದ ಮನೆಮಾರಿನ ಕೆಲಸಗಳನ್ನು ತೊರೆದು, ಲಜ್ಜೆಯನ್ನು ಬಿಟ್ಟು, ಗೋವಿಂದನ ಪ್ರಿಯಕಾರ್ಯಗಳನ್ನು ಹಾಡುತ್ತ ಅಳತೊಡಗಿದರು. ಗೋವಿಂದನು ಕಿಶೋರನಾಗಿದ್ದಾಗ, ಬಾಲಕನಾಗಿದ್ದಾಗ–ಯಾವ ಕಾರ್ಯಗಳನ್ನೆಸಗಿದನೋ ಅವನ್ನು ಮತ್ತೆ ಮತ್ತೆ ನೆನೆಸಿಕೊಂಡು ಹಾಡಿದರು (೯–೧೦). ಶ್ರೀಕೃಷ್ಣನ ಸಂಗಮವನ್ನೇ ಧ್ಯಾನಿಸುತ್ತಿದ್ದ ಒಬ್ಬ ಗೋಪಿಯು ಒಂದು ಭ್ರಮರವನ್ನು ನೋಡಿ, ಶ್ರೀಕೃಷ್ಣನ ದೂತನೆಂದು ತಿಳಿದು* ಹಾಡಿದಳು (೧೧) :

---

* ಭ್ರಮರವನ್ನು ಕೃಷ್ಣದೂತನೆಂದು ಭ್ರಮಿಸಿ ಹಾಡಿದಳು. ಅಥವಾ ಕೃಷ್ಣದೂತನಾದ ಉದ್ಧವನಿಗೆ ಭ್ರಮರದ ನೆವದಿಂದ ಹೇಳಿದಳು–ಎಂದು ಎರಡು ಅಭಿಪ್ರಾಯಗಳೂ ಇಲ್ಲಿ ತೋರುತ್ತವೆ. ಇದೂ ಸೇರಿ ಮುಂದಿನ ಹತ್ತು ಶ್ಲೋಕಗಳಿಗೆ ಭ್ರಮರಗೀತವೆಂದು ಹೆಸರು.

ಗೋಪ್ಯುವಾಚ—

ಮಧುಪ ಕಿತವಬಂಧೋ ಮಾ ಸ್ಪೃಶಾಂಘ್ರಿಂ ಸಪತ್ನ್ಯಾಃ
ಕುಚವಿಲುಲಿತಮಾಲಾಕುಂಕುಮಶ್ಮಶ್ರುಭಿರ್ನಃ ।
ವಹತು ಮಧುಪತಿಸ್ತನ್ಮಾನಿನೀನಾಂ ಪ್ರಸಾದಂ
ಯದುಸದಸಿ ವಿಡಂಬಂ ಯಸ್ಯ ದೂತಸ್ತ್ವಮೀದೃಕ್ ॥ ೧೨

ಸಕೃದಧರಸುಧಾಂ ಸ್ವಾಂ ಮೋಹಿನೀಂ ಪಾಯಯಿತ್ವಾ
ಸುಮನಸ ಇವ ಸದ್ಯಸ್ತತ್ಯಜೇಽಸ್ಮಾನ್ ಭವಾದೃಕ್ ।
ಪರಿಚರತಿ ಕಥಂ ತತ್ಪಾದಪದ್ಮಂ ತು ಪದ್ಮಾ
ಹ್ಯಪಿ ಬತ ಹೃತಚೇತಾ ಉತ್ತಮಶ್ಲೋಕಜಲ್ಪೈಃ ॥ ೧೩

ಕಿಮಿಹ ಬಹು ಷಡಂಘ್ರೇ ಗಾಯಸಿ ತ್ವಂ ಯದೂನಾ-
ಮಧಿಪತಿಮಗೃಹಾಣಾಮಗ್ರತೋ ನಃ ಪುರಾಣಮ್ ।
ವಿಜಯಸಖಸಖೀನಾಂ ಗೀಯತಾಂ ತತ್ಪ್ರಸಂಗಃ
ಕ್ಷಪಿತಕುಚರುಜಸ್ತೇ ಕಲ್ಪಯಂತೀಷ್ಟಮಿಷ್ಟಾಃ ॥ ೧೪

---

"ಎಲೈ ಭ್ರಮರವೆ—ಧೂರ್ತನ ಗೆಳೆಯನೆ! ಸವತಿಯ ಕುಚಗಳಿಂದ ವಿಲುಲಿತವಾದ ವನಮಾಲೆಯ ಕುಂಕುಮದಿಂದ ಕೆಂಪಾದ ನಿನ್ನ ಮೀಸೆಗಳಿಂದ ನಮ್ಮ ಕಾಲನ್ನು ಮುಟ್ಟಬೇಡ! ಮಧುಪತಿಯಾದ ಕೃಷ್ಣನು ಆ ಮಾನಿನಿಯರ ಪ್ರಸನ್ನತೆಯನ್ನೇ ಗಳಿಸಿಕೊಂಡಿರಲಿ! ಯಾದವರ ಸಭೆಯಲ್ಲಿ ಜನರು ಅವನ ಕಾರ್ಯವನ್ನು ಹಳಿಯಲಿ! ಅವನ ದೂತನಾದ ನೀನು ಹೀಗಿರುವೆಯಲ್ಲ—ಕೆಂಪುಬಣ್ಣದ ಮೀಸೆಗಳನ್ನು ಹೊತ್ತುಬಂದಿರುವೆ! (೧೨). ಎಲಾ ದುಂಬಿ, ಮೋಹಕವಾದ ತನ್ನ ಅಧರಾಮೃತವನ್ನು ಒಮ್ಮೆ ನಮಗೆ ಕುಡಿಸಿ, ಕೃಷ್ಣನು ನಮ್ಮನ್ನು ತೊರೆದು ಹೋದನು. ಹೂಗಳನ್ನು ತೊರೆದುಹೋಗುವ ನಿನ್ನಂಥ ವನೇ ಅವನು! ಅಂಥ (ಮೋಸಗಾರನ) ಪಾದಪದ್ಮವನ್ನು ಲಕ್ಷ್ಮಿಯು ಶುಶ್ರೂಷೆಮಾಡುತ್ತಲೇ ಹೇಗೆ ಇದ್ದಿರಬಹುದು? ಅಯ್ಯೊ, ಉತ್ತಮಶ್ಲೋಕನ ಮರುಳುಮಾತುಗಳಿಂದ ಅವಳು ಮರುಳಾದಳು! (೧೩). ಎಲೆ ಮಧುಪ! ಮನೆಯಿಲ್ಲದವರಾದ—ಪ್ರೇಮಕ್ಕೆ ಪಾತ್ರರೆನಿಸದ ನಮ್ಮ ಮುಂದೆ ಯದುಪತಿಯನ್ನು ಅದೇಕೆ ಬಹುವಾಗಿ ಹಾಡಿಹೊಗಳುವೆ? ಅವನು ನಮಗೆ ಹಳಬ!

**ದಿವಿ ಭುವಿ ಚ ರಸಾಯಾಂ ಕಾಃ ಸ್ತ್ರಿಯಸ್ತದ್ದುರಾಪಾಃ**
**ಕಪಟರುಚಿರಹಾಸಭ್ರೂವಿಜೃಂಭಸ್ಯ ಯಾಃ ಸ್ಯುಃ ।**
**ಚರಣರಜ ಉಪಾಸ್ತೇ ಯಸ್ಯ ಭೂತಿರ್ವಯಂ ಕಾ**
**ಅಪಿ ಚ ಕೃಪಣಪಕ್ಷೇ ಹ್ಯುತ್ತಮಶ್ಲೋಕಶಬ್ದಃ ॥ ೧೫**

**ವಿಸೃಜ ಶಿರಸಿ ಪಾದಂ ವೇದ್ಮ್ಯಹಂ ಚಾಟುಕಾರೈ-**
**ರನುನಯವಿದುಷಸ್ತೇಽಭ್ಯೇತ್ಯ ದೌತ್ಯೈರ್ಮುಕುಂದಾತ್ ।**
**ಸ್ವಕೃತ ಇಹ ವಿಸೃಷ್ಟಾಪತ್ಯಪತ್ಯನ್ಯಲೋಕಾ**
**ವ್ಯಸೃಜದಕೃತಚೇತಾಃ ಕಿಂ ನು ಸಂಧೇಯಮಸ್ಮಿನ್ ॥ ೧೬**

---

(ಅವನ ವಿಷಯ ನಮಗೆ ಗೊತ್ತು !) ವಿಜಯಶಾಲಿಯಾದ ಕೃಷ್ಣನ ಸಖಿಯರೆದುರಿಗೆ ಅವನ ಕಥಾಪ್ರಸಂಗವನ್ನು ಹಾಡು. (ಆಲಿಂಗನಾದಿಗಳಿಂದ) ಸ್ತನಗಳ ಪೀಡೆಯನ್ನು ನೀಗಿಕೊಂಡಿರುವ ಆತನ ಕಾಂತೆಯರು ನಿನಗೆ ಬೇಕಾದ್ದನ್ನು ನಡೆಸುವರು ! (೧೪). ಎಲೋ ಕಪಟಿಯಾದ ದುಂಬಿ ! ಮನೋಹರವಾಗಿ ಮುಗುಳ್ನಗೆ ಬೀರುತ್ತ ಹುಬ್ಬುಹಾರಿಸುವ ಅವನಿಗೆ, ದೇವಲೋಕ ಭೂಲೋಕ ಪಾತಾಳಗಳಲ್ಲಿ ದುರ್ಲಭರಾದ ಅಂಗನೆಯರು ಯಾರಿದ್ದಾರೆ? ಯಾರ ಪಾದಧೂಳಿಯನ್ನು ಶ್ರೀದೇವಿಯೇ ಸೇವಿಸುವಳೋ ಅವನಿಗೆ ನಾವು ಎಷ್ಟು ಮಾತ್ರದವರು ? ಆದರೂ ಉತ್ತಮಶ್ಲೋಕವೆಂಬ ಶಬ್ದವು ದೀನದಯಾಳುವಿಗೆ ಅನ್ವಯಿಸುತ್ತದೆಂಬೆಂದು ನೀನು ಹೇಳಬೇಕಾಗಿದೆ ! * (೧೫). ಎಲೆ ! ನನ್ನ ತಲೆಯಮೇಲೆ ಕಾಲಿಡಬೇಡ, ತೆಗೆ ! ಲಲ್ಲೆಮಾತುಗಳನ್ನಾಡಿ ದೂತಕಾರ್ಯಗಳಿಂದ ಸಂತೈಸುವುದರಲ್ಲಿ ನೀನು ಪಂಡಿತನೆಂಬುದನ್ನು ನಾನು ಬಲ್ಲೆ ! ಮುಕುಂದನಿಂದ ಕಲಿತು ಬಂದವನಲ್ಲವೆ ನೀನು ? ಅವನಿಗಾಗಿ ಮಕ್ಕಳನ್ನೂ ಪತಿಯನ್ನೂ ಪರಲೋಕವನ್ನೂ ತೊರೆದ ನಮ್ಮನ್ನು ಆ ಚಪಲಚಿತ್ತನು ಕೈಬಿಟ್ಟನು. ಹೀಗಿರುವಾಗ ಸಂಧಾನಮಾಡಬೇಕಾದದ್ದೇನಿದೆ ? (೧೬).

---

* ಉತ್ತಮಶ್ಲೋಕ = ಶ್ರೀಕೃಷ್ಣ. ಅವನು ದೀನರಾದ ನಮ್ಮನ್ನು ಉಪೇಕ್ಷಿಸಿದ್ದರೂ ನೀನು ಅವನ ದೂತನಾದ್ದರಿಂದ ಶ್ರೀಕೃಷ್ಣನು ದೀನದಯಾಳುವೆಂದು ಹೊಗಳಲೇಬೇಕು—ಎಂದು ಅಭಿಪ್ರಾಯ.

ಮೃಗಯುರಿವ ಕಪೀಂದ್ರಂ ವಿವ್ಯಧೇ ಲುಬ್ಧಧರ್ಮಾ
ಸ್ತ್ರಿಯಮಕೃತ ವಿರೂಪಾಂ ಸ್ತ್ರೀಜಿತಃ ಕಾಮಯಾನಾಮ್ ।
ಬಲಿಮಪಿ ಬಲಿಮತ್ತ್ವಾವೇಷ್ಟಯದ್ ಧ್ವಾಂಕ್ಷವದ್ ಯ-
ಸ್ತದಲಮಸಿತಸಖ್ಯೈರ್ದುಸ್ತ್ಯಜಸ್ತತ್ಕಥಾರ್ಥಃ ॥ ೧೭

ಯದನುಚರಿತಲೀಲಾಕರ್ಣಪೀಯೂಷವಿಪ್ರುಟ್-
ಸಕೃದದನವಿಧೂತದ್ವಂದ್ವಧರ್ಮಾ ವಿನಷ್ಟಾಃ ।
ಸಪದಿ ಗೃಹಕುಟುಂಬಂ ದೀನಮುತ್ಸೃಜ್ಯ ದೀನಾ
ಬಹವ ಇಹ ವಿಹಂಗಾ ಭಿಕ್ಷುಚರ್ಯಾಂ ಚರಂತಿ ॥ ೧೮

ವಯಮೃತಮಿವ ಜಿಹ್ಮವ್ಯಾಹೃತಂ ಶ್ರದ್ದಧಾನಾಃ
ಕುಲಿಕರುತಮಿವಾಜ್ಞಾಃ ಕೃಷ್ಣವಧ್ವೋ ಹರಿಣ್ಯಃ ।

---

ಕಠೋರಸ್ವಭಾವದ ಆತನು ಕಪೀಂದ್ರನಾದ ವಾಲಿಯನ್ನು ಕಿರಾತನಂತೆ ಬಾಣ ಹೊಡೆದು ಕೊಂದನು! ಕಾಮಿಸಿಬಂದ ಸ್ತ್ರೀಯನ್ನು (ಶೂರ್ಪಣಖಿಯನ್ನು) ಒಬ್ಬ ಸ್ತ್ರೀಗೆ (ಸೀತೆಗೆ) ವಶನಾಗಿ ಕುರೂಪಿಯನ್ನಾಗಿ ಮಾಡಿದನು! ಬಲಿಯನ್ನು ಸ್ವೀಕರಿಸಿ (ಪೂಜೆಯನ್ನು ಸ್ವೀಕರಿಸಿ–ಬಲಿಯನ್ನು ತಿಂದು) ಕಾಗೆಯಂತೆ ಬಲಿಚಕ್ರವರ್ತಿಯನ್ನು ಸುತ್ತುಗಟ್ಟಿ ಬಂಧಿಸಿದನು! ಛೆ! ಆ ಕರಿಯನ–ಕೃಷ್ಣನ ಸಹವಾಸ ಬೇಡ! (–ಕೆಟ್ಟವರ ಸಹವಾಸ ಬೇಡ). ಆದರೂ ಅವನ ಚರಿತೆಯನ್ನು ಹಾಡದೆ ಇರಲಾರೆವು! (೧೭). ಏಕೆಂದರೆ, ಎಲೈ ಭ್ರಮರ, ಕೃಷ್ಣನ ಲೀಲಾಚರಿತೆಯೆಂಬ ಕರ್ಣಾಮೃತದ ಹನಿಯನ್ನು ಒಂದು ಸಲ ಕುಡಿಯುವುದರಿಂದ ರಾಗದ್ವೇಷಾದಿ ದ್ವಂದ್ವಧರ್ಮಗಳು ಅಲ್ಲಾಡಿ ಬೇರುಸಹಿತ ನಾಶವಾಗುತ್ತವೆ. ಹಾಗೆ ದ್ವಂದ್ವಗಳನ್ನು ನಾಶಪಡಿಸಿಕೊಂಡ ಬಹುಜನರು ದೀನವಾದ ಗೃಹಾದಿಕುಟುಂಬವನ್ನು ಒಡನೆಯೇ ಪರಿತ್ಯಜಿಸಿ, ಸ್ವತಃ ದೀನರಾಗಿ ಹಕ್ಕಿಗಳಂತೆ ಭಿಕ್ಷಾವೃತ್ತಿಯನ್ನು ಅವಲಂಬಿಸಿದ್ದಾರೆ! * (ಆದ್ದರಿಂದ ಅವನ ಚರಿತೆಯನ್ನು ಹಾಡದೆ ಇರಲಾರೆವು) (೧೮). ಎಲೈ ದುಂಬಿ–ಕೃಷ್ಣನ ಉಪಮಂತ್ರಿ! ಅವನ ಕುಟಿಲವಚನವನ್ನು ಕೃಷ್ಣವಧುಗಳಾದ ನಾವು ಸತ್ಯವೋ ಎಂಬಂತೆ

---

* ಕೃಷ್ಣನ ಚರಿತೆಯಿಂದ ನಾವು ಹಕ್ಕಿಗಳಂತೆ ದೀನರಾದೆವು ಎಂದು ನಿಂದೆ. ಬಹುಜನರು ವಿರಕ್ತರಾಗಿ ಭಿಕ್ಷುಗಳಾದರು ಎಂಬು ಸ್ತುತಿ.

ದದೃಶುರಸಕೃದೇತತ್ತನ್ನಖಸ್ಪರ್ಶತೀವ್ರ-
ಸ್ಮರರುಜ ಉಪಮಂತ್ರಿನ್ ಭಣ್ಯತಾಮನ್ಯವಾರ್ತಾ ॥ ೧೯

ಪ್ರಿಯಸಖ ಪುನರಾಗಾಃ ಪ್ರೇಯಸಾ ಪ್ರೇಷಿತಃ ಕಿಂ
ವರಯ ಕಿಮನುರುಂಧೇ ಮಾನನೀಯೋಽಸಿ ಮೇಽಂಗ ।
ನಯಸಿ ಕಥಮಿಹಾಸ್ಮಾನ್ ದುಸ್ತ್ಯಜದ್ವಂದ್ವಪಾರ್ಶ್ವಂ
ಸತತಮುರಸಿ ಸೌಮ್ಯ ಶ್ರೀರ್ವಧೂಃ ಸಾಕಮಾಸ್ತೇ ॥ ೨೦

ಅಪಿ ಬತ ಮಧುಪುರ್ಯಾಮಾರ್ಯಪುತ್ರೋಽಧುನಾಽಽಸ್ತೇ
ಸ್ಮರತಿ ಸ ಪಿತೃಗೇಹಾನ್ ಸೌಮ್ಯ ಬಂಧೂಂಶ್ಚ ಗೋಪಾನ್।
ಕ್ವಚಿದಪಿ ಸ ಕಥಾ ನಃ ಕಿಂಕರೀಣಾಂ ಗೃಣೀತೇ
ಭುಜಮಗುರುಸುಗಂಧಂ ಮೂರ್ಧ್ನ್ಯಧಾಸ್ಯತ್ ಕದಾ ನು ॥

---

ಪೂರ್ಣವಾಗಿ ನಂಬಿದೆವು. ಕೃಷ್ಣಮೃಗದ ಮಡದಿಯರಾದ ಅಜ್ಞಹರಿಣಿಗಳು ಬೇಡನ ಸಂಗೀತವನ್ನು ನಂಬಿದಂತೆ ನಂಬಿ ಪೆಟ್ಟುತಿಂದೆವು! ಅವನ ನಖಕ್ಷತ್ರಗಳಿಂದ ತೀವ್ರವಾದ ಮನ್ಮಥಬಾಧೆಯನ್ನು ಅನುಭವಿಸಿದೆವು. ಹೀಗೆ ಎಷ್ಟೋ ಸಲ ಆಯಿತು! ಅವನ ವಿಷಯವನ್ನು ಬಿಟ್ಟು ಬೇರೆ ಸುದ್ದಿ ಇದ್ದರೆ ಹೇಳು! (೧೯). ಆಃ! ಮತ್ತೆ ಬಂದೆಯಾ? ಓ ಪ್ರಿಯಸಖ, ನಮ್ಮ ಪ್ರಿಯನು ನಿನ್ನನ್ನು ಕಳಿಸಿದನೆ? ಏನನ್ನು ಬಯಸುವೆ, ಕೇಳಿಕೊ. ಅಯ್ಯಾ–ಭ್ರಮರ, ನನಗೆ ಮಾನ್ಯನಾಗಿರುವೆ. ಯಾರ ಸಂಗವು ನಮಗೆ ದುಸ್ತ್ಯಜವೋ ಅವನ ಬಳಿಗೆ ನಮ್ಮನ್ನು ಹೇಗೆ ಕರೆದೊಯ್ಯುವೆ? ಸೌಮ್ಯ, ವಧುವಾದ ಲಕ್ಷ್ಮಿ ಅವನ ಹತ್ತಿರ ಸದಾ ಇದ್ದು ಬಿಡುತ್ತಾಳಲ್ಲ! (೨೦). ಹೇ ಸೌಮ್ಯ–ಭ್ರಮರ, ಆರ್ಯಪುತ್ರನು (ಗುರುಕುಲದಿಂದ ಬಂದು) ಈಗ ಮಧುರೆಯಲ್ಲಿದ್ದಾನೆಯೇ? ತಂದೆಯ ಮನೆಯನ್ನೂ ಬಂಧುಗಳಾದ ಗೋಪರನ್ನೂ ಸ್ಮರಿಸಿಕೊಳ್ಳುವನೆ? ದಾಸಿಯರಾದ ನಮ್ಮ ಕಥೆಯನ್ನೇನಾದರೂ ಎತ್ತುವನೆ! ಅಗುರುಗಂಧದಿಂದ ಸುಗಂಧಿಯಾದ ತನ್ನ ಹಸ್ತವನ್ನು ನಮ್ಮ ಶಿರಸ್ಸಿನ ಮೇಲೆ ಯಾವಾಗ ಇಡುವನಂತೆ!" ಎಂದು ಹಾಡಿದಳು (೨೧).

ಶ್ರೀಶುಕ ಉವಾಚ—

**ಅಥೋದ್ಧವೋ ನಿಶಮ್ಯೈವಂ ಕೃಷ್ಣದರ್ಶನಲಾಲಸಾಃ ।**
**ಸಾಂತ್ವಯನ್ ಪ್ರಿಯಸಂದೇಶೈರ್ಗೋಪೀರಿದಮಭಾಷತ ॥ ೨೨**

ಉದ್ಧವ ಉವಾಚ—

**ಅಹೋ ಯೂಯಂ ಸ್ಮ ಪೂರ್ಣಾರ್ಥಾ ಭವತ್ಯೋ ಲೋಕಪೂಜಿತಾಃ**
**ವಾಸುದೇವೇ ಭಗವತಿ ಯಾಸಾಮಿತ್ಯರ್ಪಿತಂ ಮನಃ ॥ ೨೩**

**ದಾನವ್ರತತಪೋಹೋಮಜಪಸ್ವಾಧ್ಯಾಯಸಂಯಮೈಃ ।**
**ಶ್ರೇಯೋಭಿರ್ವಿವಿಧೈಶ್ಚಾನ್ಯೈಃ ಕೃಷ್ಣೇ ಭಕ್ತಿರ್ಹಿ ಸಾಧ್ಯತೇ ॥ ೨೪**

**ಭಗವತ್ಯುತ್ತಮಶ್ಲೋಕೇ ಭವತೀಭಿರನುತ್ತಮಾ ।**
**ಭಕ್ತಿಃ ಪ್ರವರ್ತಿತಾ ದಿಷ್ಟ್ಯಾ ಮುನೀನಾಮಪಿ ದುರ್ಲಭಾ ॥ ೨೫**

**ದಿಷ್ಟ್ಯಾ ಪುತ್ರಾನ್ ಪತೀನ್ ದೇಹಾನ್ ಸ್ವಜನಾನ್ ಭವನಾನಿ ಚ ।**
**ಹಿತ್ವಾವೃಣೀತ ಯೂಯಂ ಯತ್ ಕೃಷ್ಣಾಖ್ಯಂ ಪುರುಷಂ ಪರಮ್ ॥**

**ಸರ್ವಾತ್ಮಭಾವೋಽಧಿಕೃತೋ ಭವತೀನಾಮಧೋಕ್ಷಜೇ ।**
**ವಿರಹೇಣ ಮಹಾಭಾಗಾ ಮಹಾನ್ ಮೇಽನುಗ್ರಹಃ ಕೃತಃ ॥ ೨೭**

---

ಹೀಗೆ ಕೃಷ್ಣದರ್ಶನಲಾಲಸೆಯರಾದ ಗೋಪಿಯರಾಡಿದ ಬಗೆಬಗೆಯ ನುಡಿಗಳನ್ನು ಕೇಳಿ, ಪ್ರಿಯಸಂದೇಶಗಳಿಂದ ಅವರನ್ನು ಸಂತೈಸುತ್ತ ಉದ್ಧವನು ಹೇಳಿದನು (೨೨): "ಆಹಾ! ವ್ರಜಾಂಗನೆಯರೆ, ಭಗವಾನ್ ವಾಸುದೇವನಲ್ಲಿ ಈ ಪ್ರಕಾರವಾಗಿ ಮನಸ್ಸನ್ನರ್ಪಿಸಿದ ನೀವು ಕೃತಕೃತ್ಯರು; ಲೋಕಪೂಜಿತರು. ದಾನ, ವ್ರತ, ತಪಸ್ಸು, ಹೋಮ, ಜಪ, ವೇದಾಧ್ಯಯನ, ಇಂದ್ರಿಯ ಸಂಯಮ—ಮೊದಲಾದ ವಿಭಿನ್ನ ಶ್ರೇಯಃಸಾಧನಗಳಿಂದ ಸಾಧಿಸಬೇಕಾದದ್ದು ಕೃಷ್ಣನಲ್ಲಿ ಭಕ್ತಿ (೨೩—೨೪). ಆ ಶ್ರೇಷ್ಠಭಕ್ತಿಯನ್ನು ಉತ್ತಮಶ್ಲೋಕನಾದ ಭಗವಂತನಲ್ಲಿ ನೀವು ಪಡೆದಿದ್ದೀರಿ. ಇದು ನಿಮ್ಮ ಭಾಗ್ಯದಿಂದ. ಮುನಿಗಳಿಗೂ ಸಹ ಇದು ದುರ್ಲಭವಾದುದು (೨೫). ಮಕ್ಕಳು, ಗಂಡಂದಿರು, ದೇಹ, ಬಂಧುಗಳು, ಮನೆಮಾರುಗಳನ್ನು ತೊರೆದು ಕೃಷ್ಣನೆಂಬ ಪರಬ್ರಹ್ಮವನ್ನು ನೀವು ಪುಣ್ಯಬಲದಿಂದ ವರಿಸಿದ್ದೀರಿ. ಓ ಭಾಗ್ಯಶಾಲಿನಿಯರೆ, ವಿರಹದ ಮೂಲಕ ನಿಮಗೆ ಶ್ರೀಕೃಷ್ಣನಲ್ಲಿ ಏಕಾಂತಭಕ್ತಿಯು ಪ್ರಾಪ್ತವಾಗಿದೆ. ಇದು

*

ಶ್ರೂಯತಾಂ ಪ್ರಿಯಸಂದೇಶೋ ಭವತೀನಾಂ ಸುಖಾವಹಃ ।
ಯಮಾದಾಯಾಗತೋ ಭದ್ರಾ ಅಹಂ ಭರ್ತೂ ರಹಸ್ಕರಃ ॥ ೨೮

ಶ್ರೀಭಗವಾನುವಾಚ—

ಭವತೀನಾಂ ವಿಯೋಗೋ ಮೇ ನ ಹಿ ಸರ್ವಾತ್ಮನಾ ಕ್ವಚಿತ್ ।
ಯಥಾ ಭೂತಾನಿ ಭೂತೇಷು ಖಂ ವಾಯ್ವಗ್ನಿರ್ಜಲಂ ಮಹೀ ।
ತಥಾಹಂ ಚ ಮನಃಪ್ರಾಣಭೂತೇಂದ್ರಿಯಗುಣಾಶ್ರಯಃ ॥ ೨೯

ಆತ್ಮನ್ಯೇವಾತ್ಮನಾಽಽತ್ಮಾನಂ ಸೃಜೇ ಹನ್ಮ್ಯನುಪಾಲಯೇ ।
ಆತ್ಮಮಾಯಾನುಭಾವೇನ ಭೂತೇಂದ್ರಿಯಗುಣಾತ್ಮನಾ ॥ ೩೦

ಆತ್ಮಾ ಜ್ಞಾನಮಯಃ ಶುದ್ಧೋ ವ್ಯತಿರಿಕ್ತೋಽಗುಣಾನ್ವಯಃ ।
ಸುಷುಪ್ತಿಸ್ವಪ್ನಜಾಗ್ರದ್ಭಿರ್ಮಾಯಾವೃತ್ತಿಭಿರೀಯತೇ ॥ ೩೧

---

(ನಿಮ್ಮ ದರ್ಶನ) ನನಗೆ ಅನುಗ್ರಹವಾಯಿತು (೨೬—೨೭). ಮಂಗಳಾಂಗಿಯರೆ, ನಾನು ಸ್ವಾಮಿಯ ರಹಸ್ಯದೂತನಾಗಿ ಅವನ ಸಂದೇಶವನ್ನು ತಂದಿದ್ದೇನೆ. ನಿಮಗೆ ಸಂತೋಷವನ್ನುಂಟುಮಾಡುವ ಪ್ರಿಯಸಂದೇಶವನ್ನು ಕೇಳಿರಿ (೨೮): ಭಗವಂತನು ಹೇಳಿದ್ದೇನೆಂದರೆ—" ಗೋಪಿಯರೆ, (ಸರ್ವವಸ್ತುಗಳಿಗೂ ನಾನು ಉಪಾದಾನಕಾರಣನಾಗಿರುವುದರಿಂದ) ನನಗೂ ನಿಮಗೂ ವಿಯೋಗವೆಂಬುದೇ ಇಲ್ಲ! ಸಕಲಪ್ರಾಣಿಗಳಲ್ಲಿಯೂ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿಗಳು ಹೇಗೆ ಇದ್ದೇ ಇರುತ್ತವೆಯೋ ಹಾಗೆ ನಾನು ಮನಸ್ಸು, ಪ್ರಾಣ, ಬುದ್ಧಿ, ಇಂದ್ರಿಯ, ಸತ್ತ್ವಾದಿಗುಣ—ಇವುಗಳಿಗೆ ಆಶ್ರಯನಾಗಿ ನೆಲೆಸಿರುವೆನು (೨೯). ನನ್ನ ಮಾಯಾಸಾಮರ್ಥ್ಯವನ್ನವಲಂಬಿಸಿ ಪಂಚಭೂತಗಳು, ಇಂದ್ರಿಯಗಳು, ಸತ್ತ್ವಾದಿಗುಣಗಳು—ಇವುಗಳ ಸ್ವರೂಪದಿಂದ, ನಾನು ನನ್ನಲ್ಲಿಯೇ ನನ್ನಿಂದಲೇ ನನ್ನನ್ನು ಸೃಜಿಸುವೆನು, ಸಂಹರಿಸುವೆನು, ಪಾಲಿಸುವೆನು! (೩೦). ಆದರೆ ಆತ್ಮನಾದರೋ ಕೇವಲ ಜ್ಞಾನಸ್ವರೂಪನೂ ಪರಿಶುದ್ಧನೂ ಇಂದ್ರಿಯಾದಿಗಳಿಗೆ ವ್ಯತಿರಿಕ್ತನೂ ಸತ್ತ್ವಾದಿಗುಣರಹಿತನೂ ಆಗಿದ್ದಾನೆ. ಅವಿದ್ಯಾಜನ್ಯಮನೋವೃತ್ತಿಗಳಾದ ನಿದ್ರೆ, ಕನಸು, ಜಾಗರಗಳಿಂದ ಆತ್ಮನು, (ಪ್ರಾಜ್ಞ, ತೈಜಸ, ವಿಶ್ವ ಎಂಬ) ವಿಭಿನ್ನಾವಸ್ಥೆಗಳುಳ್ಳವನಾಗಿ ಪ್ರತೀತನಾಗುತ್ತಾನೆ (೩೧).

ಯೇನೇಂದ್ರಿಯಾರ್ಥಾನ್ ಧ್ಯಾಯೇತ ಮೃಷಾಸ್ವಪ್ನವದುತ್ಥಿತಃ ।
ತನ್ನಿರುಂಧ್ಯಾದಿಂದ್ರಿಯಾಣಿ ವಿನಿದ್ರಃ ಪ್ರತ್ಯಪದ್ಯತ ॥ ೩೨

ಏತದಂತಃ ಸಮಾಮ್ನಾಯೋ ಯೋಗಃ ಸಾಂಖ್ಯಂ ಮನೀಷಿಣಾಮ್ ।
ತ್ಯಾಗಸ್ತಪೋ ದಮಃ ಸತ್ಯಂ ಸಮುದ್ರಾಂತಾ ಇವಾಪಗಾಃ ॥ ೩೩

ಯತ್ ತ್ವಹಂ ಭವತೀನಾಂ ವೈ ದೂರೇ ವರ್ತೇ ಪ್ರಿಯೋ ದೃಶಾಮ್
ಮನಸಃ ಸಂನಿಕರ್ಷಾರ್ಥಂ ಮದನುಧ್ಯಾನಕಾಮ್ಯಯಾ ॥ ೩೪

ಯಥಾ ದೂರಚರೇ ಪ್ರೇಷ್ಠೇ ಮನ ಆವಿಶ್ಯ ವರ್ತತೇ ।
ಸ್ತ್ರೀಣಾಂ ಚ ನ ತಥಾ ಚೇತಃ ಸಂನಿಕೃಷ್ಟೇಽಕ್ಷಿಗೋಚರೇ ॥ ೩೫

ಮಯ್ಯಾವೇಶ್ಯ ಮನಃ ಕೃತ್ಸ್ನಂ ವಿಮುಕ್ತಾಶೇಷವೃತ್ತಿ ಯತ್ ।
ಅನುಸ್ಮರಂತ್ಯೋ ಮಾಂ ನಿತ್ಯಮಚಿರಾನ್ಮಾಮುಪೈಷ್ಯಥ ॥ ೩೬

---

ನಿದ್ರೆಯಿಂದ ಎಚ್ಚೆತ್ತವನು (ಕಲ್ಪಿಸಿಕೊಂಡ) ಸುಳ್ಳಾದ ಸ್ವಪ್ನವನ್ನು ಯಾವ ಮನಸ್ಸಿನಿಂದ ಹೇಗೆ ಸ್ಮರಿಸಿಕೊಳ್ಳುವನೋ ಹಾಗೆಯೇ (ಜಾಗರದಲ್ಲಿಯೂ) ಅದೇ ಮನಸ್ಸಿನಿಂದ ಸುಳ್ಳಾದ ಇಂದ್ರಿಯಾರ್ಥಗಳನ್ನೂ ಸುಳ್ಳಾದ ಇಂದ್ರಿಯಗಳನ್ನೂ ಕಲ್ಪಿಸಿಕೊಂಡು ಚಿಂತಿಸುತ್ತಾನೆ. ಅಂಥ ಮನಸ್ಸನ್ನು ಜಾಗರೂಕನಾಗಿ ನಿಗ್ರಹಿಸಬೇಕು (೩೨). ಸಕಲವೇದಗಳು, ಯೋಗ, ಸಾಂಖ್ಯ, ತ್ಯಾಗ, ತಪಸ್ಸು, ದಮ, ಸತ್ಯ–ಇವೆಲ್ಲವುಗಳ ಗುರಿಯೂ ವಿದ್ವಾಂಸರಿಗೆ ಮನೋನಿಗ್ರಹದಲ್ಲಿ ಪರ್ಯವಸಾನಗೊಂಡು ಅಲ್ಲಿ ಸಮಾಪ್ತವಾಗುತ್ತದೆ, ಎಲ್ಲ ನದಿಗಳು ಹರಿಯುವುದೂ ಸಮುದ್ರದಲ್ಲಿ ಪರ್ಯವಸಾನಗೊಳ್ಳುವಂತೆ (೩೩). ಪ್ರಿಯನಾದ ನಾನು ನಿಮ್ಮ ಕಣ್ಣುಗಳಿಗೆ ದೂರದಲ್ಲಿರುವುದಾದರೋ ನಿಮ್ಮ ಮನಸ್ಸನ್ನು ಎಳೆದು ಸದಾ ನೀವು ನನ್ನನ್ನು ಧ್ಯಾನಿಸುತ್ತಿರಲೆಂಬ ಬಯಕೆಯಿಂದಲೇ ಸರಿ. ಪ್ರಿಯತಮನು ದೂರದಲ್ಲಿದ್ದಾಗ ಸ್ತ್ರೀಯರ ಮನಸ್ಸು ಅವನಲ್ಲಿ ಹೇಗೆ ನೆಟ್ಟಿರುವುದೋ ಹಾಗೆ ಸಮೀಪದಲ್ಲಿ ಕಣ್ಣೆದುರಿಗಿದ್ದಾಗ ನೆಟ್ಟಿರುವುದಿಲ್ಲ (೩೪–೩೫). ಎಲೌ ಗೋಪಿಯರೆ, ಬೇರೆ ಸಕಲಮನೋವೃತ್ತಿಗಳನ್ನೂ ತ್ಯಜಿಸಿ ನಿಮ್ಮ ಮನಸ್ಸೆಲ್ಲವನ್ನೂ ನನ್ನಲ್ಲಿ ನೆಲೆಗೊಳಿಸಿ ಸದಾ ನನ್ನನ್ನು ಧ್ಯಾನಿಸುವ ನೀವು ಶೀಘ್ರದಲ್ಲಿಯೇ ನನ್ನನ್ನು ಸೇರುವಿರಿ (೩೬).

**ಯಾ ಮಯಾ ಕ್ರೀಡತಾ ರಾತ್ರ್ಯಾಂ ವನೇಽಸ್ಮಿನ್ ವ್ರಜ ಆಸ್ಥಿತಾಃ ।**
**ಅಲಬ್ಧರಾಸಾಃ ಕಲ್ಯಾಣ್ಯೋ ಮಾಽಽಪುರ್ಮದ್ವೀರ್ಯಚಿಂತಯಾ ॥**

**ಶ್ರೀಶುಕ ಉವಾಚ—**

**ಏವಂ ಪ್ರಿಯತಮಾದಿಷ್ಟಮಾಕರ್ಣ್ಯ ವ್ರಜಯೋಷಿತಃ ।**
**ತಾ ಊಚುರುದ್ಧವಂ ಪ್ರೀತಾಸ್ತತ್ಸಂದೇಶಾಗತಸ್ಮೃತೀಃ ॥ ೩೮**

**ಗೋಪ್ಯ ಊಚುಃ—**

**ದಿಷ್ಟ್ಯಾಽಹಿತೋ ಹತಃ ಕಂಸೋ ಯದೂನಾಂ ಸಾನುಗೋಽಘಕೃತ್**
**ದಿಷ್ಟ್ಯಾಽಽಪ್ತೈರ್ಲಬ್ಧಸರ್ವಾರ್ಥೈಃ ಕುಶಲ್ಯಾಸ್ತೇಽಚ್ಯುತೋಽಧುನಾ ॥**

**ಕಚ್ಚಿದ್ಗದಾಗ್ರಜಃ ಸೌಮ್ಯ ಕರೋತಿ ಪುರಯೋಷಿತಾಮ್ ।**
**ಪ್ರೀತಿಂ ನಃ ಸ್ನಿಗ್ಧಸವ್ರೀಡಹಾಸೋದಾರೇಕ್ಷಣಾರ್ಚಿತಃ ॥ ೪೦**

**ಕಥಂ ರತಿವಿಶೇಷಜ್ಞಃ ಪ್ರಿಯಶ್ಚ ವರಯೋಷಿತಾಮ್ ।**
**ನಾನುಬಧ್ಯೇತ ತದ್ವಾಕ್ಯೈರ್ವಿಭ್ರಮೈಶ್ಚಾನುಭಾಜಿತಃ ॥ ೪೧**

---

ಅಂದು ಅರಣ್ಯದಲ್ಲಿ ರಾತ್ರಿ ಕ್ರೀಡಿಸಿದ ನನ್ನೊಡನೆ ರಾಸಕ್ರೀಡೆಯಲ್ಲಿ ಭಾಗವಹಿಸಲಾಗದೆ ಯಾರು ವ್ರಜದಲ್ಲಿ ನಿರ್ಬಂಧದಿಂದ ಉಳಿದರೋ ಅವರು ನನ್ನ ಮಹಿಮೆಯನ್ನೇ ಧ್ಯಾನಿಸುತ್ತ ನನ್ನನ್ನು ಸೇರಿದ್ದಾರೆ" (೩೭). ಪ್ರಿಯತಮನ ಈ ಸಂದೇಶವನ್ನಾಲಿಸಿ ಗೋಪಿಯರು ಸಂಪ್ರೀತರಾದರು. ಸಂದೇಶದಿಂದ ಕೃಷ್ಣಚರಿತದ ಸ್ಮರಣೆಯುಂಟಾಗಲು ಉದ್ಧವನನ್ನು ಕುರಿತು ಹೀಗೆಂದರು (೩೮): "ಉದ್ಧವ, ಯಾದವರಿಗೆ ದುಃಖದಾಯಕನಾಗಿದ್ದ ಶತ್ರುವಾದ ಕಂಸನು ಪರಿವಾರಸಹಿತನಾಗಿ ಸುದೈವದಿಂದ ಹತನಾದನು. ಅಚ್ಯುತನು ಈಗ ಎಲ್ಲ ಇಷ್ಟಾರ್ಥಗಳನ್ನೂ ಪಡೆದು ಕುಶಲದಿಂದಿರುವುದು ಆನಂದದ ಸಂಗತಿ (೩೯). ಸೌಮ್ಯ, ಪ್ರೇಮ ಮತ್ತು ನಾಚಿಕೆಗಳಿಂದ ಮಿಶ್ರವಾದ ನಗು ಮತ್ತು ಕುಡಿನೋಟಗಳಿಂದ ಅರ್ಚಿತನಾದ ನಮ್ಮ ಕೃಷ್ಣನು ನಗರವನಿತೆಯರಿಗೆ ಸಂತೋಷವನ್ನುಂಟುಮಾಡುವನೆ? (೪೦). ಸುಂದರಿಯರಿಗೆ ಪ್ರಿಯನಾದ ಆ ರತಿವಿಶೇಷಜ್ಞನು ನಗರವನಿತೆಯರ ಬೆಡಗು ಮಾತುಗಳಿಂದಲೂ ವೈಯಾರಗಳಿಂದಲೂ ಸತ್ಕೃತನಾಗಿ ಅವರಿಗೆ ವಶವಾಗದೆ ಹೇಗಿದ್ದಾನು! (೪೧).

ಅಪಿ ಸ್ಮರತಿ ನಃ ಸಾಧೋ ಗೋವಿಂದಃ ಪ್ರಸ್ತುತೇ ಕ್ವಚಿತ್ ।
ಗೋಷ್ಠೀಮಧ್ಯೇ ಪುರಸ್ತ್ರೀಣಾಂ ಗ್ರಾಮ್ಯಾಃ ಸ್ವೈರಕಥಾಂತರೇ ॥ ೪೨

ತಾಃ ಕಿಂ ನಿಶಾಃ ಸ್ಮರತಿ ಯಾಸು ತದಾ ಪ್ರಿಯಾಭಿ-
ರ್ವೃಂದಾವನೇ ಕುಮುದಕುಂದಶಶಾಂಕರಮ್ಯೇ ।
ರೇಮೇ ಕ್ವಣಚ್ಚರಣನೂಪುರರಾಸಗೋಷ್ಠ್ಯಾ-
ಮಸ್ಮಾಭಿರೀಡಿತಮನೋಜ್ಞಕಥಃ ಕದಾಚಿತ್ ॥ ೪೩

ಅಪ್ಯೇಷ್ಯತೀಹ ದಾಶಾರ್ಹಸ್ತಪ್ತಾಃ ಸ್ವಕೃತಯಾ ಶುಚಾ ।
ಸಂಜೀವಯನ್ ನು ನೋ ಗಾತ್ರೈರ್ಯಥೇಂದ್ರೋ ವನಮಂಬುದೈಃ॥

ಕಸ್ಮಾತ್ ಕೃಷ್ಣ ಇಹಾಯಾತಿ ಪ್ರಾಪ್ತರಾಜ್ಯೋ ಹತಾಹಿತಃ ।
ನರೇಂದ್ರಕನ್ಯಾ ಉದ್ವಾಹ್ಯ ಪ್ರೀತಃ ಸರ್ವಸುಹೃದ್ವೃತಃ ॥ ೪೫

ಕಿಮಸ್ಮಾಭಿರ್ವನೌಕೋಭಿರನ್ಯಾಭಿರ್ವಾ ಮಹಾತ್ಮನಃ ।
ಶ್ರೀಪತೇರಾಪ್ತಕಾಮಸ್ಯ ಕ್ರಿಯೇತಾರ್ಥಃ ಕೃತಾತ್ಮನಃ ॥ ೪೬

---

ಹೇ ಸಾಧುಪುರುಷನೆ, (ವಿದಗ್ಧೆಯರಾದ) ಪುರಸ್ತ್ರೀಯರ ಗೋಷ್ಠಿಯ ನಡುವೆ ಸ್ವೈರವಾಗಿ ಮಾತಾಡುವ ಪ್ರಸಂಗದಲ್ಲಿ ಗೋವಿಂದನು ಎಂದಾದರೂ ಈ ಹಳ್ಳಿಯ ಹೆಂಗಸರಾದ ನಮ್ಮನ್ನು ಸ್ಮರಿಸಿಕೊಳ್ಳುವನೆ? (೪೨). ಕುಮುದ–ಕುಂದ–ಚಂದ್ರಚಂದ್ರಿಕಾರಮ್ಯವಾದ ವೃಂದಾವನದಲ್ಲಿ ಅಂದು ಮುಕುಂದನು, ಜಣಜಣತ್ಕಾರಿ ಚರಣನೂಪುರಮನೋಹರ ರಾಸಗೋಷ್ಠಿಯಲ್ಲಿ, ನಾವು ಹಾಡಿದ ತನ್ನ ಮನೋಜ್ಞಕಥೆಗಳನ್ನು ಕೇಳುತ್ತ ಕಾಂತೆಯರೊಡನೆ ಕ್ರೀಡಿಸಿದ ರಾತ್ರಿಗಳನ್ನು ಸ್ಮರಿಸಿಕೊಳ್ಳುವನೆ? (೪೩). ಸ್ವಯಂಕೃತವಾದ ಶೋಕದಿಂದ ಸಂತಪ್ತರಾದ ನಮ್ಮನ್ನು, ಇಂದ್ರನು ಅರಣ್ಯವನ್ನು ಅಂಬುದಗಳಿಂದ ಆನಂದಗೊಳಿಸುವಂತೆ, ತನ್ನ ಅಂಗಸಂಗಗಳಿಂದ ಸಂಜೀವನಗೊಳಿಸುತ್ತ ಗೋವಿಂದನು ಎಂದಾದರೂ ಬಂದಾನೆ? (೪೪). ಕೃಷ್ಣನು ವೈರಿಗಳನ್ನು ಕೊಂದು ಸಾಮ್ರಾಜ್ಯವನ್ನು ಪಡೆದು ಸಕಲಮಿತ್ರರಿಂದಲೂ ಪರಿವೃತನಾಗಿ ಸಂತೋಷದಲ್ಲಿದ್ದಾನೆ. ಇನ್ನು ನರೇಂದ್ರ ಕನ್ಯೆಯರನ್ನು ಮದುವೆಯಾಗುವನು! ಅವನು ಇಲ್ಲಿಗೇಕೆ ಬಂದಾನು! (೪೫). ಲಕ್ಷ್ಮೀಪತಿಯೂ ಆಪ್ತಕಾಮನೂ ಸಂಪೂರ್ಣನೂ ಆದ ಆ ಮಹಾತ್ಮನಿಗೆ ವನವಾಸಿಗಳಾದ ನಮ್ಮಿಂದಾಗಲಿ ಬೇರೆ ರಾಜಕನ್ಯೆಯರಿಂದಾಗಲಿ ಏನಾಗಬೇಕಾಗಿದೆ? (೪೬).

ಪರಂ ಸೌಖ್ಯಂ ಹಿ ನೈರಾಶ್ಯಂ ಸ್ವೈರಿಣ್ಯಪ್ಯಾಹ ಪಿಂಗಲಾ ।
ತಜ್ಜಾನತೀನಾಂ ನಃ ಕೃಷ್ಣೇ ತಥಾಪ್ಯಾಶಾ ದುರತ್ಯಯಾ ॥ ೪೭

ಕ ಉತ್ಸಹೇತ ಸಂತ್ಯಕ್ತುಮುತ್ತಮಶ್ಲೋಕಸಂವಿದಮ್ ।
ಅನಿಚ್ಛತೋಽಪಿ ಯಸ್ಯ ಶ್ರೀರಂಗಾನ್ನ ಚ್ಯವತೇ ಕ್ವಚಿತ್ ॥ ೪೮

ಸರಿಚ್ಛೈಲವನೋದ್ದೇಶಾ ಗಾವೋ ವೇಣುರವಾ ಇಮೇ ।
ಸಂಕರ್ಷಣಸಹಾಯೇನ ಕೃಷ್ಣೇನಾಚರಿತಾಃ ಪ್ರಭೋ ॥ ೪೯

ಪುನಃ ಪುನಃ ಸ್ಮಾರಯಂತಿ ನಂದಗೋಪಸುತಂ ಬತ ।
ಶ್ರೀನಿಕೇತೈಸ್ತತ್ಪದಕೈರ್ವಿಸ್ಮರ್ತುಂ ನೈವ ಶಕ್ನುಮಃ ॥ ೫೦

ಗತ್ಯಾ ಲಲಿತಯೋದಾರಹಾಸಲೀಲಾವಲೋಕನೈಃ ।
ಮಾಧ್ವ್ಯಾ ಗಿರಾ ಹೃತಧಿಯಃ ಕಥಂ ತಂ ವಿಸ್ಮರಾಮಹೇ ॥ ೫೧

ಹೇ ನಾಥ ಹೇ ರಮಾನಾಥ ವ್ರಜನಾಥಾರ್ತಿನಾಶನ ।
ಮಗ್ನಮುದ್ಧರ ಗೋವಿಂದ ಗೋಕುಲಂ ವೃಜಿನಾರ್ಣವಾತ್ ॥ ೫೨

---

ಆಸೆಯನ್ನು ತೊರೆದಿರುವುದೇ ಪರಮಸೌಖ್ಯ! ಈ ಮಾತನ್ನು ವೇಶ್ಯೆಯಾದ ಪಿಂಗಳೆ ಎಂಬವಳೇ ಹೇಳಿದ್ದಾಳೆ. ಅದನ್ನು ತಿಳಿದಿದ್ದರೂ ನಮಗೆ ಕೃಷ್ಣನಲ್ಲಿ ಬಿಡಲಾರದ ಆಸೆಯಾಗಿದೆಯಲ್ಲ! (೪೭). ಉತ್ತಮಶ್ಲೋಕನಾದ ಕೃಷ್ಣನಲ್ಲಿ ಪ್ರೀತಿಯನ್ನು ತ್ಯಜಿಸಲು ಯಾರಿಂದಾದೀತು? ಅವನು ಬೇಡವೆಂದರೂ ಲಕ್ಷ್ಮಿಯು ಅವನ ವಕ್ಷಃಸ್ಥಳವನ್ನು ಬಿಟ್ಟು ಕದಲುವುದೇ ಇಲ್ಲ! (೪೮). ಹೇ ಪ್ರಭು–ಉದ್ಧವ, ಕೃಷ್ಣನು ಬಲರಾಮಸಹಿತನಾಗಿ ತಿರುಗಾಡುತ್ತಿದ್ದ ಹೊಳೆ, ಬೆಟ್ಟ, ವನಪ್ರದೇಶಗಳು ಇವೇ ಆಗಿವೆ. ಪಾಲಿಸುತ್ತಿದ್ದ ಹಸುಗಳೂ ಇವೇ. ಇವುಗಳೂ ವೇಣುನಾದಗಳೂ ನಂದಗೋಪಸುತನನ್ನು ಮತ್ತೆ ಮತ್ತೆ ನೆನಪಿಗೆ ತರುತ್ತವೆ. ಆಹಾ! ಲಕ್ಷ್ಮೀನಿವಾಸಸ್ಥಾನಗಳಾದ ಈ ಚಿಹ್ನೆಗಳಿಂದ ಅವನನ್ನು ಮರೆಯಲು ನಮಗೆ ಸಾಧ್ಯವೇ ಇಲ್ಲ (೪೯–೫೦). ಅಂದವಾದ ನಡಿಗೆ, ಸುಂದರವಾದ ನಗು, ಚೆಂದವಾದ ನೋಟಗಳಿಂದಲೂ ಸವಿನುಡಿಗಳಿಂದಲೂ ನಮ್ಮ ಹೃದಯವನ್ನೇ ಅವನು ಅಪಹರಿಸಿಕೊಂಡು ಹೋಗಿರುವಾಗ ಅವನನ್ನು ಮರೆಯುವುದಾದರೂ ಹೇಗೆ? (೫೧). ಹೇ ಸ್ವಾಮಿ, ಹೇ ರಮಾಪತಿ, ಓ ವ್ರಜದೊಡೆಯ, ಓ ಕ್ಲೇಶನಾಶನ, ಗೋವಿಂದ, ಮುಳುಗಿಹೋಗಿರುವ

ಶ್ರೀಶುಕ ಉವಾಚ—

**ತತಸ್ತಾಃ ಕೃಷ್ಣಸಂದೇಶೈರ್ವ್ಯಪೇತವಿರಹಜ್ವರಾಃ ।**
**ಉದ್ಧವಂ ಪೂಜಯಾಂಚಕ್ರುರ್ಜ್ಞಾತ್ವಾಽಽತ್ಮಾನಮಧೋಕ್ಷಜಮ್ ॥**

**ಉವಾಸ ಕತಿಚಿನ್ಮಾಸಾನ್ ಗೋಪೀನಾಂ ವಿನುದನ್ ಶುಚಃ ।**
**ಕೃಷ್ಣಲೀಲಾಕಥಾಂ ಗಾಯನ್ ರಮಯಾಮಾಸ ಗೋಕುಲಮ್ ॥**

**ಯಾವಂತ್ಯಹಾನಿ ನಂದಸ್ಯ ವ್ರಜೇಽವಾತ್ಸೀತ್ ಸ ಉದ್ಧವಃ ।**
**ವ್ರಜೌಕಸಾಂ ಕ್ಷಣಪ್ರಾಯಾಣ್ಯಾಸನ್ ಕೃಷ್ಣಸ್ಯ ವಾರ್ತಯಾ ॥ ೫೫**

**ಸರಿದ್ವನಗಿರಿದ್ರೋಣೀರ್ವೀಕ್ಷನ್ ಕುಸುಮಿತಾನ್ ದ್ರುಮಾನ್ ।**
**ಕೃಷ್ಣಂ ಸಂಸ್ಮಾರಯನ್ ರೇಮೇ ಹರಿದಾಸೋ ವ್ರಜೌಕಸಾಮ್ ॥**

**ದೃಷ್ಟ್ವೈವಮಾದಿ ಗೋಪೀನಾಂ ಕೃಷ್ಣಾವೇಶಾತ್ಮವಿಕ್ಲವಮ್ ।**
**ಉದ್ಧವಃ ಪರಮಪ್ರೀತಸ್ತಾ ನಮಸ್ಯನ್ನಿದಂ ಜಗೌ ॥ ೫೭**

---

ಈ ಗೋಕುಲವನ್ನು ಕ್ಲೇಶಸಾಗರದಿಂದ ಉದ್ಧರಿಸು!" ಎಂದು ಹಲುಬಿದರು (೫೨). ಅನಂತರ ಶ್ರೀಕೃಷ್ಣನ ಸಂದೇಶವಾಕ್ಯಗಳನ್ನು ಅರ್ಥಮಾಡಿಕೊಂಡು ಅಧೋಕ್ಷಜನು ತಮ್ಮ ಆತ್ಮವೇ ಎಂದರಿತು ವಿರಹತಾಪದಿಂದ ವಿಮುಕ್ತರಾಗಿ ಉದ್ಧವನನ್ನು ಆದರದಿಂದ ಉಪಚರಿಸಿದರು (೫೩). ಉದ್ಧವನು ಗೋಪಿಯರ ಶೋಕವನ್ನು ಶಮನಮಾಡುವುದಕ್ಕಾಗಿ ಕೆಲವು ತಿಂಗಳು ಗೋಕುಲದಲ್ಲಿದ್ದನು. ಶ್ರೀಕೃಷ್ಣನ ಲೀಲಾಕಥೆಯನ್ನು ವರ್ಣಿಸುತ್ತ ಗೋಕುಲವನ್ನು ಸಂತೋಷಪಡಿಸಿದನು (೫೪). ಎಷ್ಟು ದಿನಗಳವರೆಗೆ ಉದ್ಧವನು ನಂದನ ವ್ರಜದಲ್ಲಿದ್ದನೋ ಅಷ್ಟು ದಿನಗಳೂ ವ್ರಜವಾಸಿಗಳಿಗೆ ಶ್ರೀಕೃಷ್ಣನ ವೃತ್ತಾಂತಕಥನದಿಂದ ಕ್ಷಣದಂತೆ ಕಳೆದುಹೋದವು (೫೫). ಅಲ್ಲಿದ್ದ ನದಿ, ವನ, ಗಿರಿ, ಕಂದಕಗಳನ್ನೂ ಹೂವರಳಿದ ಮರಗಳನ್ನೂ ನೋಡುತ್ತ, ವ್ರಜವಾಸಿಗಳಿಗೆ ಕೃಷ್ಣವೃತ್ತಾಂತವನ್ನು ಸ್ಮರಣೆಗೆ ತರುತ್ತ ಹರಿದಾಸನಾದ ಉದ್ಧವನು ಆನಂದಿಸಿದನು (೫೬). ಆ ಬಗೆಯಲ್ಲಿ ಗೋಪಿಯರಿಗೆ ಕೃಷ್ಣಾವೇಶದಿಂದಾದ ಮನೋವೈಕ್ಲವ್ಯವನ್ನು ವೀಕ್ಷಿಸಿ ಪರಮಾನಂದಭರಿತನಾದ ಉದ್ಧವನು ಅವರಿಗೆ ಕೈಮುಗಿದು ಹೀಗೆಂದು ಕೊಂಡನು (೫೭):

ಏತಾಃ ಪರಂ ತನುಭೃತೋ ಭುವಿ ಗೋಪವಧ್ವೋ
ಗೋವಿಂದ ಏವ ನಿಖಿಲಾತ್ಮನಿ ರೂಢಭಾವಾಃ ।
ವಾಂಛಂತಿ ಯದ್ ಭವಭಿಯೋ ಮುನಯೋ ವಯಂ ಚ
ಕಿಂ ಬ್ರಹ್ಮಜನ್ಮಭಿರನಂತಕಥಾರಸಸ್ಯ ॥ ೫೮

ಕ್ವೇಮಾಃ ಸ್ತ್ರಿಯೋ ವನಚರೀರ್ವ್ಯಭಿಚಾರದುಷ್ಟಾಃ
ಕೃಷ್ಣೇ ಕ್ವ ಚೈಷ ಪರಮಾತ್ಮನಿ ರೂಢಭಾವಃ ।
ನನ್ವೀಶ್ವರೋಽನುಭಜತೋಽವಿದುಷೋಽಪಿ ಸಾಕ್ಷಾ-
ಚ್ಛ್ರೇಯಸ್ತನೋತ್ಯಗದರಾಜ ಇವೋಪಯುಕ್ತಃ ॥ ೫೯

ನಾಯಂ ಶ್ರಿಯೋಽಂಗ ಉ ನಿತಾಂತರತೇಃ ಪ್ರಸಾದಃ
ಸ್ವರ್ಯೋಷಿತಾಂ ನಲಿನಗಂಧರುಚಾಂ ಕುತೋಽನ್ಯಾಃ ।
ರಾಸೋತ್ಸವೇಽಸ್ಯ ಭುಜದಂಡಗೃಹೀತಕಂಠ-
ಲಬ್ಧಾಶಿಷಾಂ ಯ ಉದಗಾದ್ ವ್ರಜವಲ್ಲವೀನಾಮ್ ॥ ೬೦

---

"ಆಹಾ ! ವಿಶ್ವಾತ್ಮನಾದ ಗೋವಿಂದನಲ್ಲಿ ದೃಢಪ್ರೇಮವನ್ನು ತಾಳಿರುವ ಈ ಗೋಪಸ್ತ್ರೀಯರೇ ಕೃತಕೃತ್ಯರಾದ ಜನರು. ಸಂಸಾರಭೀತರಾದ ಮುನಿಗಳೂ, (ಭಕ್ತರಾದ) ನಾವೂ ಬಯಸುತ್ತಿರುವುದು ಈ ಪ್ರೇಮಭಾವವನ್ನೇ. ಭಗವಂತನಲ್ಲಿ ಅನುರಾಗವುಳ್ಳವನಿಗೆ ಬ್ರಾಹ್ಮಣಜನ್ಮಗಳಿಂದೇನು ? – ಬ್ರಹ್ಮನ ಜನ್ಮಗಳಿಂದಾದರೂ ಏನು ? (೫೮). ಕಾಡಿನಲ್ಲಿ ಅಲೆಯುವ ವ್ಯಭಿಚಾರ ಸ್ವಭಾವದ ಈ ಹೆಂಗಸರೆಲ್ಲಿ ? ಕೃಷ್ಣಪರಮಾತ್ಮನ ವಿಷಯವಾಗಿ ಈ ಬಗೆಯಲ್ಲಿ ನೆಲೆಗೊಂಡ ದೃಢಭಕ್ತಿಯೆಲ್ಲಿ ? ಗೊತ್ತಿಲ್ಲದೆ ಸೇವಿಸಿದರೂ ಶ್ರೇಷ್ಠವಾದ ಔಷಧವು ಫಲವನ್ನು ನೀಡುವಂತೆ, ಅರಿಯದೆ ಭಜಿಸುವ ಮೂಢರಿಗೂ ಸಹ ಪರಮಾತ್ಮನು ಸಾಕ್ಷಾತ್ತಾಗಿ ಶ್ರೇಯಸ್ಸನ್ನು ಕೊಡುತ್ತಾನೆ. (೫೯). ರಾಸೋತ್ಸವಕಾಲದಲ್ಲಿ ಶ್ರೀಕೃಷ್ಣನ ಬಾಹುಗಳಿಂದ ಕೊರಳಲ್ಲಿ ಆಲಿಂಗಿಸಲ್ಪಟ್ಟು ಇಷ್ಟಾರ್ಥವನ್ನು ಪಡೆದ ಈ ಗೊಲ್ಲತಿಯರಿಗಾದ ಭಗವದನುಗ್ರಹವು, ಅವನ ವಕ್ಷಃಸ್ಥಳದಲ್ಲಿ ಆಸಕ್ತಿಯಿಂದ ನೆಲೆಸಿರುವ ಲಕ್ಷ್ಮೀದೇವಿಗೂ ದೊರೆಯಲಿಲ್ಲ ! ಪದ್ಮಗಂಧಿಯರೂ ಪದ್ಮವರ್ಣೆಯರೂ ಆದ ದೇವಾಂಗನೆಯರಿಗೂ ದೊರೆಯಲಿಲ್ಲ ! ಇನ್ನು ಉಳಿದ ಸ್ತ್ರೀಯರ ಪಾಡೇನು ? (೬೦).

ಆಸಾಮಹೋ ಚರಣರೇಣುಜುಷಾಮಹಂ ಸ್ಯಾಂ
ವೃಂದಾವನೇ ಕಿಮಪಿ ಗುಲ್ಮಲತೌಷಧೀನಾಮ್ ।
ಯಾ ದುಸ್ತ್ಯಜಂ ಸ್ವಜನಮಾರ್ಯಪಥಂ ಚ ಹಿತ್ವಾ
ಭೇಜುರ್ಮುಕುಂದಪದವೀಂ ಶ್ರುತಿಭಿರ್ವಿಮೃಗ್ಯಾಮ್ ॥ ೬೧

ಯಾ ವೈ ಶ್ರಿಯಾರ್ಚಿತಮಜಾದಿಭಿರಾಪ್ತಕಾಮೈ-
ರ್ಯೋಗೇಶ್ವರೈರಪಿ ಯದಾತ್ಮನಿ ರಾಸಗೋಷ್ಠ್ಯಾಮ್ ।
ಕೃಷ್ಣಸ್ಯ ತದ್ ಭಗವತಶ್ಚರಣಾರವಿಂದಂ
ನ್ಯಸ್ತಂ ಸ್ತನೇಷು ವಿಜಹುಃ ಪರಿರಭ್ಯ ತಾಪಮ್ ॥ ೬೨

ವಂದೇ ನಂದವ್ರಜಸ್ತ್ರೀಣಾಂ ಪಾದರೇಣುಮಭೀಕ್ಷ್ಣಶಃ ।
ಯಾಸಾಂ ಹರಿಕಥೋದ್ಗೀತಂ ಪುನಾತಿ ಭುವನತ್ರಯಮ್ ॥ ೬೩

ಶ್ರೀಶುಕ ಉವಾಚ—

ಅಥ ಗೋಪೀರನುಜ್ಞಾಪ್ಯ ಯಶೋದಾಂ ನಂದಮೇವ ಚ ।
ಗೋಪಾನಾಮಂತ್ರ್ಯ ದಾಶಾರ್ಹೋ ಯಾಸ್ಯನ್ನಾರುರುಹೇ ರಥಮ್॥

---

ಮುಕುಂದಪ್ರಾಪ್ತಿಯ ಮಾರ್ಗವು ಯಾವುದೆಂದು ಶ್ರುತಿಗಳು ಹುಡುಕಾಡುತ್ತಿವೆ. ಈ ಗೋಪಿಯರು ದುಸ್ತ್ಯಜವಾದ ಬಂಧುವರ್ಗವನ್ನು ತೊರೆದು, ಆರ್ಯಧರ್ಮವನ್ನುಲ್ಲಂಘಿಸಿ ಆ ಮಾರ್ಗವನ್ನು ಸೇರಿಬಿಟ್ಟಿದ್ದಾರೆ! ಆಹಾ! ಈ ಗೋಪಿಯರ ಪಾದಧೂಳಿಯಿಂದ ಪಾವನವಾದ ಪೊದರು, ಬಳ್ಳಿ, ಗಿಡಗಳಲ್ಲಿ ಯಾವುದೋ ಒಂದಾಗಿ ವೃಂದಾವನದಲ್ಲಿ ನಾನು ಹುಟ್ಟಲಾಶಿಸುತ್ತೇನೆ! (೬೧). ಭಗವಂತನ ಚರಣಾರವಿಂದವು ಶ್ರೀದೇವಿಯಿಂದಲೂ ಆಪ್ತಕಾಮರಾದ ಬ್ರಹ್ಮಾದಿಗಳಿಂದಲೂ ಅರ್ಚಿತವಾದುದು. ಯೋಗೇಶ್ವರರಿಂದ ಮನಸ್ಸಿನಲ್ಲಿಯೇ ಪೂಜಿತವಾದುದು. ಶ್ರೀಕೃಷ್ಣನು ಸಾಕ್ಷಾತ್ತಾಗಿ ತಮ್ಮ ಸ್ತನಗಳಲ್ಲಿರಿಸಿದ ಅಂಥ ಪಾದವನ್ನು ಈ ಗೋಪಿಯರು ಆಲಿಂಗಿಸಿಕೊಂಡು ತಾಪವನ್ನು ನೀಗಿಕೊಂಡಿದ್ದಾರೆ! (೬೨). ನಂದಗೋಕುಲದಲ್ಲಿರುವ ಸ್ತ್ರೀಯರ ಪಾದರೇಣುವಿಗೆ ಮತ್ತೆ ಮತ್ತೆ ನಮಸ್ಕರಿಸುತ್ತೇನೆ! ಇವರು ಹಾಡುವ ಕೃಷ್ಣಚರಿತೆಯು ಮೂರುಲೋಕಗಳನ್ನೂ ಪವಿತ್ರಗೊಳಿಸುತ್ತದೆಯಲ್ಲವೆ?" ಎಂದುಕೊಂಡನು (೬೩). ಆಮೇಲೆ ಉದ್ಧವನು ಮಥುರೆಗೆ ಪ್ರಯಾಣಮಾಡಲು ಉದ್ದೇಶಿಸಿ, ಗೋಪಿಯರು

**ತಂ ನಿರ್ಗತಂ ಸಮಾಸಾದ್ಯ ನಾನೋಪಾಯನಪಾಣಯಃ ।**
**ನಂದಾದಯೋಽನುರಾಗೇಣ ಪ್ರಾವೋಚನ್ನಶ್ರುಲೋಚನಾಃ ॥ ೬೫**

**ಮನಸೋ ವೃತ್ತಯೋ ನಃ ಸ್ಯುಃ ಕೃಷ್ಣಪಾದಾಂಬುಜಾಶ್ರಯಾಃ ।**
**ವಾಚೋಽಭಿಧಾಯಿನೀರ್ನಾಮ್ನಾಂ ಕಾಯಸ್ತತ್ಪ್ರಹ್ವಣಾದಿಷು ॥ ೬೬**

**ಕರ್ಮಭಿರ್ಭ್ರಾಮ್ಯಮಾಣಾನಾಂ ಯತ್ರ ಕ್ವಾಪೀಶ್ವರೇಚ್ಛಯಾ ।**
**ಮಂಗಲಾಚರಿತೈರ್ದಾನೈ ರತಿರ್ನಃ ಕೃಷ್ಣ ಈಶ್ವರೇ ॥ ೬೭**

**ಏವಂ ಸಭಾಜಿತೋ ಗೋಪೈಃ ಕೃಷ್ಣಭಕ್ತ್ಯಾ ನರಾಧಿಪ ।**
**ಉದ್ಧವಃ ಪುನರಾಗಚ್ಛನ್ಮಥುರಾಂ ಕೃಷ್ಣಪಾಲಿತಾಮ್ ॥ ೬೮**

**ಕೃಷ್ಣಾಯ ಪ್ರಣಿಪತ್ಯಾಹ ಭಕ್ತ್ಯುದ್ರೇಕಂ ವ್ರಜೌಕಸಾಮ್ ।**
**ವಸುದೇವಾಯ ರಾಮಾಯ ರಾಜ್ಞೇ ಚೋಪಾಯನಾನ್ಯದಾತ್ ॥ ೬೯**

**ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಸಪ್ತಚತ್ವಾರಿಂಶಾಧ್ಯಾಯಃ**

---

ಯಶೋದೆ ನಂದಗೋಪ–ಇವರ ಅನುಜ್ಞೆಯನ್ನು ಬೇಡಿ, ಗೋಪರನ್ನು ಬೀಳ್ಕೊಂಡು ರಥವನ್ನೇರಿದನು (೬೪). ಉದ್ಧವನು ಹೊರಟಿರುವುದನ್ನು ಕಂಡು ನಂದಾದಿಗಳೆಲ್ಲರೂ ಪ್ರೀತಿಯಿಂದ ನಾನಾಬಗೆಯ ಕಾಣಿಕೆಗಳನ್ನು ತಂದು ಕೊಟ್ಟು ಕಂಬನಿದುಂಬಿ ಹೇಳಿದರು (೬೫): "ನಮ್ಮ ಮನೋವೃತ್ತಿಗಳು ಶ್ರೀಕೃಷ್ಣನ ಪಾದಪದ್ಮದಲ್ಲಿ ನೆಟ್ಟಿರಲಿ. ಮಾತುಗಳು ಅವನ ನಾಮಗಳನ್ನು ನುಡಿಯುತ್ತಿರಲಿ. ಶರೀರವು ಆತನ ವಂದನಾದಿ ಸೇವಾಕಾರ್ಯದಲ್ಲಿ ನಿರತವಾಗಿರಲಿ! (೬೬). ಕರ್ಮಗಳಿಂದ ನಾವು ಎಲ್ಲೆಂದರಲ್ಲಿ ತೊಳಲುತ್ತಿದ್ದರೂ ಈಶ್ವರನ ಅನುಗ್ರಹೇಚ್ಛೆಯಿಂದ ನಾವು ಶುಭಕರ್ಮಗಳನ್ನೂ ಸತ್ಪಾತ್ರದಾನಗಳನ್ನೂ ಮಾಡುವಂತಾಗಲಿ. ಅವುಗಳಿಂದ ಈಶ್ವರನಾದ ಶ್ರೀಕೃಷ್ಣನಲ್ಲಿ ನಮಗೆ ಭಕ್ತಿ ನೆಲಸಲಿ!" ಎಂದರು (೬೭). ಪರೀಕ್ಷಿತರಾಜ, ಈ ಪ್ರಕಾರವಾಗಿ ಗೋಪಾಲರು ಕೃಷ್ಣಭಕ್ತಿಯಿಂದ ಸಂಮಾನಿಸಲು, ಉದ್ಧವನು ಕೃಷ್ಣಪಾಲಿತವಾದ ಮಥುರೆಗೆ ಹಿಂದಿರುಗಿ ಬಂದನು (೬೭). ಅವನು ಶ್ರೀಕೃಷ್ಣನಿಗೆ ನಮಸ್ಕರಿಸಿ ವ್ರಜವಾಸಿಗಳ ಭಕ್ತ್ಯುದ್ರೇಕವನ್ನು ವಿವರಿಸಿದನು. ಮತ್ತು ವಸುದೇವನಿಗೂ ಬಲರಾಮನಿಗೂ ರಾಜನಾದ ಉಗ್ರಸೇನನಿಗೂ ಗೋಪರು ಕೊಟ್ಟ ಕಾಣಿಕೆಗಳನ್ನು ಅರ್ಪಿಸಿದನು (೬೮–೬೯).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತೇಳನೆಯ ಅಧ್ಯಾಯ

## ಅಷ್ಟಚತ್ವಾರಿಂಶಾಧ್ಯಾಯಃ

ಶ್ರೀಶುಕ ಉವಾಚ—

**ಅಥ ವಿಜ್ಞಾಯ ಭಗವಾನ್ ಸರ್ವಾತ್ಮಾ ಸರ್ವದರ್ಶನಃ ।**
**ಸೈರಂಧ್ರ್ಯಾಃ ಕಾಮತಪ್ತಾಯಾಃ ಪ್ರಿಯಮಿಚ್ಛನ್ ಗೃಹಂ ಯಯೌ ॥**

**ಮಹಾರ್ಹೋಪಸ್ಕರೈರಾಢ್ಯಂ ಕಾಮೋಪಾಯೋಪಬೃಂಹಿತಮ್ ।**
**ಮುಕ್ತಾದಾಮಪತಾಕಾಭಿರ್ವಿತಾನಶಯನಾಸನೈಃ ।**
**ಧೂಪೈಃ ಸುರಭಿಭಿರ್ದೀಪೈಃ ಸ್ರಗ್ಗಂಧೈರಪಿ ಮಂಡಿತಮ್ ॥ ೨**

**ಗೃಹಂ ತಮಾಯಾಂತಮವೇಕ್ಷ್ಯ ಸಾಽಸನಾತ್**
**ಸದ್ಯಃ ಸಮುತ್ಥಾಯ ಹಿ ಜಾತಸಂಭ್ರಮಾ ।**
**ಯಥೋಪಸಂಗಮ್ಯ ಸಖೀಭಿರಚ್ಯುತಂ**
**ಸಭಾಜಯಾಮಾಸ ಸದಾಸನಾದಿಭಿಃ ॥ ೩**

## ಅಧ್ಯಾಯ ೪೮

ಕುಬ್ಜೆಯ ಮನೋರಥವನ್ನು ನಡೆಸುವುದು. ಶ್ರೀಕೃಷ್ಣನು
ಅಕ್ರೂರನನ್ನು ಹಸ್ತಿನಾವತಿಗೆ ಕಳಿಸುವುದು

ಆಮೇಲೆ ಸೈರಂಧ್ರಿಯಾದ ಕುಬ್ಜೆಯು ಕಾಮತಪ್ತಳಾಗಿರುವುದನ್ನು ಸರ್ವಾತ್ಮನೂ ಸರ್ವಸಾಕ್ಷಿಯೂ ಆದ ಭಗವಂತನು ತಿಳಿದು, ಅವಳಿಗೆ ಪ್ರಿಯವನ್ನುಂಟುಮಾಡಬೇಕೆಂದು ಆಕೆಯ ಮನೆಗೆ ಹೋದನು (೧). (ಶ್ರೀಕೃಷ್ಣನ ಆಗಮನವನ್ನು ನಿರೀಕ್ಷಿಸುತ್ತಿದ್ದ) ಕುಬ್ಜೆಯ ಮನೆಯು ಅನರ್ಘ್ಯವಾದ ಉಪಕರಣಗಳಿಂದಲೂ ಕಾಮೋದ್ದೀಪಕವಾದ ತಾಂಬೂಲಾದಿವಸ್ತುಗಳಿಂದಲೂ ಮುಕ್ತಾಹಾರಪತಾಕೆಗಳಿಂದಲೂ ಮೇಲ್ಕಟ್ಟು ಶಯನಾಸನಗಳಿಂದಲೂ ಪರಿಮಳವನ್ನು ಬೀರುವ ಧೂಪದೀಪಗಳಿಂದಲೂ ಹೂಮಾಲೆ ಗಂಧಾದ್ಯನುಲೇಪನಗಳಿಂದಲೂ ಮಂಡಿತವಾಗಿತ್ತು (೨). ಅಚ್ಯುತನು ಆಗಮಿಸುವುದನ್ನು ಕಂಡೊಡನೆ ಸಡಗರದಿಂದ ಅವಳು ಪೀಠದಿಂದೆದ್ದು, ಸಖಿಯರೊಡನೆ ಹೋಗಿ ಸ್ವಾಗತಿಸಿ, ಶ್ರೇಷ್ಠವಾದ ಪೀಠಾದಿಗಳನ್ನಿತ್ತು, ಅವನನ್ನು ಸತ್ಕರಿಸಿದಳು (೩).

**ತಥೋದ್ಧವಃ ಸಾಧು ತಯಾಭಿಪೂಜಿತೋ**
**ನ್ಯಷೀದದುರ್ವ್ಯಾಮಭಿಮೃಶ್ಯ ಚಾಸನಮ್ ।**
**ಕೃಷ್ಣೋಽಪಿ ತೂರ್ಣಂ ಶಯನಂ ಮಹಾಧನಂ**
**ವಿವೇಶ ಲೋಕಾಚರಿತಾನ್ಯನುವ್ರತಃ ॥** ೪

**ಸಾ ಮಜ್ಜನಾಲೇಪದುಕೂಲಭೂಷಣ-**
**ಸ್ರಗ್ಗಂಧತಾಂಬೂಲಸುಧಾಸನಾದಿಭಿಃ ।**
**ಪ್ರಸಾಧಿತಾತ್ಮೋಪಸಸಾರ ಮಾಧವಂ**
**ಸವ್ರೀಡಲೀಲೋತ್ಸ್ಮಿತವಿಭ್ರಮೇಕ್ಷಿತೈಃ ॥** ೫

**ಆಹೂಯ ಕಾಂತಾಂ ನವಸಂಗಮಹ್ರಿಯಾ**
**ವಿಶಂಕಿತಾಂ ಕಂಕಣಭೂಷಿತೇ ಕರೇ ।**
**ಪ್ರಗೃಹ್ಯ ಶಯ್ಯಾಮಧಿವೇಶ್ಯ ರಾಮಯಾ**
**ರೇಮೇಽನುಲೇಪಾರ್ಪಣಪುಣ್ಯಲೇಶಯಾ ॥** ೬

**ಸಾನಂಗತಪ್ತಕುಚಯೋರುರಸಸ್ತಥಾಕ್ಷ್ಣೋ-**
**ರ್ಜಿಘ್ರಂತ್ಯನಂತಚರಣೇನ ರುಜೋ ಮೃಜಂತೀ ।**

---

ಹಾಗೆಯೇ ಅವಳಿಂದ ಗೌರವಿಸಲ್ಪಟ್ಟ ಉದ್ಧವನು ತನಗೆ ಕೊಟ್ಟ ಪೀಠವನ್ನು ಕೈಯಿಂದ ಮುಟ್ಟಿ ನೆಲದಮೇಲೆ ಕುಳಿತುಕೊಂಡನು. ಶ್ರೀಕೃಷ್ಣನು ಲೋಕದ ನಡೆವಳಿಕೆಯನ್ನು ಅನುಸರಿಸಿ ವೈಭವೋಪೇತವಾದ ಶಯ್ಯಾಗಾರವನ್ನು ಬೇಗನೆ ಪ್ರವೇಶಿಸಿದನು (೪). ಕುಬ್ಜೆಯು ಸ್ನಾನಮಾಡಿ ಅನುಲೇಪನ, ದುಕೂಲ, ಭೂಷಣ, ಹಾರ, ಗಂಧ, ತಾಂಬೂಲ, ಸುಣ್ಣ, ಮದ್ಯ–ಮೊದಲಾದವುಗಳಿಂದ ಸಜ್ಜಳಾಗಿ ನಾಚುತ್ತ ವಿಲಾಸ, ನಗು, ವೈಯಾರದ ನೋಟಗಳೊಡನೆ ಮಾಧವನ ಬಳಿಗೆ ಬಂದಳು (೫). ನವಸಂಗಮದ ಲಜ್ಜೆಯಿಂದ ಶಂಕಿಸುತ್ತಿದ್ದ ಆ ಕಾಂತೆಯ ಕಂಕಣಭೂಷಿತ ಹಸ್ತವನ್ನು ಹಿಡಿದು ಶಯ್ಯೆಯನ್ನೇರಿಸಿ ಅಚ್ಯುತನು ಅವಳೊಡನೆ ರಮಿಸಿದನು. ಹಿಂದೆ ಶ್ರೀಕೃಷ್ಣನಿಗೆ ಅನುಲೇಪನವನ್ನಿತ್ತುದೇ ಅವಳು ಸಂಪಾದಿಸಿದ ಪುಣ್ಯವಾಗಿತ್ತು (೬). ಆ ಕುಬ್ಜೆಯು ಆನಂದಮೂರ್ತಿಯೂ ಕಾಂತನೂ ಆದ ಅಚ್ಯುತನನ್ನು ವಕ್ಷಃಸ್ಥಳದಲ್ಲಿ ತೋಳುಗಳಿಂದ ಆಲಿಂಗಿಸಿ, (ದೇಹಪರಿಮಳವನ್ನು) ಮೂಸಿ, ಅನಂಗತಪ್ತವಾದ

**ದೋರ್ಭ್ಯಾಂ ಸ್ತನಾಂತರಗತಂ ಪರಿರಭ್ಯ ಕಾಂತ-**
**ಮಾನಂದಮೂರ್ತಿಮಜಹಾದತಿದೀರ್ಘತಾಪಮ್ ॥ ೭**

**ಸೈವಂ ಕೈವಲ್ಯನಾಥಂ ತಂ ಪ್ರಾಪ್ಯ ದುಷ್ಪ್ರಾಪಮೀಶ್ವರಮ್ ।**
**ಅಂಗರಾಗಾರ್ಪಣೇನಾಹೋ ದುರ್ಭಗೇದಮಯಾಚತ ॥ ೮**

**ಆಹೋಷ್ಯತಾಮಿಹ ಪ್ರೇಷ್ಠ ದಿನಾನಿ ಕತಿಚಿನ್ಮಯಾ ।**
**ರಮಸ್ವ ನೋತ್ಸಹೇ ತ್ಯಕ್ತುಂ ಸಂಗಂ ತೇಽಂಬುರುಹೇಕ್ಷಣ ॥ ೯**

**ತಸ್ಯೈ ಕಾಮವರಂ ದತ್ತ್ವಾ ಮಾನಯಿತ್ವಾ ಚ ಮಾನದಃ ।**
**ಸಹೋದ್ಧವೇನ ಸರ್ವೇಶಃ ಸ್ವಧಾಮಾಗಮದರ್ಚಿತಮ್ ॥ ೧೦**

**ದುರಾರಾಧ್ಯಂ ಸಮಾರಾಧ್ಯ ವಿಷ್ಣುಂ ಸರ್ವೇಶ್ವರೇಶ್ವರಮ್ ।**
**ಯೋ ವೃಣೀತೇ ಮನೋಗ್ರಾಹ್ಯಮಸತ್ತ್ವಾತ್ ಕುಮನೀಷ್ಯಸೌ ॥ ೧೧**

**ಅಕ್ರೂರಭವನಂ ಕೃಷ್ಣಃ ಸಹರಾಮೋದ್ಧವಃ ಪ್ರಭುಃ ।**
**ಕಿಂಚಿಚ್ಚಿಕೀರ್ಷಯನ್ ಪ್ರಾಗಾದಕ್ರೂರಪ್ರಿಯಕಾಮ್ಯಯಾ ॥ ೧೨**

---

ಸ್ತನಗಳ, ವಕ್ಷಃಸ್ಥಳದ ಮತ್ತು ಕಣ್ಣುಗಳ ದೀರ್ಘಕಾಲದ ತಾಪವನ್ನು ಅನಂತನ ಚರಣಸ್ಪರ್ಶದಿಂದ ನೀಗಿಕೊಂಡಳು (೭). ಈ ಪ್ರಕಾರವಾಗಿ ಹಿಂದೆ ಸುಗಂಧ ದ್ರವ್ಯವನ್ನು ಶ್ರೀಕೃಷ್ಣನಿಗೆ ಅರ್ಪಿಸಿದ ಪುಣ್ಯದಿಂದ ಕೈವಲ್ಯನಾಥನೂ ದುರ್ಲಭನೂ ಆದ ಈಶ್ವರನೇ ದೊರಕಿದ್ದರೂ, ಆ ಭಾಗ್ಯಹೀನಳು ಹೀಗೆ ವರವನ್ನು ಕೇಳಿದಳು (೮). ಏನೆಂದರೆ, "ಪ್ರಿಯತಮ, ಕೆಲವು ದಿನಗಳವರೆಗೆ ನನ್ನೊಡನೆ ಇದ್ದು ವಿಹರಿಸು. ಪದ್ಮನೇತ್ರ, ನಿನ್ನ ಸಂಗವನ್ನು ತ್ಯಜಿಸಲಾರೆ" ಎಂದಳು! (೯). ಅದಕ್ಕೆ ಸರ್ವೇಶ್ವರನು ಒಪ್ಪಿ ಕಾಮದ ವರವನ್ನಿತ್ತು ಭೂಷಣಾದಿಗಳಿಂದ ಸಂಮಾನಿಸಿ, ಶ್ರೇಷ್ಠವಾದ ತನ್ನ ಗೃಹಕ್ಕೆ ಉದ್ಧವನೊಡನೆ ಹಿಂದಿರುಗಿದನು (೧೦). ಪರೀಕ್ಷಿತ, ಸರ್ವೇಶ್ವರರಿಗೆ ಈಶ್ವರನೂ ಸಾಮಾನ್ಯರಿಗೆ ಮೆಚ್ಚಿಸಲು ಅಶಕ್ಯನೂ ಆದ ವಿಷ್ಣುವನ್ನು ಹೇಗೋ ಮೆಚ್ಚಿಸಿದಾಗ, ಯಾವನು ವಿಷಯಸುಖವನ್ನು ಬಯಸುವನೋ ಅವನು, ಅದು ಅತಿತುಚ್ಛವಾದ್ದರಿಂದ, ಬುದ್ಧಿಹೀನನೇ ಸರಿ(೧೧). ತರುವಾಯ ಪ್ರಭುವಾದ ಶ್ರೀಕೃಷ್ಣನು ಅಕ್ರೂರನಿಗೆ ಸಂತೋಷವಾಗಲೆಂದೂ ಅವನಿಂದ ಒಂದಾನೊಂದು ಕೆಲಸವನ್ನು ಮಾಡಿಸಬೇಕೆಂದೂ ಉದ್ದೇಶಿಸಿ ಬಲರಾಮ ಮತ್ತು ಉದ್ಧವರೊಡನೆ ಆತನ

ಸ ತಾನ್ ನರವರಶ್ರೇಷ್ಠಾನಾರಾದ್ ವೀಕ್ಷ್ಯ ಸ್ವಬಾಂಧವಾನ್ ।
ಪ್ರತ್ಯುತ್ಥಾಯ ಪ್ರಮುದಿತಃ ಪರಿಷ್ವಜ್ಯಾಭ್ಯನಂದತ ॥ ೧೩

ನನಾಮ ಕೃಷ್ಣಂ ರಾಮಂ ಚ ಸ ತೈರಪ್ಯಭಿವಾದಿತಃ ।
ಪೂಜಯಾಮಾಸ ವಿಧಿವತ್ ಕೃತಾಸನಪರಿಗ್ರಹಾನ್॥ ೧೪

ಪಾದಾವನೇಜನೀರಾಪೋ ಧಾರಯನ್ ಶಿರಸಾ ನೃಪ
ಅರ್ಹಣೇನಾಂಬರೈರ್ದಿವ್ಯೈರ್ಗಂಧಸ್ರಗ್ಭೂಷಣೋತ್ತಮೈಃ ॥ ೧೫

ಅರ್ಚಿತ್ವಾ ಶಿರಸಾಽಽನಮ್ಯ ಪಾದಾವಂಕಗತೌ ಮೃಜನ್ ।
ಪ್ರಶ್ರಯಾವನತೋಽಕ್ರೂರಃ ಕೃಷ್ಣರಾಮಾವಭಾಷತ ॥ ೧೬

ದಿಷ್ಟ್ಯಾ ಪಾಪೋ ಹತಃ ಕಂಸಃ ಸಾನುಗೋ ವಾಮಿದಂ ಕುಲಮ್ ।
ಭವದ್ಭ್ಯಾಮುದ್ಧೃತಂ ಕೃಚ್ಛ್ರಾದ್ ದುರಂತಾಚ್ಚ ಸಮೇಧಿತಮ್ ॥

ಯುವಾಂ ಪ್ರಧಾನಪುರುಷೌ ಜಗದ್ಧೇತೂ ಜಗನ್ಮಯೌ ।
ಭವದ್ಭ್ಯಾಂ ನ ವಿನಾ ಕಿಂಚಿತ್ ಪರಮಸ್ತಿ ನ ಚಾಪರಮ್ ॥ ೧೮

---

ಮನೆಗೆ ಹೋದನು (೧೨). ಪುರುಷೋತ್ತಮರಾದ ತನ್ನ ಮೂವರು ಬಂಧುಗಳು ಆಗಮಿಸಿದ್ದನ್ನು ಕಂಡು ಅಕ್ರೂರನು ಆನಂದದಿಂದ ಎದುರ್ಗೊಂಡು ಆಲಿಂಗಿಸಿ ಅಭಿನಂದಿಸಿದನು. ಅವನು ಶ್ರೀಕೃಷ್ಣನನ್ನೂ ಬಲರಾಮನನ್ನೂ ವಂದಿಸಿದನಲ್ಲದೆ ಆ ಮೂವರಿಂದಲೂ ನಮಸ್ಕೃತನಾದನು. ಅವರಿಗೆ ಪೀಠಗಳನ್ನಿತ್ತು ವಿಧಿವತ್ತಾಗಿ ಸತ್ಕರಿಸಿದನು (೧೩–೧೪). ಮಹಾರಾಜ, ಅಕ್ರೂರನು ರಾಮಕೃಷ್ಣರ ಪಾದಗಳನ್ನು ತೊಳೆದು ಆ ಜಲವನ್ನು ತನ್ನ ತಲೆಗೆ ಪ್ರೋಕ್ಷಿಸಿಕೊಂಡನು. ದಿವ್ಯವಾದ ವಸ್ತ್ರ, ಗಂಧ, ಮಾಲೆ, ಅಲಂಕಾರಾದಿ ಪೂಜಾಸಾಮಗ್ರಿಗಳಿಂದ ಅವರನ್ನು ಅರ್ಚಿಸಿ, ತಲೆಬಾಗಿ ನಮಸ್ಕರಿಸಿ, ಪಾದಗಳನ್ನು ನೀವುತ್ತ ವಿನಯದಿಂದ ಅಕ್ರೂರನು ರಾಮಕೃಷ್ಣರನ್ನು ಕುರಿತು ಹೀಗೆಂದನು (೧೫–೧೬) : " ಪಾಪಿಯಾದ ಕಂಸನು ನಿಮ್ಮಿಂದ ಅನುಚರಸಹಿತನಾಗಿ ಹತನಾದನೆಂಬುದು ಸಂತೋಷಕರವಾದುದು. ದುರಂತವಾದ ವಿಪತ್ತಿನಿಂದ ಕುಲವನ್ನು ಉದ್ಧರಿಸಿದಿರಿ. ಕುಲವು ಸಮೃದ್ಧಿಯನ್ನೈದಿತು. (೧೭). ನೀವು ಜಗತ್ಕಾರಣರೂ ಜಗದ್ರೂಪರೂ ಆದ ಪ್ರಕೃತಿಪುರುಷರು. ನಿಮಗಿಂತ ಅತಿರಿಕ್ತವಾದ ಪರವೂ (ಕಾರಣ) ಇಲ್ಲ. ಅಪರವಾದ ಕಾರ್ಯವೂ ಇಲ್ಲ (೧೮).

ಆತ್ಮಸೃಷ್ಟಮಿದಂ ವಿಶ್ವಮನ್ವಾವಿಶ್ಯ ಸ್ವಶಕ್ತಿಭಿಃ ।
ಈಯತೇ ಬಹುಧಾ ಬ್ರಹ್ಮನ್ ಶ್ರುತಿಪ್ರತ್ಯಕ್ಷಗೋಚರಮ್ ॥ ೧೯

ಯಥಾ ಹಿ ಭೂತೇಷು ಚರಾಚರೇಷು
ಮಹ್ಯಾದಯೋ ಯೋನಿಷು ಭಾಂತಿ ನಾನಾ ।
ಏವಂ ಭವಾನ್ ಕೇವಲ ಆತ್ಮಯೋನಿ-
ಷ್ವಾತ್ಮಾಽಽತ್ಮತಂತ್ರೋ ಬಹುಧಾ ವಿಭಾತಿ ॥ ೨೦

ಸೃಜಸ್ಯಥೋ ಲುಂಪಸಿ ಪಾಸಿ ವಿಶ್ವಂ
ರಜಸ್ತಮಃಸತ್ತ್ವಗುಣೈಃ ಸ್ವಶಕ್ತಿಭಿಃ ।
ನ ಬಧ್ಯಸೇ ತದ್ಗುಣಕರ್ಮಭಿರ್ವಾ
ಜ್ಞಾನಾತ್ಮನಸ್ತೇ ಕ್ವ ಚ ಬಂಧಹೇತುಃ ॥ ೨೧

ದೇಹಾದ್ಯುಪಾಧೇರನಿರೂಪಿತತ್ವಾದ್
ಭವೋ ನ ಸಾಕ್ಷಾನ್ನ ಭಿದಾಽಽತ್ಮನಃ ಸ್ಯಾತ್ ।
ಅತೋ ನ ಬಂಧಸ್ತವ ನೈವ ಮೋಕ್ಷಃ
ಸ್ಯಾತಾಂ ನಿಕಾಮಸ್ತ್ವಯಿ ನೋಽವಿವೇಕಃ ॥ ೨೨

---

ಹೇ ಪರಮೇಶ್ವರನೆ, ನಿನ್ನ ಮಾಯಾಶಕ್ತಿಗಳಿಂದ ನೀನೇ ಸೃಜಿಸಿರುವ ಈ ಪ್ರಪಂಚವನ್ನು (ಜೀವರೂಪದಿಂದ) ಪ್ರವೇಶಿಸಿ, ವೇದಗಳಿಗೂ ಇಂದ್ರಿಯಗಳಿಗೂ ತಿಳಿದುಬರುವ ಹಾಗೆ ನಾನಾರೂಪಗಳಿಂದ ಪ್ರತೀತನಾಗುತ್ತಿರುವೆ (೧೯). ಭೂಮಿಯೇ ಮೊದಲಾದ ಪಂಚಭೂತಗಳು ತಮ್ಮ ಅಭಿವ್ಯಕ್ತಿಗೆ ನಿಮಿತ್ತವಾದ ಘಟಪಟಾದಿಗಳಲ್ಲಿ ಹೇಗೆ ಅನೇಕ ವಿಭಿನ್ನವಸ್ತುಗಳಾಗಿ ಗೋಚರಿಸುತ್ತವೆಯೋ ಹಾಗೆಯೇ ಏಕಾತ್ಮನೂ ಸ್ವತಂತ್ರನೂ ಆದ ನೀನು ನೀನೇ ಕಾರಣವಾಗಿ ಜನಿಸಿರುವ (ಅಥವಾ ನಿನ್ನ ಅಭಿವ್ಯಕ್ತಿಗೆ ನಿಮಿತ್ತಗಳಾದ) ಜಂಗಮಸ್ಥಾವರ ವಸ್ತುಗಳಲ್ಲಿ ಬಹುಪ್ರಕಾರದಿಂದ ವಿರಾಜಿಸುವೆ (೨೦). ಸತ್ತ್ವ ರಜಸ್ತಮೋಗುಣಗಳನ್ನಾಶ್ರಯಿಸಿ ನಿನ್ನ ಮಾಯಾಶಕ್ತಿಗಳಿಂದ ಪ್ರಪಂಚದ ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡುತ್ತೀಯೆ. ಆದರೂ ಗುಣಗಳಿಂದಲೂ ಕರ್ಮಗಳಿಂದಲೂ ನಿನಗೆ ಬಂಧವಿಲ್ಲ. ಜ್ಞಾನಾತ್ಮನಾದ ನಿನಗೆ ಬಂಧದ ನಿಮಿತ್ತವಾದರೂ ಎಲ್ಲಿಂದ ಬರಬೇಕು? (೨೧). ದೇಹ ಮುಂತಾದ ಉಪಾಧಿಯು ಅನಿರ್ವಚನೀಯವಾಗಿ ಅವಾಸ್ತವವಾದ್ದರಿಂದ ಆತ್ಮನಿಗೆ ಪಾರಮಾರ್ಥಿಕವಾಗಿ

**ತ್ವಯೋದಿತೋಽಯಂ ಜಗತೋ ಹಿತಾಯ**
**ಯದಾ ಯದಾ ವೇದಪಥಃ ಪುರಾಣಃ ।**
**ಬಾಧ್ಯೇತ ಪಾಖಂಡಪಥೈರಸದ್ಭಿ-**
**ಸ್ತದಾ ಭವಾನ್ ಸತ್ತ್ವಗುಣಂ ಬಿಭರ್ತಿ ॥ ೨೩**

**ಸ ತ್ವಂ ಪ್ರಭೋಽದ್ಯ ವಸುದೇವಗೃಹೇಽವತೀರ್ಣಃ**
**ಸ್ವಾಂಶೇನ ಭಾರಮುಪನೇತುಮಿಹಾಸಿ ಭೂಮೇಃ ।**
**ಅಕ್ಷೌಹಿಣೀಶತವಧೇನ ಸುರೇತರಾಂಶ-**
**ರಾಜ್ಞಾಮಮುಷ್ಯ ಚ ಕುಲಸ್ಯ ಯಶೋ ವಿತನ್ವನ್॥ ೨೪**

**ಅದ್ಯೇಶ ನೋ ವಸತಯಃ ಖಲು ಭೂರಿಭಾಗಾ**
**ಯಃ ಸರ್ವದೇವಪಿತೃಭೂತನೃದೇವಮೂರ್ತಿಃ ।**

---

ಜನ್ಮವೂ ತನ್ಮೂಲಕವಾದ ಭೇದವೂ ಇಲ್ಲ. ಆದ್ದರಿಂದ ನಿನಗೆ ಬಂಧಮೋಕ್ಷಗಳಿಲ್ಲ. ಅವು ಇವೆಯೆಂದು ತಿಳಿಯುವುದು ನಮ್ಮ ದೊಡ್ಡ ಅವಿವೇಕ (೨೨). ಜಗತ್ತಿನ ಹಿತಕ್ಕಾಗಿ ನೀನು ಬೋಧಿಸಿರುವ ಸನಾತನವಾದ ಯಾವ ವೇದಮಾರ್ಗವುಂಟೋ, ಅದಕ್ಕೆ ದುಷ್ಟವಾದ ಪಾಖಂಡಮತಗಳಿಂದ ಬಾಧೆಯಾದಾಗ, ನೀನು ಸತ್ತ್ವಗುಣವನ್ನಾಶ್ರಯಿಸಿ ಅವತರಿಸುವೆ (೨೩). ಅಸುರಸ್ವಭಾವದ ಯಾವ ರಾಜರಿದ್ದಾರೋ ಅವರ ನೂರಾರು ಅಕ್ಷೌಹಿಣೀಬಲವನ್ನು ವಧಿಸಿ, ಭೂಭಾರವನ್ನಿಳಿಸಬೇಕೆಂದು ನಿನ್ನ ಅಂಶವಾದ ಬಲರಾಮನೊಡನೆ ವಸುದೇವಗೃಹದಲ್ಲಿ ಈಗ ಅವತರಿಸಿದ್ದೀಯೆ. ಪ್ರಭುವೆ, ಇವರಿಂದ ಯದುಕುಲದ ಕೀರ್ತಿಯನ್ನು ಹೆಚ್ಚಿಸುವೆ (೨೪). ಹೇ ಸ್ವಾಮಿ, ಈಗ ನಮ್ಮ ವಸತಿಗಳು ಮಹತ್ತರವಾದ ಸ್ಥಾನವನ್ನು ಗಳಿಸಿದವು. ಏಕೆಂದರೆ, ಸಕಲದೇವತೆಗಳ, ಪಿತೃಗಳ, ಪ್ರಾಣಿಗಳ ಮತ್ತು ರಾಜರ ಮೂರ್ತಿಯಾದ * ನೀನು ನಮ್ಮ ವಸತಿ

---

* ಮೂಲದಲ್ಲಿರುವ 'ಸರ್ವದೇವಪಿತೃಭೂತನೃದೇವಮೂರ್ತಿಃ' ಎಂಬುದಕ್ಕೆ ಶ್ರೀಧರೀಯವ್ಯಾಖ್ಯಾನದಲ್ಲಿ 'ಪಂಚಯಜ್ಞದೇವತಾಮೂರ್ತಿಃ' ಎಂದು ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ಮೂಲದಲ್ಲಿ ಒಂದು 'ದೇವ' ಪದವು 'ವೇದ' ಎಂದಿರಬಹುದು. ಆದರಿಂದ ಬ್ರಹ್ಮಯಜ್ಞವನ್ನು ಸಂಗ್ರಹಿಸಬಹುದು. ಪಂಚಯಜ್ಞಗಳು:—ಬ್ರಹ್ಮಯಜ್ಞ, ಪಿತೃಯಜ್ಞ, ಭೂತಯಜ್ಞ, ಅತಿಥಿಯಜ್ಞ, ದೇವಯಜ್ಞ.

ಯತ್ಪಾದಶೌಚಸಲಿಲಂ ತ್ರಿಜಗತ್ ಪುನಾತಿ
ಸ ತ್ವಂ ಜಗದ್ಗುರುರಧೋಕ್ಷಜ ಯಾಃ ಪ್ರವಿಷ್ಟಃ ॥ ೨೫

ಕಃ ಪಂಡಿತಸ್ತ್ವದಪರಂ ಶರಣಂ ಸಮೀಯಾದ್
ಭಕ್ತಪ್ರಿಯಾದೃತಗಿರಃ ಸುಹೃದಃ ಕೃತಜ್ಞಾತ್ ।
ಸರ್ವಾನ್ ದದಾತಿ ಸುಹೃದೋ ಭಜತೋಽಭಿಕಾಮಾ-
ನಾತ್ಮಾನಮಪ್ಯುಪಚಯಾಪಚಯೌ ನ ಯಸ್ಯ ॥ ೨೬

ದಿಷ್ಟ್ಯಾ ಜನಾರ್ದನ ಭವಾನಿಹ ನಃ ಪ್ರತೀತೋ
ಯೋಗೇಶ್ವರೈರಪಿ ದುರಾಪಗತಿಃ ಸುರೇಶೈಃ ।
ಛಿಂಧ್ಯಾಶು ನಃ ಸುತಕಲತ್ರಧನಾಪ್ತಗೇಹ-
ದೇಹಾದಿಮೋಹರಶನಾಂ ಭವದೀಯಮಾಯಾಮ್ ॥

ಶ್ರೀಶುಕ ಉವಾಚ—

ಇತ್ಯರ್ಚಿತಃ ಸಂಸ್ತುತಶ್ಚ ಭಕ್ತೇನ ಭಗವಾನ್ ಹರಿಃ ।
ಅಕ್ರೂರಂ ಸಸ್ಮಿತಂ ಪ್ರಾಹ ಗೀರ್ಭಿಃ ಸಂಮೋಹಯನ್ನಿವ ॥ ೨೮

---

ಯನ್ನು ಪ್ರವೇಶಿಸಿರುವೆ. ಅಧೋಕ್ಷಜ, ಜಗದ್ಗುರುವಾದ ನಿನ್ನ ಪಾದವನ್ನು ತೊಳೆದ ಗಂಗಾಜಲವು ಲೋಕತ್ರಯವನ್ನೂ ಪಾವನಗೊಳಿಸುತ್ತದೆ (೨೫). ವೃದ್ಧಿಕ್ಷಯಗಳಿಲ್ಲದೆ ಏಕರೂಪನಾದ ನೀನು ಆಪ್ತರಾದ ಏಕಾಂತಭಕ್ತರಿಗೆ ಎಲ್ಲ ಇಷ್ಟಾರ್ಥಗಳನ್ನೂ ಕಡೆಗೆ ನಿನ್ನನ್ನೂ ಸಹ ಅರ್ಪಿಸಿಬಿಡುತ್ತೀಯೆ! ಇಂತಹ ಭಕ್ತಪ್ರಿಯನೂ ಸತ್ಯವಾಕ್ಯನೂ ಆಪ್ತನೂ ಕೃತಜ್ಞನೂ ಆದ ನಿನ್ನನ್ನು ಬಿಟ್ಟು ಯಾವ ಪಂಡಿತನು ಇನ್ನೊಬ್ಬನಿಗೆ ಶರಣು ಹೋಗುವನು? (೨೬). ಹೇ ಜನಾರ್ದನ, ಯೋಗೇಶ್ವರರಿಗೂ ಸುರೇಶ್ವರರಿಗೂ ದುರ್ಲಭನಾದ ನೀನು ನಮ್ಮ ಭಾಗ್ಯದಿಂದ ಇಲ್ಲಿ ಗೋಚರನಾಗಿದ್ದೀಯೆ. ನಿನ್ನ ಮಾಯಾರೂಪವಾಗಿ ನಮಗೆ ಸುತ್ತಿಕೊಂಡಿರುವ ಮಕ್ಕಳು, ಮಡದಿ, ಹಣ, ಬಂಧು, ಮನೆ, ದೇಹ—ಮೊದಲಾದವುಗಳ ಮೋಹದ ಸರಪಳಿಯನ್ನು ಬೇಗನೆ ಕತ್ತರಿಸಿಹಾಕು" ಎಂದು ಸ್ತುತಿಸಿದನು (೨೭). ಹೀಗೆ ಭಕ್ತನಿಂದ ಅರ್ಚಿತನೂ ಸಂಸ್ತುತನೂ ಆದ ಭಗವಾನ್ ಶ್ರೀಹರಿಯು ಮಂದಸ್ಮಿತದಿಂದ ಕೂಡಿದ ನುಡಿಗಳಿಂದ ಪ್ರತಿಯಾಗಿ

*

ಶ್ರೀಭಗವಾನುವಾಚ—

**ತ್ವಂ ನೋ ಗುರುಃ ಪಿತೃವ್ಯಶ್ಚ ಶ್ಲಾಘ್ಯೋ ಬಂಧುಶ್ಚ ನಿತ್ಯದಾ ।**
**ವಯಂ ತು ರಕ್ಷ್ಯಾಃ ಪೋಷ್ಯಾಶ್ಚ ಅನುಕಂಪ್ಯಾಃ ಪ್ರಜಾ ಹಿ ವಃ ॥**

**ಭವದ್ವಿಧಾ ಮಹಾಭಾಗಾ ನಿಷೇವ್ಯಾ ಅರ್ಹಸತ್ತಮಾಃ ।**
**ಶ್ರೇಯಸ್ಕಾಮೈರ್ನೃಭಿರ್ನಿತ್ಯಂ ದೇವಾಃ ಸ್ವಾರ್ಥಾ ನ ಸಾಧವಃ ॥ ೩೦**

**ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥ ೩೧**

**ಸ ಭವಾನ್ ಸುಹೃದಾಂ ವೈ ನಃ ಶ್ರೇಯಾನ್ ಶ್ರೇಯಶ್ಚಿಕೀರ್ಷಯಾ ।**
**ಜಿಜ್ಞಾಸಾರ್ಥಂ ಪಾಂಡವಾನಾಂ ಗಚ್ಛಸ್ವ ತ್ವಂ ಗಜಾಹ್ವಯಮ್ ॥ ೩೨**

**ಪಿತರ್ಯುಪರತೇ ಬಾಲಾಃ ಸಹ ಮಾತ್ರಾ ಸುದುಃಖಿತಾಃ ।**
**ಆನೀತಾಃ ಸ್ವಪುರಂ ರಾಜ್ಞಾ ವಸಂತ ಇತಿ ಶುಶ್ರುಮ ॥ ೩೩**

---

ಅಕ್ರೂರನನ್ನು ಮೋಹದ ಸರಪಳಿಯಿಂದ ಬಿಗಿಯುವನೋ ಎಂಬಂತೆ ಹೇಳಿದನು! (೨೮): "ಅಕ್ರೂರ, ನೀನು ನಮಗೆ ಹಿರಿಯನಾದವನು, ಚಿಕ್ಕಪ್ಪ ಮತ್ತು ಸ್ತೋತ್ರಾರ್ಹನಾದ ಬಾಂಧವ. ನಾವಾದರೋ ನಿಮ್ಮ ರಕ್ಷಣೆಗೆ ಒಳಪಟ್ಟವರು, ಪೋಷಣೀಯರು ಮತ್ತು ಕನಿಕರಕ್ಕೆ ಪಾತ್ರರು! ನಾವು ನಿಮ್ಮ ಪ್ರಜೆಗಳಲ್ಲವೆ? (೨೯). ಶ್ರೇಯಸ್ಸನ್ನು ಬಯಸತಕ್ಕ ಜನರು ನಿನ್ನಂತಹ ಅತ್ಯಂತ ಪೂಜ್ಯರಾದ ಮಹಾಭಾಗರನ್ನು ಯಾವಾಗಲೂ ಸೇವಿಸಬೇಕು. ದೇವತೆಗಳು ಸ್ವಾರ್ಥಿಗಳು! ಸಾಧುಜನರು ಅಂಥವರಲ್ಲ (ಸಾಧುಗಳೇ ದೇವತೆಗಳು. ಸ್ವಾರ್ಥಿಗಳಾದ ದೇವತೆಗಳು ದೇವತೆಗಳಲ್ಲ) (೩೦). ಜಲಮಯವಾದ ತೀರ್ಥಗಳಾಗಲಿ ಮಣ್ಣಿನಿಂದಲೂ ಕಲ್ಲಿನಿಂದಲೂ ಮಾಡಿದ ಮೂರ್ತಿಗಳಾಗಲಿ ದೇವತೆಗಳಲ್ಲವೆಂದಲ್ಲ. ಅವು ಬಹುಕಾಲದಮೇಲೆ ಫಲವನ್ನೀಯುತ್ತವೆ. ಸಾಧುಗಳಾದರೋ ದರ್ಶನಮಾತ್ರದಿಂದ ಕೂಡಲೇ ಫಲವನ್ನೀಯುತ್ತಾರೆ (೩೧). ಅಕ್ರೂರ, ನಮ್ಮ ಆಪ್ತಜನರಲ್ಲಿ ನೀನು ಶ್ರೇಷ್ಠನಾದವನು. ಆದ್ದರಿಂದ ಪಾಂಡವರಿಗೆ ಶ್ರೇಯಸ್ಸನ್ನುಂಟುಮಾಡುವ ದೃಷ್ಟಿಯಿಂದ ಅವರ ಯೋಗಕ್ಷೇಮಗಳನ್ನು ವಿಚಾರಿಸುವುದಕ್ಕಾಗಿ ಹಸ್ತಿನಾವತಿಗೆ ಹೋಗಿಬಾ (೩೨). ತಂದೆಯಾದ ಪಾಂಡುರಾಜನು ಸ್ವರ್ಗಸ್ಥನಾದಮೇಲೆ ಆ ಹುಡುಗರೂ ಅವರ ತಾಯಿಯೂ

ತೇಷು ರಾಜಾಂಬಿಕಾಪುತ್ರೋ ಭ್ರಾತೃಪುತ್ರೇಷು ದೀನಧೀಃ ।
ಸಮೋ ನ ವರ್ತತೇ ನೂನಂ ದುಷ್ಪುತ್ರವಶಗೋಽಂಧದೃಕ್ ॥ ೩೪

ಗಚ್ಛ ಜಾನೀಹಿ ತದ್ವೃತ್ತಮಧುನಾ ಸಾಧ್ವಸಾಧು ವಾ ।
ವಿಜ್ಞಾಯ ತದ್ ವಿಧಾಸ್ಯಾಮೋ ಯಥಾ ಶಂ ಸುಹೃದಾಂ ಭವೇತ್ ॥

ಇತ್ಯಕ್ರೂರಂ ಸಮಾದಿಶ್ಯ ಭಗವಾನ್ ಹರಿರೀಶ್ವರಃ ।
ಸಂಕರ್ಷಣೋದ್ಧವಾಭ್ಯಾಂ ವೈ ತತಃ ಸ್ವಭವನಂ ಯಯೌ ॥ ೩೬

ಇತಿ ಶ್ರೀಮದ್ಭಾಗವತೇ ದಶಮಸ್ಕಂಧೇ ಅಷ್ಟಚತ್ವಾರಿಂಶಾಧ್ಯಾಯಃ



ಬಹಳ ಕಷ್ಟಕ್ಕೆ ಸಿಕ್ಕಿದರಂತೆ. ರಾಜನಾದ ಧೃತರಾಷ್ಟ್ರನು ಅವರನ್ನು ತನ್ನ ಪಟ್ಟಣಕ್ಕೆ ಕರೆಸಿಕೊಂಡನೆಂದೂ ಈಗ ಅಲ್ಲಿ ವಾಸವಾಗಿದ್ದಾರೆಂದೂ ಕೇಳಿದ್ದೇವೆ (೩೩). ಅಂಬಿಕಾಪುತ್ರನಾದ ಧೃತರಾಷ್ಟ್ರರಾಜನು ತನ್ನ ದುರುಳರಾದ ತನಯರಿಗೆ ವಶನಾಗಿ ತಮ್ಮನ ಮಕ್ಕಳ ವಿಷಯದಲ್ಲಿ ಬಹುಶಃ ಕೃಪಣಬುದ್ಧಿಯುಳ್ಳವನಾಗಿರುವನೇ ಹೊರತು ಸಮಬುದ್ಧಿಯುಳ್ಳವನಲ್ಲ. ಮೊದಲೇ ಅವನು ಕುರುಡ! (೩೪). ನೀನು ಹಸ್ತಿನಾವತಿಗೆ ಹೋಗಿ ಧೃತರಾಷ್ಟ್ರನ ನಡತೆಯು ಸರಿಯಾಗಿದೆಯೆ? ಕೆಟ್ಟದೆಯೆ?–ಎಂಬುದನ್ನು ತಿಳಿದುಕೊ. ತಿಳಿದಮೇಲೆ, ಸಜ್ಜನರಾದ ಪಾಂಡವರಿಗೆ ಕ್ಷೇಮವಾಗುವಂತೆ ಮಾಡೋಣ" ಎಂದನು (೩೫). ಹೀಗೆ ಶ್ರೀಕೃಷ್ಣನು ಅಕ್ರೂರನಿಗೆ ಸೂಚನೆಯನ್ನಿತ್ತು ಕಳಿಸಿ, ಉದ್ಧವಸಂಕರ್ಷಣರೊಡನೆ ತನ್ನ ಭವನಕ್ಕೆ ಹಿಂದಿರುಗಿದನು (೩೬).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತೆಂಟನೆಯ ಅಧ್ಯಾಯ



## ಏಕೋನಪಂಚಾಶತ್ತಮೋಽಧ್ಯಾಯಃ

ಶ್ರೀಶುಕ ಉವಾಚ—

**ಸ ಗತ್ವಾ ಹಾಸ್ತಿನಪುರಂ ಪೌರವೇಂದ್ರಯಶೋಽಂಕಿತಮ್ ।**
**ದದರ್ಶ ತತ್ರಾಂಬಿಕೇಯಂ ಸಭೀಷ್ಮಂ ವಿದುರಂ ಪೃಥಾಮ್ ॥ ೧**

**ಸಹಪುತ್ರಂ ಚ ಬಾಹ್ಲೀಕಂ ಭಾರದ್ವಾಜಂ ಸಗೌತಮಮ್ ।**
**ಕರ್ಣಂ ಸುಯೋಧನಂ ದ್ರೌಣಿಂ ಪಾಂಡವಾನ್ ಸುಹೃದೋಽಪರಾನ್**

**ಯಥಾವದುಪಸಂಗಮ್ಯ ಬಂಧುಭಿರ್ಗಾಂದಿನೀಸುತಃ ।**
**ಸಂಪೃಷ್ಟಸ್ತೈಃ ಸುಹೃದ್ವಾರ್ತಾಂ ಸ್ವಯಂ ಚಾಪೃಚ್ಛದವ್ಯಯಮ್ ॥ ೩**

**ಉವಾಸ ಕತಿಚಿನ್ಮಾಸಾನ್ ರಾಜ್ಞೋ ವೃತ್ತವಿವಿತ್ಸಯಾ ।**
**ದುಷ್ಪ್ರಜಸ್ಯಾಲ್ಪಸಾರಸ್ಯ ಖಲಚ್ಛಂದಾನುವರ್ತಿನಃ ॥ ೪**

### ಅಧ್ಯಾಯ ೪೯

ಹಸ್ತಿನಾವತಿಗೆ ಅಕ್ರೂರನ ಆಗಮನ. ಕುಂತಿಯ ಶೋಕೋದ್ಗಾರ.
ಅಕ್ರೂರ-ಧೃತರಾಷ್ಟ್ರಸಂವಾದ. ಮಧುರೆಗೆ
ಅಕ್ರೂರನು ಹಿಂದಿರುಗುವುದು

ಶ್ರೀ ಶುಕಮಹರ್ಷಿಗಳು ಹೇಳಿದರು: ತರುವಾಯ ಅಕ್ರೂರನು ಪುರುವಂಶದ ರಾಜರ ಕೀರ್ತಿಯಿಂದ ಪ್ರಸಿದ್ಧವಾದ ಹಸ್ತಿನಾಪುರಕ್ಕೆ ಹೋದನು. ಅಲ್ಲಿ ಧೃತರಾಷ್ಟ್ರ, ಭೀಷ್ಮ, ವಿದುರ, ಪೃಥೆ (ಕುಂತಿ), ಬಾಹ್ಲೀಕರಾಜ ಮತ್ತು ಅವನ ಮಗ ಸೋಮದತ್ತ, ದ್ರೋಣ, ಕೃಪ, ಕರ್ಣ, ಸುಯೋಧನ, ಮಿತ್ರರಾದ ಪಾಂಡವರು—ಮೊದಲಾದವರನ್ನು ಸಂದರ್ಶಿಸಿದನು (೧–೨). ಗಾಂದಿನೀಸುತನಾದ ಅಕ್ರೂರನು ಬಂಧುಗಳನ್ನು ಕ್ರಮವಾಗಿ ಸಂದರ್ಶಿಸಿದಾಗ, ಅವರು ವಸುದೇವನೇ ಮೊದಲಾದ ಮಿತ್ರರ ಕುಶಲವಾರ್ತೆಯನ್ನು ವಿಚಾರಿಸಿದರು. ಅಕ್ರೂರನೂ ಧೃತರಾಷ್ಟ್ರಾದಿಗಳ ಕುಶಲವನ್ನು ಕೇಳಿದನು (೩) ಮತ್ತು ದುಷ್ಟಪುತ್ರರಿಂದ ಸಹಿತನಾಗಿ, ಖೂಳರಾದ ಕರ್ಣಾದಿಗಳ ಇಚ್ಛೆಯಂತೆ ನಡೆಯುತ್ತ, ಧೀರತೆಯನ್ನು ಕಳೆದುಕೊಂಡಿದ್ದ ಧೃತರಾಷ್ಟ್ರನ ನಡೆವಳಿಯನ್ನು

ತೇಜ ಓಜೋ ಬಲಂ ವೀರ್ಯಂ ಪ್ರಶ್ರಯಾದೀಂಶ್ಚ ಸದ್ಗುಣಾನ್ ।
ಪ್ರಜಾನುರಾಗಂ ಪಾರ್ಥೇಷು ನ ಸಹದ್ಭಿಶ್ಚಿಕೀರ್ಷಿತಮ್ ॥ ೫

ಕೃತಂ ಚ ಧಾರ್ತರಾಷ್ಟ್ರೈರ್ಯದ್ ಗರದಾನಾದ್ಯಪೇಶಲಮ್ ।
ಆಚಖ್ಯೌ ಸರ್ವಮೇವಾಸ್ಮೈ ಪೃಥಾ ವಿದುರ ಏವ ಚ ॥ ೬

ಪೃಥಾ ತು ಭ್ರಾತರಂ ಪ್ರಾಪ್ತಮಕ್ರೂರಮುಪಸೃತ್ಯ ತಮ್ ।
ಉವಾಚ ಜನ್ಮನಿಲಯಂ ಸ್ಮರಂತ್ಯಶ್ರುಕಲೇಕ್ಷಣಾ ॥ ೭

ಅಪಿ ಸ್ಮರಂತಿ ನಃ ಸೌಮ್ಯ ಪಿತರೌ ಭ್ರಾತರಶ್ಚ ಮೇ ।
ಭಗಿನ್ಯೋ ಭ್ರಾತೃಪುತ್ರಾಶ್ಚ ಜಾಮಯಃ ಸಖ್ಯ ಏವ ಚ ॥ ೮

ಭ್ರಾತ್ರೇಯೋ ಭಗವಾನ್ ಕೃಷ್ಣಃ ಶರಣ್ಯೋ ಭಕ್ತವತ್ಸಲಃ ।
ಪೈತೃಷ್ವಸೇಯಾನ್ ಸ್ಮರತಿ ರಾಮಶ್ಚಾಂಬುರುಹೇಕ್ಷಣಃ ॥ ೯

---

ತಿಳಿಯಬೇಕೆಂದು ಅಕ್ರೂರನು ಹಸ್ತಿನಾವತಿಯಲ್ಲಿ ಕೆಲವು ತಿಂಗಳವರೆಗೆ ಇದ್ದನು (೪). ಪಾಂಡವರ ತೇಜಸ್ಸು, ಅಸ್ತ್ರಶಸ್ತ್ರಾದಿ ನೈಪುಣ್ಯ, ಸಾಮರ್ಥ್ಯ, ಪರಾಕ್ರಮಗಳನ್ನೂ ವಿನಯಾದಿ ಸದ್ಗುಣಗಳನ್ನೂ ಅವರು ಗಳಿಸಿಕೊಂಡ ಪ್ರಜಾನುರಾಗವನ್ನೂ ಧೃತರಾಷ್ಟ್ರನ ಮಕ್ಕಳು ಸಹಿಸುತ್ತಿಲ್ಲವೆಂದು ಪೃಥೆಯೂ ವಿದುರನೂ ಅಕ್ರೂರನಿಗೆ ಹೇಳಿದರು. ಅದರಿಂದ ಧಾರ್ತರಾಷ್ಟ್ರರು ಪಾಂಡವರಿಗೆ ವಿಷವನ್ನುಣ್ಣಿಸುವುದೇ ಮೊದಲಾದ ದುಷ್ಕೃತ್ಯಗಳನ್ನೆಸಗಿರುವುದು, ಮುಂದೆ ನಡೆಸಬೇಕೆಂದಿರುವುದು—ಇವೆಲ್ಲವನ್ನೂ ಅವರು ಅಕ್ರೂರನಿಗೆ ತಿಳಿಸಿದರು (೫–೬). ಬಂದಿದ್ದ ಸೋದರನಾದ ಆಕ್ರೂರನನ್ನು ಕುರಿತು ಪೃಥೆಯು ತವರುಮನೆಯನ್ನು ಸ್ಮರಿಸಿಕೊಂಡು ಕಂಬನಿದುಂಬಿ ಹೀಗೆಂದಳು : "ಸೌಮ್ಯ—ಅಕ್ರೂರ, (ತವರುಮನೆಯಲ್ಲಿ) ನನ್ನ ಪಿತೃಗಳೂ, ಸೋದರರೂ, ಅಕ್ಕತಂಗಿಯರೂ, ಸೋದರರ ಮಕ್ಕಳೂ, ನಾದಿನಿ ಮೊದಲಾದವರೂ, ಗೆಳತಿಯರೂ ನನ್ನನ್ನು ಸ್ಮರಿಸಿಕೊಳ್ಳುತ್ತಾರೆಯೆ ? (೭–೮). ಶರಣ್ಯನೂ ಭಕ್ತವತ್ಸಲನೂ ಸೋದರಪುತ್ರನೂ ಆದ ಭಗವಾನ್ ಕೃಷ್ಣನು ತನ್ನ ಸೋದರತ್ತೆಯ ಮಕ್ಕಳನ್ನು ಸ್ಮರಿಸಿಕೊಳ್ಳುವನೆ ? ನಳಿನನೇತ್ರನಾದ ಬಲರಾಮನು ನಮ್ಮನ್ನು ಸ್ಮರಿಸಿಕೊಳ್ಳುವುದುಂಟೆ ? (೯).

ಸಾಪತ್ನಮಧ್ಯೇ ಶೋಚಂತೀಂ ವೃಕಾಣಾಂ ಹರಿಣೀಮಿವ ।
ಸಾಂತ್ವಯಿಷ್ಯತಿ ಮಾಂ ವಾಕ್ಯೈಃ ಪಿತೃಹೀನಾಂಶ್ಚ ಬಾಲಕಾನ್ ॥ ೧೦

ಕೃಷ್ಣ ಕೃಷ್ಣ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಭಾವನ ।
ಪ್ರಪನ್ನಾಂ ಪಾಹಿ ಗೋವಿಂದ ಶಿಶುಭಿಶ್ಚಾವಸೀದತೀಮ್ ॥ ೧೧

ನಾನ್ಯತ್ತವ ಪದಾಂಭೋಜಾತ್ ಪಶ್ಯಾಮಿ ಶರಣಂ ನೃಣಾಮ್ ।
ಬಿಭ್ಯತಾಂ ಮೃತ್ಯುಸಂಸಾರಾದೀಶ್ವರಸ್ಯಾಪವರ್ಗಿಕಾತ್ ॥ ೧೨

ನಮಃ ಕೃಷ್ಣಾಯ ಶುದ್ಧಾಯ ಬ್ರಹ್ಮಣೇ ಪರಮಾತ್ಮನೇ ।
ಯೋಗೇಶ್ವರಾಯ ಯೋಗಾಯ ತ್ವಾಮಹಂ ಶರಣಂ ಗತಾ ॥ ೧೩

ಶ್ರೀಶುಕ ಉವಾಚ

ಇತ್ಯನುಸ್ಮೃತ್ಯ ಸ್ವಜನಂ ಕೃಷ್ಣಂ ಚ ಜಗದೀಶ್ವರಮ್ ।
ಪ್ರಾರುದದ್ ದುಃಖಿತಾ ರಾಜನ್ ಭವತಾಂ ಪ್ರಪಿತಾಮಹೀ ॥ ೧೪

ಸಮದುಃಖಸುಖೋಽಕ್ರೂರೋ ವಿದುರಶ್ಚ ಮಹಾಯಶಾಃ ।
ಸಾಂತ್ವಯಾಮಾಸತುಃ ಕುಂತೀಂ ತತ್ಪುತ್ರೋತ್ಪತ್ತಿಹೇತುಭಿಃ ॥ ೧೫

---

ತೋಳಗಳ ಮಧ್ಯದಲ್ಲಿ ಸಿಕ್ಕಿರುವ ಹರಿಣಿಯಂತೆ, ದಾಯಾದರ ನಡುವೆ ದುಃಖಭಾಗಿನಿಯಾದ ನನ್ನನ್ನೂ ತಂದೆಯಿಲ್ಲದ ಈ ಹುಡುಗರನ್ನೂ ಮಾತುಗಳಿಂದ ಸಂತೈಸುವನೆ? (೧೦). ಹೇ ಕೃಷ್ಣ, ಕೃಷ್ಣ, ಮಹಾಯೋಗಿ, ವಿಶ್ವಾತ್ಮ, ವಿಶ್ವಭಾವನ, ಮಕ್ಕಳೊಡನೆ ಶರಣಾಗತಳಾಗಿದ್ದೇನೆ. ಗೋವಿಂದ, ನರಳುತ್ತಿರುವ ನನ್ನನ್ನು ಪಾಲಿಸು (೧೧). ಮೃತ್ಯುವಾದ ಸಂಸಾರದಿಂದ ತಲ್ಲಣಿಸುತ್ತಿರುವ ಜನರಿಗೆ, ಈಶ್ವರನಾದ ನಿನ್ನ ಚರಣಕಮಲವೇ ಶರಣು. ಅದೇ ಮೋಕ್ಷಪ್ರದ. ಅದನ್ನು ಬಿಟ್ಟು ಇನ್ನೊಂದನ್ನು ನಾನರಿಯೆನು (೧೨). ನಮಃ ಕೃಷ್ಣಾಯ ಶುದ್ಧಾಯ ಬ್ರಹ್ಮಣೇ ಪರಮಾತ್ಮನೇ, ಯೋಗೇಶ್ವರಾಯ ಯೋಗಾಯ, ನಾ ನಿನಗೆ ಶರಣಾದೆನು" ಎಂದಳು (೧೩). ಜಗದೀಶ್ವರನೂ ತನ್ನ ಬಂಧುವೂ ಆದ ಶ್ರೀಕೃಷ್ಣನನ್ನು ಈ ಪ್ರಕಾರವಾಗಿ ಮತ್ತೆ ಮತ್ತೆ ಸ್ಮರಿಸಿಕೊಂಡು ಶೋಕಸಂತಪ್ತಳಾಗಿ, ಪರೀಕ್ಷಿತರಾಜ, ನಿಮ್ಮ ಮುತ್ತಜ್ಜಿಯು ಅತ್ತಳು (೧೪). ಆಗ ಕುಂತಿಯೊಡನೆ ಸಮಾನವಾದ ಸುಖದುಃಖವುಳ್ಳವನಾಗಿ (ಸಹಾನುಭೂತಿಯುಳ್ಳ) ಅಕ್ರೂರನೂ ಕೀರ್ತಿಶಾಲಿಯಾದ ವಿದುರನೂ

**ಯಾಸ್ಯನ್ ರಾಜಾನಮಭ್ಯೇತ್ಯ ವಿಷಮಂ ಪುತ್ರಲಾಲಸಮ್ ।**
**ಅವದತ್ ಸುಹೃದಾಂ ಮಧ್ಯೇ ಬಂಧುಭಿಃ ಸೌಹೃದೋದಿತಮ್ ॥ ೧೬**

**ಅಕ್ರೂರ ಉವಾಚ—**

**ಭೋ ಭೋ ವೈಚಿತ್ರವೀರ್ಯ ತ್ವಂ ಕುರೂಣಾಂ ಕೀರ್ತಿವರ್ಧನ ।**
**ಭ್ರಾತರ್ಯುಪರತೇ ಪಾಂಡಾವಧುನಾಽಽಸನಮಾಸ್ಥಿತಃ ॥ ೧೭**

**ಧರ್ಮೇಣ ಪಾಲಯನ್ನುರ್ವೀಂ ಪ್ರಜಾಃ ಶೀಲೇನ ರಂಜಯನ್ ।**
**ವರ್ತಮಾನಃ ಸಮಃ ಸ್ವೇಷು ಶ್ರೇಯಃ ಕೀರ್ತಿಮವಾಪ್ಸ್ಯಸಿ ॥ ೧೮**

**ಅನ್ಯಥಾ ತ್ವಾಚರನ್ ಲೋಕೇ ಗರ್ಹಿತೋ ಯಾಸ್ಯಸೇ ತಮಃ ।**
**ತಸ್ಮಾತ್ ಸಮತ್ವೇ ವರ್ತಸ್ವ ಪಾಂಡವೇಷ್ವಾತ್ಮಜೇಷು ಚ ॥ ೧೯**

**ನೇಹ ಚಾತ್ಯಂತಸಂವಾಸಃ ಕರ್ಹಿಚಿತ್ ಕೇನಚಿತ್ ಸಹ ।**
**ರಾಜನ್ ಸ್ವೇನಾಪಿ ದೇಹೇನ ಕಿಮು ಜಾಯಾತ್ಮಜಾದಿಭಿಃ ॥ ೨೦**

---

ಅವಳನ್ನು ಸಂತೈಸಿದರು. ಅವಳ ಪುತ್ರರ ಜನ್ಮಕ್ಕೆ ನಿಮಿತ್ತವಾದವುಗಳನ್ನು (ಯಮಧರ್ಮರಾಜ, ವಾಯು, ದೇವೇಂದ್ರ ಮತ್ತು ಅಶ್ವಿನೀದೇವತೆಗಳ ಮಹಿಮೆಗಳನ್ನು) ತಿಳಿಸಿ ಸಮಾಧಾನಪಡಿಸಿದರು (೧೫). ತರುವಾಯ ಅಕ್ರೂರನು ಮಧುರೆಗೆ ಹೊರಡಲುದ್ದೇಶಿಸಿ ಧೃತರಾಷ್ಟ್ರನ ಬಳಿಗೆ ಹೋದನು. ಪುತ್ರಲಾಲಸನಾಗಿ ವಿಷಮದೃಷ್ಟಿಯನ್ನು ತಳೆದಿದ್ದ ಆ ನೃಪತಿಯನ್ನು ಕಂಡು, ಅವನ ಮಿತ್ರರೆದುರಿಗೆ, ಬಲರಾಮಕೃಷ್ಣಾದಿ ಬಂಧುಗಳು ಸುಹೃದ್ಭಾವದಿಂದ ಹೇಳಿದ್ದ ಮಾತನ್ನು ತಿಳಿಸಿದನು (೧೬): "ಎಲೈ ಧೃತರಾಷ್ಟ್ರಮಹಾರಾಜ, ಕುರುಕುಲದ ಕೀರ್ತಿವರ್ಧನ, ನಿನ್ನ ತಮ್ಮನಾದ ಪಾಂಡುರಾಜನು ಮೃತನಾದ ಮೇಲೆ ನೀನು ಸಿಂಹಾಸನದಲ್ಲಿ ಕುಳಿತಿದ್ದೀಯೆ. ಧರ್ಮದಿಂದ ರಾಜ್ಯವನ್ನು ಪಾಲಿಸುತ್ತ, ಸದಾಚಾರದಿಂದ ಪ್ರಜೆಗಳನ್ನು ಸಂತೋಷಪಡಿಸುತ್ತ ನಿನ್ನ ಆತ್ಮೀಯರಲ್ಲಿ ಸಮಬುದ್ಧಿಯಿಂದ ನಡೆದುಕೊಂಡರೆ, ಶ್ರೇಯಸ್ಸನ್ನೂ ಕೀರ್ತಿಯನ್ನೂ ಪಡೆಯುತ್ತೀಯೆ (೧೭–೧೮). ವ್ಯತಿರಿಕ್ತವಾಗಿ ನಡೆದುಕೊಳ್ಳುವವನಾದರೆ, ನಿಂದಿತನಾಗಿ ಈ ಲೋಕದಲ್ಲಿಯೇ ನರಕಸದೃಶವಾದ ದುಃಖವನ್ನೈದುವೆ! ಆದ್ದರಿಂದ ಪಾಂಡುಪುತ್ರರಲ್ಲಿಯೂ ನಿನ್ನ ಪುತ್ರರಲ್ಲಿಯೂ ಸಮನಾಗಿರು (೧೯). ರಾಜ, ಈ ಲೋಕದಲ್ಲಿ ಯಾರಿಗೂ ಯಾರೊಡನೆಯೂ ಜೊತೆ

ಏಕಃ ಪ್ರಸೂಯತೇ ಜಂತುರೇಕ ಏವ ಪ್ರಲೀಯತೇ ।
ಏಕೋಽನುಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಮ್ ॥ ೨೧

ಅಧರ್ಮೋಪಚಿತಂ ವಿತ್ತಂ ಹರಂತ್ಯನ್ಯೇಽಲ್ಪಮೇಧಸಃ ।
ಸಂಭೋಜನೀಯಾಪದೇಶೈರ್ಜಲಾನೀವ ಜಲೌಕಸಃ ॥ ೨೨

ಪುಷ್ಣಾತಿ ಯಾನಧರ್ಮೇಣ ಸ್ವಬುದ್ಧ್ಯಾ ತಮಪಂಡಿತಮ್ ।
ತೇಽಕೃತಾರ್ಥಂ ಪ್ರಹಿಣ್ವಂತಿ ಪ್ರಾಣಾ ರಾಯಃ ಸುತಾದಯಃ ॥ ೨೩

ಸ್ವಯಂ ಕಿಲ್ಬಿಷಮಾದಾಯ ತ್ಯೈಸ್ತ್ಯಕ್ತೋ ನಾರ್ಥಕೋವಿದಃ ।
ಅಸಿದ್ಧಾರ್ಥೋ ವಿಶತ್ಯಂಧಂ ಸ್ವಧರ್ಮವಿಮುಖಸ್ತಮಃ ॥ ೨೪

ತಸ್ಮಾಲ್ಲೋಕಮಿಮಂ ರಾಜನ್ ಸ್ವಪ್ನಮಾಯಾಮನೋರಥಮ್ ।
ವೀಕ್ಷ್ಯಾಯಮ್ಯಾತ್ಮನಾಽಽತ್ಮಾನಂ ಸಮಃ ಶಾಂತೋ ಭವ ಪ್ರಭೋ ॥

ಶಾಶ್ವತವಾಗಿರುವುದಿಲ್ಲ. ತನ್ನ ದೇಹವೇ ಶಾಶ್ವತವಾಗಿ ಜೊತೆಗಿರದು, ಹೀಗಿರುವಾಗ ಹೆಂಡತಿ, ಮಕ್ಕಳು – ಮೊದಲಾದವರು ಇರುತ್ತಾರೆಯೆ? (೨೦). ಮನುಷ್ಯನು ಒಂಟಿಯಾಗಿ ಹುಟ್ಟುತ್ತಾನೆ, ಒಂಟಿಯಾಗಿ ಸಾಯುತ್ತಾನೆ, ಒಂಟಿಯಾಗಿ ಸುಕೃತವನ್ನೂ ದುಷ್ಕೃತವನ್ನೂ ಅನುಭವಿಸುತ್ತಾನೆ. ಮೂಢನು ಅಧರ್ಮದಿಂದ ಸಂಪಾದಿಸಿದ ಹಣವನ್ನು, 'ನಾವು ಮಕ್ಕಳು–ಹಕ್ಕುದಾರರು' ಎಂಬ ವ್ಯಾಜಗಳಿಂದ ಇತರರು ಕಿತ್ತುಕೊಳ್ಳುತ್ತಾರೆ! ಜಲಚರಗಳು ಬಳಸುವ ಜಲವನ್ನು ಅವುಗಳ ಮರಿಗಳು ನುಂಗುವ ಹಾಗೆ! (೨೧–೨೨). ಮನುಷ್ಯನು ಅನ್ಯಾಯಮಾರ್ಗವನ್ನವಲಂಬಿಸಿ 'ನನ್ನವರು' ಎಂಬ ಬುದ್ಧಿಯಿಂದ ಪ್ರಾಣ, ಹಣ, ಮಕ್ಕಳು–ಮೊದಲಾದವರನ್ನು ಪೋಷಿಸುತ್ತಾನೆ. ಅಂಥ ಅವಿವೇಕಿಯು ಅವನ್ನು ಭೋಗಿಸಿ ಸುಖಪಡುವುದಕ್ಕೆ ಮೊದಲೇ, 'ನನ್ನವರು' ಎಂಬವರು ಅವನನ್ನು ತೊರೆದು ಹೋಗುತ್ತಾರೆ! (೨೩). ಸ್ವಧರ್ಮವಿಮುಖನಾದ ಈತನು ಅವರಿಂದ ಪರಿತ್ಯಕ್ತನಾಗಿ ಪಾಪವನ್ನು ಮಾತ್ರ ತಾನೇ ಕಟ್ಟಿಕೊಳ್ಳುತ್ತಾನೆ. ಇವನು ಅರ್ಥಕೋವಿದನಲ್ಲ. ತನ್ನ ಮನೋರಥವೂ ಪೂರ್ಣವಾಗದೆ ಅಂಧಕೂಪವನ್ನು ಪ್ರವೇಶಿಸುವನು (೨೪). ಆದ್ದರಿಂದ, ಮಹಾರಾಜ, ಈ ಲೋಕವು ಸ್ವಪ್ನದಂತೆ, ಇಂದ್ರಜಾಲದಂತೆ, ಬರಿಯ ಮನೋರಥದಂತೆ– ಎಂದು ತಿಳಿದು ನಿನ್ನನ್ನು ನೀನೇ ಬಿಗಿಹಿಡಿದುಕೋ. ಹೇ ಪ್ರಭು, ಶಾಂತನಾಗಿ ಎಲ್ಲರಲ್ಲಿಯೂ ಸಮಬುದ್ಧಿಯುಳ್ಳವನಾಗಿರು" ಎಂದನು (೨೫).

ಧೃತರಾಷ್ಟ್ರ ಉವಾಚ—

**ಯಥಾ ವದತಿ ಕಲ್ಯಾಣೀಂ ವಾಚಂ ದಾನಪತೇ ಭವಾನ್ ।**
**ತಥಾನಯಾ ನ ತೃಪ್ಯಾಮಿ ಮರ್ತ್ಯಃ ಪ್ರಾಪ್ಯ ಯಥಾಮೃತಮ್ ॥**

**ತಥಾಪಿ ಸೂನೃತಾ ಸೌಮ್ಯ ಹೃದಿ ನ ಸ್ಥೀಯತೇ ಚಲೇ ।**
**ಪುತ್ರಾನುರಾಗವಿಷಮೇ ವಿದ್ಯುತ್ ಸೌದಾಮಿನೀ ಯಥಾ ॥ ೨೭**

**ಈಶ್ವರಸ್ಯ ವಿಧಿಂ ಕೋ ನು ವಿಧುನೋತ್ಯನ್ಯಥಾ ಪುಮಾನ್ ।**
**ಭೂಮೇರ್ಭಾರಾವತಾರಾಯ ಯೋಽವತೀರ್ಣೋ ಯದೋಃ ಕುಲೇ**

**ಯೋ ದುರ್ವಿಮರ್ಶಪಥಯಾ ನಿಜಮಾಯಯೇದಂ**
**ಸೃಷ್ಟ್ವಾ ಗುಣಾನ್ ವಿಭಜತೇ ತದನುಪ್ರವಿಷ್ಟಃ ।**
**ತಸ್ಮೈ ನಮೋ ದುರವಬೋಧವಿಹಾರತಂತ್ರ-**
**ಸಂಸಾರಚಕ್ರಗತಯೇ ಪರಮೇಶ್ವರಾಯ ॥ ೨೯**

---

ಆಗ ಧೃತರಾಷ್ಟ್ರನು "ದಾನಪತಿ–ಅಕ್ರೂರ, ಮಂಗಳಕರವಾದ ಈ ಬಗೆಯ ಮಾತನ್ನು ನೀನು ಎಷ್ಟು ಹೇಳಿದರೂ ನನಗೆ ತೃಪ್ತಿಯಾಗದು! ಮಾನವನಿಗೆ ಅಮೃತವು ದೊರಕಿದಂತಾಗುವುದು. ಆದರೂ, ಸೌಮ್ಯ, ಇಂಥ ಪ್ರಿಯವಾದ ಸತ್ಯವಚನವು ಪುತ್ರವ್ಯಾಮೋಹದಿಂದ ವಿಷಮವಾದ ಈ ಚಂಚಲಹೃದಯದಲ್ಲಿ ಸ್ಥಿರವಾಗಿ ನಿಲ್ಲದು! ಮಾಲಾಕಾರದ ಮಿಂಚಿನಂತೆ ಮಿಂಚಿ ಅಡಗುವುದು! (೨೬–೨೭). ಮಹೇಶ್ವರನ ಮಾಯಾವಿಧಾನವನ್ನು ಮಾರ್ಪಡಿಸಲು ಯಾವ ಮನುಷ್ಯನಿಂದಾದೀತು? ಭೂಭಾರವನ್ನಿಳಿಸಲು ಆತನು ಯದುಕುಲದಲ್ಲಿ ಅವತರಿಸಿದ್ದಾನಲ್ಲವೆ? (೨೮). ಯಾವಾತನು ದುರೂಹಮಾರ್ಗದ ನಿಜ ಮಾಯೆಯಿಂದ ಈ ಜಗತ್ತನ್ನು ಸೃಜಿಸಿ ಅದರಲ್ಲಿ ಅನುಪ್ರವಿಷ್ಟನಾಗಿ ಗುಣಗಳನ್ನು (ಕರ್ಮಫಲಗಳನ್ನು) ಹಂಚುತ್ತಾನೋ, ಯಾವಾತನು ದುರ್ಜ್ಞೇಯವಾದ ತನ್ನ ಕ್ರೀಡಾತಂತ್ರದಿಂದ ರಚಿಸಿದ ಸಂಸಾರಚಕ್ರಕ್ಕೆ ಗತಿಯಾಗಿರುವನೋ ಆ ಪರಮೇಶ್ವರನಿಗೆ ನಮಸ್ಕಾರ!" ಎಂದು ಹೇಳಿದನು (೨೯).

ಶ್ರೀಶುಕ ಉವಾಚ—

**ಇತ್ಯಭಿಪ್ರೇತ್ಯ ನೃಪತೇರಭಿಪ್ರಾಯಂ ಸ ಯಾದವಃ ।**
**ಸುಹೃದ್ಭಿಃ ಸಮನುಜ್ಞಾತಃ ಪುನರ್ಯದುಪುರೀಮಗಾತ್ ॥ ೩೦**

**ಶಶಂಸ ರಾಮಕೃಷ್ಣಾಭ್ಯಾಂ ಧೃತರಾಷ್ಟ್ರವಿಚೇಷ್ಟಿತಮ್ ।**
**ಪಾಂಡವಾನ್ ಪ್ರತಿ ಕೌರವ್ಯ ಯದರ್ಥಂ ಪ್ರೇಷಿತಃ ಸ್ವಯಮ್ ॥ ೩೧**

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ದಶಮಸ್ಕಂಧೇ ಪೂರ್ವಾರ್ಧೇ
ಏಕೋನಪಂಚಾಶತ್ತಮಾಧ್ಯಾಯಃ

ಶ್ರೀಮದ್ಭಾಗವತೇ ದಶಮಸ್ಕಂಧಸ್ಯ ಪೂರ್ವಾರ್ಧಃ ಸಮಾಪ್ತಃ



ಹೀಗೆ ಹೇಳಿದ ಧೃತರಾಷ್ಟ್ರನ ಅಭಿಪ್ರಾಯವನ್ನು ಗ್ರಹಿಸಿ, ಮಿತ್ರರಿಂದ ಅನುಜ್ಞೆಯನ್ನು ಪಡೆದು, ಅಕ್ರೂರನು ಯದುಪುರಿಯಾದ ಮಧುರೆಗೆ ತೆರಳಿದನು (೩೦). ಪರೀಕ್ಷಿತರಾಜ, ಅಕ್ರೂರನು ಧೃತರಾಷ್ಟ್ರನ ಇಂಗಿತವನ್ನು–ಯಾವುದನ್ನರಿಯಲು ತಾನು ಹಸ್ತಿನಾವತಿಗೆ ಕಳಿಸಲ್ಪಟ್ಟಿದ್ದನೋ ಅದನ್ನು, ಬಲಭದ್ರನಿಗೂ ಶ್ರೀಕೃಷ್ಣನಿಗೂ ವಿಜ್ಞಾಪಿಸಿದನು (೩೧).

ಇಲ್ಲಿಗೆ ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ

ಶ್ರೀ ಕೃ ಷ್ಣಾ ರ್ಪ ಣ ಮ ಸ್ತು



# ಅನುಬಂಧ

## ೧

## ಸ್ಮಯನ್ನಿವಾಹಾಗ್ರಜಮಾದಿಪೂರುಷಃ (೧೦–೪)

—ಪು. ೧೬೫

ಈ ಸಾಲು ಮುಗಿದೊಡನೆ ಮೂಲದಲ್ಲಿ 'ಶ್ರೀ ಭಗವಾನುವಾಚ' ಎಂದಿದೆ. ಆದ್ದರಿಂದ ೫ನೆಯ ಶ್ಲೋಕದಿಂದ ೮ನೆಯ ಶ್ಲೋಕ ಪೂರ್ತಿಯಾಗಿ ಶ್ರೀಕೃಷ್ಣನು ಅಣ್ಣನಾದ ಬಲರಾಮನಿಗೆ ಹೇಳಿದ್ದೆಂದು ಸ್ಪಷ್ಟವಾಗಿದೆ. ಬಲ ರಾಮನನ್ನು 'ದೇವವರ, ಈಡ್ಯ, ಆದಿಪುರುಷ' ಎಂದು ಶ್ರೀಕೃಷ್ಣನು ಕರೆದಿ ದ್ದಾನೆ. ಬಲರಾಮನು ಅವತಾರಿಪುರುಷನಾದ್ದರಿಂದ ಈ ಶಬ್ದಗಳಿಂದ ಅವನನ್ನು ಸ್ತುತಿಸಿರುವುದು ಸಹಜವೇ ಆದರೂ ೮ನೆಯ ಶ್ಲೋಕದಲ್ಲಿ ಒಂದು ಶಂಕೆ ಹುಟ್ಟುತ್ತದೆ. 'ಗೋಪ್ಯೋಽಂತರೇಣ ಭುಜಯೋರಪಿ ಯತ್ಸ್ಪೃಹಾ ಶ್ರೀಃ– ಲಕ್ಷ್ಮೀದೇವಿಯೂ ಬಯಸುವ ನಿನ್ನ ವಕ್ಷಃಸ್ಥಳದಿಂದ ಗೋಪಿಯರು ಧನ್ಯ ರಾದರು' ಎಂದು ಶ್ರೀಕೃಷ್ಣನು ಹೇಳುತ್ತಾನೆ. ಈ ಮಾತನ್ನು ಬಲರಾಮನಿಗೆ ಅನ್ವಯಿಸುವುದು ಹೇಗೆ? ಇದು ಶ್ರೀಕೃಷ್ಣನಿಗೆ ಅನ್ವಯಿಸತಕ್ಕದ್ದಲ್ಲವೆ?– ಎಂಬುದು ಶಂಕೆ.

ಗೋರಖ್‌ಪುರದ ಗೀತಾಪ್ರೆಸ್ಸಿನಲ್ಲಿ ಮುದ್ರಿತವಾದ ಪ್ರತಿಯಲ್ಲಿ, 'ಶ್ರೀಭಗವಾನುವಾಚ' ಎಂಬ ಅಂಶ ಪ್ರಾಚೀನ ಪ್ರತಿಗಳಲ್ಲಿಲ್ಲ–ಎಂದು ಅಡಿ ಟಿಪ್ಪಣಿಯಲ್ಲಿ ಬರೆದಿದೆ. ಅದನ್ನು ನೋಡಿದಾಗ ಈ ನಾಲ್ಕು ಶ್ಲೋಕಗಳನ್ನೂ ಬಲರಾಮನೇ ಶ್ರೀಕೃಷ್ಣನಿಗೆ ಹೇಳಿರಬಹುದೆ?–ಎಂದು ಸಂದೇಹವಾಯಿತು. ಆದರೆ ಮೂರನೆಯ ಶ್ಲೋಕದಲ್ಲಿ 'ಸ್ಮಯನ್ನಿವಾಹಾಗ್ರಜಮಾದಿಪೂರುಷಃ' ಎಂಬುದು ವಿರುದ್ಧವಾಗುತ್ತದೆ. 'ಸ್ಮಯನ್ನಿವಾಹಾಗ್ರಜ ಆದಿಪೂರುಷಂ' ಎಂದು ಶುದ್ಧಪಾಠವಿರಬಹುದೆ–ಎಂಬ ಆಲೋಚನೆ ಹುಟ್ಟಿತು. ಯಾವ ಪ್ರತಿ ಗಳಲ್ಲೂ ನಾನು ಊಹಿಸಿದ ಪಾಠ ದೊರೆಯಲಿಲ್ಲ. ಕಡೆಗೆ ಶ್ರೀಯುತರಾಮಶೇಷ ಶಾಸ್ತ್ರಿಗಳು ಕನ್ನಡಕ್ಕೆ ಅನುವಾದಿಸಿದ ಭಾಗವತಗ್ರಂಥವನ್ನು ನೋಡಿದೆ.

ನನ್ನ ಊಹೆ ಸರಿಯಾಗಿತ್ತು. ಕೆಲವು ಪುಸ್ತಕಗಳಲ್ಲಿ ಈ ಪಾಠಾಂತರವು ದೊರೆಯುತ್ತದೆ ಎಂದು ಶ್ರೀಯುತಶಾಸ್ತ್ರಿಗಳು ಈ ಶ್ಲೋಕದ ಅಡಿಟಿಪ್ಪಣಿಯಲ್ಲಿ ಬರೆದಿದ್ದಾರೆ. ಬಲರಾಮನು ಶ್ರೀಕೃಷ್ಣನಿಗೆ ಹೇಳಿದ ಮಾತು–ಎಂದಾದರೆ ಅನುಪಪತ್ತಿ ಏನೂ ಇಲ್ಲ.

ಆದರೆ ಈ ಪಕ್ಷದಲ್ಲಿ ಇನ್ನೊಂದು ಅನುಪಪತ್ತಿ ಉಂಟು. ಎರಡನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಪ್ರಸ್ತುತನಾಗಿರುವುದರಿಂದ ಮೂರನೆಯ ಶ್ಲೋಕದ 'ಸಃ' ಎಂಬ ಸರ್ವನಾಮದಿಂದ ಅವನನ್ನೇ ಪರಾಮರ್ಶಿಸಬೇಕಾಗುತ್ತದೆ. 'ಸಃ' ಎಂಬುದನ್ನು ಬಲರಾಮನಿಗೆ ಅನ್ವಯಿಸಿ ಹೇಳುವುದು ತುಂಬ ಕ್ಲಿಷ್ಟ. ಈ ವಿಷಯವಾಗಿ ಶ್ರೀಯುತರಾಮಶೇಷಶಾಸ್ತ್ರಿಗಳು ಹೀಗೆ ಬರೆದಿದ್ದಾರೆ: "ಪ್ರಕೃತದಲ್ಲಿ ಬಲರಾಮನಿಂದ ಧೇನುಕಾಸುರಸಂಹಾರವು ನಡೆಯಬೇಕಾದ ಸಂದರ್ಭವೊದಗಿರುವುದರಿಂದ, ಶ್ರೀಕೃಷ್ಣನು ಆ ಬಲರಾಮನಲ್ಲಿ ತನ್ನ ಅಂಶ ವನ್ನು ತೋರಿಸಿ ಆತನನ್ನು ಪ್ರೋತ್ಸಾಹಗೊಳಿಸುವುದಕ್ಕಾಗಿ ಇಂತು ಹೇಳಿದ ನೆಂಬುದೇ ಯುಕ್ತವಾಗಿ ತೋರುವುದು"

ಬಲರಾಮನು ವಾಸುದೇವನ ಕಲೆಯೆಂದೂ (೧೦–೧–೨೪) ವಿಷ್ಣುವಿನ ಅಂಶವೆಂದೂ (೧೦–೪೩–೨೩) ಭಾಗವತದಲ್ಲಿಯೇ ಅಲ್ಲಲ್ಲಿ ವರ್ಣನೆ ಇದೆ. 'ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ' (೧೦–೪೦–೨೧) ಎಂದು ವಾಸುದೇವನಿಗೂ ಬಲರಾಮನಿಗೂ ಅಭೇದವನ್ನು ಹೇಳಲಾಗಿದೆ. ಪುರಾಣಾಂತರಗಳಲ್ಲಿ ಬಲರಾಮನು ವಿಷ್ಣುವಿನ ಅವತಾರವೆಂಬ ವರ್ಣನೆ ಯುಂಟು. ಅದನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಪ್ರಸ್ತುತವಾದ ನಾಲ್ಕು ಶ್ಲೋಕಗಳು ಬಂದಿವೆಯೆಂದು ತೋರುತ್ತದೆ. 'ಸ್ಮಯನ್ನಿವಾಹಾಗ್ರಜಮಾದಿ-ಪೂರುಷಃ' ಎಂಬಲ್ಲಿ 'ಸ್ಮಯನ್ನಿವ' ಎಂಬುದರಿಂದ ಇದು ಸೂಚಿತವಾಗಿದೆ.

ಶ್ರೀಧರಸ್ವಾಮಿಗಳು ತಮ್ಮ ವ್ಯಾಖ್ಯಾನದಲ್ಲಿ ಈ ವಿಷಯವನ್ನು ಪ್ರಸ್ತಾವಿಸಿಲ್ಲ. ಆದ್ದರಿಂದ ಇಲ್ಲಿ ಪಾಠಾಂತರವಿರಬೇಕೆಂಬ ಸಂದೇಹ ಉಳಿಯುತ್ತದೆ.

—ಅನುವಾದಕ

೨

# ದಶಮಸ್ಕಂಧ–ಪೂರ್ವಾರ್ಧದ ಕೆಲವು ವ್ಯಕ್ತಿಗಳು

(ಸಂಬಂಧ ಪರಿಚಯ)

**ಅಕ್ರೂರ**—ಯದುವಂಶದಲ್ಲಿ ಅಂತರ್ಗತವಾದ ಸಾತ್ವತವಂಶದವನು. ಇವನ ತಂದೆ ಶ್ವಫಲ್ಕ. ತಾಯಿ ಗಾಂದಿನೀ. ಅಕ್ರೂರನು ಉಗ್ರಸೇನನ ಅಳಿಯ. ಇವನ ಹೆಂಡತಿಯ ಹೆಸರು ಸುತನು. ಅಕ್ರೂರನು ಕಂಸನ ಮಂತ್ರಿಗಳಲ್ಲೊಬ್ಬನಾಗಿದ್ದನು. ಶ್ರೀಕೃಷ್ಣನ ಮಹಿಮೆಯನ್ನರಿತು ಅವನ ಭಕ್ತನಾಗಿದ್ದನು. ಇವನಿಗೆ ದಾನಪತಿ ಎಂದು ಇನ್ನೊಂದು ಹೆಸರಿತ್ತು. ಶ್ರೀಕೃಷ್ಣನು ಇವನನ್ನು 'ಪಿತೃವ್ಯ' ಎಂದು ಕರೆದಿದ್ದಾನೆ. (ಭಾಗವತ ೧೦–೪೮–೨೯).

**ಉಗ್ರಸೇನ**—ವೃಷ್ಣಿವಂಶದವನು. ಮಥುರೆಯ ರಾಜ. ಕಂಸನ ತಂದೆ. ಇವನ ತಮ್ಮನಾದ ದೇವಕನ ಮಗಳು ದೇವಕಿ ವಸುದೇವನ ಪತ್ನಿಯಾಗಿದ್ದಳು.

**ಉದ್ಧವ**—ಇವನು ಒಬ್ಬ ಯಾದವ. ಶ್ರೀಕೃಷ್ಣನ ಸ್ನೇಹಿತನೂ ಮಂತ್ರಿಯೂ ಆಗಿದ್ದನು. ಬೃಹಸ್ಪತಿಯ ಶಿಷ್ಯ. ಬಹಳ ಬುದ್ಧಿಶಾಲಿಯೆಂದು ವಿಖ್ಯಾತನಾಗಿದ್ದಾನೆ.

**ಕಂಸ**—ಉಗ್ರಸೇನನ ಮಗ. ತಂದೆಯನ್ನು ಸೆರೆಯಲ್ಲಿಟ್ಟು ಸಿಂಹಾಸನವನ್ನೇರಿದ್ದನು. ಜರಾಸಂಧನ ಪುತ್ರಿಯರಾದ ಅಸ್ತಿ, ಪ್ರಾಪ್ತಿ–ಎಂಬವರನ್ನು ಮದುವೆಯಾಗಿದ್ದನು. ದ್ರುಮಿಲನೆಂಬ ದಾನವನು ಕಂಸನ ತಾಯಿಯನ್ನು ಮೋಸಗೊಳಿಸಿ ಭೋಗಿಸಿದನೆಂದೂ ಅದರಿಂದ ಈತನು ಜನಿಸಿದನೆಂದೂ ಹರಿವಂಶದಲ್ಲಿ ಹೇಳಿದೆ (ಹರಿ. ಅಧ್ಯಾಯ ೨೮). ಕಾಲನೇಮಿಯೆಂಬ ದಾನವನು ಕಂಸನಾಗಿ ಹುಟ್ಟಿದನೆಂದು ಕಥೆ ಇದೆ. ಕಂಸನು ದೇವಕಿಯ ದೊಡ್ಡಪ್ಪನಾದ ಉಗ್ರಸೇನನ ಮಗ. ಆದ್ದರಿಂದ ಅವನು ಶ್ರೀಕೃಷ್ಣನ ಸೋದರಮಾವನೆಂದು ಹೇಳಲಾಗುತ್ತದೆ. ಅವನು ಸಾಕ್ಷಾತ್ ಸೋದರಮಾವನಲ್ಲ.

**ಕುಂತೀ**— ಇವಳ ಜನ್ಮನಾಮ ಪೃಥಾ. ಶೂರಸೇನನ ಮಗಳೂ ವಸುದೇವನ ತಂಗಿಯೂ ಆಗಿದ್ದಳು. ಶೂರಸೇನನು ಪೃಥೆಯನ್ನು ತನ್ನ ಮಿತ್ರನಾದ ಕುಂತೀಭೋಜನಿಗೆ ಸಾಕುಮಗಳನ್ನಾಗಿ ಕೊಟ್ಟಿದ್ದನು. ಆದ್ದರಿಂದ

ಇವಳಿಗೆ ಕುಂತಿಯೆಂಬ ಹೆಸರು ರೂಢಿಗೆ ಬಂದಿತು. ಇವಳು ಶ್ರೀಕೃಷ್ಣನ ಸೋದರತ್ತೆ.

**ಬಲರಾಮ**—ಬಲಭದ್ರ, ಬಲದೇವ, ಬಲ, ಸಂಕರ್ಷಣ–ಮುಂತಾದ ಹೆಸರುಗಳಿವೆ. ವಸುದೇವನ ಇನ್ನೊಬ್ಬ ಪತ್ನಿಯಾದ ರೋಹಿಣಿಯ ಮಗ. ಇವನು ಆದಿಶೇಷನ ಅವತಾರವೆಂದೂ ವಿಷ್ಣುವಿನ ಅಂಶವೆಂದೂ ವರ್ಣನೆ ಇದೆ. ದೇವಕಿಯ ಗರ್ಭದಲ್ಲಿದ್ದ ಈತನನ್ನು ಯೋಗಮಾಯೆಯು ರೋಹಿಣಿಯ ಗರ್ಭದಲ್ಲಿ ಸೇರಿಸಿದ್ದಳು.

**ಬಾಹ್ಲೀಕ**—ಇವನು ಪ್ರತೀಪ ಎಂಬ ರಾಜನ ಮಗ. ಕುರುವಂಶದವನು. ಪಾಂಡವರಲ್ಲಿ ಪ್ರೀತಿ ಇದ್ದರೂ ದುರ್ಯೋಧನನ ಪಕ್ಷವನ್ನು ವಹಿಸಿ ಯುದ್ಧಮಾಡಿದನು.

**ಸೋಮದತ್ತ**—ಇವನು ಬಾಹ್ಲೀಕನ ಮಗ. ಭೂರಿಶ್ರವನ ತಂದೆ.

ಯದು, ವೃಷ್ಣಿ, ದಶಾರ್ಹ–ಮೊದಲಾದವರು ಶ್ರೀಕೃಷ್ಣನ ಪೂರ್ವಜರು. ಆದ್ದರಿಂದ ಶ್ರೀಕೃಷ್ಣನಿಗೆ ಯಾದವ, ವಾರ್ಷ್ಣೇಯ, ದಾಶಾರ್ಹ–ಮೊದಲಾದ ಹೆಸರುಗಳಿವೆ.



